|| ಶ್ರೀ ||

ವ್ಯಾಸಮಹರ್ಷಿಪ್ರಣೀತ

# ಶ್ರೀ ಮಹಾಭಾರತವು

ಕರ್ಣಾಟಕ ವಚನವು.

## ಉದ್ಯೋಗ ಪರ್ವವು.

(ಮೊದಲನೆಯ ಭಾಗ)



ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರ ವಿರಚಿತವು.



ಪ್ರಕಾಶಕರು:

ಕರ್ನಾಟಕ ಡಿಪೊ,

ನಂಬರ್ 7, ತೇರಡಿಬೀದಿ, ತಿರುವಲ್ಲಿಕ್ಕೇಣಿ, ಮದ್ರಾಸು.

1932

[illegible] ವ್ಯಾಪಾರಂಗಳು,
ಅವಿನ್ಯೂ ರಸ್ತೆ, ಬೆಂಗಳೂರು ಸಿಟಿ.

# ವಿಷಯಾನುಕ್ರಮಣಿಕೆ.

ಅಧ್ಯಾಯ. ಪುಟ.

## ಸೇನೋದ್ಯೋಗಪರ್ವವು.

## ಸಂಜಯಯಾನಪರ್ವವು.

## ಪ್ರಜಾಗರಪರ್ವವು.

## ಸನತ್ಸುಜಾತಪರ್ವವು.

## ಯಾನಸಂಧಿಪರ್ವವು.

# ಚಿತ್ರಪಟಗಳ ಪಟ್ಟಿ.



# ಶ್ರೀಮಹಾಭಾರತವು

## ಉದ್ಯೋಗಪರ್ವವು.



**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್ ॥**

## ಸೇನೋದ್ಯೋಗಪರ್ವವು.

ವಿರಾಟಸಭೆಯಲ್ಲಿ ಅನೇಕರಾಜರ ಕೂಟವು. ಕೃಷ್ಣನು ಪಾಂಡವರ ವೃತ್ತಾಂತವನ್ನು ತಿಳಿಸಿ, ಧೃತರಾಷ್ಟ್ರನ ಬಳಿಗೆ ದೂತರನ್ನು ಕಳುಹಿಸುವುದಾಗಿ ನಿರ್ಧರಿಸಿದುದು.

ಜನಮೇಜಯರಾಜಾ! ಕೇಳು! ಹೀಗೆ ಪಾಂಡವರು ತನ್ನ ಕಡೆಯವರೆಲ್ಲರನ್ನೂ ಕರೆದುಕೊಂಡು, ಸಂತೋಷದಿಂದ ಅಭಿಮನ್ಯುವಿನ ವಿವಾಹವನ್ನು ನಡೆಸಿ, ಆ ರಾತ್ರಿ ಸುಖವಾಗಿ ವಿಶ್ರಾಂತಿಯನ್ನು ಹೊಂದಿದರು. ಬೆಳಗಾದಮೇಲೆ ಎದ್ದು ವಿರಾಟನ ಸಭೆಗೆ ಬಂದರು. ಆಗ ವಿರಾಟಸಭೆಯಾದರೋ, ಉತ್ತಮ ರತ್ನಾಲಂಕಾರಗಳಿಂದ ಚಿತ್ರಿತವಾಗಿ, ಬಹಳ ಭಾಗ್ಯಸಮೃದ್ಧವಾಗಿ ಬೆಳಗುತಿತ್ತು. ಅಲ್ಲಲ್ಲಿ ಯಥೋಚಿತಗಳಾದ ಆಸನಗಳೂ ಇಡಲ್ಪಟ್ಟಿದ್ದುವು. ಪುಷ್ಪಮಾಲಿಕೆಗಳಿಂದಲೂ, ಸುಗಂಧದಿಂದಲೂ

ಅಲಂಕೃತವಾಗಿತ್ತು. ಹೀಗ ಅಲಂಕೃತವಾದ ಆ ಸಭೆಗೆ ಪಾಂಡವರೆಲ್ಲರೂ ಪ್ರವೇಶಿಸಿದರು. ಇಷ್ಟರಲ್ಲಿ, ಕ್ಷತ್ರಿಯ ಕುಲವೃದ್ಧರೂ, ಪೂಜ್ಯರೂ ಆದ ದ್ರುಪದ ವಿರಾಟರಾಜರಿಬ್ಬರೂ ಬಂದು, ಮೊದಲು ಅಲ್ಲಿನ ಆಸನಗಳಲ್ಲಿ ಕುಳಿತರು. ಆಮೇಲೆ ಬಲರಾಮಕೃಷ್ಣರಿಬ್ಬರೂ ತಮ್ಮ ತಂದೆಯಾದ ವಸುದೇವನೊಡನೆ ಬಂದು ಉಚಿತಾಸನದಲ್ಲಿ ಕುಳಿತರು. ಪಾಂಚಾಲರಾಜನಾದ ದ್ರುಪದನ ಸಮೀಪದಲ್ಲಿ, ಶಿನಿವಂಶವೀರನೆನಿಸಿದ ಸಾತ್ಯಕಿಯೂ, ಬಲರಾಮನೂ ಬಂದು ಕುಳಿತರು. ವಿರಾಟನ ಪಕ್ಕದಲ್ಲಿ ಅವನಿಗೆ ಬಹಳ ಸಮೀಪವಾಗಿ ಕೃಷ್ಣನೂ, ಧರ್ಮರಾಜನೂ ಕುಳಿತುಕೊಂಡರು. ದ್ರುಪದನ ಪುತ್ರರೂ, ಭೀಮಾರ್ಜುನರೂ, ನಕುಲ ಸಹದೇವರೂ, ಯುದ್ಧವೀರರಾದ ಪ್ರದ್ಯುಮ್ನ ಸಾಂಬರೂ ಇವರೆಲ್ಲರೂ ಉಚಿತಾಸನಗಳಲ್ಲಿ ಬಂದು ಕುಳಿತರು. ಒಂದು ಕಡೆಯಲ್ಲಿ ಅಭಿಮನ್ಯುವು ವಿರಾಟಪುತ್ರರೊಡನೆ ಕುಳಿತನು. ವೀರ್ಯದಲ್ಲಿಯೂ, ರೂಪದಲ್ಲಿಯೂ, ಬಲದಲ್ಲಿಯೂ ತಮ್ಮತಮ್ಮ ತಂದೆಗಳಿಗೆ ಸಮಾನರೆನಿಸಿದ ದ್ರೌಪದಿಯ ಮಕ್ಕಳು (ಉಪಪಾಂಡವರು) ಸುವರ್ಣಚಿತ್ರಿತಗಳಾದ ಉತ್ತಮಾಸನಗಳಮೇಲೆ ಸಾಲಾಗಿ ಕುಳಿತರು. ಅಂದವಾದ ಉಡಿಗೆತೊಡಿಗೆಗಳಿಂದ ಅಲಂಕೃತರಾಗಿ, ಮಹಾರಥರೆನಿಸಿಕೊಂಡ ಅನೇಕ ರಾಜರಿಂದ ಆ ಸಭಾಸ್ಥಾನವು, ಶುದ್ಧವಾದ ಗ್ರಹಗಳಿಂದ ಕೂಡಿದ ಆಕಾಶದಂತೆ ಪ್ರಕಾಶಿಸುತಿತ್ತು. ಆಮೇಲೆ ಅಲ್ಲಿ ನೆರೆದಿದ್ದ ಪುರುಷಶ್ರೇಷ್ಠರಾದ ರಾಜರೆಲ್ಲರೂ, ಬೇರೆಬೇರೆ ಕೂಟವಾಗಿ ಸೇರಿ, ವಿವಿಧಸಲ್ಲಾಪಗಳನ್ನು ಮಾಡುತಿದ್ದರು. ಆಮೇಲೆ ಮುಂದಿನ ಕಾರ್ಯಗಳನ್ನು ಕುರಿತು ಮುಹೂರ್ತಕಾಲದವರೆಗೆ ತಮ್ಮೊಳಗೆ ತಾವು ಯೋಚಿಸುತ್ತಿದ್ದರು.

ಹೀಗೆ ರಾಜರೆಲ್ಲರೂ ತಮ್ಮತಮ್ಮ ಸಲ್ಲಾಪಗಳಲ್ಲಿರುವಾಗ, ಮುಂದೆ ಪಾಂಡವರ ಕಾರ್ಯವನ್ನು ಕುರಿತು ಆಲೋಚಿಸುವುದಕ್ಕಾಗಿ ಶ್ರೀಕೃಷ್ಣನಿಂದ ನಿವಾರಿಸಲ್ಪಟ್ಟವರಾಗಿ, ಮುಂದೆ ಕಾರ್ಯಸಾಧಕವಾಗಿಯೂ, ಸಾರವತ್ತಾಗಿಯೂ ಇರುವ ಆ ಕೃಷ್ಣನ ಮಾತನ್ನು ಕೇಳುವುದಕ್ಕೆ ಸಿದ್ಧರಾದರು. ಆಗ ಕೃಷ್ಣನು ಆ ಸಭೆಯಲ್ಲಿದ್ದವರನ್ನು ಕುರಿತು "ಓ ರಾಜೇಂದ್ರರೇ! ಈ ಧರ್ಮರಾಜನು ಜೂಜಿನಲ್ಲಿ ಶಕುನಿಯಿಂದ ವಂಚಿತನಾಗಿ,

ರಾಜ್ಯವನ್ನು ಕಳೆದುಕೊಂಡು ವನವಾಸದಲ್ಲಿರುವುದಾಗಿ ಪ್ರತಿಜ್ಞೆಮಾಡಿ ಕೊಟ್ಟುದು ನಿಮ್ಮೆಲ್ಲರಿಗೂ ತಿಳಿದಿದೆ. ಆಗಲೇ ಇವರು ಶತ್ರುಗಳನ್ನು ಜಯಿಸಿ, ಭೂಮಿಯನ್ನು ಸಾಧಿಸಲು ಶಕ್ತಿಯುಳ್ಳವರಾಗಿದ್ದರೂ, ಸತ್ಯಕ್ಕೆ ಕಟ್ಟುಬಿದ್ದು, ತಾವು ಮಾತುಕೊಟ್ಟಂತೆ ಹದಿಮೂರು ವರ್ಷಗಳವರೆಗೆ ಬಹಳ ಕಠಿನವಾದ ಪ್ರವಾಸವ್ರತವನ್ನು ಮುಗಿಸಿ ಬಂದರು. ಅದರಲ್ಲಿಯೂ ಅವರು, ಎಂತವರಿಂದಲೂ ಸಾಧ್ಯವಲ್ಲದ ಹದಿಮೂರನೆಯ ವರ್ಷದ ಅಜ್ಞಾತವಾಸವನ್ನು ಈ ನಿಮ್ಮ ಮತ್ಸ್ಯರಾಜಧಾನಿಯಲ್ಲಿ, ನಿಮ್ಮ ಬಳಿಯಲ್ಲಿಯೇ ಇದ್ದು ಕಳೆದರು. ಇತರರ ಮನೆಯ ಪರಿಚಾರಕರಂತೆ ಸಹಿಸಬಾರದ ಅನೇಕ ಕಷ್ಟಗಳನ್ನೆಲ್ಲ ಸಹಿಸಿಕೊಂಡು ಆ ಅಜ್ಞಾತವಾಸಕಾಲವನ್ನು ಮುಗಿಸಿದರು. ತಮಗೆ ಕುಲಕ್ರಮಾಗತವಾದ ರಾಜ್ಯವನ್ನು ತಾವು ನ್ಯಾಯವಾಗಿ ಪಡೆಯಬೇಕೆಂಬ ಉದ್ದೇಶದಿಂದಲೇ, ಇವರು ಅಷ್ಟೊಂದು ಕಷ್ಟಗಳನ್ನೂ ತಾಳ್ಮೆಯಿಂದ ಸಹಿಸಿಕೊಂಡಿದ್ದರು. ಇವೆಲ್ಲವೂ ನಿಮ್ಮೆಲ್ಲರಿಗೂ ಚೆನ್ನಾಗಿ ತಿಳಿದ ಸಂಗತಿಯೇ! ಹೋದುದು ಹೋಗಲಿ! ಈಗಲಾದರೂ ನಾವು, ಈ ಧರ್ಮರಾಜನಿಗೂ, ಕೌರವರಾಜನಾದ ದುರ್ಯೋಧನನಿಗೂ ಯಾವುದು ಹಿತವೋ, ಆ ಮಾರ್ಗವನ್ನು ಯೋಚಿಸಬೇಕು. ಧರ್ಮಸಮ್ಮತವಾಗಿಯೂ, ಕೌರವ ಪಾಂಡವರಿಬ್ಬರಿಗೂ ಹಿತಕರವಾಗಿಯೂ, ಉಚಿತವಾಗಿಯೂ ಇರುವ ಮುಂದಿನ ಮಾರ್ಗವನ್ನು ನೀವೆಲ್ಲರೂ ಆಲೋಚಿಸಿರಿ. ಈ ಧರ್ಮರಾಜನು ಅಧರ್ಮದಮೂಲಕವಾಗಿ ಸ್ವರ್ಗರಾಜ್ಯಕ್ಕಾದರೂ ಆಶೆಪಡತಕ್ಕವನಲ್ಲ. ಧರ್ಮಾರ್ಥಗಳಿಗೆ ವಿರೋಧವಿಲ್ಲದೆ ತನಗೆ ಲಭಿಸತಕ್ಕ ಒಂದು ಸಣ್ಣ ಗ್ರಾಮದ ಅಧಿಕಾರವನ್ನಾದರೂ ಇವನು ಸಂತೋಷದಿಂದ ಅಂಗೀಕರಿಸುವನು. ಆ ಧೃತರಾಷ್ಟ್ರಪುತ್ರರು ಇವರ ತಂದೆಯ ರಾಜ್ಯವನ್ನು ಹೇಗೆ ಮೋಸದಿಂದ (ಸುಳ್ಳುಸುಳ್ಳಾದ ಉಪಚಾರೋಕ್ತಿಗಳಿಂದ) ಮರುಳುಮಾಡಿ ಕಿತ್ತುಕೊಂಡರೆಂಬುದೂ, ಅದರಿಂದ ಈ ಪಾಂಡವರು ಸಹಿಸಬಾರದ ಎಂತಹ ಕಷ್ಟಗಳಿಗೆ ಗುರಿಯಾದರೆಂಬುದೂ ಇಲ್ಲಿರುವವರೆಲ್ಲರಿಗೂ ಚೆನ್ನಾಗಿ ತಿಳಿದುದೇ! ಧೃತರಾಷ್ಟ್ರನ ಮಕ್ಕಳು ಯುದ್ಧದಲ್ಲಿ ತಮ್ಮ ಪರಾಕ್ರಮದಿಂದ ಈ ಅರ್ಜುನನನ್ನು ಎಂದಿಗೂ ಜಯಿಸಿದವರಲ್ಲ. ಅವರು ಹೀಗೆ ವಂಚನೆಯನ್ನೇ ತೋರಿಸುತ್ತಿದ್ದರೂ, ಈ ಧರ್ಮರಾಜನು ತನ್ನ ಇಷ್ಟಮಿತ್ರರೊಡನೆ

ಆ ದುರ್ಯೋಧನಾದಿಗಳಿಗೆ ಈಗಲೂ ಕ್ಷೇಮವನ್ನೇ ಕೋರುತ್ತಿರುವನು. ಕುಂತೀಪುತ್ರರಾದ ಈ ಧರ್ಮರಾಜ ಭೀಮಾರ್ಜುನರೂ, ಮಾದ್ರಿಯ ಮಕ್ಕಳಾದ ಈ ನಕುಲ ಸಹದೇವರೂ ತಾವಾಗಿ ಇತರರಾಜರನ್ನು ಜಯಿಸಿ ಸಂಪಾದಿಸಿದುದನ್ನಾದರೂ ತಮಗೆ ಬಿಟ್ಟರೆ, ಅದೇ ಸಾಕೆಂದು ಹೇಳುತ್ತಿರುವರು. ಆ ದುರ್ಯೋಧನಾದಿಗಳೋ, ಇವರಿಗಿಂತಲೂ ಹೆಚ್ಚು ಸೇನಾಬಲವುಳ್ಳವರು. ಇವರ ರಾಜ್ಯವನ್ನು ಅಪಹರಿಸುವುದರಲ್ಲಿಯೇ ಅವರಿಗೆ ದೃಷ್ಟಿ! ಕೇವಲ ಕ್ರೂರಸ್ವಭಾವವುಳ್ಳವರು. ಅಸತ್ಪುಗಳು. ಕೌರವರು ಏನೇನೋ ಉಪಾಯಗಳಿಂದ ಈ ಪಾಂಡವರನ್ನು ಕೊಲ್ಲಬೇಕೆಂದು ಪ್ರಯತ್ನಿಸಿದುದೂ ಕೂಡ ನಿಮಗೆ ಸ್ಪಷ್ಟವಾಗಿ ತಿಳಿದಿದೆ. ಹೀಗೆ ಕೇವಲ ಲೋಭಬುದ್ಧಿಯುಳ್ಳ ಆ ದುರ್ಯೋಧನಾದಿಗಳ ನಡತೆಯನ್ನೂ, ಈ ಧರ್ಮರಾಜನ ಧರ್ಮದೃಷ್ಟಿಯನ್ನೂ, ಮತ್ತು ಅವರಿಬ್ಬರಿಗಿರುವ ಬಂಧುತ್ವವನ್ನೂ ಚೆನ್ನಾಗಿ ಯೋಚಿಸಿ, ಮುಂದೆ ಇವರಿಬ್ಬರಿಗೂ ಹಿತಕರವಾದ ಮಾರ್ಗವಾವುದೆಂಬುದನ್ನು ನೀವೆಲ್ಲರೂ ಒಂದಾಗಿಯೂ, ಬೇರೆಬೇರೆಯಾಗಿಯೂ ಆಲೋಚಿಸಿ ನಿರ್ಧರಿಸಬೇಕು. ಈ ಪಾಂಡವರು ಯಾವಾಗಲೂ ಸತ್ಯಕ್ಕೆ ಕಟ್ಟುಬಿದ್ದವರು. ತಾವು ಮಾಡಿದ ಪ್ರತಿಜ್ಞೆಗೆ ಬದ್ಧರಾಗಿ, ಎಷ್ಟೋ ಕಷ್ಟದಿಂದ ವನವಾಸವನ್ನು ಕಳೆದು ಈಗಲೇ ಬಂದಿರುವರು. ಈಗಲಾದರೂ ಆ ಧೃತರಾಷ್ಟ್ರಪುತ್ರರು ಇವರಿಗೆ ಸೇರಬೇಕಾದ ಅರ್ಧ ರಾಜ್ಯವನ್ನು ಕೊಡದೆ, ವಿಪರೀತವಾಗಿ ಪ್ರವರ್ತಿಸುವುದಾದರೆ, ಈ ಪಾಂಡವರು ಅವರೆಲ್ಲರನ್ನೂ ಒಟ್ಟಾಗಿ ಸೇರಿಸಿ ಕೊಲ್ಲುವುದೇ ನಿಶ್ಚಯವು. ಆ ಧೃತರಾಷ್ಟ್ರಪುತ್ರರು ಪಾಂಡವರಿಗೆ ಅರ್ಧರಾಜ್ಯವನ್ನೂ ಕೊಡದೆ, ಎಲ್ಲವನ್ನೂ ತಾವೇ ದಕ್ಕಿಸಿಕೊಳ್ಳುವುದಕ್ಕಾಗಿ ಇವರಿಗೆ ಎಷ್ಟೋ ಅಪಕಾರಗಳನ್ನು ಮಾಡಿರುವ ಸಂಗತಿಯನ್ನು ತಿಳಿದೂ, ಆ ದುರ್ಯೋಧನನಿಗೆ ಮಿತ್ರರಾದವರು, ಅವನ ಸಂಗಡಲೇ ಸೇರಿಕೊಂಡು, ಯುದ್ಧದಲ್ಲಿ ಪಾಂಡವರಿಗೆ ಇದಿರಾಗಿಯೂ ನಿಲ್ಲಬಹುದು. ಆಗ ಪಾಂಡವರು ಅವರನ್ನೂ ಕೊಲ್ಲದೆ ಬಿಡುವವರಲ್ಲ. ಆದರೆ, ಈ ಪಾಂಡವರು ಸ್ವಲ್ಪಮಂದಿಯಿರುವುದರಿಂದ, ಕೌರವರನ್ನು ಜಯಿಸುವುದಕ್ಕೆ ಇವರು ಅಸಮರ್ಥರೆಂದು ನೀವು ತಿಳಿಯಬಾರದು. ಇವರೈದುಮಂದಿಯೂ ಒಂದಾಗಿ, ತಮ್ಮ ಮಿತ್ರರನ್ನೂ ಸೇರಿಸಿಕೊಂಡು, ಕೌರವರೆಲ್ಲರನ್ನೂ ಜಯಿಸುವುದಕ್ಕೆ

ಯತ್ನಿಸದೆ ಬಿಡಲಾರರು. ಈಗಲೂ ದುರ್ಯೋಧನನ ಅಭಿಪ್ರಾಯವು ಹೇಗಿರುವುದೆಂದು ಯಥಾವತ್ತಾಗಿ ನಮಗೆ ತಿಳಿದಿಲ್ಲ. ಶತ್ರುಗಳ ಅಭಿಪ್ರಾಯವನ್ನು ತಿಳಿಯದೆ, ನಮ್ಮ ಆಲೋಚನೆಯಾದರೂ ಕೊನೆಮುಟ್ಟುವಹಾಗಿಲ್ಲ. ಆದುದರಿಂದ, ಧೃತರಾಷ್ಟ್ರನ ಬಳಿಗೆ ಇಲ್ಲಿಂದ ದೂತನೊಬ್ಬನನ್ನು ಕಳುಹಿಸಿ, ಅಲ್ಲಿನ ಅಭಿಪ್ರಾಯವೇನೆಂದು ತಿಳಿಯುವುದು ಒಳ್ಳೆಯದು. ಇದಕ್ಕಾಗಿ ಧರ್ಮಶೀಲನೂ, ಶುದ್ಧನೂ, ಸತ್ಕುಲದಲ್ಲಿ ಹುಟ್ಟಿದವನೂ, ಒಳ್ಳೆಯ ಎಚ್ಚರಿಕೆಯುಳ್ಳವನೂ (ಪ್ರಮಾದರಹಿತನೂ) ಆದ ದೂತನೊಬ್ಬನನ್ನು ಕಳುಹಿಸುವೆವು ಅವನು ದುರ್ಯೋಧನನಲ್ಲಿಗೆ ಹೋಗಲಿ! ಈಗಲಾದರೂ ಧರ್ಮರಾಜನಿಗೆ ಅರ್ಧರಾಜ್ಯವನ್ನು ಕೊಟ್ಟು ಸಮಾಧಾನಮಾಡಿಕೊಳ್ಳಲು ಹೇಳಿಕಳುಹಿಸುವೆವು. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನೆಂಬುದನ್ನು ನಿಶ್ಚಯಿಸಿರಿ'' ಎಂದನು.

ಓ ಜನಮೇಜಯರಾಜಾ! ಶ್ರೀಕೃಷ್ಣನು ಧರ್ಮಾರ್ಥಯುಕ್ತವಾಗಿಯೂ, ಇಂಪಾಗಿಯೂ, ಉಭಯಪಕ್ಷದವರಿಗೂ ಸಮವಾಗಿ, ನಿಷ್ಪಕ್ಷಪಾತವಾಗಿಯೂ ಹೇಳಿದ ಮಾತನ್ನು ಕೇಳಿ, ಕೃಷ್ಣನ ಅಣ್ಣನಾದ ಬಲರಾಮನು ತಮ್ಮನ ಅಭಿಪ್ರಾಯಕ್ಕೆ ಸಮ್ಮತಿಸಿ, ಅವನ ಮಾತನ್ನು ಶ್ಲಾಘಿಸುತ್ತ ತನ್ನ ಅಭಿಪ್ರಾಯವನ್ನು ಹೇಳತೊಡಗಿದನು.

ಇದು ಮೊದಲನೆಯ ಅಧ್ಯಾಯವು.

---

ಬಲರಾಮನು ಕೃಷ್ಣನ ಮಾತಿಗೆ ಅನುಮೋದಿಸಿದರೂ,
ತನಗೆ ದುರ್ಯೋಧನನಲ್ಲಿರುವ ಪಕ್ಷಪಾತವನ್ನು
ಹೊರಪಡಿಸಿದುದು.

ಆಮೇಲೆ ಬಲರಾಮನು ಆ ಸಭೆಯಲ್ಲಿ ನೆರೆದಿದ್ದ ರಾಜರನ್ನು ಕುರಿತು "ಓ ರಾಜೇಂದ್ರರೆ! ಶ್ರೀಕೃಷ್ಣನು ಹೇಳಿದ ಮಾತನ್ನು ನೀವೆಲ್ಲರೂ ಕೇಳಿದಿರಷ್ಟೆ? ಗದಾಗ್ರಜನಾದ ಕೃಷ್ಣನು ಧರ್ಮಕ್ಕೂ, ಅರ್ಥಕ್ಕೂ ವಿರೋಧವಿಲ್ಲದಂತೆ ಯುಕ್ತವಾದ ಮಾತನ್ನೇ ಆಡಿರುವನು. ಅವನು ಹೇಳಿದ

ನೀತಿಯು ಇತ್ತಲಾಗಿ ಅಜಾತಶತ್ರುವಾದ ಧರ್ಮರಾಜನಿಗೂ, ಅತ್ತಲಾಗಿ ದುರ್ಯೋಧನನಿಗೂ ಇಬ್ಬರಿಗೂ ಹಿತವಾದುದು. ಈ ಕುಂತೀಪುತ್ರರು ಅರ್ಧರಾಜ್ಯವನ್ನು ಧೃತರಾಷ್ಟ್ರಪುತ್ರರಿಗೇ ಬಿಟ್ಟು, ಉಳಿದ ಅರ್ಧರಾಜ್ಯವು ತಮಗೆ ಬಂದರೆ ಸಾಕೆಂದು ಅದಕ್ಕಾಗಿ ಪ್ರಯತ್ನಿಸುತ್ತಿರುವರು. ದುರ್ಯೋಧನನೂ ಅದಕ್ಕೆ ಸಮ್ಮತಿಸಿ ಅರ್ಧರಾಜ್ಯವನ್ನು ಇವರಿಗೆ ಬಿಟ್ಟುಕೊಟ್ಟರೆ, ಅವನೂ ನೆಮ್ಮದಿಯಿಂದ ನಮ್ಮೆಲ್ಲರೊಡನೆ ಸಂತೋಷದಿಂದ ಕೂಡಾಡುತ್ತಿರಬಹುದು. ತಮ್ಮ ಅರ್ಧರಾಜ್ಯವು ದೊರೆತು, ದಾಯಾದಿಗಳಾದ ದುರ್ಯೋಧನಾದಿಗಳೂ ನ್ಯಾಯಮಾರ್ಗದಿಂದ ನಡೆದುಕೊಳ್ಳುತಿದ್ದರೆ, ಆಗ ವೀರರಾದ ಪಾಂಡವರೆಲ್ಲರೂ ನಿಶ್ಚಿಂತರಾಗಿ ಸುಖದಿಂದಿರುವರು. ಇವರಿಬ್ಬರ ಶಾಂತಿಯಿಂದ ಪ್ರಜೆಗಳೆಲ್ಲರಿಗೂ ಕ್ಷೇಮವುಂಟು. ಆದುದರಿಂದ ಎಲ್ಲಾ ಪ್ರಜೆಗಳಿಗೂ ಇವರಿಬ್ಬರಿಗೆ ಸಮಾಧಾನವಾಗಬೇಕೆಂಬುದೇ ಇಷ್ಟವು.

ಈಗ ಕೃಷ್ಣನ ಅಭಿಪ್ರಾಯದಂತೆ, ಧರ್ಮರಾಜನ ವಾಕ್ಯಗಳನ್ನು ದುರ್ಯೋಧನನಿಗೆ ತಿಳಿಸಿ, ಅವನ ಅಭಿಪ್ರಾಯವನ್ನು ತಿಳಿದುಬರುವುದಕ್ಕಾಗಿಯೂ, ಕೌರವ ಪಾಂಡವರಿಬ್ಬರಿಗೂ ಸಮಾಧಾನವನ್ನುಂಟುಮಾಡುವುದಕ್ಕಾಗಿಯೂ ದೂತನೊಬ್ಬನು ಇಲ್ಲಿಂದ ಹೋಗುವುದಾದರೆ, ನನಗೂ ಅದು ಬಹಳ ಸಂತೋಷವೇ! ಹಾಗೆ ಇಲ್ಲಿಂದ ಹೋಗುವ ದೂತನು, ಅಲ್ಲಿ ಕುರುವೃದ್ಧನಾದ ಭೀಷ್ಮನನ್ನೂ, ಮಹಾತ್ಮನಾದ ಧೃತರಾಷ್ಟ್ರನನ್ನೂ, ದ್ರೋಣಾಶ್ವತ್ಥಾಮರನ್ನೂ, ವಿದುರನನ್ನೂ, ಕೃಪಾಚಾರ್ಯನನ್ನೂ, ಕರ್ಣಶಕುನಿಗಳನ್ನೂ ಕಂಡು, ಅವರೆಲ್ಲರೊಡನೆ ಕಲೆತು ಆಲೋಚಿಸಬೇಕಲ್ಲದೆ, ಎಲ್ಲಾ ಧೃತರಾಷ್ಟ್ರಪುತ್ರರೂ, ಸೇನಾಬಲವುಳ್ಳವರೂ, ನೀತಿಬಲವುಳ್ಳವರೂ, ಧರ್ಮಜ್ಞರೂ, ಆಚಾರದಲ್ಲಿಯೂ, ಜ್ಞಾನದಲ್ಲಿಯೂ ಮೇಲೆನಿಸಿಕೊಂಡವರೂ ಪಟ್ಟಣದಲ್ಲಿರುವ ಇನ್ನೂ ಇತರವೃದ್ಧಜನರೆಲ್ಲರೂ ಸೇರಿರುವ ಕಾಲದಲ್ಲಿ, ಪಾಂಡವರಿಗೆ ಹಿತಕರವಾದ ಇಲ್ಲಿನ ಸಂದೇಶವನ್ನು ವಿನಯಪೂರ್ವಕವಾಗಿಯೇ ಅವರಮುಂದೆ ತಿಳಿಸಬೇಕು. ದುರ್ಯೋಧನಾದಿಗಳಿಗೆ ಈಗ ಸಹಾಯಬಲವು ಹೆಚ್ಚಾದುದರಿಂದ, ಅವರಿಗೆ ಯಾವ ವಿಧದಿಂದಲೂ ಕೋಪವುಂಟಾಗುವಂತೆ ಮಾಡಬಾರದು. ಆ ಬಲದಿಂದಲೇ ಅವರು ಧರ್ಮರಾ

ಜನ ಐಶ್ವರ್ಯವೆಲ್ಲವನ್ನೂ ವಶಮಾಡಿಕೊಂಡು ಅನುಭವಿಸುತ್ತಿರುವರು. ಅಲ್ಲದೆ, ಈ ಯುಧಿಷ್ಠಿರನು ತಾನಾಗಿಯೇ ಇಷ್ಟಪಟ್ಟು ಹೋಗಿ ಜೂಜಾಟದಲ್ಲಿ ಬಿದ್ದು ತನ್ನ ಸರ್ವಸ್ವವನ್ನೂ ಕಳೆದುಕೊಂಡುಬಿಟ್ಟನು. ಈ ಯುಧಿಷ್ಠಿರನು, ತನಗೆ ಜೂಜಾಟವು ಚೆನ್ನಾಗಿ ತಿಳಿಯದಿದ್ದರೂ, ತನ್ನ ಹಿತೈಷಿಗಳನೇಕರು ಬೇಡವೆಂದು ತಡೆದರೂ ಕೇಳದೆ ಅದರಲ್ಲಿ ತಲೆಯಿಕ್ಕಿ, ಇಷ್ಟು ಕಷ್ಟಕ್ಕೆ ಗುರಿಯಾದನು. ಪ್ರತಿಪಕ್ಷದಲ್ಲಿ ಆಟಕ್ಕೆ ನಿಂತ ಗಾಂಧಾರರಾಜನಾದರೋ ಜೂಜಾಟದ ಮರ್ಮವನ್ನು ಚೆನ್ನಾಗಿ ಬಲ್ಲವನು. ಅಲ್ಲದೆ ಯುಧಿಷ್ಠಿರನು ಆ ದ್ಯೂತಸಭೆಯಲ್ಲಿ ಕರ್ಣನನ್ನೂ, ದುರ್ಯೋಧನನನ್ನೂ, ಇನ್ನೂ ಅಲ್ಲಿ ತನ್ನೊಡನೆ ಜೂಜಾಟಕ್ಕೆ ಸಿದ್ಧವಾಗಿದ್ದ ಬೇರೆ ಸಾವಿರಾರು ಮಂದಿಯನ್ನೂ ಬಿಟ್ಟು, ಆ ಶಕುನಿಯನ್ನೇ ಆಟಕ್ಕೆ ಕರೆದನಲ್ಲವೆ? ಒಂದು ವೇಳೆ ಇವನು ಬೇರೆಯವರೊಡನೆ ಆಡಿದ್ದರೆ, ಜಯಿಸುವ ಸಂಭವವಿದ್ದಿರಬಹುದು. ಅವರನ್ನೆಲ್ಲ ಬಿಟ್ಟು, ಶಕುನಿಯನ್ನೇ ಆಟಕ್ಕೆ ಕರೆದುದಲ್ಲದೆ, ಎಲ್ಲಾ ಆಟದಲ್ಲಿಯೂ, ತನಗೆ ದಾಯವು ವಿರುದ್ಧವಾಗಿ ಬಿದ್ದರೂ, ಒಂದೇ ಹಟವಾದದಿಂದ ಕೊನೆಯವರೆಗೂ ತಾನೇ ಆಡಿ, ಸಂಪೂರ್ಣವಾಗಿ ಸೋತು ಬಂದನು. ಈ ಭಾಗದಲ್ಲಿ ಶಕುನಿಯ ಅಪರಾಧವೇನಿದೆ? ಆದುದರಿಂದ, ಇದು ಧರ್ಮರಾಜನ ತಪ್ಪೇ ಹೊರತು, ಶಕುನಿಯಲ್ಲಿ ಯಾವುದೊಂದು ತಪ್ಪೂ ಕಾಣಲಿಲ್ಲ. ಆದುದರಿಂದ, ನಮ್ಮ ಕಡೆಯ ದೂತನು ಆ ಧೃತರಾಷ್ಟ್ರನ ಬಳಿಗೆ ಹೋದಾಗ, ಬಹಳ ನಮ್ರತೆಯಿಂದ ನಮಸ್ಕಾರ ಮಾಡಿ, ವಿನಯಪೂರ್ವಕವಾಗಿಯೇ ಇಲ್ಲಿನ ಸಂದೇಶವನ್ನು ತಿಳಿಸಬೇಕು. ಹಾಗೆ ನಡೆದುಕೊಂಡಾಗಲೇ ದುರ್ಯೋಧನನನ್ನು ನಮ್ಮ ಇಷ್ಟದಂತೆ ಬರಮಾಡಿಕೊಳ್ಳುವುದಕ್ಕೆ ಸಾಧ್ಯವು. ಆ ಕೌರವರೊಡನೆ ನೀವು ಯುದ್ಧಕ್ಕೆ ಮಾತ್ರ ಬಯಸಬಾರದು. ಒಳ್ಳೇ ಮಾತಿನಿಂದಲೇ ಅವನನ್ನು ಸಮಾಧಾನಕ್ಕೆ ತರುವ ಪ್ರಯತ್ನ ಮಾಡಿರಿ. ಸಾಮೋಪಾಯದಿಂದ ಸಂಪಾದಿಸಿದ ಅರ್ಥವೇ ಒಳ್ಳೇ ಫಲಕಾರಿಯಾಗುವುದು. ಯುದ್ಧದಿಂದ ಅನೀತಿಯೇ ಏರ್ಪಡುವುದು. ಈಗ ನಮಗೆ ಯುದ್ಧದಿಂದ ಅನುಕೂಲವಾಗುವಹಾಗೆಯೂ ಇಲ್ಲ" ಎಂದನು.

ಓ ಜನಮೇಜಯರಾಜಾ! ಬಲರಾಮನು ಈ ಮಾತುಗಳನ್ನು ಹೇಳುತ್ತಿರುವಾಗಲೇ ಸಾತ್ಯಕಿಯು ಕೋಪದಿಂದ ಉರಿದೆದ್ದು, ಬಲರಾಮನ ಮಾತನ್ನು ಖಂಡಿಸಿ, ತನ್ನ ಅಭಿಪ್ರಾಯವನ್ನು ಹೇಳತೊಡಗಿದನು.

ಇದು ಎರಡನೆಯ ಅಧ್ಯಾಯವು.



ಸಾತ್ಯಕಿಯು ಬಲರಾಮನ ಮಾತನ್ನು ಖಂಡಿಸಿ, ದುರ್ಯೋಧನನನ್ನು ನಿಗ್ರಹಿಸಬೇಕಾದುದೇ ಅವಶ್ಯವೆಂದು ತಿಳಿಸಿದುದು.

ಆಗ ಸಾತ್ಯಕಿಯು, ಆ ಸಭೆಯಲ್ಲಿ ಮೇಲೆದ್ದು, "ಮನುಷ್ಯನ ಮನಸ್ಸು ಯಾವ ವಿಧವಾದುದೋ ಅವನ ಬಾಯಿಂದ ಹೊರಡುವ ಮಾತೂ ಅದಕ್ಕೆ ತಕ್ಕಂತೆಯೇ ಇರುವುದು. ಆದುದರಿಂದ ಓ ಬಲಭದ್ರಾ! ನಿನ್ನ ಅಂತರಂಗವು ಹೇಗೋ ಅದಕ್ಕೆ ತಕ್ಕ ಮಾತನ್ನೇ ನೀನಾಡುವೆ. ಲೋಕದಲ್ಲಿ ಶೂರರೂ ಉಂಟು. ಕುತ್ಸಿತ ಜನರೂ ಉಂಟು. ಮನುಷ್ಯವರ್ಗದಲ್ಲಿ ಈ ಎರಡು ಪಂಗಡದವರೂ, ತಮ್ಮತಮ್ಮ ಸ್ವಭಾವಗಳನ್ನು ಬಿಡದೆ ದೃಢವಾಗಿ ಹಿಡಿದಿರತಕ್ಕವರು. ಒಂದೇ ಮರದಲ್ಲಿ ಫಲವತ್ತಾದ ಶಾಖೆಗಳೂ ಹುಟ್ಟುವುವು. ಫಲವಿಲ್ಲದ ಗೊಡ್ಡು ಕೊಂಬೆಗಳೂ ಕೆಲವು ಹುಟ್ಟುವುವು. ಅದರಂತೆಯೇ ಒಂದೇ ಕುಲದಲ್ಲಿ ಮಹಾಬಲಾಢ್ಯರೂ ಹುಟ್ಟುವರು. ಕೈಲಾಗದ ಷಂಡರೂ ಜನಿಸುವರು. ಓ ಬಲರಾಮಾ! ನೇಗಿಲನ್ನು ಧ್ವಜದಲ್ಲಿ ಉಳ್ಳ ನಿನಗೆ ಇಂತಹ ಮಾತುಗಳೇನೋ ಸಹಜವೇ. ಆದುದರಿಂದ ನೀನು ಈ ಮಾತನ್ನು ಹೇಳಿದುದಕ್ಕಾಗಿ ನಿನ್ನಮೇಲೆ ನನಗೆ ಕೋಪವಿಲ್ಲ. ನಿನ್ನ ಮಾತಿಗೆ ಕಿವಿಗೊಟ್ಟು ಕೇಳುತ್ತಿರುವ ಈ ಜನಗಳಿಗಾಗಿ ನಾನು ಕೋಪಿಸಬೇಕಾಗಿದೆ. ಈ ಮಹಾಸಭೆಯ ಮುಂದೆ ನಿರ್ಭಯವಾಗಿ ನಿಂತು, ಮಹಾತ್ಮನಾದ ಧರ್ಮರಾಜನ ವಿಷಯದಲ್ಲಿ ಅಲ್ಪಸ್ವಲ್ಪ ಮಾತ್ರವಾದರೂ ದೋಷವನ್ನು ಹೇಳುವುದಕ್ಕೆ ನಿನಗೆ ಹೇಗೆ ಧೈರ್ಯವುಂಟಾಯಿತೋ ತಿಳಿಯದು! ಜೂಜಿನಲ್ಲಿ ನಿಪುಣರಾದ ಆ ಕೌರವರು, ಪಗಡೆಯಾಟದಲ್ಲಿ ಪರಿಚಯವಿಲ್ಲದ

ಮತ್ತು ಮಹಾತ್ಮನಾದ ಧರ್ಮರಾಜನನ್ನು ಬರಮಾಡಿ, ಅವನಿಗೆ ಶ್ರದ್ಧೆಯಿಲ್ಲದಿದ್ದರೂ ಬಲಾತ್ಕಾರದಿಂದ ಜೂಜಾಟಕ್ಕೆಳೆದು ಅವನನ್ನು ಜಯಿಸಿದರು. ಅವರಿಗೆ ಆ ಜಯವು ಧರ್ಮಸಮ್ಮತವೆಂಬುದು ಹೇಗೆ? ಧರ್ಮರಾಜನನ್ನು ಯುದ್ಧದಲ್ಲಿದಿರಿಸಿ ಪರಾಕ್ರಮದಿಂದ ಜಯಿಸಿದ್ದ ಪಕ್ಷದಲ್ಲಿ, ಆಗ ಅವರ ಜಯವು ಧರ್ಮಜಯವೆನಿಸುತಿತ್ತು. ಹಾಗಿಲ್ಲದೆ * ಕ್ಷತ್ರಿಯಧರ್ಮದಲ್ಲಿ ನಿರತನಾದ ರಾಜನನ್ನು ಉದ್ದೇಶಪೂರ್ವಕವಾಗಿ ಕರೆದು ಪಗಡೆಯಾಟದಲ್ಲಿ ಮೋಸದಿಂದ ಜಯಿಸಿದ ಆ ಕೌರವರ ಕಾರ್ಯವನ್ನು ಒಳ್ಳೆಯದೆಂದು ಯಾರುತಾನೇ ಹೇಳುವರು? ಈ ಧರ್ಮರಾಜನು ಕೌರವಸಭೆಗೆ ನಮ್ರತೆಯಿಂದ ಸಂದೇಶವನ್ನು ಕಳುಹಿಸಬೇಕೆಂದು ಹೇಳಿದೆಯಲ್ಲವೆ? ಜೂಜಾಟದಲ್ಲಿ ಮಾಡಿಕೊಂಡ ಪಂಥದಂತೆ ಮಾತಿಗೆ ಬದ್ಧರಾಗಿ ಇದುವರೆಗೆ ವನವಾಸದಲ್ಲಿದ್ದು, ಆ ಕಷ್ಟದಿಂದ ಈಗಲೇ ಬಿಡುಗಡೆ ಹೊಂದಿಬಂದು, ಕುಲಪ್ರಾಪ್ತವಾಗಿ ತಮಗೆ ಬರಬೇಕಾದ ಸ್ಥಾನವನ್ನು ಅಪೇಕ್ಷಿಸುವ ಇವರು ಏತಕ್ಕಾಗಿ ನಮಸ್ಕಾರಮಾಡಬೇಕು? ಓ ಬಲರಾಮಾ! ಈ ಯುಧಿಷ್ಠಿರನು ಒಂದುವೇಳೆ ಮತ್ತೊಬ್ಬರ ಧನಕ್ಕಾಗಿಯೋ ಆಸೆಪಟ್ಟರೂ, ಆಗಲೂ ಇತರರಲ್ಲಿ ದೈನ್ಯದಿಂದ ಯಾಚಿಸುವವನಲ್ಲ. ಈ ಪಾಂಡವರಾದರೋ ತಮ್ಮ ವನವಾಸಕಾಲವನ್ನು ಸಂಪೂರ್ಣವಾಗಿ ಮುಗಿಸಿಕೊಂಡುಬಂದಿರುವರು. ಹೀಗಿರುವಾಗಲೂ ಕಾಲವು ಮುಗಿಯುವುದಕ್ಕೆ ಮೊದಲೇ ಅವರನ್ನು ನಾವು ಕಂಡುಹಿಡಿದುಬಿಟ್ಟೆವೆಂದು ಹೇಳಿಕೊಳ್ಳುವ ಆ ಕೌರವರು ಹೇಗೆತಾನೇ ಧರ್ಮಜ್ಞರೆನಿಸುವರು. ಆ ಕೌರವರು ರಾಜ್ಯವನ್ನು ದುರಾಶೆಯಿಂದ ಅಪಹರಿಸಬೇಕೆಂಬ ದುರ್ಬುದ್ಧಿಯುಳ್ಳವರಲ್ಲವೆಂದು ಹೇಗೆತಾನೇ ನಂಬಬಹುದು? ಹಿಂದೆ ಅನೇಕಾವರ್ತಿ ಭೀಷ್ಮನೂ, ದ್ರೋಣನೂ, ವಿದುರನೂ ಎಷ್ಟೋ ವಿಧವಾದ ಸಮಾಧಾನವನ್ನು ಹೇಳಿ, ಪಾಂಡವರಿಗೆ ಅವರ ತಂದೆಯ ರಾಜ್ಯವನ್ನು ಕೊಡುವಂತೆ ಕೌರವರಿಗೆ ತಿಳಿಸಿದರೂ ಅವರು ಅದಕ್ಕೆ ಕಿವಿಗುಡಲಿಲ್ಲ.

---

* ಯುದ್ಧಕ್ಕೆ ಕರೆದರೆ ಹೇಗೋ ಪಗಡೆಯಾಟಕ್ಕೆ (ಜೂಜಾಟಕ್ಕೆ) ಕರೆದಾಗಲೂ ಕ್ಷತ್ರಿಯರು ಹಿಂಜರಿಯಬಾರದೆಂಬುದು ಕ್ಷತ್ರಧರ್ಮವು.

ಈಗಲೂ ಚಿಂತೆಯಿಲ್ಲ! ಯುದ್ಧದಲ್ಲಿಯೇ ನಾನು ನನ್ನ ತೀಕ್ಷ್ಣ ಬಾಣಗಳಿಂದ ಅವರಿಗೆ ಬುದ್ಧಿವಾದಗಳನ್ನು ತಿಳಿಸಿ, ಅವರನ್ನು ಮಹಾತ್ಮನಾದ ಈ ಧರ್ಮರಾಜನ ಪಾದಗಳಲ್ಲಿ ಕೆಡಹುವೆನು ನೋಡು. ಆಗಲೂ ಇವನ ಕಾಲಮೇಲೆ ಬೀಳುವುದಕ್ಕೆ ಆ ಕೌರವರು ಹಿಂಜರಿದರೆ, ತಮ್ಮ ಮಂತ್ರಿವರ್ಗದೊಡನೆ ಅವರು ಯಮಪುರಿಗೆ ಹೋಗಬೇಕಾದುದು ಸಿದ್ಧವು. ಕೋಪಗೊಂಡು ಯುದ್ಧಕ್ಕಾಗಿ ನಿಂತ ಈ ಯುಯುಧಾನನ (ನನ್ನ) ವೇಗವನ್ನು ಇಂದ್ರನ ವಜ್ರಾಯುಧವನ್ನು ಪರ್ವತಗಳು ಹೇಗೋ ಹಾಗೆ ಅವರು ತಡೆದುಕೊಳ್ಳುವುದಕ್ಕೆ ಸಮರ್ಥರಲ್ಲವೆಂದು ತಿಳಿ. ಗಾಂಡೀವವನ್ನು ಹಿಡಿದ ಅರ್ಜುನನಿಗಾಗಲಿ, ಚಕ್ರಾಯುಧವನ್ನು ಹಿಡಿದ ಕೃಷ್ಣನಿಗಾಗಲಿ, ಕೋಪಗೊಂಡ ನನಗಾಗಲಿ, ಎಂತವರಿಗೂ ದುರ್ಜಯನಾದ ಆ ಭೀಮಸೇನನಿಗಾಗಲಿ ಯುದ್ಧದಲ್ಲಿ ಇದಿರಾಗಿ ನಿಂತು ಯಾವನುತಾನೇ ತಡೆದುಕೊಳ್ಳಬಲ್ಲನು? ಇದಲ್ಲದೆ ದೃಢಧನುಸ್ಸುಳ್ಳವರೂ, ಮಹಾ ತೇಜಸ್ವಿಗಳೂ, ಯಮನಿಗೆ ಸಮಾನರೂ ಆದ ಆ ನಕುಲಸಹದೇವರನ್ನೂ, ಮಹಾ ವೀರರಾದ ಆ ದ್ರುಪದವಿರಾಟರನ್ನೂ, ದ್ರುಪದಪುತ್ರನಾದ ಆ ಧೃಷ್ಟದ್ಯುಮ್ನನನ್ನೂ, ದ್ರೌಪದಿಗೆ ಕೀರ್ತಿವರ್ಧಕರೂ, ರೂಪವೀರ್ಯಗಳಲ್ಲಿ ಪಾಂಡವರಿಗೆ ಸಮಾನರೂ ಆದ ಆ ಐದು ಮಂದಿ ಉಪಪಾಂಡವರನ್ನೂ, ದೇವತೆಗಳಿಗೂ ದುರ್ಜಯನೆನಿಸಿ ಮಹಾಧನುರ್ಧಾರಿಯಾದ ಆ ಅಭಿಮನ್ಯುವನ್ನೂ, ಪ್ರಳಯಕಾಲದ ಸೂರ್ಯಾಗ್ನಿಗಳಂತೆ ಜ್ವಲಿಸುವ ಗದ ಪ್ರದ್ಯುಮ್ನ ಸಾಂಬರೆಂಬ ಯಾದವರನ್ನೂ, ಇನ್ನೂ ಲೋಕದಲ್ಲಿ ಬದುಕಿರಬೇಕೆಂಬ ಆಸೆಯುಳ್ಳ ಯಾವನು ತಾನೇ ಯುದ್ಧದಲ್ಲಿ ಇದಿರಿಸಿ ನಿಲ್ಲುವನು? ಓ ಬಲರಾಮಾ! ಈಗ ನಾವು ಆ ಧೃತರಾಷ್ಟ್ರಪುತ್ರರನ್ನು ಕರ್ಣಶಕುನಿಗಳೊಡನೆ ಸೇರಿಸಿ ಯುದ್ಧದಲ್ಲಿ ಕೊಂದು, ಪಾಂಡವರಿಗೆ ರಾಜ್ಯಾಭಿಷೇಕವನ್ನು ಮಾಡುವುದೇ ನಿಶ್ಚಯವು. ಆ ತತಾಯಿಗಳಾದ (ತಮ್ಮನ್ನು ಕೊಲ್ಲುವುದಕ್ಕಾಗಿ ಪ್ರಯತ್ನಿಸುವ) ಆ ಶತ್ರುಗಳನ್ನು ಕೊಲ್ಲುವುದರಲ್ಲಿ ಯಾವ ಅಧರ್ಮವೂ ಇಲ್ಲ! ಹಾಗಲ್ಲದೆ ಶತ್ರುಗಳಬಳಿಗೆ ಹೋಗಿ ದೈನ್ಯದಿಂದ ಯಾಚಿಸುವುದೇ ಕ್ಷತ್ರಿಯರಿಗೆ ಅಧರ್ಮಕ್ಕೂ, ಅಪಕೀರ್ತಿಗೂ ಕಾರಣವು. ಅಲ್ಲದೆ ಆ ದುರ್ಯೋಧನನೂ ಯುದ್ಧಕ್ಕಾಗಿಯೇ ಆತುರಗೊಂಡಿರುವನು. ಅವನ

ಉದ್ದೇಶಕ್ಕೆ ತಕ್ಕಂತೆಯೇ ನಾವು ತಾಮಸವಿಲ್ಲದೆ ನಡೆದುಕೊಳ್ಳಬೇಕು. ಆ ಧೃತರಾಷ್ಟ್ರಪುತ್ರನು ಯುದ್ಧವಿಲ್ಲದೆ ಎಂದಿಗೂ ರಾಜ್ಯವನ್ನು ಕೊಡಲು ಇಷ್ಟಪಡುವನಲ್ಲ. ಈಗ ಪಾಂಡುಪುತ್ರನಾದ ಈ ಯುಧಿಷ್ಠಿರನು ರಾಜ್ಯವನ್ನಾದರೂ ಪಡೆಯಬೇಕು. ಹಾಗಿಲ್ಲವೇ ನಾವೆಲ್ಲರೂ ಯುದ್ಧದಲ್ಲಿ ಕೌರವರಿಂಗ ಹತರಾಗಿ, ಒಟ್ಟಾಗಿ ಸೇರಿ ಭೂಮಿಯಲ್ಲಿ ಮಲಗಬೇಕು. ಇದೇ ಈಗಿನ ನಿಶ್ಚಯವು,'' ಎಂದನು.

ಇದು ಮೂರನೆಯ ಅಧ್ಯಾಯವು.

ದ್ರುಪದನು ಸಾತ್ಯಕಿಯ ಅಭಿಪ್ರಾಯವನ್ನನುಮೋದಿಸಿ, ಇತ್ತಲಾಗಿ ಯುದ್ಧಸನ್ನಾಹಕ್ಕಾಗಿ ರಾಜರನ್ನು ಕರೆಸಲು ದೂತರನ್ನೂ, ಅತ್ತಲಾಗಿ ಸಂಧಿಪ್ರಯತ್ನಕ್ಕಾಗಿ ಧೃತರಾಷ್ಟ್ರನಬಳಿಗೆ ತನ್ನ ಪುರೋಹಿತರನ್ನೂ ಕಳುಹಿಸಬೇಕೆಂದು ಸೂಚಿಸಿದುದು.

ಆಮೇಲೆ ದ್ರುಪದನು ಆ ಸಭೆಯವರನ್ನು ಕುರಿತು "ಈ ಸಾತ್ಯಕಿಯು ಹೇಳಿದಂತೆಯೇ ನಡೆಯುವುದರಲ್ಲಿ ಸಂದೇಹವಿಲ್ಲ. ದುರ್ಯೋಧನನು ಒಳ್ಳೇ ಮಾತಿನಿಂದ ರಾಜ್ಯವನ್ನು ಕೊಡುವವನಲ್ಲ ಧೃತರಾಷ್ಟ್ರನಾದರೂ ಮಗನಲ್ಲಿ ತನಗಿರುವ ಅಸಾಧಾರಣ ಮೋಹದಿಂದ ಆ ದುರ್ಯೋಧನನ ಅಭಿಪ್ರಾಯವನ್ನೇ ಅನುವರ್ತಿಸುವನು. ಆ ಧೃತರಾಷ್ಟ್ರನ ಉಪ್ಪನ್ನು ತಿಂದು, ಅವನ ಸೇವಾವೃತ್ತಿಯಲ್ಲಿರುವುದರಿಂದ ಭೀಷ್ಮದ್ರೋಣರೂ, ಮೂರ್ಖಸ್ವಭಾವದಿಂದ ಕರ್ಣಶಕುನಿಗಳೂ, ಆ ದುರ್ಯೋಧನನನ್ನೇ ಅನುವರ್ತಿಸುವರು. ಈಗ ಈ ಬಲರಾಮನು ಹೇಳಿದ ಮಾತುಗಳೇನೋ ನನ್ನ ಬುದ್ಧಿಗೆ ಸಮ್ಮತವಾಗಿಲ್ಲ. ನ್ಯಾಯಮಾರ್ಗದಲ್ಲಿ ನಡೆದುಕೊಳ್ಳುವವರಾಗಿದ್ದರೆ, ಅಂತವರಲ್ಲಿ ಮೊದಲು ನೀತಿ, ನಮ್ರತೆ, ಮುಂತಾದ ಮರ್ಯಾದೆಗಳೆಲ್ಲವನ್ನೂ ನಡೆಸಬೇಕಾದುದೇನೋ ಸಹಜವೇ. ಆದರೆ, ಆ ದುರ್ಯೋಧನನಾದರೋ, ಮೃದುತ್ವಕ್ಕೇನೂ ಬಗ್ಗುವವನಲ್ಲ. ಕೇವಲ ಪಾಪಬುದ್ಧಿ.

ಯುಳ್ಳ ಅವನಲ್ಲಿ ಮೃದುವಾಕ್ಯಗಳನ್ನಾಡುವುದೇ ಉಚಿತವೆಂದು ನನಗೆ ತೋರಲಿಲ್ಲಿ. ದುರ್ಯೋಧನನಲ್ಲಿ ಮೃದುವಾಕ್ಯಗಳನ್ನಾಡುವವನು, ಕತ್ತೆಗಳಲ್ಲಿ ಮೃದುತ್ವವನ್ನೂ, ಗೋವುಗಲ್ಲಿ ಕ್ರೌರ್ಯವನ್ನೂ ತೋರಿಸುವ ಮೂಢಾತ್ಮನೇಹೊರತು ಬೇರೆಯಲ್ಲ. ತನ್ನಲ್ಲಿ ನಮ್ರತೆಯಿಂದ ಮೃದುವಾದ ಮಾತನ್ನು ಹೇಳುವುದಕ್ಕೆ ಹೋದರೆ, ಪಾಪಾತ್ಮನಾದ ಆ ದುರ್ಯೋಧನನು ಅವರನ್ನು ಅಶಕ್ತರೆಂದು ತಿಳಿಯುವನೇ ಹೊರತು, ಅವನು ಹೇಳುವ ಬುದ್ಧಿವಾದವು ತನಗೆ ಹಿತವೆಂದು ಎಂದಿಗೂ ಗ್ರಹಿಸತಕ್ಕವನಲ್ಲ. ಆದುದರಿಂದ ಈಗ ನಾವು ಮಾಡಬೇಕಾದುದಿಷ್ಟೇ! ಈಗಲೇ ನಾವು ನಮ್ಮ ಮಿತ್ರರಾಜರಿಗೆಲ್ಲ ಸಮಯದಲ್ಲಿ ನಮಗೆ ಯುದ್ಧದಲ್ಲಿ ಸಹಾಯಕರಾಗಬೇಕೆಂದು ದೂತರಮೂಲಕವಾಗಿ ಹೇಳಿಕಳುಹಿಸುವೆವು. ಅವರು ತಮ್ಮತಮ್ಮ ಸೇನೆಗಳನ್ನು ಸಿದ್ಧಪಡಿಸಿಕೊಂಡು ಬರಲಿ! ಶಲ್ಯನಿಗೂ, ಧೃಷ್ಟಕೇತುವಿಗೂ, ಜಯತ್ಸೇನನಿಗೂ, ಎಲ್ಲಾ ಕೇಕಯರಾಜರಿಗೂ ಶೀಘ್ರಗಾಮಿಗಳಾದ ದೂತರಮೂಲಕವಾಗಿ ಈಗಲೇ ನಾವು ಹೇಳಿಕಳುಹಿಸುವೆವು. ಆ ದುರ್ಯೋಧನನೂ ಕೂಡ ,ಇದೇ ರೀತಿಯಾಗಿ ಎಲ್ಲಾ ಕಡೆಗಳಿಗೂ ದೂತರನ್ನು ಕಳುಹಿಸುವುದರಲ್ಲಿ ಸಂದೇಹವಿಲ್ಲ. ಆದರೆ ರಾಜರು, ತಮ್ಮಲ್ಲಿಗೆ ಮೊದಲು ಯಾರು ಬಂದು ಕೇಳುವರೋ ಅವರ ಕಡೆಗೆ ಹೋಗುವರು. ಆದುದರಿಂದ, ನಾವೇ ಮುಂದಾಗಿ ಆಯಾ ರಾಜರಬಳಿಗೆ ದೂತರನ್ನು ಕಳುಹಿಸಿಬಿಡಬೇಕು. ಈ ವಿಚಾರದಲ್ಲಿ ನಾವು ತ್ವರೆಮಾಡಿದರಷ್ಟೂ ಒಳ್ಳೆಯದು. ಈಗ ನಮ್ಮಮೇಲೆ ಬಿದ್ದಿರುವ ಕಾರ್ಯಭಾರವಾದರೋ ಬಹಳ ಮಹತ್ತಾದುದು. ಮೊದಲು ಶಲ್ಯನಿಗೂ, ಅವನನ್ನು ಅನುವರ್ತಿಸಿರುವ ಇತರರಾಜರಿಗೂ ಬೇಗನೆ ದೂತರಮೂಲಕವಾಗಿ ಹೇಳಿಕಳುಹಿಸಿರಿ. ಪೂರ್ವಸಮುದ್ರತೀರದಲ್ಲಿರುವ ಭಗದತ್ತನಿಗೂ ದೂತರನ್ನು ಕಳುಹಿಸಿರಿ. ಆ ಭಗದತ್ತನೆಂಬವನು ಅಮಿತ ಪರಾಕ್ರಮವುಳ್ಳವನು. ಹಾಗೆಯೇ ಉಗ್ರನಿಗೂ, ಹೃದೀಕಪುತ್ರನಾದ ಕೃತವರ್ಮನಿಗೂ, ಅಂಧಕನಿಗೂ, ದೀರ್ಘಪ್ರಜ್ಞನಿಗೂ, ಶೂರನಿಗೂ, ರೋಚಮಾನನಿಗೂ ದೂತರಮೂಲಕವಾಗಿ ಹೇಳಿಕಳುಹಿಸಬೇಕು. ಮತ್ತು ಬೃಹಂತ, ಸೇನಾಬಿಂದು, ಸೇನಜಿತ್ತು, ಪ್ರತಿವಿಂಧ್ಯ, ಚಿತ್ರವರ್ಮ, ಸುವಾಸ್ತುಕ, ಬಾಹ್ಲೀಕ, ಮುಂಜಕೇಶ, ಚೈದ್ಯಾಧಿಪತಿ, ಸುಪಾರ್ಶ್ವ,

ಸುಬಾಹು, ಪೌರವಾಧಿಪತಿ, ಶಕ ಪಲ್ಲವ ದರದ ದೇಶಾಧಿಪತಿಗಳು, ಸುರಾರಿ, ನದೀಜ, ಕರ್ಣವೇಷ್ಟ, ನೀಲ, ವೀರಧರ್ಮ, ಬಲಾಢ್ಯನಾದ ಭೂಮಿಪಾಲ, ದಂತವಕ್ತ್ರ, ರುಕ್ಮಿ, ಜನಮೇಜಯ, ಆಷಾಢ, ವಾಯುವೇಗ, ಪೂರ್ವಪಾಲಿ, ಭೂರಿತೇಜಸ್ಸು, ದೇವಕ, ಅನೇಕಪುತ್ರರೊಡಗೂಡಿದ ಏಕಲವ್ಯನೆಂಬ ರಾಜನು, ಕರೂಷಕ, ಕಾಂಭೋಜ, ಋಷಿಕದೇಶಾಧಿಪತಿಗಳು, ಕ್ಷೇಮಧೂರ್ತಿ, ಪಶ್ಚಿಮಸಮುದ್ರತೀರವಾಸಿಗಳಾದ ರಾಜರು, ಜಯತ್ಸೇನ ಕಾಶ್ಯಪರೆಂಬ ಅರಸರು, ಪಂಚನದವೆಂಬ (ಪಂಜಾಬ್) ದೇಶದ ರಾಜರು, ಶತ್ರುದುರ್ಜಯನಾದ ಕ್ರಾಥಪುತ್ರನು, ಪರ್ವತವಾಸಿಗಳಾದ ಪಾರ್ವತೀಯರೆಂಬ ರಾಜರು, ಜಾನಕಿ, ಸುಶರ್ಮ, ಮಣಿಮಾನ್ಯ, ಅತಿಮಸ್ತಕ, ಪಾಂಶುರಾಷ್ಟ್ರಾಧಿಪತಿಯಾದ ಧೃಷ್ಟಕೇತು, ತುಂಡ, ದಂಡಧಾರ, ಬೃಹತ್ಸೇನ, ಅಪರಾಜಿತ, ನಿಷಾದ, ಶ್ರೇಣಿಮಂತ, ವಸುಮಂತ, ಬೃಹದ್ಬಲ, ಮಹೌಜಸ್ಸು, ಬಾಹು, ಪುತ್ರರೊಡಗೂಡಿದ ಸಮುದ್ರಸೇನನು, ಉದ್ಭವ, ಕ್ಷೇಮಕ, ವಾಟಧಾನ, ಶ್ರುತಾಯು, ದೃಢಾಯು, ಸಾಲ್ವಪುತ್ರ, ಯುದ್ಧದುರ್ಮದನೆನಿಸಿದ ಕಳಿಂಗದೇಶಾಧಿಪತಿಯಾದ ಕುಮಾರನು, ಇವರೆಲ್ಲರ ಬಳಿಗೂ ಈಗಲೇ ದೂತರನ್ನು ಕಳುಹಿಸಬೇಕೆಂಬುದು ನನ್ನ ಅಭಿಪ್ರಾಯವು. ಬ್ರಾಹ್ಮಣೋತ್ತಮನೂ, ವಿದ್ವಾಂಸನೂ ಆದ ಈ ನನ್ನ ಪುರೋಹಿತನು ಇತ್ತಲಾಗಿ ಧೃತರಾಷ್ಟ್ರನ ಬಳಿಗೆ ಹೋಗಲಿ! ದುರ್ಯೋಧನನಿಗೆ ಯಾವ ರೀತಿಯಲ್ಲಿ ತಿಳಿಸಬೇಕೋ, ಭೀಷ್ಮನಲ್ಲಿ ಏನನ್ನು ಹೇಳಬೇಕೋ, ಧೃತರಾಷ್ಟ್ರನಿಗೆ ಹೇಗೆ ತಿಳಿಸಬೇಕೋ, ರಥಿಕರಲ್ಲಿ ಮೇಲೆನಿಸಿದ ದ್ರೋಣಾಚಾರ್ಯನೊಡನೆ ಯಾವ ಮಾತುಗಳನ್ನಾಡಬೇಕೋ ಅದೆಲ್ಲವನ್ನೂ ವಿವರವಾಗಿ ಇವನೊಡನೆ ಹೇಳಿಕಳುಹಿಸಿರಿ'' ಎಂದನು.

ಇದು ನಾಲ್ಕನೆಯ ಅಧ್ಯಾಯವು.

ಶ್ರೀಕೃಷ್ಣನು ದ್ರುಪದನ ಮಾತನ್ನು ಅನುಮೋದಿಸಿ, ಅದರಂತೆಯೇ ನಡೆಸುವಹಾಗೆ ಹೇಳಿ, ದ್ವಾರಕೆಗೆ ಹೋದುದು. ದೂತರಿಂದ ಕರೆಸಲ್ಪಟ್ಟ ರಾಜರು ಬಂದು ಸೇರಿದುದು.

ಓ ಜನಮೇಜಯರಾಜಾ! ಕೇಳು! ದ್ರುಪದನು ಈ ಮಾತನ್ನು ಹೇಳಿ ಮುಗಿಸಿದೊಡನೆ, ಯದುಕುಲಶ್ರೇಷ್ಠನಾದ ಕೃಷ್ಣನು ಸಭೆಯನ್ನು ನೋಡಿ, "ದ್ರುಪದನು ಹೇಳಿದ ಮಾತು ಯುಕ್ತವಾಗಿದೆ. ಇದು ಪಾಂಡುಕುಮಾರನಾದ ಧರ್ಮರಾಜನ ಅರ್ಥಸಿದ್ಧಿಗೆ ಕಾರಣವಾಗಿರುವುದು. ರಾಜನೀತಿಯಲ್ಲಿ ನಡೆಯಬೇಕೆಂಬ ಉದ್ದೇಶವುಳ್ಳ ನಮಗೂ ಇದು ಅವಶ್ಯಕರ್ತವ್ಯವೇ. ಇದಕ್ಕೆ ವ್ಯತಿರಿಕ್ತವಾಗಿ ಹೋಗುವುದು ಅವಿವೇಕವು. ನಮಗಾದರೂ ಕೌರವಪಾಂಡವರಿಬ್ಬರಲ್ಲಿ ಸಮಾನವಾದ *ಬಂಧುತ್ವವುಂಟು. ಪಾಂಡವರೂ, ಕೌರವರೂ ಅವರವರ ಇಷ್ಟದಂತೆ ವರ್ತಿಸುತ್ತಿರುವಾಗ, ನಾವು ಇಲ್ಲಿಗೆ ವಿವಾಹಕ್ಕಾಗಿ ಕರೆಸಲ್ಪಟ್ಟು ಬಂದವರು. ದ್ರುಪದರಾಜಾ! ನೀನು ಇಲ್ಲಿಗೆ ಬಂದುದೂ ಅದಕ್ಕಾಗಿಯೇ. ವಿವಾಹವೇನೋ ನಡೆದುದಾಯಿತು. ನಾವೆಲ್ಲರೂ ಸಂತೋಷದಿಂದ ಆ ಶುಭಕಾರ್ಯವನ್ನು ನೋಡಿದೆವು. ಇನ್ನು ನಾವೆಲ್ಲರೂ ನಮ್ಮನಮ್ಮ ಊರಿಗೆ ಹೋಗಿ ಸೇರತಕ್ಕವರು. ಇಲ್ಲಿ ನೆರೆದಿರುವ ರಾಜರೊಳಗೆಲ್ಲ, ನೀನು ವಯಸ್ಸಿನಲ್ಲಿಯೂ, ಶಾಸ್ತ್ರಜ್ಞಾನದಲ್ಲಿಯೂ ವೃದ್ಧನು. ನಾವೆಲ್ಲರೂ ನಿನಗೆ ಶಿಷ್ಯರಂತಿರುವೆವು. ಇದರಲ್ಲಿ ಸಂದೇಹವಿಲ್ಲ. ಅಲ್ಲದೆ ಧೃತರಾಷ್ಟ್ರನಿಗೂಕೂಡ ನಿನ್ನಲ್ಲಿ ಒಳ್ಳೇ ಗೌರವಬುದ್ಧಿಯುಂಟು. ಮತ್ತು ದ್ರೋಣ ಕೃಪಾಚಾರ್ಯರಿಬ್ಬರಿಗೂ ನೀನು ಪರಮಾಪ್ತಸ್ನೇಹಿತನೆನಿಸಿರುವೆ. ಆದುದರಿಂದ, ಪಾಂಡವರಿಗೆ ಕಾರ್ಯಸಿದ್ಧಿಕರವಾದ ಮಾತುಗಳನ್ನು ನೀನೇ ಈಗ ಧೃತರಾಷ್ಟ್ರನಿಗೆ ಹೇಳಿಕಳುಹಿಸು. ನೀನು ಯಾವ ಮಾತನ್ನು ಹೇಳಿಕಳುಹಿಸಿದರೂ ಅದೇ ನಮ್ಮೆಲ್ಲರಿಗೂ ಸಮ್ಮತವು. ಅದರಂತೆ ನಡೆದುಕೊಳ್ಳುವುದೇ ನಮ್ಮೆಲ್ಲರ ನಿಶ್ಚಯವು. ದುರ್ಯೋಧನನು ನಿಮ್ಮ ಮಾತಿನಂತೆ ನಡೆದು ನ್ಯಾಯಮಾರ್ಗದಿಂದ

---

* ಕೃಷ್ಣನಿಗೆ ಕುಂತಿಯು ಅತ್ತೆಯಾದುದರಿಂದ ಪಾಂಡವರಲ್ಲಿ ಬಂಧುತ್ವವು. ದುರ್ಯೋಧನನ ಮಗಳನ್ನು ಸಾಂಬನು ವರಿಸಿದುದರಿಂದ ಕೌರವರಲ್ಲಿ ಬಂಧುತ್ವವು.

ಸಮಾಧಾನಕ್ಕೆ ಬಂದಪಕ್ಷದಲ್ಲಿ, ಇನ್ನುಮುಂದೆ ಕೌರವಪಾಂಡವರಲ್ಲಿ ಸಹೋದರಸ್ನೇಹವು ಬೆಳೆದು, ಅವರಿಬ್ಬರ ವಿರೋಧದಿಂದ ಒದಗಬಹುದಾದ ಮಹಾನರ್ಥವು ತಪ್ಪುವುದು. ಹಾಗಿಲ್ಲದೆ ಆ ಧೃತರಾಷ್ಟ್ರಪುತ್ರನು, ಅಜ್ಞಾನದಿಂದಲೂ, ಅಹಂಕಾರದಿಂದಲೂ ಬೀಗಿ ಬೆರೆದು, ನಿನ್ನ ಮಾತಿನಂತೆ ನಡೆಯದಿದ್ದಪಕ್ಷದಲ್ಲಿ ತನ್ನ ಮೂರ್ಖಸ್ವಭಾವಕ್ಕೆ ತಕ್ಕ ಫಲವನ್ನನುಭವಿಸುವುದೇನೋ ಸಿದ್ಧವಾಗಿದೆ. ಇತರ ರಾಜರಿಗೆಲ್ಲ ದೂತರನ್ನು ಕಳುಹಿಸಿ, ನಮಗೂ ಹೇಳಿಕಳುಹಿಸು. ಗಾಂಡೀವಧಾರಿಯಾದ ಅರ್ಜುನನ ಕೋಪಕ್ಕೆ ಗುರಿಯಾದಮೇಲೆ, ಆ ಮೂಢನು ಬಂಧುಮಿತ್ರಾಮಾತ್ಯರೊಡನೆ ನಾಶಹೊಂದುವುದೇ ನಿಶ್ಚಯವು" ಎಂದನು.

ಓ ಜನಮೇಜಯರಾಜಾ! ಕೃಷ್ಣನು ಈ ಮಾತುಗಳನ್ನು ಹೇಳಿ ಮುಗಿಸಿದಮೇಲೆ, ವಿರಾಟರಾಜನು ಅವನನ್ನು ಯಥೋಚಿತವಾಗಿ ಸತ್ಕರಿಸಿ, ಬಂಧುಮಿತ್ರಪರಿವಾರಗಳೊಡನೆ ಅವನನ್ನು ಮರ್ಯಾದೆಯಿಂದ ಕಳುಹಿಸಿಕೊಟ್ಟನು. ಅತ್ತಲಾಗಿ ಕೃಷ್ಣನು ದ್ವಾರಕೆಗೆ ಹಿಂತಿರುಗಿದಮೇಲೆ, ಇತ್ತಲಾಗಿ ರಾಜರೆಲ್ಲರೂ ಯುಧಿಷ್ಠಿರನನ್ನು ಮುಂದಿಟ್ಟುಕೊಂಡು ಯುದ್ಧಕ್ಕೆ ಬೇಕಾದ ಸಕಲಸನ್ನಾಹಗಳನ್ನೂ ಸಿದ್ಧಪಡಿಸುತ್ತಿದ್ದರು. ವಿರಾಟನು ತನ್ನ ಸೈನ್ಯಗಳನ್ನು ಸಿದ್ಧಗೊಳಿಸಿದನು. ವಿರಾಟನೂ, ದ್ರುಪದನೂ ತಮತಮಗೆ ತಿಳಿದ ಎಲ್ಲಾ ಅರಸರ ಕಡೆಗೂ ದೂತರನ್ನು ಕಳುಹಿಸಿದರು. ಪಾಂಡವರೂ, ದ್ರುಪದನೂ, ವಿರಾಟರಾಜನೂ ಹೇಳಿಕಳುಹಿಸಿದ ಸಂದೇಶಗಳ ಮೇಲೆ ಬಲಶಾಲಿಗಳಾದ ಅನೇಕರಾಜರು ಸಂತೋಷದಿಂದ ತಮ್ಮ ತಮ್ಮ ಸೈನ್ಯಗಳೊಡನೆ ಬಂದು ಸೇರಿದರು. ಪಾಂಡವರ ಪಕ್ಷಕ್ಕೆ ದೊಡ್ಡ ಸೈನ್ಯವು ಬಂದು ಸೇರುತ್ತಿರುವ ಈ ಸುದ್ದಿಯನ್ನು ಕೇಳಿ, ಅತ್ತಲಾಗಿ ಕೌರವರೂಕೂಡ ತಮಗೆ ಹಿತೈಷಿಗಳಾದ ಅನೇಕರಾಜರಿಗೆ ಸಂದೇಶವನ್ನು ಕಳುಹಿಸಿ ಕರೆಯಿಸಿಕೊಂಡರು. ಈ ಕೌರವಪಾಂಡವರ ನಿಮಿತ್ತವಾಗಿ ಉಭಯಪಕ್ಷಕ್ಕೂ ಅಲ್ಲಲ್ಲಿಂದ ಬಂದು ಕೂಡುತ್ತಿದ್ದ ರಾಜರಿಂದಲೂ, ಅವರವರ ಚತುರಂಗಬಲಗಳಿಂದಲೂ ಭೂಭಾಗವೆಲ್ಲ ದಟ್ಟವಾಗಿ ತುಂಬಿಹೋಯಿತು. ಪರ್ವತಾರಣ್ಯಗಳೊಡನೆ ಕೂಡಿದ ಸಮಸ್ತ ಭೂಮಿಯೂ, ಆ ದೊಡ್ಡ

ಸೈನ್ಯಗಳ ನಡೆಯಿಂದ ನಡುಗುವಂತಾಯಿತು. ಆಮೇಲೆ ಪಾಂಚಾಲ ದೇಶಾಧಿಪತಿಯಾದ ದ್ರುಪದನು, ಜ್ಞಾನವೃದ್ಧನೂ, ವಯೋವೃದ್ಧನೂ ಧರ್ಮರಾಜನಿಗೆ ಹಿತೈಷಿಯೂ ಆಗಿದ್ದ ತನ್ನ ಪುರೋಹಿತನನ್ನು ಧೃತ ರಾಷ್ಟ್ರನಬಳಿಗೆ ಕಳುಹಿಸುವುದಕ್ಕಾಗಿ ಕರೆಯಿಸಿದನು.

ಇದು ಐದನೆಯ ಅಧ್ಯಾಯವು.

## ದ್ರುಪದ ಪುರೋಹಿತನು ಹಸ್ತಿನಾವತಿಗೆ ಹೊರಟದ್ದು.

ದ್ರುಪದನು ತನ್ನ ಪುರೋಹಿತನನ್ನು ಕುರಿತು "ಓ ಬ್ರಾಹ್ಮಣೋ ತ್ತಮಾ! ಭೂತಗಳಲ್ಲಿ ಪ್ರಾಣವುಳ್ಳವುಗಳು ಶ್ರೇಷ್ಠವೆನಿಸುವುವು. ಪ್ರಾಣಿ ಗಳಲ್ಲಿ ಬುದ್ಧಿಯಿಂದ ಜೀವಿಸತಕ್ಕವು ಮೇಲೆನಿಸುವುವು. ಬುದ್ಧಿಜೀವಿ ಗಳಲ್ಲಿ ಮನುಷ್ಯರು ಮೇಲೆನಿಸುವರು. ಮನುಷ್ಯರಲ್ಲಿ ಬ್ರಾಹ್ಮಣರು ಮೇ ಲೆನಿಸಿರುವರು. ಬ್ರಾಹ್ಮಣರಲ್ಲಿಯೂ ವಿದ್ಯಾವಂತರು ಮೇಲೆನಿಸುವರು. ವಿದ್ಯಾವಂತರಲ್ಲಿ ನಿಶ್ಚಯಜ್ಞಾನವುಳ್ಳ ಸಿದ್ಧಾಂತಜ್ಞರು ಮೇಲೆನಿಸುವರು. ಅವರಲ್ಲಿಯೂ ಬ್ರಹ್ಮಜ್ಞಾನಿಗಳು ಉತ್ತಮರು. ಅಂತಹ ನಿಶ್ಚಯಬುದ್ಧಿ ಯುಳ್ಳ ಬ್ರಹ್ಮಜ್ಞಾನಿಗಳಲ್ಲಿ ನೀನು ಉತ್ತಮನೆಂದು ನನ್ನ ಅಭಿಪ್ರಾ ಯವು. ಕುಲದಲ್ಲಿಯೂ, ವಯಸ್ಸಿನಲ್ಲಿಯೂ, ಶಾಸ್ತ್ರಜ್ಞಾನದಲ್ಲಿಯೂ ನೀನು ಮೇಲೆನಿಸಿರುವೆ. ಬುದ್ಧಿಯಲ್ಲಿ ನೀನು ಶುಕ್ರಬೃಹಸ್ಪತಿಗೆ ಸಮಾ ನನು. ಆ ಕೌರವನು ಎಂತಹ ನಡತೆಯುಳ್ಳವನೆಂಬುದು ನಿನಗೆ ಚೆನ್ನಾ ಗಿ ತಿಳಿದಿದೆ. ಕುಂತೀಪುತ್ರನಾದ ಯುಧಿಷ್ಠಿರನ ಸ್ವಭಾವವೆಂತದೆಂಬು ದನ್ನೂ ನೀನು ಬಲ್ಲೆ. ಧೃತರಾಷ್ಟ್ರನಿಗೆ ತಿಳಿದಂತೆಯೇ ಕೌರವರು ಪಾಂಡ ವರನ್ನು ವಂಚಿಸಿರುವರು. ವಿದುರನು ಅನೇಕವಿಧವಾಗಿ ಬುದ್ಧಿವಾದ ಗಳನ್ನು ಹೇಳಿದರೂ ಧೃತರಾಷ್ಟ್ರನು ಪುತ್ರಮೋಹದಿಂದ ತನ್ನ ಮಗನ ದುರಾಲೋಚನೆಗಳಿಗೆಲ್ಲ ತಲೆಯಾಡಿಸುತ್ತಿರುವನು. ಧರ್ಮರಾಜನಿಗೆ ಪಗ ಡೆಯಾಟದಲ್ಲಿ ಪರಿಚಯವಿಲ್ಲವೆಂಬುದನ್ನೂ, ಅವನು ಶುದ್ಧಾತ್ಮನಾಗಿ ಕ್ಷತ್ರಿಯಧರ್ಮದಲ್ಲಿ ಸ್ಥಿರವಾಗಿ ನೆಲೆಗೊಂಡವನೆಂಬುದನ್ನೂ ಚೆನ್ನಾಗಿ

ತಿಳಿದೂ ಕೂಡ, ದ್ಯೂತಶೀಲನಾದ ಶಕುನಿಯು ಕೃತ್ರಿಮಬುದ್ಧಿಯಿಂದಲೇ ಯುಧಿಷ್ಠಿರನನ್ನು ಜೂಜಾಟಕ್ಕೆಳೆದನು. ಹೀಗೆ ಕೌರವರು ಧರ್ಮರಾಜ ನನ್ನು ಮೋಸದಿಂದ ವಂಚಿಸಿದವರಾದರೂ, ಈಗಲೂ ಅವರು ಪಾಂಡ ವರಿಗೆ ಸೇರಬೇಕಾದ ರಾಜ್ಯಭಾಗವನ್ನು ನ್ಯಾಯದಿಂದ ತಾವಾಗಿ ಕೊಡು ವಹಾಗಿಲ್ಲ. ಆದುದರಿಂದ ನೀನು ಈಗಲೇ ಧೃತರಾಷ್ಟ್ರನ ಬಳಿಗೆ ಹೋಗಿ, ಅವನಿಗೆ ಧರ್ಮಯುಕ್ತವಾದ ಹಿತವಾದಗಳನ್ನು ಹೇಳಿ, ಅವನ ಮತ್ತು ಅವನ ಎಲ್ಲಾ ಯೋಧರ ಮನಸ್ಸನ್ನೂ ಆ ದುರ್ಯೋಧನನ ಮಾರ್ಗದಿಂದ ತಿರುಗಿಸಬಲ್ಲೆಯೆಂದು ನನ್ನ ದೃಢನಿಶ್ಚಯವು. ವಿದುರನು ಅಲ್ಲಿ ನಿನ್ನ ಕಾರ್ಯಸಿದ್ಧಿಗೆ ಸಹಕಾರಿಯಾಗಿ ನಡೆಯುವನಲ್ಲದೆ, ಭೀಷ್ಮ, ದ್ರೋಣ, ಕೃಪಾದಿಗಳೆಲ್ಲರನ್ನೂ ನಿನ್ನ ಮಾತಿನಂತೆ ತಿರುಗಿಸಬಲ್ಲನು. ಹೀಗೆ ದು ರ್ಯೋಧನನ ಮುಖ್ಯಾಮಾತ್ಯರೂ, ಯೋಧರೂ ಅವನ ಪಕ್ಷಕ್ಕೆ ವಿರೋ ಧಿಗಳಾಗಿ, ಅವನ ಮಾತಿಗೆ ಸಮ್ಮತಿಸದೆ ಹಿಂಜರಿದಪಕ್ಷದಲ್ಲಿ, ಅವರನ್ನೆಲ್ಲ ತಿರುಗಿ ಒಟ್ಟುಗೂಡಿಸಿ ತನ್ನ ಕಡೆಗೆ ನಿಲ್ಲಿಸಿಕೊಳ್ಳುವ ದೊಡ್ಡ ಕಾರ್ಯ ಭಾರವು ದುರ್ಯೋಧನನಮೇಲೆ ಬೀಳುವುದು. ಈ ಪ್ರಯತ್ನಕ್ಕೆ ಹೆಚ್ಚು ಕಾಲವು ಬೇಕಾದುದರಿಂದ, ಇಷ್ಟರಲ್ಲಿ ಇತ್ತಲಾಗಿ ಪಾಂಡವರು ನಿಶ್ಚಿಂತ ರಾಗಿ, ಒಳ್ಳೇ ಜಾಗರೂಕತೆಯಿಂದ ಸೈನ್ಯಗಳನ್ನು ಬಲಪಡಿಸಿಕೊಳ್ಳುವರು. ಯುದ್ಧಕ್ಕೆ ಬೇಕಾದ ದ್ರವ್ಯಸಂಗ್ರಹವನ್ನು ಮಾಡಿಟ್ಟುಕೊಳ್ಳುವುದಕ್ಕೂ ಅವರಿಗೆ ತಕ್ಕಷ್ಟು ಅವಕಾಶವು ದೊರೆಯುವುದು. ಆಗ ಅಲ್ಲಿ ದುರ್ಯೋ ಧನನಿಗೆ ತನ್ನ ಕಡೆಯವರೆಲ್ಲರೂ ತನ್ನನ್ನು ಕೈಬಿಟ್ಟು, ನೀನೂ ಅಲ್ಲಿ ಸಂಧಿಕಾರ್ಯದ ನೆವದಿಂದ ಕಾಲತಾಮಸಮಾಡುತ್ತಿದ್ದರೆ, ಇಲ್ಲಿ ನಮ್ಮಂತೆ ತನ್ನ ಸೇನೆಗಳನ್ನು ಸಿದ್ಧಪಡಿಸಿಕೊಳ್ಳುವುದಕ್ಕೆ ತಕ್ಕಷ್ಟು ಅವಕಾಶವಿರುವು ದಿಲ್ಲ. ಈಗ ನೀನು ಅಲ್ಲಿಗೆ ಹೋಗುವುದರಿಂದ ನಮಗೆ ಬೇರೆ ಯಾವ ಪ್ರಯೋಜನವೂ ದೊರೆಯದಿದ್ದರೂ, ಇದೊಂದು ದೊಡ್ಡ ಪ್ರಯೋಜನವು ಕೈಗೂಡಿದಂತಾಗುವುದು. ನೀನು ಧೃತರಾಷ್ಟ್ರನನ್ನು ಪ್ರತ್ಯಕ್ಷವಾಗಿ ಕಂಡು ಧರ್ಮಯುಕ್ತವಾದ ಮಾತುಗಳನ್ನಾಡಿದರೆ, ಒಂದುವೇಳೆ ಅವನೇ ನಿನ್ನ ಕಾರ್ಯವನ್ನು ನಡೆಸಿಕೊಡಬಹುದು. ಅಲ್ಲದೆ, ನೀನು ಯಾರಲ್ಲಿ ಹೇಗೆ ಮಾತಾಡಬೇಕೆಂಬುದನ್ನು ಚೆನ್ನಾಗಿ ಬಲ್ಲವನಾದುದರಿಂದ, ಧರ್ಮಜ್ಞರಲ್ಲಿ

ಧರ್ಮವನ್ನೇ ಹಿಡಿದು ಮಾತಾಡಬೇಕು. ಕನಿಕರಬುದ್ಧಿಯುಳ್ಳವರಲ್ಲಿ ಪಾಂಡವರು ಇದುವರೆಗೆ ಅನುಭವಿಸಿದ ಕಷ್ಟಗಳನ್ನೆಲ್ಲ ಚೆನ್ನಾಗಿ ವಿವರಿಸಬೇಕು. ವೃದ್ಧರಾದವರಲ್ಲಿ ನಮ್ಮ ಪೂರ್ವಿಕರಿಂದ ಅನುಸರಿಸಲ್ಪಟ್ಟ ಕುಲಧರ್ಮಗಳನ್ನು ನಿದರ್ಶಿಸಿ ಮಾತಾಡಬೇಕು. ಹೀಗೆ ನೀನು ಅವರವರ ಮನಸ್ಸಿಗೆ ಹಿಡಿಯುವಂತೆ ಸಮಯೋಚಿತವಾದ ಮಾತುಗಳನ್ನಾಡಿ, ಅವರೆಲ್ಲರಿಗೂ ದುರ್ಯೋಧನನಲ್ಲಿ ಭೇದಬುದ್ಧಿ ಹುಟ್ಟುವಂತೆ ಮಾಡುವೆಯೆಂದು ನನಗೆ ನಿಸ್ಸಂದೇಹವಾದ ನಂಬಿಕೆಯಿದೆ. ನೀನು ನಿರ್ಭಯವಾಗಿ ಅಲ್ಲಿ ಮಾತಾಡಬಹುದು. ಅವರಿಂದ ನಿನಗೆ ಯಾವ ಭಯವೂ ಇರುವುದಿಲ್ಲ. ಏಕೆಂದರೆ, ನೀನು ವೇದವಿತ್ತಾದ ಬ್ರಾಹ್ಮಣನು. ಅದರಲ್ಲಿಯೂ ವೃದ್ಧನು. ಇದರಮೇಲೆ ದೂತಕಾರ್ಯಕ್ಕಾಗಿ ಬಂದವನು. ಆದುದರಿಂದ ಈಗಿನ ಪುಷ್ಯನಕ್ಷತ್ರದೊಡಗೂಡಿದ ಜಯಮುಹೂರ್ತದಲ್ಲಿ, ಪಾಂಡವರ ಕಾರ್ಯಸಿದ್ಧಿಗಾಗಿ ನೀನು ಪ್ರಯಾಣವನ್ನು ಬೆಳೆಸಬೇಕು" ಎಂದನು.

ಹೀಗೆ ದ್ರುಪದನು ಕೇಳಿಕೊಂಡಮೇಲೆಗೆ ಸಚ್ಚರಿತ್ರನೂ, ವಿದ್ಯಾವಂತನೂ, ನೀತಿಶಾಸ್ತ್ರನಿಪುಣನೂ ಆದ ಆ ಪುರೋಹಿತನು, ಪಾಂಡವರ ಹಿತಕ್ಕಾಗಿ, ಕೌರವರನ್ನು ನೋಡಲು ಹಸ್ತಿನಾವತಿಗೆ ಹೊರಟನು.

ಇದು ಆರನೆಯ ಅಧ್ಯಾಯವು.

---

ಕೃಷ್ಣನನ್ನು ನೋಡುವುದಕ್ಕಾಗಿ ದುರ್ಯೋಧನಾರ್ಜುನರಿಬ್ಬರೂ ಏಕಕಾಲದಲ್ಲಿ ದ್ವಾರಕೆಗೆ ಬಂದುದು. ಅರ್ಜುನನು ಕೃಷ್ಣನನ್ನು ಸಾರಥ್ಯಕ್ಕಾಗಿ ಪ್ರಾರ್ಥಿಸಿದುದು. ದುರ್ಯೋಧನನು ನಾರಾಯಣರೆಂಬ ಕೃಷ್ಣಕುಮಾರರನ್ನು ಕರೆದುಕೊಂಡು, ಕೃತವರ್ಮನೊಡನೆ ತನ್ನ ನಗರಕ್ಕೆ ಬಂದುದು.

ಓ ಜನಮೇಜಯರಾಜಾ! ಕೇಳು! ಹೀಗೆ ದ್ರುಪದಾದಿಗಳು ಪುರೋಹಿತನನ್ನು ಹಸ್ತಿನಾವತಿಗೆ ಕಳುಹಿಸಿದಮೇಲೆ, ದ್ವಾರಕೆಯನ್ನು ಬಿಟ್ಟು ಬೇರೆ ಕಡೆಗಳಿಗೆಲ್ಲ ದೂತರನ್ನು ಕಳುಹಿಸಿದರು. ಶ್ರೀಕೃಷ್ಣನನ್ನು ನೋಡು



೧೯. ಯುದ್ಧದಲ್ಲಿ ಕೃಷ್ಣನ ಸಹಾಯವನ್ನು ಕೋರಿ ಬಂದ ಅರ್ಜುನದುರ್ಯೋಧನರಿಬ್ಬರೂ ಏಕಕಾಲದಲ್ಲಿ ಸಂಧಿಸಿದುದು.
ನಿದ್ರೆಯಿಂದೆದ್ದ ಕೃಷ್ಣನು ತನ್ನ ಕಾಲಬಳಿಯಲ್ಲಿದ್ದ ಅರ್ಜುನನನ್ನು ಮೊದಲು ಕಂಡುದು.

ವುದಕ್ಕಾಗಿ ಅರ್ಜುನನು ತಾನಾಗಿಯೇ ಹೊರಟನು. ಅಭಿಮನ್ಯುವಿವಾಹ ಕ್ಕಾಗಿ ಬಂದಿದ್ದ ಬಲರಾಮಕೃಷ್ಣರಿಬ್ಬರೂ, ವೃಷ್ಣಿಗಳು, ಅಂಧಕರು, ಭೋಜರು ಮುಂತಾದ ಸಮಸ್ತಪರಿವಾರಗಳೊಡನೆ ವಿರಾಟನಗರದಿಂದ ದ್ವಾರಕೆಗೆ ಹಿಂತಿರುಗಿದಮೇಲೆ, ಇತ್ತಲಾಗಿ ದುರ್ಯೋಧನನು ಗೂಢಚಾರರನ್ನು ಕಳುಹಿಸಿ, ಪಾಂಡವರು ಮುಂದೇನುಮಾಡುವರೆಂಬುದನ್ನೆಲ್ಲ ಆಗಾಗ ಅವರಮೂಲಕವಾಗಿ ತಿಳಿದುಕೊಳ್ಳುತ್ತಿದ್ದನು. ಮತ್ತು ಕೃಷ್ಣನು ದ್ವಾರಕೆಗೆ ಮುಟ್ಟಿದುದನ್ನು ಕೇಳಿದ ದಿನವೇ, ದುರ್ಯೋಧನನು ಒಳ್ಳೇ ವಾಯುವೇಗವುಳ್ಳ ಕುದುರೆಗಳನ್ನೇರಿ, ಮಿತವಾದ ಸೈನ್ಯದೊಡನೆ ದ್ವಾರಕೆಗೆ ಬಂದನು. ಅದೇ ದಿವಸಕ್ಕೆ ಸರಿಯಾಗಿ ಇತ್ತಲಿಂದ ಅರ್ಜುನನೂ ಶ್ರೀಕೃಷ್ಣನನ್ನು ನೋಡುವುದಕ್ಕಾಗಿ ದ್ವಾರಕೆಗೆ ಬಂದುಸೇರಿದನು. ಹೀಗೆ ಅರ್ಜುನದುರ್ಯೋಧನರಿಬ್ಬರೂ ಕೃಷ್ಣನನ್ನು ನೋಡಲು ಬಂದಾಗ, ಅವನು ನಿದ್ರಾಲೋಲನಾಗಿ ಮಲಗಿದ್ದನು. ಮೊದಲು ದುರ್ಯೋಧನನು ಕೃಷ್ಣನು ಮಲಗಿದ್ದಸ್ಥಳಕ್ಕೆ ಹೋಗಿ, ಆ ಕೃಷ್ಣನ ತಲೆಯ ಕಡೆಯಲ್ಲಿ, ಒಂದು ಉತ್ತಮಾಸನವನ್ನು ನೋಡಿ ಅದರಲ್ಲಿ ಕುಳಿತನು. ಆಮೇಲೆ ಸ್ವಲ್ಪ ಹೊತ್ತಿಗೆ ಅರ್ಜುನನು ಅಲ್ಲಿಗೆ ಬಂದು, ಬಹಳ ನಮ್ರತೆಯಿಂದ ಆ ಕೃಷ್ಣನ ಕಾಲಿನ ಕಡೆಯಲ್ಲಿ ನಿಂತನು. ಸ್ವಲ್ಪ ಹೊತ್ತಿಗೆ ಕೃಷ್ಣನಿಗೆ ಎಚ್ಚರವಾಯಿತು. ಅವನು ಮೇಲೆದ್ದು ಮುಂದೆ ನೋಡುವಾಗ, ಮೊದಲು ಅರ್ಜುನನು ಅವನ ಕಣ್ಣಿಗೆ ಕಾಣಿಸಿದನು. ಆಮೇಲೆ ಅಕಸ್ಮಾತ್ತಾಗಿ ಹಿಂತಿರುಗಿ ನೋಡಿದಾಗ, ಹಿಂದೆ ಉತ್ತಮಾಸನದಮೇಲೆ ಠೀವಿಯಿಂದ ಕುಳಿತಿದ್ದ ದುರ್ಯೋಧನನನ್ನು ಕಂಡನು. ಆಗ ಕೃಷ್ಣನು ಅವರಿಬ್ಬರಿಗೂ ಸುಖಾಗಮನವನ್ನು ಹೇಳಿ, ಅವರನ್ನು ಯಥೋಚಿತವಾಗಿ ಸತ್ಕರಿಸಿ, ಅವರು ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಕಾರಣವೇನೆಂದು ವಿಚಾರಿಸಿದನು. ಆಗ ದುರ್ಯೋಧನನು ಮುಗುಳ್ನಗೆಯೊಡನೆ ಕೃಷ್ಣನನ್ನು ಕುರಿತು “ಕೃಷ್ಣಾ! ಮುಂದಿನ ಯುದ್ಧದಲ್ಲಿ ನೀನು ನಮಗೆ ಸಹಾಯಮಾಡಬೇಕು. ನಿನಗೆ ನನ್ನಲ್ಲಿಯೂ, ಅರ್ಜುನನಲ್ಲಿಯೂ ಸಮಾನಪ್ರೇಮವುಂಟು. ಅಲ್ಲದೆ ನಮ್ಮಿಬ್ಬರಲ್ಲಿ ನಿನಗೆ ಸಮಾನವಾದ ಬಾಂಧವ್ಯವೂ ಉಂಟು. ಆದರೂ, ಓ ಮಧುಸೂಧನಾ! ನಿನ್ನನ್ನು ನೋಡುವುದಕ್ಕಾಗಿ ನಾನು ಅರ್ಜು

ನನಿಗಿಂತ ಮೊದಲೇ ಬಂದವನು. ಪೂರ್ವಾಚಾರಪರರಾದ ಸತ್ಪುರುಷರು, ಮೊದಲು ಬಂದವರನ್ನು ಆದರಿಸುವರು. ನೀನು ಸಜ್ಜನರಿಗೆಲ್ಲ ಮೇಲೆನಿಸಿರುವೆ. ಮತ್ತು ಸರ್ವಸಮ್ಮತನಾಗಿ ನಡೆದುಕೊಳ್ಳತಕ್ಕವನು. ಆದುದರಿಂದ ಈಗಿನ ವಿಚಾರದಲ್ಲಿಯೂ ನೀನು ಸಜ್ಜನರ ಧರ್ಮವನ್ನೇ ಹಿಡಿದು ನಡೆಯಬೇಕು'' ಎಂದನು.

ಆಗ ಕೃಷ್ಣನು "ಓ ಕೌರವೇಂದ್ರಾ! ನೀನು ಮೊದಲು ಬಂದವನೆಂಬುದೇನೋ ನಿಜವಿರಬಹುದು. ಅದರಲ್ಲಿ ನನಗೇನೂ ಸಂದೇಹವಿಲ್ಲ. ಆದರೆ, ಅರ್ಜುನನು ಮೊದಲು ನನ್ನ ಕಣ್ಣಿಗೆ ಬಿದ್ದನು. ನೀನು ಮೊದಲು ಬಂದವನು. ಅರ್ಜುನನು ನನ್ನ ದೃಷ್ಟಿಗೆ ಮೊದಲು ಬಿದ್ದವನು. ಆದುದರಿಂದ ನಿಮ್ಮಿಬ್ಬರಿಗೂ ಸಹಾಯಮಾಡಬೇಕಾದುದೇ ನನ್ನ ಕರ್ತವ್ಯವು. ಇಬ್ಬರಿಗೂ ನನ್ನಿಂದಾದ ಸಹಾಯವನ್ನು ಮಾಡುವೆನು. ಆದರೆ, ವಯಸ್ಸಿನಲ್ಲಿ ತಾರತಮ್ಯವನ್ನು ನೋಡಿ, ಬಾಲಕರ ಕೋರಿಕೆಯನ್ನು ಮೊದಲು ಈಡೇರಿಸಬೇಕೆಂದು ಶಾಸ್ತ್ರಗಳು ಹೇಳುವುವು. ಆದುದರಿಂದ ನಿನಗಿಂತಲೂ ವಯಸ್ಸಿನಲ್ಲಿ ಚಿಕ್ಕವನಾದ ಈ ಧನಂಜಯನ ಉದ್ದೇಶವೇನೆಂದು ಕೇಳಿ, ಮೊದಲು ಅದನ್ನು ಈಡೇರಿಸಬೇಕಾದುದು ಉಚಿತವಾಗಿದೆ. ಆದುದರಿಂದ, ಅವನ ಅಭಿಪ್ರಾಯವನ್ನು ಮೊದಲು ತಿಳಿಯುವೆನು' ಎಂದು ಹೇಳಿ, ಅರ್ಜುನನ ಕಡೆಗೆ ತಿರುಗಿ "ಓ ಪಾರ್ಥಾ! ನನಗೆ ಸಮಾನರೂಪವುಳ್ಳ ನಾರಾಯಣರೆಂದು ಪ್ರಸಿದ್ಧರಾದ ಅನೇಕಗೋಪಾಲರು ನನ್ನ ಸ್ವಾಧೀನದಲ್ಲಿರುವರು. ಅವರ ಸಂಖ್ಯೆಯು ಒಂದು ಅರ್ಬುದದಷ್ಟಿರುವರು. ಅವರೆಲ್ಲರೂ ಒಳ್ಳೇ ಯುದ್ಧವಿಶಾರದರು. ಶತ್ರುದುರ್ಜಯರಾದ ಅವರನ್ನು ನಿಮ್ಮಿಬ್ಬರಲ್ಲಿ ಯಾರಾದರೂ ಒಬ್ಬರು ನಿಮ್ಮ ಸೇನಾಬಲಕ್ಕಾಗಿ ತೆಗೆದುಕೊಳ್ಳ ಕೊಳ್ಳಬಹುದು. ನಾನೊಬ್ಬನು ಮಾತ್ರ ಮತ್ತೊಂದು ಪಕ್ಷದಲ್ಲಿರುವೆನು ಆದರೆ, ನಾನು ಯುದ್ಧಮಾಡುವವನಲ್ಲ! ಯುದ್ಧದಲ್ಲಿ ಶಸ್ತ್ರಗಳನ್ನು ಹಿಡಿಯತಕ್ಕವನಲ್ಲ. ಆದ್ದುದರಿಂದ ಇವೆರಡರಲ್ಲಿ ನಿನಗೆ ಯಾವುದು ಇಷ್ಟವೆಂಬುದನ್ನು ತಿಳಿಸು. ನೀನು ಬಾಲನಾದುದರಿಂದ, ಮೊದಲು ನಿನ್ನ ಕೋರಿಕೆಯನ್ನು ನಡೆಸಿಕೊಡಬೇಕಾದುದು ಧರ್ಮವು. ಇವೆರಡರಲ್ಲಿ ನಿನಗೆ

ಬೇಕಾದುದೇನೆಂದು ಮೊದಲು ತಿಳಿಸು. ಇದ್ದ ಸಂಗತಿಯನ್ನು ತಿಳಿಸಿ ರುವೆನು. ನೀನು ಚೆನ್ನಾಗಿ ಇದನ್ನು ಮನಸ್ಸಿನಲ್ಲಿ ಆಲೋಚಿಸಿ ನೋಡು! ನನ್ನ ಕಡೆಯ ಸೈನಿಕರನ್ನಾದರೂ ನೀನು ತೆಗೆದುಕೊಳ್ಳಬಹುದು. ನಾನೊ ಬ್ಬನೇ ನಿನಗೆ ಸಾಕೆಂದು ತೋರಿದರೆ, ಕೇವಲ ಮಂತ್ರಿತ್ವಕ್ಕಾಗಿ ನನ್ನನ್ನು ನೀನು ವರಿಸಬಹುದು. ನಿನ್ನ ಇಷ್ಟವೇನೆಂಬುದನ್ನು ದೂರದೃಷ್ಟಿಯಿಂದ ಬಾರಿಬಾರಿಗೂ ಚೆನ್ನಾಗಿ ವಿಮರ್ಶಿಸಿಕೊಂಡು ನನಗೆ ಹೇಳು '' ಎಂದನು.

ಓ ಜನಮೇಜಯರಾಜಾ! ಕೃಷ್ಣನು ಈ ಮಾತನ್ನು ಹೇಳಿದೊಡನೆ ಅರ್ಜುನನು '' ಕೃಷ್ಣಾ! ನೀನು ಯುದ್ಧಮಾಡದಿದ್ದರೂ ಚಿಂತೆಯಿಲ್ಲ! ನೀನೊಬ್ಬನು ನನ್ನ ಕಡೆಗಿದ್ದರೆ ಸಾಕು '' ಎಂದನು. ಹೀಗೆ ಅರ್ಜುನನು ಯುದ್ಧಮಾಡದೆಯೇ ಸಮಸ್ತಶತ್ರುಗಳನ್ನೂ ಕೊಲ್ಲತಕ್ಕ ಮಹಾಮಹಿಮೆ ಯುಳ್ಳವನಾಗಿಯೂ, ಜನ್ಮರಹಿತನಾಗಿದ್ದರೂ ತನ್ನಿಷ್ಟದಿಂದಲೇ ತಾನು ಮನುಷ್ಯರಲ್ಲಿ ಅವತರಿಸಿದವನಾಗಿಯೂ, ಎಲ್ಲಾ ಕ್ಷತ್ರಿಯಕುಲಕ್ಕೂ, ಸಮ ಸ್ತದೇವದಾನವರ ಸಮೂಹಕ್ಕೂ ಅಗ್ರಗಣ್ಯನೆನಿಸಿದ ಶ್ರೀಮನ್ನಾರಾಯ ಣನನ್ನೇ ತಾನು ತನ್ನ ಸಹಾಯಕ್ಕಾಗಿ ವರಿಸಿದನು. ದುರ್ಯೋಧನನಾ ದರೋ, ಆ ಕೃಷ್ಣನ ಕಡೆಯ ಸೈನ್ಯವೇ ತನಗೆ ಬೇಕೆಂದು ಕೇಳಿಕೊಂಡ ನು. ಜನಮೇಜಯರಾಜಾ! ಆ ದುರ್ಯೋಧನನ ಮೌಢ್ಯವನ್ನು ನೋಡಿ ದೆಯಾ! ಲಕ್ಷಮಂದಿ ಯೋಧರು ತನ್ನ ಕಡೆಗೆ ಬಂದುದೂ, ಆ ಸೇನೆ ಗಳನ್ನೆಲ್ಲ ತನಗೆ ಬಿಟ್ಟು ಅಸಹಾಯನಾದ ಕೃಷ್ಣನೊಬ್ಬನುಮಾತ್ರ ಅರ್ಜುನನ ಕಡೆಗೆ ಹೋದುದೂ ತನ್ನ ಅದೃಷ್ಟವಿಶೇಷವೆಂದೇ ಭಾವಿಸಿ, ಅಪಾರಸಂತೋಷದಿಂದ ಹಿಗ್ಗುತ್ತಿದ್ದನು. ಆಗಲೇ ಆ ಸಮಸ್ತಸೈನ್ಯ ವನ್ನೂ ತನ್ನೊಡನೆ ಕರೆದುಕೊಂಡು ಮಹಾಬಲಾಢ್ಯನಾದ ಬಲರಾಮನ ಸಹಾಯವನ್ನು ಕೇಳುವುದಕ್ಕಾಗಿ ಅವನ ಬಳಿಗೆ ಬಂದನು. ಅಲ್ಲಿಗೆ ತಾನು ಬಂದ ಕಾರಣವನ್ನೂ ಕೃಷ್ಣನಲ್ಲಿ ನಡೆದ ಸಂಗತಿಯನ್ನೂ ಅವನಿಗೆ ತಿಳಿ ಸಿದನು. ಆಗ ಬಲರಾಮನು ದುರ್ಯೋಧನನನ್ನು ನೋಡಿ '' ಓ ಪುರುಷ ಶ್ರೇಷ್ಠಾ! ಮೊದಲು ವಿರಾಟನಗರದಲ್ಲಿ ಉತ್ತರೆಯ ವಿವಾಹವು ನಡೆದಾಗ, ಅಲ್ಲಿ ನಡೆದ ಆಲೋಚನೆಗಳೂ, ಆಗ ನಾನು ಏನು ಹೇಳಿದೆನೆಂಬುದೂ,

ನಿನಗೂ ತಿಳಿದಿರಬೇಕಲ್ಲವೆ? ಅಲ್ಲಿ ನಿನಗಾಗಿ ನಾನು ಕೃಷ್ಣನೊಡನೆ "ಕೌರವಪಾಂಡವರಿಬ್ಬರಲ್ಲಿಯೂ ನಮಗೆ ಬಂಧುತ್ವವು ಸಮಾನ"ವೆಂಬುದನ್ನು ಬಾರಿಬಾರಿಗೂ ಒತ್ತಿ ಹೇಳಿದೆನು. ಕೃಷ್ಣನು ಅದನ್ನೇನೂ ಮನಸ್ಸಿಗೆ ತಂದುಕೊಳ್ಳಲೇ ಇಲ್ಲ. ಆದರೆ, ನಾನು ಒಂದು ಕ್ಷಣಮಾತ್ರವಾದರೂ ಆ ಕೃಷ್ಣನನ್ನು ಬಿಟ್ಟು ಬೇರೆಯಾಗಿರತಕ್ಕವನಲ್ಲ. ನಾನು ಆ ಅರ್ಜುನನಿಗೂ ಸಹಾಯಕ್ಕೆ ಹೋಗಲಾರೆನು. ಕೃಷ್ಣನು ಅವನ ಕಡೆಯಲ್ಲಿರುವಾಗ, ಅವನಿಗಿದಿರಾಗಿ ನಿಂತು ನಿನಗೂ ಸಹಾಯಮಾಡಲಾರೆನು. ಇದೇ ನನ್ನ ದೃಢನಿಶ್ಚಯವು. ದುರ್ಯೋಧನಾ! ನೀನು ಸಮಸ್ತರಾಜರಿಂದ ಪೂಜಿತವಾದ ಭರತಕುಲದಲ್ಲಿ ಹುಟ್ಟಿರುವೆ. ಆದುದರಿಂದ ಕ್ಷತ್ರಿಯಧರ್ಮವನ್ನನುಸರಿಸಿ ಯುದ್ಧಮಾಡು ಹೋಗು" ಎಂದನು. ಈ ಮಾತನ್ನು ಕೇಳಿ ದುರ್ಯೋಧನನು, ಆ ಬಲರಾಮನನ್ನು ಪ್ರೀತಿಯಿಂದಾಲಿಂಗಿಸಿದನು. ತಿರುಗಿ ಕೃಷ್ಣನ ಬಳಿಗೆ ಬಂದು, ಅವನ ಅನುಮತಿಯನ್ನು ಪಡೆದು, ಅಲ್ಲಿಂದ ಕೃತವರ್ಮನ ಬಳಿಗೆ ಬಂದನು. ಅವನ ಸಹಾಯವನ್ನು ಕೋರಲು, ಅವನು ಒಂದು ಅಕ್ಷೌಹಿಣೀ ಸೇನೆಯನ್ನು ಅವನ ಸಹಾಯಕ್ಕಾಗಿ ಕೊಟ್ಟನು. ಆ ದೊಡ್ಡ ಸೇನೆಗಳನ್ನೆಲ್ಲ ತೆಗೆದುಕೊಂಡು ದುರ್ಯೋಧನನು ತನ್ನ ರಾಜಧಾನಿಗೆ ಬಂದು ಸೇರಿದನು. ದುರ್ಯೋಧನನು ಹೊರಟುಹೋದಮೇಲೆ ಇತ್ತಲಾಗಿ ಕೃಷ್ಣನು ಅರ್ಜುನನನ್ನು ನೋಡಿ "ಅರ್ಜುನಾ! ಏನಿದು ನಿನ್ನ ಬುದ್ಧಿ! ನಾನೊಬ್ಬನೇ ನಿನ್ನ ಕಡೆಗಿದ್ದರೆ ಸಾಕೆಂದು ಹೇಳಿದ ನಿನ್ನ ಉದ್ದೇಶವೇನು? ಯುದ್ಧಮಾಡದ ನನ್ನಿಂದ ನಿನಗೆ ಯುದ್ಧದಲ್ಲಿ ಯಾವ ಪ್ರಯೋಜನವಾದೀತು?" ಎಂದನು. ಅದಕ್ಕಾ ಅರ್ಜುನನು "ಕೃಷ್ಣಾ! ನೀನು ಯುದ್ಧಮಾಡಿದರೇನು? ಮಾಡದಿದ್ದರೇನು? ಆ ಕೌರವರನ್ನು ಧ್ವಂಸಮಾಡುವುದಕ್ಕೆ ನೀನೊಬ್ಬನೇ ಸಮರ್ಥನೆಂಬುದರಲ್ಲಿ ಸಂದೇಹವಿಲ್ಲ. ನಾನೂ ಏಕಾಕಿಯಾಗಿದ್ದೇ ಅವರನ್ನು ಕೊಲ್ಲಬಲ್ಲೆನೆಂದೂ ಭರವಸೆಯುಂಟು. ನೀನು ಲೋಕದಲ್ಲಿ ಮೊದಲೇ ಅಪಾರಕೀರ್ತಿಮಂತನು. ಈಗಿನ ಕೀರ್ತಿಯೂ ನಿನಗೇ ಸೇರಲಿ! ಆ ಕೀರ್ತಿಯಲ್ಲಿ ನಾನೂ ಅಪೇಕ್ಷೆಯುಳ್ಳವನು. ಆದುದರಿಂದ, ಆ ಕೀರ್ತಿಗೆ ನಾನೂ ನಿನ್ನೊಡನೆ ಭಾಗಿಯಾಗಬೇಕೆಂದು ನಿನ್ನನ್ನು ವರಿಸಿದೆನು. ನೀನು ಯುದ್ಧದಲ್ಲಿ ನನಗೆ ಸಾರಥಿ

ಯಾಗಿರಬೇಕೆಂಬುದು ನನ್ನ ಕೋರಿಕೆ! ಬಹುದಿನಗಳಿಂದ ನನಗಿದ್ದ ಆ ಕೋರಿಕೆಯನ್ನು ಈಗ ನೀನು ಈಡೇರಿಸಬೇಕು" ಎಂದನು. ಅದಕ್ಕಾ ಕೃಷ್ಣನು "ಪಾರ್ಥಾ! ಕೀರ್ತಿಗಾಗಿ ನನ್ನೊಡನೆ ಸ್ಪರ್ಧಿಸುವ ಈ ನಿನ್ನ ಅಭಿಲಾಷೆಯು ಉಚಿತವಾಗಿಯೇ ಇರುವುದು. ನಿನ್ನ ಕೋರಿಕೆಯಂತೆ ನಾನು ನಿನಗೆ ಸಾರಥ್ಯವನ್ನೇ ಮಾಡುವೆನು" ಎಂದನು.

ಜನಮೇಜಯರಾಜಾ! ಹೀಗೆ ಕೃಷ್ಣನಿಂದ ಅರ್ಜುನನು ತನಗೆ ಇಷ್ಟವಾದ ವರವನ್ನು ಪಡೆದು, ಸಂತೋಷದಿಂದ ಹಿಂತಿರುಗಿ, ಯುಧಿಷ್ಠಿರನ ಬಳಿಗೆ ಬಂದು ಸೇರಿದನು.

ಇದು ಏಳನೆಯ ಅಧ್ಯಾಯವು.

ಪಾಂಡವರ ಸಹಾಯಕ್ಕಾಗಿ ದೊಡ್ಡ ಸೇನೆಯೊಡನೆ ಬರುತ್ತಿದ್ದ ಶಲ್ಯನನ್ನು ದುರ್ಯೋಧನನು ತಂತ್ರದಿಂದ ತನ್ನ ಕಡೆಗೆ ಸೇರಿಸಿಕೊಂಡುದು. ತಾನು ಮೋಸಹೋದುದನ್ನು ಶಲ್ಯನು ಧರ್ಮರಾಜನಿಗೆ ತಿಳಿಸಿ, ಅಂತರಂಗದಲ್ಲಿ ಅವನಿಗೆ ಯುದ್ಧದಲ್ಲಿ ಸಹಾಯಮಾಡುವಂತೆ ಮಾತು ಕೊಟ್ಟುದು.

ಜನಮೇಜಯರಾಜಾ! ಕೇಳು! ಯುಧಿಷ್ಠಿರನ ಕಡೆಯಿಂದ ದೂತರು ಬಂದು ತನ್ನನ್ನು ಕರೆದೊಡನೆ, ಮದ್ರದೇಶಾಧಿಪತಿಯಾದ ಶಲ್ಯನು, ಪಾಂಡವರಲ್ಲಿ ತನಗಿದ್ದ ವಿಶೇಷವಾತ್ಸಲ್ಯದಿಂದ, ಮಹಾರಥರಾದ ತನ್ನ ಮಕ್ಕಳೆಲ್ಲರನ್ನೂ ಕರೆದುಕೊಂಡು, ದೊಡ್ಡ ಸೇನೆಯೊಡನೆ ಧರ್ಮರಾಜನ ಕಡೆಗೆ ಹೊರಟನು. ಅವನ ಸೇನಾನಿವೇಶಸ್ಥಳವೇ ಅರ್ಧಯೋಜನಕ್ಕಿಂತ ಹೆಚ್ಚು ವಿಸ್ತಾರವನ್ನಾಕ್ರಮಿಸಿದ್ದಿತು. ಅಂತಹ ಮಹತ್ತಾದ ಸೈನ್ಯಬಲದಿಂದ ಅಕ್ಷೌಹಿಣೀಪತಿಯೆನಿಸಿಕೊಂಡು, ಮಹಾಪರಾಕ್ರಮಿಯೆನಿಸಿದ ಶಲ್ಯನು, ಸಮಸ್ತ ಯುದ್ಧಸನ್ನಾಹಗಳೊಡನೆ ತನ್ನ ನಗರದಿಂದ ಹೊರಟನು.

ಆ ಸೈನ್ಯದಲ್ಲಿಯೋ ಒಬ್ಬೊಬ್ಬರೂ ಮಹಾಶೂರರು. ವಿಚಿತ್ರಗಳಾದ ಉಡಿಗೆತೊಡಿಗೆಗಳಿಂದಲೂ, ವಿಚಿತ್ರಮಾಲಿಕೆಗಳಿಂದಲೂ ಅಲಂಕೃತರಾದ ವರು. ಅವರ ಯುದ್ಧಕವಚಗಳೂ, ಅವರ ಧ್ವಜಗಳೂ, ಅವರ ಧನುಸ್ಸು, ರಥ, ವಾಹನಾದಿಗಳೆಲ್ಲವೂ ಚಿತ್ರವಿಚಿತ್ರಗಳಾಗಿರುವುವು. ತಮ್ಮ ಸ್ವದೇಶಕ್ಕೆ ತಕ್ಕ ವಿಚಿತ್ರ ವೇಷಭೂಷಣಗಳುಳ್ಳ ಇಂತಹ ಮಹಾವೀರರು ನೂರು ಸಾವಿರ ಸಂಖ್ಯೆಯಿಂದ ಹೊರಟರು. ಆ ಶಲ್ಯರಾಜನ ಸೈನ್ಯಕ್ಕೆ ನಿಯಾಮಕರಾದ ಸೇನಾಧಿಪತಿಗಳೆಲ್ಲರೂ ಉತ್ತಮ ಕ್ಷತ್ರಿಯಕುಲದವರು. ಸಮಸ್ತಭೂತಗಳೂ ಭಯದಿಂದ ತತ್ತಳಿಸುವಂತೆ ಭೂಮಿಯನ್ನು ನಡುಗಿಸುವ ದೊಡ್ಡ ಸೇನೆಯೊಡನೆ ಹೊರಟ ಶಲ್ಯನು, ದಾರಿಯಲ್ಲಿ ನಡುನಡುವೆ ವಿಶ್ರಾಂತಿಗಾಗಿ ಅಲ್ಲಲ್ಲಿ ಸೇನೆಗಳನ್ನಿಳಿಸುತ್ತ, ಪಾಂಡವರಿದ್ದಕಡೆಗೆ ಮೆಲ್ಲಗೆ ಪ್ರಯಾಣಮಾಡಿ ಬರುತ್ತಿದ್ದನು. ದುರ್ಯೋಧನನಿಗೆ ಈ ವೃತ್ತಾಂತವು ತಿಳಿಯಿತು. ಮಹಾಬಲಿಷ್ಠನೂ, ಮಹಾರಥನೂ ಆದ ಮದ್ರರಾಜನು ತನ್ನ ಅಪಾರಸೈನ್ಯದೊಡನೆ ಪಾಂಡವರ ಸಹಾಯಕ್ಕಾಗಿ ಹೋಗುತ್ತಿರುವನೆಂಬ ಸುದ್ದಿಯನ್ನು ಕೇಳಿದೊಡನೆ, ದುರ್ಯೋಧನನು ಅವನನ್ನು ತನ್ನ ಕಡೆಗೆ ಸೆಳೆದುಕೊಳ್ಳಬೇಕೆಂಬ ಉದ್ದೇಶದಿಂದ ಒಂದು ಉಪಾಯವನ್ನು ಹೂಡಿದನು. ದಾರಿಯಲ್ಲಿ ಆ ಶಲ್ಯನಿಗೂ, ಅವನ ಸೈನ್ಯಗಳಿಗೂ ಸತ್ಕಾರವನ್ನು ನಡೆಸುವುದಕ್ಕಾಗಿ, ಶಲ್ಯನು ಬರುವ ದಾರಿಯಲ್ಲಿ, ಉದ್ದಕ್ಕೂ ಅಲ್ಲಲ್ಲಿ ರಮ್ಯವಾದ ಸ್ಥಳಗಳನ್ನು ನೋಡಿ ವಿಶ್ರಾಂತಿಭವನಗಳನ್ನು ಕಟ್ಟಿಸಿದನು. ಬೇರೆಬೇರೆ ಶಿಲ್ಪಚಾತುರ್ಯವುಳ್ಳ ಶಿಲ್ಪಿಗಳಿಂದ ರತ್ನಚಿತ್ರಿತಗಳಾಗಿ ಅಲಂಕಾರವಿಶೇಷಗಳುಳ್ಳ ಕ್ರೀಡಾಗಾರಗಳನ್ನೂ ಕಲ್ಪಿಸಿದನು. ನಾನಾ ವಿಧ ಭಕ್ಷ್ಯಗಳನ್ನೂ, ಮಾಂಸಗಳನ್ನೂ ಪಕ್ವಮಾಡಿಸಿಟ್ಟನು. ಪುಷ್ಪಮಾಲಿಕೆಗಳನ್ನೂ, ವಿವಿಧ ಪಾನೀಯಗಳನ್ನೂ ಸಿದ್ಧಪಡಿಸಿದನು. ಮನಸ್ಸಿಗೆ ಸಂತೋಷಕರವಾಗಿರುವಂತೆ ವಿವಿಧಾಕಾರವುಳ್ಳ ವಾಪೀ ಕೂಪ ತಟಾಕಾದಿಗಳನ್ನು ಮಾಡಿಸಿದನು. ಜಲಯಂತ್ರಗಳುಳ್ಳ ಸ್ನಾನಗೃಹಗಳನ್ನು ಕಲ್ಪಿಸಿದನು. ಶಲ್ಯನು ಪ್ರಯಾಣಮಾಡಿಬರುತ್ತಾ, ದಾರಿಯುದ್ದಕ್ಕೂ ಅಲ್ಲಲ್ಲಿದ್ದ ಈ ಸಭಾಮಂಟಪಗಳಲ್ಲಿ ವಿಶ್ರಾಂತಿಗಾಗಿ ತಂಗುತ್ತಿದ್ದನು. ದುರ್ಯೋಧನನ ಕಡೆಯವರು ಅವನಿಗೆ ಅಲ್ಲಲ್ಲಿ ಯಥೇಷ್ಟವಾದ ಸತ್ಕಾರಗಳನ್ನು ನಡೆಸಿ,

ದಂತೆ ಯುದ್ಧಕಾಲದಲ್ಲಿ ಅವನಿಗೆ ಪರಾಕ್ರಮಭಂಗವಾಗುವಂತೆ ಮಾಡು ವೆನು. ಆ ಕರ್ಣನೂ ನನ್ನನ್ನು ಯಾವಾಗಲೂ ವಾಸುದೇವನಿಗೆ ಸಮಾನ ನಾಗಿಯೇ ಎಣಿಸುತ್ತಿರುವನು. ಅವನು ನನ್ನನ್ನೇ ಸಾರಥಿಯನ್ನಾಗಿಟ್ಟು ಕೊಳ್ಳುವನು. ರಣಾಂಗಣದಲ್ಲಿ ಯುದ್ಧಕ್ಕೆ ನಿಂತಾಗ, ಅವನನ್ನು ನಾನು ವಿಧವಿಧವಾಗಿ ಮೂದಲಿಸುತ್ತ, ಅವನ ಗರ್ವವನ್ನಡಗಿಸಿ, ಅವನ ಪರಾ ಕ್ರಮಕ್ಕೆ ಭಂಗವನ್ನುಂಟುಮಾಡುವ ಮಾತುಗಳನ್ನೇ ಆಡುತ್ತ, ಅರ್ಜು ನನು ಅವನನ್ನು ಸುಲಭವಾಗಿ ಕೊಲ್ಲುವುದಕ್ಕೆ ಅನುಕೂಲಿಸುವಂತೆ ಮಾ ಡುವೆನು. ಓ ಧರ್ಮಪುತ್ರಾ! ಈ ಮಾತನ್ನು ಸತ್ಯವೆಂದು ನಂಬು. ನೀನು ಹೇಳಿದ ಈ ಕೆಲಸವನ್ನು ಮಾತ್ರವೇ ಅಲ್ಲದೆ, ಇನ್ನೂ ನಿನಗೆ ಪ್ರಿಯವಾದ ಬೇರೆ ಕಾರ್ಯವೇನಾದರೂ ಇದ್ದರೆ, ಅದನ್ನೂ ನಡೆಸಬಲ್ಲೆನು. ಓ ವೀರಾಗ್ರಣೀ! ಆ ಜೂಜಾಟದ ಸಮಯದಲ್ಲಿ ದ್ರೌಪದಿಗೂ, ನಿನಗೂ ಸಂಭವಿಸಿದ ದುಃಖವನ್ನು ನಾನು ಬಲ್ಲೆನು. ಆಗ ಸೂತಪುತ್ರನಾದ ಕರ್ಣನು ನಿಮ್ಮನ್ನು ಕುರಿತು ಆಡಿದ ಪರುಷವಾಕ್ಯಗಳನ್ನೂ ಬಲ್ಲೆನು. ಇದಲ್ಲದೆ ಜಟಾಸುರನಿಂದಲೂ, ಕೀಚಕನಿಂದಲೂ, ದ್ರೌಪದಿಗೆ ಉಂಟಾದ ಪರಿಭವಗಳನ್ನೂ ಬಲ್ಲೆನು. ಪೂರ್ವದಲ್ಲಿ ದಮಯಂತಿಯು ಹೇಗೋ ಹಾಗೆ ದ್ರೌಪದಿಯು ನಿಮ್ಮ ಪ್ರವಾಸಕಾಲದಲ್ಲಿ ಅನೇಕದುಃಖಕ್ಕೆ ಒಳ ಗಾದಳು. ಆದರೇನು? ಈ ದುಃಖವೆಲ್ಲವೂ ಕೊನೆಗೆ ನಿಮಗೆ ಅಪಾರವಾದ ಸುಖವನ್ನು ತರುವುದರಲ್ಲಿ ಸಂದೇಹವಿಲ್ಲ! ಯುಧಿಷ್ಠಿರಾ! ನೀನು ನಿನ್ನ ಕಷ್ಟಗಳಿಗಾಗಿ ಎದೆಗೆಡಬಾರದು. ದೈವವು ಬಲವತ್ತರವಾದುದಲ್ಲವೇ? ಎಂತಹ ಮಹಾತ್ಮರಿಗಾದರೂ ದುಃಖವು ತಪ್ಪಿದುದಲ್ಲ. ದೇವತೆಗಳೂ ಒಮ್ಮೊಮ್ಮೆ ಇಂತಹ ದುಃಖಗಳನ್ನನುಭವಿಸಿರುವರು. ಮಹಾಮಹಿಮೆ ಯುಳ್ಳ ದೇವರಾಜನಾದ ಇಂದ್ರನೂ ಕೂಡ, ಹಿಂದೆ ತನ್ನ ಪತ್ನಿಯೊಡನೆ ಮಹತ್ತಾದ ದುಃಖವನ್ನು ಅನುಭವಿಸಿದುದಾಗಿ ಹೇಳುವರು" ಎಂದನು.

ಇದು ಎಂಟನೆಯ ಅಧ್ಯಾಯವು.

ಶಲ್ಯನು ಇಂದ್ರನಿಗುಂಟಾದ ದುಃಖಾನುಭವವನ್ನು ಕುರಿತು ಧರ್ಮರಾಜನಿಗೆ ತಿಳಿಸಿದುದು. ತ್ವಷ್ಟೃವು ಇಂದ್ರವಧಕ್ಕಾಗಿ ತ್ರಿಶಿರಸ್ಸನ್ನು ಸೃಷ್ಟಿಸಿದುದು. ಇಂದ್ರನ ವಜ್ರದಿಂದ ಸಾಯದಿದ್ದ ಅವನ ತಲೆಯನ್ನು ತಕ್ಷನು ಕಡಿದುದು. ತ್ವಷ್ಟೃವು ವೃತ್ರನನ್ನು ಸೃಷ್ಟಿಸಿದುದು.

ಆಗ ಧರ್ಮರಾಜನು ಶಲ್ಯನನ್ನು ಕುರಿತು "ಓ ರಾಜೇಂದ್ರಾ! ಇಂದ್ರನಿಗೆ ಅಂತಹ ಭಯಂಕರವಾದ ದುಃಖವು ಬಂದ ಕಾರಣವೇನು? ಆ ಕಥೆಯನ್ನು ತಿಳಿಯಬೇಕೆಂದಪೇಕ್ಷಿಸುವೆನು" ಎಂದನು. ಅದಕ್ಕಾ ಶಲ್ಯನು "ಧರ್ಮಪುತ್ರಾ! ಪತ್ನೀಸಮೇತನಾದ ಇಂದ್ರನಿಗೆ ಹೇಗೆ ದುಃಖವು ಪ್ರಾಪ್ತವಾಯಿತೆಂಬುದನ್ನು ಕುರಿತು ಹಿಂದೆ ನಡೆದ ಇತಿಹಾಸವೊಂದನ್ನು ತಿಳಿಸುವೆನು ಕೇಳು. ಪೂರ್ವದಲ್ಲಿ ಮಹಾತಪಸ್ವಿಯೂ, ದೇವಶ್ರೇಷ್ಠನೂ ಆದ ತ್ವಷ್ಟನೆಂಬ ಪ್ರಜಾಧಿಪತಿಯಿದ್ದನಷ್ಟೆ! ಇಂದ್ರನಲ್ಲಿ ಅವನಿಗಿದ್ದ ಅಸೂಯೆಯಿಂದ, ಮೂರು ತಲೆಯುಳ್ಳ ಪುತ್ರನೊಬ್ಬನನ್ನು ಸೃಷ್ಟಿಸಿದನು. ಅವನಿಗೆ ವಿಶ್ವರೂಪನೆಂದು ಹೆಸರು. ಮಹಾತೇಜಸ್ಸಿನಿಂದ ಬೆಳಗುತ್ತಿದ್ದ ಆ ವಿಶ್ವರೂಪನಿಗೆ ಇಂದ್ರನ ಸ್ಥಾನವನ್ನು ತಾನು ಆಕ್ರಮಿಸಿಕೊಳ್ಳಬೇಕೆಂಬ ಕೋರಿಕೆ ಹುಟ್ಟಿತು. ಅವನಿಗೆ ಸೂರ್ಯಚಂದ್ರಾಗ್ನಿಗಳಿಗೆ ಸಮಾನಗಳಾಗಿ, ಭಯಂಕರಗಳಾದ ಮೂರು ಮುಖಗಳುಂಟು. ಒಂದು ಮುಖದಿಂದ ವೇದಗಳನ್ನು ಪಠಿಸುವನು. ಮತ್ತೊಂದು ಮುಖದಿಂದ ಸುರೆಯನ್ನು ಕುಡಿಯುವನು. ಬೇರೊಂದು ಮುಖದಿಂದ ದಿಕ್ಕುಗಳೆಲ್ಲವನ್ನೂ ಕುಡಿದುಬಿಡುವಂತೆ ನೋಡುತ್ತಿರುವನು. ಅವನು ಯಾವಾಗಲೂ ತಪೋನಿರತನು. ಮೃದುಸ್ವಭಾವವುಳ್ಳವನು. ಜಿತೇಂದ್ರಿಯನು. ಧರ್ಮನಿರತನು. ಅವನು ಬೇರೊಬ್ಬರಿಂದ ಸಾಧ್ಯವಲ್ಲದ ತೀವ್ರತಪಸ್ಸನ್ನು ನಡೆಸಲಾರಂಭಿಸಿದನು. ಎಣೆಯಿಲ್ಲದ ತೇಜಸ್ಸುಳ್ಳ ಅವನ ತಪೋವೀರ್ಯವನ್ನೂ, ಅವನ ಸತ್ಯವನ್ನೂ ನೋಡಿ, ಇಂದ್ರನಿಗೆ ಭೀತಿ ಹುಟ್ಟಿತು. "ಹೇಗಾದರೂ ಇವನು ತನ್ನ ಇಂದ್ರಪದವಿಗೆ ಬಾರದಂತೆ ಮಾಡಬೇಕು. ಇದಕ್ಕಾಗಿ ಇವನು ಇಷ್ಟರಲ್ಲಿಯೇ ತನ್ನ ತಪಸ್ಸನ್ನು ನಿಲ್ಲಿಸಿ, ಭೋಗಗಳಲ್ಲಿ ಸಿಕ್ಕಿಬೀಳುವಂತೆ ಮಾಡು

ವೆನು. ಈ ತ್ರಿಶಿರಸ್ಸು ಅಭಿವೃದ್ಧಿಗೆ ಬಂದರೆ, ಈ ಲೋಕವೆಲ್ಲವನ್ನೂ ನುಂಗಿಬಿಡುವನು," ಎಂದು ತನ್ನಲ್ಲಿ ಆಲೋಚಿಸಿಕೊಂಡು, ಆ ತ್ರಿಶಿರಸ್ಸನ್ನು ಮೋಹಗೊಳಿಸುವುದಕ್ಕೆ ತಕ್ಕ ಒಳ್ಳೇ ರೂಪವತಿಯರಾದ ಅಪ್ಸರಸ್ತ್ರೀಯರನ್ನು ಕರೆದು "ಓ ಅಪ್ಸರಸಿಯರೆ! ತ್ವಷ್ಟೃಪುತ್ರನಾದ ಆ ತ್ರಿಶಿರನಿಗೆ ನಿಮ್ಮನ್ನು ಕಂಡೊಡನೆ ಕಾಮಭೋಗಗಳಲ್ಲಿ ಬುದ್ಧಿಯುಂಟಾಗುವಂತೆ, ನೀವು ಮೋಹಕರವಾದ ವೇಷಗಳಿಂದಲೂ, ಅಂದವಾದ ಅವಯವಶೋಭೆಯಿಂದಲೂ, ನಿಮ್ಮ ಹಾವ ಭಾವ ವಿಲಾಸಗಳಿಂದಲೂ ಅವನನ್ನು ಮರುಳುಗೊಳಿಸಬೇಕು. ಬೇಗನೆ ಹೋಗಿ ನೀವು ಆ ಕಾರ್ಯವನ್ನು ನೆರವೇರಿಸಿ ನನ್ನ ಭಯವನ್ನು ನೀಗಿಸಿರಿ. ಭಯದಿಂದ ನನ್ನ ಮನಸ್ಸಿಗೆ ಶಾಂತಿಯಿಲ್ಲದೆ, ಏನೋ ಒಂದು ವಿಧವಾದ ಅಸ್ವಸ್ಥತೆಯು ತೋರುತ್ತಿದೆ. ಓ ಸ್ತ್ರೀಯರೆ! ಈಗ ನನಗೆ ಪ್ರಾಪ್ತವಾಗಿರುವ ಮಹಾಘೋರವಾದ ಭೀತಿಯನ್ನು ನೀವು ಬೇಗನೆ ನೀಗಿಸಬೇಕು," ಎಂದನು. ಅದಕ್ಕಾ ಅಪ್ಸರಸಿಯರು "ದೇವೇಂದ್ರಾ! ನೀನು ಹೇಳಿದಂತೆಯೇ ಆ ತ್ರಿಶಿರಸ್ಸನ್ನು ಮೋಹಗೊಳಿಸುವುದಕ್ಕೆ ನಾವು ಯತ್ನಿಸುವೆವು. ಅವನಿಂದ ನಿನಗೆ ಭಯವಿಲ್ಲದಂತೆ ಮಾಡುವೆವು. ಆ ತ್ರಿಶಿರಸ್ಸು, ಕಣ್ಣುಗಳಿಂದಲೇ ದಹಿಸಿಬಿಡುವಷ್ಟು ಕ್ರೂರತಪಸ್ಸಿನಲ್ಲಿದ್ದರೂ, ನಾವೆಲ್ಲರೂ ಒಂದಾಗಿ ಸೇರಿ ಹೋಗಿ, ನಮ್ಮಿಂದಾದ ಪ್ರಯತ್ನಗಳನ್ನೆಲ್ಲ ಮಾಡುವೆವು" ಎಂದರು. ಆಮೇಲೆ ಅವರೆಲ್ಲರೂ ಇಂದ್ರನ ಅನುಮತಿಯನ್ನು ಪಡೆದು, ತ್ರಿಶಿರಸ್ಸು ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ಬಂದು, ಅವನ ಮುಂದೆ ನಿಂತು, ವಿಧವಿಧವಾದ ಶೃಂಗಾರಚೇಷ್ಟೆಗಳಿಂದ ಅವನ ಮನಸ್ಸನ್ನು ಕದಲಿಸುವುದಕ್ಕೆ ಆರಂಭಿಸಿದರು. ಅವನ ಮುಂದೆ ತಮ್ಮ ನರ್ತನಚಾತುರ್ಯಗಳನ್ನೆಲ್ಲ ಕಾಣಿಸಿದರು. ತಮ್ಮ ಬೇರೆಬೇರೆ ಅವಯವಗಳ ಸೊಗಸನ್ನೆಲ್ಲ ಅವನಿಗೆ ತೋರಿಸಿದರು. ಆದರೇನು? ಮಹಾತಪಸ್ವಿಯಾದ ಆತನಾದರೋ ಇವರ ಶೃಂಗಾರಚೇಷ್ಟೆಗಳನ್ನು ನೋಡಿಯೂ ಸ್ವಲ್ಪಮಾತ್ರವೂ ಹರ್ಷಿತನಾಗಲಿಲ್ಲ. ಇಂದ್ರಿಯಗಳನ್ನಡಗಿಸಿ, ಪೂರ್ಣಸಮುದ್ರದಂತೆ, ಒಂದೇ ಸ್ಥಿತಿಯಲ್ಲಿದ್ದನು. ಆ ಅಪ್ಸರಸಿಯರೆಲ್ಲರೂ ಅವನನ್ನು ವಶೀಕರಿಸುವುದಕ್ಕಾಗಿ ಎಷ್ಟೋ ವಿಧದಿಂದ ಪ್ರಯತ್ನಿಸಿದರು. ಅವನು ತಮ್ಮ ದಾರಿಗೆ ಬಾರದಿದ್ದುದನ್ನು ನೋಡಿ

ತಿರುಗಿ ಇಂದ್ರನ ಬಳಿಗೆ ಬಂದರು. ಅವರೆಲ್ಲರೂ ಇಂದ್ರನ ಮುಂದೆ ಕೈ ಜೋಡಿಸಿ ನಿಂತು "ದೇವರಾಜಾ! ಅವನನ್ನು ವಶೀಕರಿಸಲು ನಮ್ಮಿಂದ ಸಾಧ್ಯವಿಲ್ಲ. ಅವನು ಎಂತಹ ಪ್ರಯತ್ನಕ್ಕೂ ಬಗ್ಗುವಹಾಗೆ ತೋರಲಿಲ್ಲ. ಓ ಮಹಾಭಾಗಾ! ಇನ್ನು ಮುಂದೆ ಏನು ಮಾಡಬೇಕೋ ಅದದನ್ನು ನೀನೇ ನಡೆಸಬೇಕು" ಎಂದರು. ಆಗ ದೇವೇಂದ್ರನು ಆ ಅಪ್ಸರಸಿಯರೆಲ್ಲರನ್ನೂ ಸತ್ಕರಿಸಿ ಕಳುಹಿಸಿಬಿಟ್ಟನು. ಆಮೇಲೆ ತನ್ನಲ್ಲಿ ತಾನೇ ಮುಂದಿನ ಉಪಾಯವೇನೆಂದು ಆಲೋಚಿಸುತ್ತ, ಕೊನೆಗೆ ಆ ತ್ರಿಶಿರಸ್ಸನ್ನು ಕೊಂದುಬಿಡುವುದೇ ಮೇಲೆಂದು ನಿಶ್ಚಯಿಸಿಕೊಂಡು ತನ್ನಲ್ಲಿ ತಾನು "ನಾನೇ ಈಗ ಅಲ್ಲಿಗೆ ಹೋಗಿ ನನ್ನ ವಜ್ರಾಯುಧವನ್ನು ಅವನಮೇಲೆ ಬೀಸಿಬಿಡುವೆನು. ಆಗ ಅವನು ಒಡನೆಯೇ ಸಾಯುವನು. ಬಲವಂತನಾದವನು ತನ್ನ ಶತ್ರುವು ದುರ್ಬಲನಾಗಿದ್ದರೂ, ಅವನು ಪ್ರಬಲದಶೆಗೆ ಬರುತ್ತಿರುವಾಗ ಉಪೇಕ್ಷಿಸಿ ಸುಮ್ಮನಿರಬಾರದು" ಎಂದು ಶಾಸ್ತ್ರದೃಷ್ಟಿಯಿಂದ ತನ್ನಲ್ಲಿ ತಾನೇ ಮೌನದಿಂದ ಆಲೋಚಿಸಿಕೊಂಡು, ಅವನನ್ನು ಕೊಲ್ಲುವುದಾಗಿ ನಿಶ್ಚಯಿಸಿಬಿಟ್ಟನು. ಒಡನೆಯೇ ಭಯಂಕರ ರೂಪವುಳ್ಳ ಅಗ್ನಿಸಮಾನವಾದ ತನ್ನ ವಜ್ರಾಯುಧವನ್ನೆತ್ತಿಕೊಂಡು ಹೋಗಿ ಕೋಪದಿಂದ ತ್ರಿಶಿರಸ್ಸಿನ ಮೇಲೆ ಬೀಸಿದನು. ಪ್ರಬಲವಾದ ಆ ವಜ್ರದ ಪೆಟ್ಟಿನಿಂದ ತ್ರಿಶಿರಸ್ಸು, ವಜ್ರಾಹತವಾದ ಪರ್ವತಶಿಖರವು ನೆಲಕ್ಕುರುಳುವಂತೆ ಕೆಳಗೆ ಬಿದ್ದನು. ಆದರೇನು? ಆಗಲೂ ಅವನ ತೇಜಸ್ಸು ತನ್ನನ್ನು ದಹಿಸುವಂತಿದ್ದುದರಿಂದ ವಜ್ರಾಹತನಾಗಿ ಕೆಳಗೆ ಮಲಗಿದ ಆತ್ರಿಶಿರಸ್ಸನ್ನು ನೋಡಿಯೂ ದೇವೇಂದ್ರನ ಮನಸ್ಸಿಗೆ ನೆಮ್ಮದಿಯುಂಟಾಗಲಿಲ್ಲ. ದಿವ್ಯತೇಜಸ್ಸುಳ್ಳ ಆ ತಪಸ್ವಿಯು ಹತನಾಗಿದ್ದಾಗಲೂ, ಅದ್ಭುತತೇಜಸ್ಸಿನಿಂದ ಇನ್ನೂ ಬದುಕಿದನಂತೆಯೇ ಕಾಣುತಿದ್ದನು. ಅವನ ಮೂರು ತಲೆಗಳೂ ಅದ್ಭುತವಾದ ಜೀವಕಳೆಗಳಿಂದ ಇನ್ನೂ ಅವನು ಬದುಕಿರುವಂತೆಯೇ ಕಾಣಿಸುತಿದ್ದುವು. ಓ ಜನಮೇಜಯರಾಜಾ! ತಿತ್ತಿರಿ, ಕಲವಿಂಕ, ಕಪಿಂಜಲಗಳೆಂಬ ಮೂರು ಪಕ್ಷಿಜಾತಿಗಳು ಹುಟ್ಟಿದುದು ಈ ಮೂರು ತಲೆಗಳಿಂದಲೇ! ಆ ಜೀವಕಳೆಯನ್ನು ಕಂಡು ಇಂದ್ರನಿಗೆ ಭಯದಿಂದ ಮೈಯಲ್ಲಿ ನಡುಕವು ಹುಟ್ಟಿತು. ಏನೊಂದೂ ತೋರದೆ ಮನಸ್ಸಿನಲ್ಲಿ ಕಳವಳಿಸುತಿದ್ದನು.



೩೩. ಇಂದ್ರನು ತಕ್ಷನಿಂದ ತ್ರಿಶಿರಸ್ಸಿನ ತಲೆಯನ್ನು ಕಡಿಸಿದಾಗ, ಆ ಮೂರು ತಲೆಗಳಿಂದಲೂ ಮೂರು ಪಕ್ಷಿಗಳು ಹೊರಟುದು.

ಓ ಜನಮೇಜಯರಾಜಾ! ಈ ಸಮಯಕ್ಕೆ ಸರಿಯಾಗಿ ಯಾವನೋ ಬಡಗಿಯೊಬ್ಬನು, ತನ್ನ ಕೊಡಲಿಯನ್ನು ಹೆಗಲಮೇಲೆ ಹಾಕಿಕೊಂಡು, ಆ ತ್ರಿಶಿರಸ್ಸು ಬಿದ್ದಿದ್ದ ಅರಣ್ಯಕ್ಕೆ ಬಂದನು. ಹೀಗೆ ಆಕಸ್ಮಿಕವಾಗಿ ಅಲ್ಲಿಗೆ ಬಂದು ಸೇರಿದ ಬಡಗಿಯನ್ನು ನೋಡಿ ದೇವೇಂದ್ರನು ಅತ್ಯಾತುರದಿಂದ ಅವನನ್ನು ಕುರಿತು "ಅಯ್ಯಾ! ನೀನು ಒಡನೆಯೇ ಇವನ ತಲೆಗಳನ್ನು ಕಡಿದುಬಿಡು! ನನ್ನ ಮಾತನ್ನು ನಡೆಸು" ಎಂದನು. ಅದಕ್ಕಾ ಬಡಗಿಯು "ಅಯ್ಯೋ! ಈ ಕಾರ್ಯವು ನನ್ನಿಂದಾಗದು! ಇವನಾದರೋ ಅಷ್ಟು ದೊಡ್ಡ ಕತ್ತುಳ್ಳವನು. ಇದನ್ನು ಕಡಿಯುವುದಕ್ಕೆ ಈ ನನ್ನ ಕೊಡ ಲಿಯೂ ಸಾಲದು! ಅಲ್ಲದೆ, ಸಜ್ಜನನಿಂದಿತವಾದ ಈ ಹೀನಕಾರ್ಯವನ್ನು ನಾನು ಮಾಡಲಾರೆನು" ಎಂದನು.

ಆಗ ಇಂದ್ರನು "ಅಯ್ಯಾ! ನೀನು ಭಯಪಡಬೇಡ! ಬೇಗನೆ ನಾ ನು ಹೇಳಿದಂತೆ ನಡೆಸು! ನನ್ನ ಅನುಗ್ರಹದಿಂದ ನಿನ್ನ ಕೊಡಲಿಯೇ ವಜ್ರಾಯುಧಕ್ಕೆ ಸಮಾನವಾಗುವುದು. ನಿನ್ನ ಆಯುಧದಿಂದ ಅವನ ತಲೆ ಯನ್ನು ಕಡಿ" ಎನಲು, ಆಗ ಆ ಬಡಗಿಯು "ಅಯ್ಯಾ! ನೀನು ಯಾ ರೋ ನಾನರಿಯೆನು. ಇಂತಹ ಘೋರಕಾರ್ಯಕ್ಕೆ ಪ್ರೇರಿಸುತ್ತಿರುವ ನೀನು ಯಾವನೋ ಅದನ್ನು ನಾನು ಮೊದಲು ತಿಳಿಯಬೇಕು. ವಾಸ್ತವಾಂಶ ವನ್ನು ತಿಳಿಸು" ಎಂದನು. ಅದಕ್ಕಾ ಇಂದ್ರನು "ಅಯ್ಯಾ! ಕೇಳು! ನಾನೇ ದೇವರಾಜನಾದ ಇಂದ್ರನೆಂದು ತಿಳಿ! ನೀನು ನಿರ್ವಿಚಾರವಾಗಿ ನಾನು ಹೇಳಿದ ಕಾರ್ಯವನ್ನು ನಡೆಸು. ಇವನು ಇದಕ್ಕೆ ಮೊದಲೇ ನನ್ನಿಂ ದ ಹತನಾಗಿ ಇಲ್ಲಿ ಮಲಗಿರುವನು" ಎಂದನು.

ಆಗ ಬಡಗಿಯು ವಿನಯದಿಂದ ಇಂದ್ರನ ಮುಂದೆ ಕೈ ಜೋಡಿಸಿ ನಿಂತು "ಓ ದೇವೇಂದ್ರಾ! ಏನಿದು? ಇಂತಹ ಕ್ರೂರಕಾರ್ಯಕ್ಕೂ ನೀನು ಲಜ್ಜಿಸದೆ ಹೀಗೆ ಮಾಡಿದುದೇಕೆ? ಋಷಿಪುತ್ರನಾದ ಈತನನ್ನು ಕೊಂದ ನಿನಗೆ ಬ್ರಹ್ಮಹತ್ಯಾಪಾತಕವು ಬರುವುದೆಂಬ ಭಯವಾದರೂ ಇಲ್ಲ ವೇ?" ಎಂದನು. ಅದಕ್ಕಾ ದೇವೇಂದ್ರನು "ಅಯ್ಯಾ! ಈಗ ಯಾವ

ಪಾಪವು ಬಂದರೂ ಬರಲಿ! ಆಮೇಲೆ ಆ ಪಾಪಪರಿಹಾರಕ್ಕಾಗಿ ಎಂತಹ ದುಷ್ಕರವಾದ ಧರ್ಮವನ್ನಾದರೂ ನಾನು ನಡೆಸುವೆನು. ಇವನು ನನಗೆ ಶತ್ರು! ಮಹಾವೀರ್ಯವುಳ್ಳವನು. ಆದುದರಿಂದ ನಾನು ಇವನನ್ನು ವಜ್ರದಿಂದ ಹೊಡೆದೆನು. ಆದರೇನು? ಈಗಲೂ ಇವನ ರೂಪವನ್ನು ನೋಡಿ ನನಗೆ ಭಯವಾಗುವುದರಿಂದ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ನೀನು ಇವನ ತಲೆಯನ್ನು ಶೀಘ್ರದಲ್ಲಿ ನಿನ್ನ ಆಯುಧದಿಂದ ಕಡಿದುಬಿಡು. ಇದಕ್ಕಾಗಿ ನಾನು ನಿನಗೆ ಒಳ್ಳೇ ಅನುಗ್ರಹವನ್ನು ತೋರಿಸುವೆನು. ಯಜ್ಞಗಳಲ್ಲಿ ಜನರು ಯಜ್ಞಪಶುವಿನ ತಲೆಯನ್ನು ನಿನಗೆ ಕೊಡುವಂತೆ ನಾನು ಅನುಗ್ರಹಿಸುವೆನು. ಬೇಗನೆ ನಾನು ಹೇಳಿದ ಕೆಲಸವನ್ನು ನಡೆಸಿ, ನನಗೆ ಪ್ರಿಯವನ್ನುಂಟುಮಾಡು'' ಎಂದನು. ಇಂದ್ರನು ಇಷ್ಟು ಮಾತನ್ನು ಹೇಳಿದಮೇಲೆ ಆ ಬಡಗಿಯು ತನ್ನ ಕೊಡಲಿಯಿಂದ ಆ ತ್ರಿಶಿರಸ್ಸಿನ ಮೂರು ತಲೆಗಳನ್ನೂ ಕಡಿದುಬಿಟ್ಟನು. ಆ ತಲೆಗಳು ದೇಹದಿಂದ ಬೇರ್ಪಟ್ಟೊಡನೆಯೇ, ಕಪಿಂಜಲಗಳೆಂದೂ, ತಿತ್ತಿರಿಗಳೆಂದೂ, ಕಲವಿಂಕಗಳೆಂದೂ ಕರೆಯಲ್ಪಡುವ ಮೂರು ಬಗೆಯ ಪಕ್ಷಿಜಾತಿಗಳು ಆ ತಲೆಗಳಿಂದ ಹೊರಟುವು. ಆ ತ್ರಿಶಿರಸ್ಸು ಯಾವ ಮುಖದಿಂದ ವೇದಪಠನವನ್ನೂ, ಸೋಮಪಾನವನ್ನೂ ಮಾಡುತಿದ್ದನೋ ಆ ಮುಖದಿಂದ ಕಪಿಂಜಲಗಳು ಹೊರಟುವು ಯಾವ ಮುಖದಿಂದ ಅವನು ಸಮಸ್ತ ದಿಕ್ಕುಗಳನ್ನೂ ಕುಡಿದುಬಿಡುವಂತೆ ನೋಡುತಿದ್ದನೋ ಅದರಿಂದ ತಿತ್ತಿರಿಪಕ್ಷಿಗಳೂ, ಯಾವ ಮುಖದಿಂದ ಅವನು ಸುರಾಪಾನ ಮಾಡುತಿದ್ದನೋ ಅದರಿಂದ ಕಲವಿಂಕಗಳೂ ಮತ್ತು ಗಿಡುಗಗಳೂ ಹಾರಿಬಂದುವು. ಆ ತಲೆಗಳನ್ನು ಕಡಿದಮೇಲೆ ಇಂದ್ರನು ನಿಶ್ಚಿಂತನಾಗಿ, ತಕ್ಷನಿಗೆ ಹಿಂದೆ ಹೇಳಿದಂತೆ ವರಗಳನ್ನು ಕೊಟ್ಟು, ಸಂತೋಷದಿಂದ ಸ್ವರ್ಗಕ್ಕೆ ಹೋಗಿಸೇರಿದನು. ಶತ್ರುಜಯದಿಂದ ತಾನು ಕೃತಾರ್ಥನಾದೆನೆಂದು ತಿಳಿದನು. ತಕ್ಷನೂ ಕೂಡ, ತನ್ನ ಮನೆಗೆ ಹೋಗಿ, ತಾನು ಮಾಡಿಬಂದ ಕಾರ್ಯವನ್ನು ಯಾರಿಗೂ ಹೇಳಲಿಲ್ಲ. ತ್ರಿಶಿರಸ್ಸು ಎಲ್ಲಿ ಹೋದನೆಂಬುದು ಒಂದು ವರ್ಷದವರೆಗೆ ಯಾರಿಗೂ ತಿಳಿಯಲಿಲ್ಲ. ಒಂದು ವರ್ಷವು ಕಳೆದಮೇಲೆ, ಪಶುಪತಿಯಾದ ರುದ್ರನ

ಭೂತಗಣಗಳು "ನಮ್ಮೆಲ್ಲರಿಗೂ ಒಡೆಯನಾದ ಇಂದ್ರನು ಬ್ರಹ್ಮಹತ್ಯೆಯು ನ್ನು ಮಾಡಿದವನು" ಎಂದು ಅಲ್ಲಲ್ಲಿ ನಿಂದಿಸತೊಡಗಿದುವು. ಆಗ ಇಂದ್ರ ನು ಆ ಪಾಪದಿಂದ ತಾನು ಮುಕ್ತನಾಗಬೇಕೆಂದು, ದೇವತೆಗಳೊಡನೆಯೂ, ಮರುದ್ಗಣಗಳೊಡನೆಯೂ ಸೇರಿ, ಘೋರವಾದ ವ್ರತವನ್ನು ಹಿಡಿದು, ದೃಢತಪಸ್ಸಿನಲ್ಲಿದ್ದನು. ಆ ವ್ರತಕ್ಕೆ ಫಲವಾಗಿ, ತನ್ನ ಪಾಪವನ್ನು ಸಮುದ್ರಗಳು, ನದಿಗಳು, ಭೂಮಿ, ವೃಕ್ಷಗಳು, ಸ್ತ್ರೀಯರು ಎಂಬೀ ಐದು ಸ್ಥಳಗಳಿಗೆ ಹಂಚಿಕೊಟ್ಟು, ಆ ಪಾಪವನ್ನು ತೆಗೆದುಕೊಂಡುದಕ್ಕಾಗಿ ಅವೈದಕ್ಕೂ ವರಗಳನ್ನೂ ಅನುಗ್ರಹಿಸಿದನು. ಹೀಗೆ ತನ್ನ ಬ್ರಹ್ಮಹತ್ಯಾ ಪಾತಕವನ್ನು ಈ ಐದು ಸ್ಥಳಗಳಿಗೆ ಹಂಚಿಕೊಟ್ಟಮೇಲೆ, ತಾನು ಶುದ್ಧ ನಾಗಿ, ಮೊದಲಿನಂತೆ ದೇವತೆಗಳಿಂದಲೂ, ಮಹರ್ಷಿಗಳಿಂದಲೂ ಎಲ್ಲಾ ಲೋಕಗಳಿಂದಲೂ ಪೂಜಿಸಲ್ಪಡುತ್ತ ತನ್ನ ಸ್ಥಾನಕ್ಕೆ ಹೋಗಿ ಸೇರಿದನು.

ಧರ್ಮಪುತ್ರಾ! ಆಮೇಲೆ ತ್ವಷ್ಟೃಪ್ರಜಾಪತಿಗೆ ತನ್ನ ಮಗನು ಇಂದ್ರ ನಿಂದ ಹತನಾದ ಸಂಗತಿಯು ತಿಳಿಯಿತು. ಅವನು ಕ್ರೋಧಾವೇಶದಿಂದ ಕೆಂಪಾದ ಕಣ್ಣುಗಳೊಡನೆ "ಆಹಾ! ಇಂದ್ರಿಯಗಳನ್ನೂ, ಮನಸ್ಸನ್ನೂ, ನಿಗ್ರಹಿಸಿ, ತಾಳ್ಮೆಯಿಂದ ತಪೋನಿರತನಾಗಿದ್ದ ನನ್ನ ಪುತ್ರನನ್ನು, ಅಪರಾ ಧವೇನೂ ಇಲ್ಲದಿದ್ದಾಗಲೂ, ದುರಾತ್ಮನಾದ ಆ ಇಂದ್ರನು ಅವನನ್ನು ಕೊಂದನಲ್ಲವೆ? ಇರಲಿ! ಆ ಇಂದ್ರನನ್ನು ಕೊಲ್ಲುವುದಕ್ಕಾಗಿ ವೃತ್ರನೆಂಬ ಮಗನೊಬ್ಬನನ್ನು ಸೃಷ್ಟಿಸುವೆನು. ನನ್ನ ವೀರ್ಯವನ್ನೂ, ಅಪಾರ ವಾದ ತಪೋಬಲವನ್ನೂ ಲೋಕವೆಲ್ಲವೂ ನೋಡಲಿ! ದೇವತೆಗಳಿಗೆಲ್ಲ ತಾನು ಪ್ರಭುವೆನಿಸಿಕೊಂಡು, ಇಂತಹ ದುರಾಗತವನ್ನು ನಡೆಸಿದ ಆ ಪಾಕಶಾಸನನಿಗೂ ನನ್ನ ಪ್ರಭಾವವಿಂತದೆಂಬುದನ್ನು ಈಗ ತೋರಿಸು ವೆನು" ಎಂದು ಹೇಳುತ್ತ, ಒಡನೆಯೇ ಶುದ್ಧಾಚಮನವನ್ನು ಮಾಡಿ ಬಂದು, ಒಂದು ಹೋಮವನ್ನಾರಂಭಿಸಿ, ಭಯಂಕರರೂಪವುಳ್ಳ ಒಬ್ಬ ಪುತ್ರನನ್ನು ಸೃಷ್ಟಿಸಿ, ಆ ಪುತ್ರನನ್ನು ನೋಡಿ "ಓ ಇಂದ್ರಶತ್ರೂ! ನನ್ನ ತಪೋಬಲ ಮಹಿಮೆಯಿಂದ ನಿನ್ನ ಆಕಾರವು ಬೆಳೆಯಲಿ!" ಎಂದನು.

ಒಡನೆ ಸೂರ್ಯಾಗ್ನಿಗಳಂತೆ ಜ್ವಲಿಸುತಿದ್ದ ಆ ಕುಮಾರನು ಸ್ವರ್ಗವನ್ನಾ ಕ್ರಮಿಸುವಂತೆ ಬೆಳೆದನು. ಆಗಲೇ ಇಂದ್ರನಿಗೂ, ತ್ವಷ್ಟೃಕುಮಾರ ನಾದ ಆ ವೃತ್ರನಿಗೂ ಘೋರಯುದ್ಧವು ಆರಂಭವಾಯಿತು. ಆ ಯುದ್ಧ ದಲ್ಲಿ ವೃತ್ರನು ಮಹಾಕ್ರೋಶದಿಂದ ಆ ಇಂದ್ರನನ್ನು ಹಿಡಿದೆತ್ತಿ, ದೊಡ್ಡ ದಾಗಿ ತೆರೆದ ತನ್ನ ಬಾಯೊಳಗೆ ಹಾಕಿಕೊಂಡನು. ಸ್ವರ್ಗಾಧಿಪತಿಯಾದ ಇಂದ್ರನು ವೃತ್ರನ ಬಾಯೊಳಗೆ ಬಿದ್ದುದನ್ನು ಕಂಡು, ದೇವತೆಗಳೆಲ್ಲರೂ ಭಯಗೊಂಡು, ತಮ್ಮ ಶಕ್ತಿಯಿಂದ ಆ ವೃತ್ರನಿಗೆ ನಾಶಕರವಾದ ದೊಡ್ಡ ಆಕಳಿಕೆ (ಜೃಂಭಿಕೆ) ಬರುವಂತೆ ಮಾಡಿದರು. ವೃತ್ರನು ಆಕಳಿಸುವು ದಕ್ಕಾಗಿ ಬಾಯನ್ನು ತೆರೆದಾಗ, ಇಂದ್ರನು ತನ್ನ ಮೈಯನ್ನೆಲ್ಲ ಉಡು ಗಿಸಿಕೊಂಡು ಅವನ ಬಾಯಿಂದ ಹೊರಕ್ಕೆ ಬಂದುಬಿಟ್ಟನು. ಆಗಿನಿಂದಲೇ ಪ್ರಾಣಿಗಳಿಗೆ ಆಕಳಿಕೆಯು ಆರಂಭಿಸಿತು. ಇಂದ್ರನು ವೃತ್ರನ ಬಾಯಿಂದ ಹೊರಗೆ ಬಂದುದನ್ನು ನೋಡಿ ದೇವತೆಗಳೆಲ್ಲರೂ ಹರ್ಷಿತರಾದರು. ತಿರುಗಿ ವೃತ್ರವಾಸವರಿಗೆ ಭಯಂಕರವಾದ ಯುದ್ಧವು ಆರಂಭಿಸಿತು. ತ್ವಷ್ಟೃಪ್ರ ಜಾಪತಿಯ ತಪೋಬಲದಿಂದ ವೃತ್ರನಿಗೆ ಯುದ್ಧದಲ್ಲಿ ಮೇಲೆಮೇಲೆ ಬಲವು ಹೆಚ್ಚುತ್ತ ಬರುವುದನ್ನು ಕಂಡು, ಇಂದ್ರನು ಅವನ ಮುಂದೆ ನಿಲ್ಲಲಾರದೆ ಹಿಂತಿರುಗಿ ಓಡಿಹೋದನು. ದೇವತೆಗಳೆಲ್ಲರೂ ಇಂದ್ರನ ಪರಾಜಯಕ್ಕೆ ದುಃಖಿತರಾಗಿ, ಮುಂದೇನುಮಾಡಬೇಕೆಂಬುದನ್ನು ಕುರಿತು ಮಹರ್ಷಿಗ ಳೊಡನೆ ಆಲೋಚಿಸಿದರು. ವೃತ್ರನನ್ನು ಕೊಲ್ಲುವ ಉದ್ದೇಶದಿಂದ, ಅವ ರೆಲ್ಲರೂ ಒಂದಾಗಿ ಸೇರಿ ಮಂದರಪರ್ವತದ ಶಿಖರದಮೇಲೆ ಕುಳಿತು ಆಲೋಚಿಸುತ್ತ, ಕೊನೆಗೆ ಮಹಾತ್ಮನೂ, ನಾಶರಹಿತನೂ ಆದ ಶ್ರೀಮಹಾ ವಿಷ್ಣುವನ್ನು ಮನಸ್ಸಿನಲ್ಲಿ ಸ್ಮರಿಸಿದರು.

ಇದು ಒಂಭತ್ತನೆಯ ಅಧ್ಯಾಯವು.

ಮಹಾವಿಷ್ಣುವಿನ ಆಜ್ಞೆಯಮೇಲೆ ಮಹರ್ಷಿಗಳೆಲ್ಲರೂ ಇಂ
ದ್ರವೃತ್ರರಿಗೆ ಸಂಧಿಯನ್ನು ಮಾಡಿಸಿದುದು. ಆದರೆ ಒ
ಮ್ಮೆ ವೃತ್ರನು ಸಮುದ್ರತೀರದಲ್ಲಿ ತಪಸ್ಸುಮಾಡು
ತ್ತಿದ್ದಾಗ, ಇಂದ್ರನು ವಜ್ರಶಕ್ತಿಯನ್ನೊಳ
ಕೊಂಡ ನೊರೆಯಿಂದ ವೃತ್ರನನ್ನು ಕೊಂ
ದು, ಆ ಬ್ರಹ್ಮಹತ್ಯಾಪಾತಕದಿಂದ
ಸ್ವರ್ಗಭ್ರಷ್ಟನಾದುದು.

ಆಗ ಇಂದ್ರನು ತನ್ನನ್ನು ಸುತ್ತಿ ಕುಳಿತಿದ್ದ ದೇವತೆಗಳನ್ನು ನೋಡಿ "ಓ ಸುರಶ್ರೇಷ್ಠರೇ! ಈಗ ವೃತ್ರನಾದರೋ ಸಮಸ್ತಜಗತ್ತನ್ನೂ ಆಕ್ರಮಿಸಿಕೊಂಡಿರುವನು. ಅವನನ್ನು ನಿಗ್ರಹಿಸುವುದಕ್ಕೆ ತಕ್ಕ ಸಾಧನವೊಂದೂ ಇಲ್ಲ. ಮೊದಲು ಸರ್ವಸಮರ್ಥನಾಗಿದ್ದ ನಾನು ಈಗ ಕೇವಲ ಅಸಮರ್ಥನಾಗಿರುವೆನು. ಈಗ ಮಾಡಬೇಕಾದುದೇನು? ನಿಮಗೆ ಮಂಗಳವಾಗಲಿ! ಅವನನ್ನು ನಿಗ್ರಹಿಸುವುದೇನೋ ನನಗೆ ಅಸಾಧ್ಯವೆಂದು ತೋರಿದೆ. ಅವನು ಮಹಾತೇಜಸ್ವಿ! ಮಹಾಪ್ರಭಾವವುಳ್ಳವನು. ಎಣೆಯಿಲ್ಲದ ವಿಕ್ರಮವುಳ್ಳವನು. ದೇವಾಸುರ ಮನುಷ್ಯರೊಡನೆ ಈಗ ಸಮಸ್ತ ಜಗತ್ತನ್ನೂ ಮೊತ್ತಕ್ಕೆ ತೆಗೆದು ನುಂಗಿಬಿಡಬಲ್ಲನು. ಆದುದರಿಂದ ನನಗೊಂದು ಆಲೋಚನೆಯು ತೋರಿದೆ. ನೀವೆಲ್ಲರೂ ಅದನ್ನು ಸಾವಧಾನವಾಗಿ ಕೇಳಬೇಕು. ಈಗ ನಾವೆಲ್ಲರೂ ಒಂದಾಗಿ ಸೇರಿ ವಿಷ್ಣುನಿವಾಸಕ್ಕೆ ಹೋಗುವೆವು. ಮಹಾತ್ಮನಾದ ಅವನೊಡನೆ ಆಲೋಚಿಸಿ, ಆ ವೃತ್ರನನ್ನು ಕೊಲ್ಲುವ ಉಪಾಯವನ್ನು ನಿಶ್ಚಯಿಸುವೆವು" ಎಂದನು.

ಇಂದ್ರನು ಹೇಳಿದ ಈ ಮಾತನ್ನು ಕೇಳಿ, ಎಲ್ಲಾ ದೇವತೆಗಳೂ, ಋಷಿಗಳೂ ಲೋಕಶರಣ್ಯನಾದ ಶ್ರೀಮಹಾವಿಷ್ಣುವಿನ ಬಳಿಗೆ ಬಂದು, ವಿಷ್ಣುವಿನಲ್ಲಿ ಹೀಗೆಂದು ಮೊರೆಯಿಡುವರು. "ಓ ಮಹಾತ್ಮಾ! ಹಿಂದೆ ನೀನು ಮೂರಡಿಗಳಿಂದ ಮೂರು ಲೋಕಗಳನ್ನೂ ಆಕ್ರಮಿಸಿದೆ. ನಮಗೆ ಅಮೃತವನ್ನು ಕೊಡಿಸಿದೆ. ದೈತ್ಯರನ್ನೆಲ್ಲ ಯುದ್ಧದಲ್ಲಿ ನಾಶಮಾಡಿದೆ. ಅಲ್ಲದೆ ದೈತ್ಯರಾಜನಾದ ಬಲಿಯನ್ನು ಬಂಧಿಸಿ, ಇಂದ್ರನನ್ನು ದೇವಾಧಿಪತ್ಯದಲ್ಲಿ ನೆಲೆಗೊಳಿಸಿದೆ. ನೀನು ಸಮಸ್ತದೇವತೆಗಳಿಗೂ ಪ್ರಭುವಾದವನು. ನಿನ್ನಿಂದ

ಸಮಸ್ತಲೋಕವೂ ವ್ಯಾಪ್ತವಾಗಿರುವುದು. ದೇವತೆಗಳೆಲ್ಲರಿಗೂ ಮೇಲೆನಿಸಿ, ಸರ್ವಲೋಕಗಳಿಂದಲೂ ನಮಸ್ಕರಿಸಲ್ಪಡುವ ನೀನು, ಇಂದ್ರನೊಡಗೂಡಿ ಬಂದಿರುವ ದೇವತೆಗಳಾದ ನಮಗೆಲ್ಲ ಈಗಲೂ ದಿಕ್ಕಾಗಿ ನಮ್ಮನ್ನು ಕಾಪಾಡಬೇಕು. ಓ ದೈತ್ಯನಿಷೂದನಾ! ಈಗ ಸಮಸ್ತ ಜಗತ್ತೂ ವೃತ್ರನಿಂದ ಆಕ್ರಮಿಸಲ್ಪಟ್ಟಿದೆ" ಎಂದರು. ಆಗ ವಿಷ್ಣುವು "ಎಲೈ ದೇವತೆಗಳಿರಾ! ನಿಮಗೆ ಕ್ಷೇಮವನ್ನುಂಟುಮಾಡಬೇಕಾದುದು ನನ್ನ ಅವಶ್ಯಕರ್ತವ್ಯವೇ! ಆದುದರಿಂದ ಆ ವೃತ್ರನನ್ನು ತೀರಿಸಿಬಿಡುವುದಕ್ಕೆ ಈಗ ನಾನು ನಿಮಗೊಂದುಪಾಯವನ್ನು ಹೇಳುವೆನು. ನೀವೆಲ್ಲ ಮಹರ್ಷಿಗಳೊಡನೆ ಸೇರಿ, ವಿಶ್ವರೂಪವನ್ನು ಧರಿಸತಕ್ಕ ಆ ವೃತ್ರನಿರುವ ಸ್ಥಳಕ್ಕೆ ಹೋಗಿ, ಮೊದಲು ಅವನಿಗೆ ಒಳ್ಳೆಯ ಮಾತನ್ನು ಹೇಳಿರಿ. ಆಗ ಉಪಾಯದಿಂದ ಅವನನ್ನು ನೀವು ಜಯಿಸಬಹುದು. ನನ್ನ ತೇಜಸ್ಸಿನಿಂದ ಇಂದ್ರನಿಗೆ ಜಯವುಂಟಾಗುವುದು. ನಾನು ಯಾರಿಗೂ ತಿಳಿಯದಂತೆ ಇಂದ್ರನ ವಜ್ರಾಯುಧದಲ್ಲಿ ಸೇರಿಕೊಳ್ಳುವೆನು. ದೇವತೆಗಳಿರಾ! ನೀವು ಮಹರ್ಷಿಗಳೊಡನೆಯೂ, ಗಂಧರ್ವರೊಡನೆಯೂ ಹೋಗಿ ಆ ವೃತ್ರನಿಗೆ ಇಂದ್ರನೊಡನೆ ಸಂಧಿಯನ್ನು ಮಾಡಿಸಿರಿ. ಇನ್ನು ವಿಳಂಬಮಾಡಬೇಡಿರಿ" ಎಂದನು. ಮಹಾವಿಷ್ಣುವಿನ ಆಜ್ಞೆಯಂತೆ ಅವರೆಲ್ಲರೂ ಇಂದ್ರನನ್ನು ಮುಂದಿಟ್ಟುಕೊಂಡು ವೃತ್ರನಿದ್ದ ಸ್ಥಳಕ್ಕೆ ಬಂದರು. ಹತ್ತು ದಿಕ್ಕುಗಳನ್ನೂ ದಹಿಸುವಂತೆ ಸೂರ್ಯಚಂದ್ರರಿಗೆ ಸಮಾನವಾದ ಅದ್ಭುತ ತೇಜಸ್ಸಿನಿಂದ ಜ್ವಲಿಸುತ್ತ, ಮೂರು ಲೋಕಗಳನ್ನೂ ನುಂಗಿಬಿಡುವನೋ ಎಂಬಂತೆ ಕಾಣಿಸುತ್ತಿದ್ದ ಆ ವೃತ್ರನನ್ನು ನೋಡಿದರು. ಆಗ ಇಂದ್ರನೊಡನೆ ಎಲ್ಲಾ ದೇವತೆಗಳೂ, ಮಹರ್ಷಿಗಳೂ ಆತನನ್ನು ಸಮೀಪಿಸಿ, ಅವನನ್ನು ಉಬ್ಬಿಸುವ ಪ್ರಿಯವಾಕ್ಯದಿಂದ ಹೀಗೆಂದು ಹೇಳುವರು. "ಓ ದುರ್ಜಯಾ! ಈಗ ಜಗತ್ತೆಲ್ಲವೂ ನಿನ್ನ ತೇಜಸ್ಸಿನಿಂದ ವ್ಯಾಪ್ತವಾಗಿದೆ. ಆದರೇನು? ನೀನು ಬಲಶಾಲಿಗಳಲ್ಲಿ ಮೇಲೆನಿಸಿದ್ದರೂ ಇಂದ್ರನನ್ನು ಜಯಿಸಲು ಸಾಧ್ಯವಾಗಲಿಲ್ಲ. ನೀವು ಯುದ್ಧವನ್ನಾರಂಭಿಸಿ ಎಷ್ಟೋ ಕಾಲವಾಯಿತು. ನಿಮ್ಮಿಬ್ಬರ ಯುದ್ಧದಿಂದ ದೇವಾಸುರಮನುಷ್ಯರೊಡನೆ ಸಮಸ್ತಪ್ರಜೆಗಳೂ ಕಷ್ಟಕ್ಕೊಳಗಾಗಿರುವುವು. ಆದುದರಿಂದ ನೀವಿ

ಬ್ಬರೂ ಸಂಧಿಯನ್ನು ಮಾಡಿಕೊಂಡು, ಯಾವಾಗಲೂ ಸ್ನೇಹದಿಂದಿರಬೇಕು. ಅದರಿಂದ ನಿನಗೂ ಸುಖವುಂಟು. ನೀನು ಇಂದ್ರಲೋಕವನ್ನು ಸ್ಥಿರವಾಗಿ ಪಡೆಯುವೆ” ಎಂದರು. ಋಷಿಗಳು ಹೇಳಿದ ಈ ಪ್ರಿಯವಾಕ್ಯವನ್ನು ಕೇಳಿ ವೃತ್ರನ ಮನಸ್ಸು ಉಬ್ಬಿಹೋಯಿತು. ಅವರಿಗೆ ತಲೆಬಗ್ಗಿ ನಮಸ್ಕರಿಸಿ, “ಎಲೈ ಮಹರ್ಷಿಗಳೇ! ಓ ಗಂಧರ್ವರೇ! ಕೇಳಿರಿ. ನೀವೆಲ್ಲರೂ ಮಹಾಮಹಿಮೆಯುಳ್ಳವರು. ನೀವು ಹೇಳಿದುದನ್ನೆಲ್ಲ ಕೇಳಿದೆನು. ನಾನೂ ನಿಮಗೆ ಒಂದು ಮಾತನ್ನು ಹೇಳಬೇಕಾಗಿದೆ. ಸಾವಧಾನವಾಗಿ ಕೇಳಿರಿ. ನನಗೂ, ಇಂದ್ರನಿಗೂ ಹೇಗೆತಾನೇ ಸಂಧಿಯಾಗುವುದು? ಎರಡು ತೇಜಸ್ಸುಗಳು ಹೊಂದಿಕೆಯಿಂದ ಒಂದಾಗಿ ಕಲೆಯುವುದು ಹೇಗೆ ಸಾಧ್ಯವು” ಎಂದನು. ಅದಕ್ಕಾ ಮಹರ್ಷಿಗಳು “ಓ ವೃತ್ರಾ! ಅಂತಹ ಮಹಾತ್ಮರನ್ನು ಒಂದಾಗಿ ಸೇರಿಸುವುದಕ್ಕೆ ಆದಷ್ಟು ಪ್ರಯತ್ನಿಸಬೇಕು. ಅದರಮೇಲೆ ಆಗಬೇಕಾದುದೇನೋ ಆಗಿಯೇ ಅಗುವುದು. (ಅದರಿಂದ ಕ್ಷೇಮವೇ ಉಂಟಾಗುವುದು.) ಒಳ್ಳೆಯವರ ಸಹವಾಸವನ್ನು ಎಂದಿಗೂ ತಪ್ಪಿಸಬಾರದು. ಸತ್ಪುರುಷರಲ್ಲಿ ಉಂಟಾದ ಸ್ನೇಹಬಂಧವು ಎಂದೆಂದಿಗೂ ದೃಢವಾಗಿ ನಿಲ್ಲುವುದು. ತಿಳಿದವರು, ಇಂತಹ ಕಾರ್ಯಾಸಂಕಟಗಳಲ್ಲಿ ಕಾಲೋಚಿತವಾದ ಕಾರ್ಯಕ್ರಮವನ್ನು ಹೇಳಬೇಕಾದುದೂ ಅವಶ್ಯವೇ. ಸತ್ಪುರುಷರ ಸಂಗತಿಯು ಮುಂದೆ ಒಳ್ಳೇ ಪ್ರಯೋಜನವನ್ನು ತರುವುದು. ಆದುದರಿಂದ, ಧೀರನೂ, ವಿವೇಕಿಯೂ ಆದ ನಿನ್ನಂತವನು ಅಂತಹ ಸತ್ಪುರುಷನನ್ನು ಕೊಲ್ಲುವುದಕ್ಕೆ ಯತ್ನಿಸಬಾರದು. ಇಂದ್ರನಾದರೋ ಸಾಧುಸಮ್ಮತನು. ಮಹಾತ್ಮರಿಗೆ ಆಶ್ರಯನು. ಸತ್ಯಸಂಧನು. ನಿಂದೆಗೆ ಗುರಿಯಾಗದವನು. ಧರ್ಮಜ್ಞನು. ಸೂಕ್ಷ್ಮವಿಷಯದಲ್ಲಿಯೂ ನಿಶ್ಚಯಜ್ಞಾನವುಳ್ಳವನು. ಆದುದರಿಂದ ಇಂದ್ರನೊಡನೆ ನಿನಗೆ ನಿತ್ಯಸ್ನೇಹವಿರಲಿ. ನಿನಗೆ ಅತನಮೇಲೆ ಸದಾ ವಿಶ್ವಾಸವಿರಲಿ. ನಿನ್ನ ಬುದ್ಧಿಯು ಅದಕ್ಕೆ ವಿರುದ್ಧವಾಗಿ ಹೋಗದಿರಲಿ” ಎಂದರು. ಮಹರ್ಷಿಗಳ ಈ ಮಾತನ್ನು ಕೇಳಿ ಮಹಾತೇಜಸ್ಸುಳ್ಳ ಆ ವೃತ್ರನು, ತಿರುಗಿ ಅವರನ್ನು ಕುರಿತು “ಓ ತಪಸ್ವಿಗಳೇ! ನೀವು ಎಲ್ಲವನ್ನೂ ಬಲ್ಲವರು. ಸರ್ವವಿಧದಿಂದಲೂ ನನಗೆ ಪೂಜ್ಯರು. ನಿಮ್ಮ ಮಾತನ್ನು ಮೀರಲಾರೆನು. ಆದ

ರೂ ಈಗ ನಾನು ಹೇಳುವುದನ್ನೆಲ್ಲ ನಡೆಸುವುದಾದರೆ, ನಾನೂ ಈ ದೇವತೆಗಳು ಹೇಳಿದುದನ್ನೆಲ್ಲ ನಡೆಸಲು ಒಪ್ಪುವೆನು. ಒಣಗಿದ ವಸ್ತುವಿನಿಂದಾಗಲಿ, ಹಸಿಯ ಪದಾರ್ಥದಿಂದಾಗಲಿ, ಹಗಲಲ್ಲಿಯಾಗಲಿ, ರಾತ್ರಿಯಲ್ಲಿಯಾಗಲಿ, ಆಯುಧದಿಂದಾಗಲಿ ನನಗೆ ಮರಣವಿರಬಾರದು. ಇಂದ್ರನಿಗಾಗಲಿ, ದೇವತೆಗಳಿಗಾಗಲಿ, ನಾನು ಅವಧ್ಯನಾಗಿರಬೇಕು. ಈ ವರವು ನನಗೆ ಲಭಿಸುವುದಾದರೆ, ಆಗ ಇಂದ್ರನೊಡನೆ ನಾನು ಯಾವಾಗಲೂ ಸ್ನೇಹದಿಂದಿರಬಹುದು. ಆಗಲೇ ನಮ್ಮಿಬ್ಬರಿಗೆ ಸಂಧಿಯು ಸಾಧ್ಯವು" ಎಂದನು. ಋಷಿಗಳೂ, ದೇವತೆಗಳೂ, "ಹಾಗೆಯೇ ಆಗಲಿ" ಎಂದರು. ಇಂದ್ರವೃತ್ರರಿಬ್ಬರಿಗೂ ಸಂಧಿಯು ನಡೆಯಿತು. ವೃತ್ರನಿಗೂ ಅದರಿಂದ ಸಂತೋಷವುಂಟಾಯಿತು. ಈ ಸಂಧಿಕಾರ್ಯವು ಮುಗಿದಮೇಲೆ, ಅವರೆಲ್ಲರೂ ತಾವು ಬಂದ ದಾರಿಯನ್ನು ಹಿಡಿದು ಹಿಂತಿರುಗಿದರು. ಇಂದ್ರವೃತ್ರರಿಬ್ಬರೂ ಸ್ನೇಹಪರರಾಗಿ ಸಂತೋಷದಿಂದಿದ್ದರು. ಆದರೇನು? ಇಂದ್ರನಿಗೆ ಆ ವೃತ್ರನನ್ನು ಕೊಲ್ಲುವ ಆಲೋಚನೆಯುಮಾತ್ರ ಮನಸ್ಸಿನಿಂದ ದೂರವಾಗಲಿಲ್ಲ. ಅವನು ಅದಕ್ಕೆ ಬೇಕಾದ ಉಪಾಯಗಳನ್ನೇ ಆಲೋಚಿಸುತ್ತಿದ್ದನು. ಆಗ ಇಂದ್ರನು ತನ್ನ ಕ್ಷೇಮಕ್ಕಾಗಿ ವೃತ್ರನೊಡನೆ ಮಾಡಿದ ನಿರ್ಣಯವನ್ನೂ, ಋಷಿಗಳು ತನಗೆ ಹೇಳಿದ ಮಾತುಗಳನ್ನೂ ಮನಸ್ಸಿನಲ್ಲಿಯೇ ಇಟ್ಟುಕೊಂಡಿದ್ದರೂ, ವೃತ್ರನನ್ನು ಕೊಲ್ಲುವುದಕ್ಕೆ ಸಮಯವನ್ನು ನೋಡುತ್ತಲೇ ಇದ್ದನು. ಹೀಗಿರಲು ಒಮ್ಮೆ ಸಮುದ್ರತೀರದಲ್ಲಿ ಆ ವೃತ್ರಾಸುರನಿದ್ದುದನ್ನು ಕಂಡನು. ಆಗ ಸಂಧ್ಯಾಸಮಯವಾಗಿತ್ತು. ಭಯಂಕರವಾದ ಮುಹೂರ್ತವೊಂದು ಸಂಘಟಿಸಿತು. ಆಗ ಇಂದ್ರನು ಮಹಾತ್ಮನಾದ ವಿಷ್ಣುವು ತನಗೆ ಕೊಟ್ಟಿದ್ದ ವರದಾನವನ್ನು ನೆನೆಸಿಕೊಂಡು, ತನ್ನಲ್ಲಿ ತಾನು "ಈಗಲಾದರೋ ಭಯಂಕರವಾದ ಸಂಧ್ಯಾಸಮಯವಾಗಿದೆ. ಇದು ರಾತ್ರಿಗೂ ಸೇರದೆ, ಹಗಲಿಗೂ ಸೇರದೆ ಅವೆರಡಕ್ಕೂ ಮಧ್ಯಕಾಲವಾಗಿದೆ. ಆದುದರಿಂದ ನನ್ನ ಸರ್ವಸ್ವವನ್ನೂ ಅಪಹರಿಸತಕ್ಕ ಶತ್ರುವಾದ ಈ ವೃತ್ರನನ್ನು ಇಲ್ಲಿಯೇ ತೀರಿಸಿಬಿಡಬೇಕು. ಮಹಾಬಲವುಳ್ಳವನೂ, ಮಹತ್ತಾದ ಆಕಾರವುಳ್ಳವನೂ ಆದ ಈ ಮಹಾಸುರನನ್ನು ಈಗ ನಾನು ಮೋಸದಿಂದ ಕೊಲ್ಲದೆ ಬಿಟ್ಟರೆ, ಮುಂದೆ ನನಗೆ

ಶ್ರೇಯಸ್ಸಿಲ್ಲ” ಎಂದು ಯೋಚಿಸುತ್ತ, ವಿಷ್ಣುವನ್ನು ಸ್ಮರಿಸಿಕೊಂಡನು. ಈ ಸಮಯಕ್ಕೆ ಸರಿಯಾಗಿ, ಸಮುದ್ರತೀರದಲ್ಲಿ ಪರ್ವತಾಕಾರವಾಗಿ ಸಂಗ್ರಹವಾಗಿದ್ದ ನೊರೆಯು ಮುಂದೆ ಕಾಣಿಸಿತು. ಆಗ ಇಂದ್ರನು ತನ್ನೊಳಗೆ ತಾನು “ಈ ನೊರೆಯು ಒಣಗಿದ ವಸ್ತುವೂ ಅಲ್ಲ! ಹಸಿಯದೂ ಅಲ್ಲ. ಇದು ಶಸ್ತ್ರವೂ ಅಲ್ಲ. ಆದುದರಿಂದ ಈ ನೊರೆಯನ್ನು ತೆಗೆದು ವೃತ್ರನ ಮೇಲೆ ಹಾಕುವೆನು. ಇದರಿಂದ ಇವನು ಕ್ಷಣಮಾತ್ರದಲ್ಲಿಯೇ ಸಾಯುವನು” ಎಂದು ಹೇಳಿ, ಆ ನೊರೆಯೊಡನೆ ತನ್ನ ವಜ್ರವನ್ನೂ ಸೇರಿಸಿ ವೃತ್ರನ ತಲೆಯಮೇಲೆ ಹಾಕಿದನು. ಇದೇ ಸಮಯದಲ್ಲಿ ವಿಷ್ಣುವೂ ಅದರಲ್ಲಿ ಅಡಗಿದ್ದುದರಿಂದ, ವೃತ್ರನು ಹತನಾದನು. ವೃತ್ರನು ಬಿದ್ದೊಡನೆ ಕತ್ತಲೆಯಡಗಿ ದಿಕ್ಕುಗಳೆಲ್ಲ ಪ್ರಸನ್ನವಾಯಿತು. ಮಂಗಳಸೂಚಕವಾದ ವಾಯುವು ಬೀಸಲಾರಂಭಿಸಿತು. ಪ್ರಜೆಗಳೆಲ್ಲರೂ ಹರ್ಷಿತರಾದರು. ದೇವಗಂಧರ್ವ, ಯಕ್ಷ, ರಾಕ್ಷಸ, ಪನ್ನಗರೂ, ಋಷಿಗಳೂ ವಿವಿಧ ಸ್ತೋತ್ರಗಳಿಂದ ಮಹೇಂದ್ರನನ್ನು ಸ್ತುತಿಸಿದರು. ಆಗ ಇಂದ್ರನು ಅವರೆಲ್ಲರಿಂದ ಪೂಜಿತನಾಗಿ, ಅವರಿಗೆ ತಾನೂ ಉಪಚಾರೋಕ್ತಿಗಳನ್ನು ಹೇಳಿ, ಶತ್ರುವಧವಾದುದಕ್ಕಾಗಿ ಮನಸ್ಸಿನಲ್ಲಿ ಸಂತೋಷಿಸುತ್ತ, ದೇವಗಣಗಳೊಡನೆ ಲೋಕನಾಥನಾದ ಶ್ರೀಹರಿಯನ್ನು ಪೂಜಿಸಿದನು. ಆದರೇನು? ವೃತ್ರವಧದಿಂದ ತಾನು ಸುಳ್ಳಾಡಿದ ಪಾಪಕ್ಕೆ ಗುರಿಯಾದೆನೆಂಬ ಚಿಂತೆಯು ಇಂದ್ರನನ್ನು ಬಹಳವಾಗಿ ಬಾಧಿಸಿತು. ಮೊದಲೊಮ್ಮೆ ತ್ರಿಶಿರಸ್ಸಿನ ವಧದಿಂದ ತನಗುಂಟಾದ ಬ್ರಹ್ಮಹತ್ಯಾಪಾತಕದಿಂದ ಅವನು ನೊಂದಿದ್ದನು. ಈಗ ಇದೊಂದು ಬ್ರಹ್ಮಹತ್ಯೆಯು ಅವನನ್ನು ಹಿಡಿಯಿತು. ತಿರುಗಿ ರುದ್ರನ ಕಡೆಯ ಭೂತಗಣಗಳೆಲ್ಲವೂ ನಿರ್ಭಯವಾಗಿ ಇಂದ್ರನ ಮುಂದೆಯೇ “ಇವನು ಬ್ರಹ್ಮಹತ್ಯೆಯನ್ನು ಮಾಡಿದವ”ನೆಂದು ಕೂಗಲಾರಂಭಿಸಿದುವು. ಇದನ್ನು ಕೇಳಿ ಇಂದ್ರನು ನಾಚಿಕೆಯಿಂದ ತಲೆಯೆತ್ತಲಾರದೆ, ಲೋಕದ ಕೊನೆಯನ್ನು ಸೇರಿ, ಅಲ್ಲಿ ಯಾರಿಗೂ ತಿಳಿಯದಂತೆ ನೀರಿನಲ್ಲಿ ಅಡಗಿಕೊಂಡು, ನೀರುಹಾವಿನಂತೆ ಸುತ್ತುತ್ತ ಭ್ರಾಂತನಂತಿದ್ದನು. ಹೀಗೆ ದೇವೇಂದ್ರನು ಬ್ರಹ್ಮಹತ್ಯೆಯ ಭಯದಿಂದ ತಲೆತಪ್ಪಿಸಿಕೊಂಡು ಹೋಗಲು, ಭೂಮಿಯೆಲ್ಲವೂ ಹಾಳುಬಿದ್ದಂತಾಯಿತು. ಭೂಮಿಯಮೇಲೆ, ವನ

ಗಳಾಗಲಿ, ತೋಪುಗಳಾಗಲಿ ಇಲ್ಲದೆ, ಎಲ್ಲಿ ನೋಡಿದರೂ ಬೆಂಗಾಡಿನಂತೆ ಕಾಣಿಸಿತು. ನದಿಗಳಲ್ಲಿ ಪ್ರವಾಹವೇ ಇಲ್ಲದೆ ನದೀಪಾತ್ರಗಳೆಲ್ಲ ಒಣಗಿದುವು. ಕೆರೆಕೊಳಗಳೆಲ್ಲವೂ ಒಣಗಿದುವು. ಜನಗಳೆಲ್ಲರೂ ಅನಾವೃಷ್ಟಿಯಿಂದ ಬಹಳ ಕಷ್ಟಕ್ಕೊಳಗಾದರು. ಇದನ್ನು ನೋಡಿ ದೇವತೆಗಳೂ, ಋಷಿಗಳೂ ಬಹಳ ಭಯಗ್ರಸ್ತರಾದರು. ಜಗತ್ತೆಲ್ಲ ಅರಾಜಕವಾಗಿ, ಜನಗಳು ನಾನಾತರದ ಉಪದ್ರವಗಳಿಗೆ ಗುರಿಯಾದರು. ಆಗ ದೇವತೆಗಳೂ, ಮಹರ್ಷಿಗಳೂ ಮುಂದೆ ತಮಗೆ ಪಾಲಕರಾರೆಂದು ತಿಳಿಯದೆ ಭೀತಿಗೊಂಡರು. ದೇವರಾಜ್ಯಕ್ಕೆ ಬರಲು ಯಾರೂ ಇಷ್ಟಪಡಲಿಲ್ಲವು.

ಇದು ಹತ್ತನೆಯ ಅಧ್ಯಾಯವು.



ದೇವತೆಗಳೂ, ಋಷಿಗಳೂ ನಹುಷನನ್ನು ಕರೆತಂದು ಇಂದ್ರರಾಜ್ಯದಲ್ಲಿ ಅಭಿಷೇಕ ಮಾಡಿದುದು. ನಹುಷನು ಕಾಮಿಸಿದುದಕ್ಕಾಗಿ ಭಯಪಟ್ಟ ಶಚೀದೇವಿಗೆ ಬೃಹಸ್ಪತಿಯು ಅಭಯಪ್ರದಾನವು

ಆಗ ದೇವತೆಗಳೂ, ಮಹರ್ಷಿಗಳೂ ತಮ್ಮೊಳಗೆ ಆಲೋಚಿಸುತ್ತ, "ಇದೋ! ಈ ನಹುಷನು ಇಂದ್ರಪದವಿಗೆ ಅರ್ಹನಾಗಿರುವುದರಿಂದ ಇವನಿಗೇ ಸ್ವರ್ಗರಾಜ್ಯದಲ್ಲಿ ಅಭಿಷೇಕವಮಾಡುವೆವು. ಇವನು ತೇಜಸ್ವಿಯೂ, ಯಶಸ್ವಿಯೂ, ಸದಾ ಧರ್ಮಶೀಲನೂ ಆಗಿರುವನು" ಎಂದು ತೀರ್ಮಾನಿಸಿಕೊಂಡು, ನಹುಷನಲ್ಲಿಗೆ ಬಂದು "ಓ ಕ್ಷತ್ರಿಯೋತ್ತಮಾ! ನೀನು ನಮ್ಮೆಲ್ಲರಿಗೂ ರಾಜನಾಗಿರಬೇಕು" ಎಂದರು. ಆಗ ನಹುಷನು ತನ್ನ ಪಿತೃಗಳೊಡಗೂಡಿ ಬಂದಿರುವ ಅವರೆಲ್ಲರನ್ನೂ ನೋಡಿ ತನ್ನ ಹಿತವನ್ನುದ್ದೇಶಿಸಿ ಅವರನ್ನು ಕುರಿತು "ಓ ಮಹಾತ್ಮರೆ! ನಾನು ದುರ್ಬಲನು. ದೇವತೆಗಳಾದ ನಿಮ್ಮನ್ನಾಳುವುದಕ್ಕೆ ನನಗೆ ಶಕ್ತಿಯೆಲ್ಲಿಯದು? ಬೇರೆ ಯಾವನನ್ನಾದರೂ ಸಮರ್ಥನನ್ನು ಹುಡುಕಿ ನೋಡಿರಿ! ಇಂದ್ರನಾದವನಿಗೆ ಅಸಾಧಾರಣ ಬಲವಿರಬೇಕಲ್ಲವೆ?" ಎಂದನು. ಅದಕ್ಕಾ ದೇವತೆಗಳು, "ಓ ರಾಜಾ! ನಮ್ಮ ತಪೋಬಲದಿಂದಲೇ ನೀನು ಸ್ವರ್ಗರಾಜ್ಯದಲ್ಲಿದ್ದು ಅದನ್ನು

ಪಾಲಿಸು! ಈಗಲಾದರೋ ನಮ್ಮಲ್ಲಿಯೇ ಒಬ್ಬರಿಂದೊಬ್ಬರಿಗೆ ಮಹಾಘೋ
ರವಾದ ಭಯವು ಬಂದೊದಗಿದೆ. ನೀನು ಸ್ವರ್ಗರಾಜ್ಯದಲ್ಲಿ ಅಭಿಷೇಕ
ವನ್ನು ಹೊಂದಿ ನಮ್ಮೆಲ್ಲರಿಗೆ ಪಾಲಕನಾಗು. ನೀನು ಅಧಿಕಾರಕ್ಕೆ ಬಂದ
ಮೇಲೆ, ದೇವ, ದಾನವ, ಯಕ್ಷ, ರಾಕ್ಷಸ, ಗಂಧರ್ವಾದಿಗಳಲ್ಲಿ, ಮಹರ್ಷಿ
ಗಳಲ್ಲಿ, ಪಿತೃಗಳಲ್ಲಿ ಮತ್ತು ಭೂತಗಳಲ್ಲಿ ನೀನು ಯಾರನ್ನು ಕಣ್ಣೆತ್ತಿ
ನೋಡಿದರೆ, ಅವರ ತೇಜಸ್ಸನ್ನೆಲ್ಲ ಆಕರ್ಷಿಸಿ, ಒಳ್ಳೇ ಬಲಶಾಲಿಯಾ
ಗುವೆ. ಆದುದರಿಂದ ನೀನು ಧರ್ಮವನ್ನು ಮುಂದಿಟ್ಟುಕೊಂಡು, ಸರ್ವ
ಲೋಕಾಧಿಪತಿಯೆನಿಸಿ, ಬ್ರಹ್ಮರ್ಷಿಗಳನ್ನೂ, ದೇವತೆಗಳನ್ನೂ ಕಾಪಾಡು
ತ್ತಿರು'' ಎಂದರು. ಅದಕ್ಕೆ ನಹುಷನು ಸಮ್ಮತಿಸಿದನು. ಅವನಿಗೆ ಸ್ವರ್ಗ
ರಾಜ್ಯದಲ್ಲಿ ಅಭಿಷೇಕವು ನಡೆಯಿತು. ಅವನು ಅಭಿಷಿಕ್ತನಾಗಿ, ಸರ್ವ
ಲೋಕಾಧಿಪನೆನಿಸಿ ಧರ್ಮವನ್ನು ಮುಂದಿಟ್ಟುಕೊಂಡು, ಸ್ವರ್ಗವನ್ನು ಪಾಲಿ
ಸುತಿದ್ದನು. ದೇವತೆಗಳಿಂದ ಅವನಿಗೆ ದುರ್ಲಭವಾದ ವರವೂ ಲಭಿಸಿತು.
ಸ್ವರ್ಗಾಧಿಪತ್ಯವೂ ದೊರೆಯಿತು. ಮೊದಮೊದಲು ಕೇವಲ ಧರ್ಮಬುದ್ಧಿ
ಯಿಂದಿದ್ದ ಆ ನಹುಷನಿಗೆ ಕಾಲಕ್ರಮದಿಂದ ಕಾಮದಲ್ಲಿ ಬುದ್ಧಿಯು ಪ್ರವ
ರ್ತಿಸಿತು. ಅವನು ಯಾವಾಗಲೂ ಅಪ್ಸರಸ್ತ್ರೀಯರನ್ನು ಕರೆದುಕೊಂಡು,
ದಿವ್ಯೋದ್ಯಾನಗಳಲ್ಲಿಯೂ, ನಂದನಗಳಲ್ಲಿಯೂ, ಉಪವನಗಳಲ್ಲಿಯೂ, ಕೈ
ಲಾಸ, ಹಿಮಗಿರಿ, ಮಂದರ, ಶ್ವೇತಾದ್ರಿ, ಸಹ್ಯ, ಮಹೇಂದ್ರ, ಮಲಯ,
ಮುಂತಾದ ಪರ್ವತಗಳಲ್ಲಿಯೂ, ಸಮುದ್ರಗಳಲ್ಲಿಯೂ, ನದಿಗಳಲ್ಲಿಯೂ
ವಿಹರಿಸುವನು. ದೇವಕನ್ಯೆಯರೊಡನೆ ಯಥೇಚ್ಛವಾದ ಕ್ರೀಡೆಗಳಲ್ಲಿ ಕಾಲ
ವನ್ನು ಕಳೆಯುವನು. ಯಾವಾಗಲೂ ಕಿವಿಗಿಂಪಾದ ನಾನಾವಿಧ ಶೃಂಗಾರ
ಕಥೆಗಳನ್ನೂ, ನಾನಾಬಗೆಯ ಗೀತವಾದ್ಯಗಳನ್ನೂ ಕೇಳುತ್ತಿರುವನು.
ವಿಶ್ವಾವಸುವೂ, ನಾರದನೂ, ಗಂಧರ್ವರೂ, ಅಪ್ಸರೋಗಣಗಳೂ, ಅವ
ನನ್ನು ಯಾವಾಗಲೂ ತಮ್ಮ ಗಾನಗಳಿಂದ ಆನಂದಗೊಳಿಸುತಿದ್ದರು. ಆರು
ಋತುಗಳೂ ಮೂರ್ತಿಮಂತಗಳಾಗಿ ಬಂದು, ದೇವರಾಜನಾದ ಅವನನ್ನು
ಸೇವಿಸುತಿದ್ದುವು. ಒಳ್ಳೇ ಸುಗಂಧವಿಶಿಷ್ಟವಾದ ತಂಗಾಳಿಯು ಅವನ
ಮೇಲೆ ಸುಖವಾಗಿ ಬೀಸುತಿತ್ತು. ಹೀಗೆ ಕೇವಲ ಕಾಮಬುದ್ಧಿಯಿಂದ
ಭೋಗಮಗ್ನನಾಗಿದ್ದ ಆ ನಹುಷನಿಗೆ, ಇಂದ್ರಪತ್ನಿಯಾದ ಶಚೀದೇವಿಯು

ಅಕಸ್ಮಾತ್ತಾಗಿ ದೃಷ್ಟಿಗೆ ಬಿದ್ದಳು. ಅವಳ ರೂಪವನ್ನು ನೋಡಿದೊಡನೆ, ನಹುಷನು, ತನ್ನ ಆಸ್ಥಾನದಲ್ಲಿದ್ದವರೊಡನೆ "ಎಲೈ ಸಭಾಸದರೆ! ನಾನು ಈಗ ಇಂದ್ರಪದವಿಯಲ್ಲಿರುವೆನು. ಸಮಸ್ತದೇವತೆಗಳಿಗೂ, ಸಮಸ್ತಲೋಕಗಳಿಗೂ ಪ್ರಭುವೆನಿಸಿ, ಇಂದ್ರಭೋಗಗಳನ್ನೆಲ್ಲ ಅನುಭವಿಸುತ್ತಿರುವೆನು. ಇಂದ್ರಪತ್ನಿಯಾದ ಶಚಿಯು ಮಾತ್ರ ನನ್ನನ್ನು ಸೇರದಿರಲು ಕಾರಣವೇನು? ಈಗಲೇ ಆ ಶಚಿಯು ನನ್ನ ಗೃಹಕ್ಕೆ ಬರಲಿ" ಎಂದನು. ಈ ಮಾತು ಶಚಿಯ ಕಿವಿಗೆ ಬಿದ್ದಿತು. ಒಡನೆಯೇ ಅವಳು ದೇವಗುರುವಾದ ಬೃಹಸ್ಪತಿಯ ಬಳಿಗೆ ಬಂದು "ಓ ವಿಪ್ರೋತ್ತಮಾ! ನಹುಷನಿಂದ ನನ್ನನ್ನು ಕಾಪಾಡು! ನಿನ್ನಲ್ಲಿ ಮರೆಹೊಕ್ಕಿರುವೆನು. ನನ್ನನ್ನು ನೀನು ಎಲ್ಲಾ ಶುಭಲಕ್ಷಣಗಳಿಂದ ಕೂಡಿದವಳೆಂದೂ, ದೇವರಾಜನಾದ ಇಂದ್ರನ ಪತ್ನಿಯೆಂದೂ, ಅತ್ಯಂತ ಸುಖಭಾಗಿನಿಯೆಂದೂ, ನನಗೆ ವೈಧವ್ಯವಿಲ್ಲವೆಂದೂ, ನಾನು ಏಕಪತಿಯನ್ನೇ ನಂಬಿದ ಪತಿವ್ರತೆಯೆಂದೂ ನಿನ್ನ ಬಾಯಿಂದ ನೀನೇ ಅನೇಕಾವರ್ತಿ ಹೇಳಿರುವೆಯಷ್ಟೆ? ನೀನು ಹಿಂದೆ ಹೇಳುತ್ತಿದ್ದ ಆ ಮಾತನ್ನು ಈಗ ಸುಳ್ಳಾಗಿಸದೆ ಸತ್ಯವಾಗಿ ಮಾಡು. ನೀನು ಯಾವಾಗಲೂ ಅಸತ್ಯವನ್ನು ಹೇಳಿದವನಲ್ಲ. ಆದುದರಿಂದ ಈಗ ನನ್ನ ವಿಷಯದಲ್ಲಿಯೂ ನೀನಾಡಿದ ಮಾತು ಸುಳ್ಳಾಗದಿರಲಿ" ಎಂದಳು. ಆಗ ಬೃಹಸ್ಪತಿಯು ಭಯದಿಂದ ತತ್ತಳಿಸುತ್ತಿದ್ದ ಆಕೆಯನ್ನು ಕುರಿತು "ದೇವಿ! ನಾನು ಹಿಂದೆ ಏನು ಹೇಳಿದ್ದೆನೋ ಅದು ಈಗಲೂ ಸುಳ್ಳಾಗಲಾರದು. ನನ್ನ ಮಾತು ಸತ್ಯವೆಂಬುದರಲ್ಲಿ ಸಂದೇಹವಿಲ್ಲ. ನಿನ್ನ ಪತಿಯಾದ ದೇವರಾಜನು ಶೀಘ್ರದಲ್ಲಿಯೇ ಹಿಂತಿರುಗಿ ಬರುವುದನ್ನು ನೀನು ನೋಡುವೆ. ನಹುಷನಿಂದ ನೀನೇನೂ ಭಯಪಡಬೇಕಾದುದಿಲ್ಲ. ನಾನು ಸತ್ಯವಾಗಿ ಹೇಳುವೆನು. ನಿನ್ನನ್ನು ಶೀಘ್ರದಲ್ಲಿಯೇ ಆ ಶಕ್ರನೊಡನೆ ಸೇರಿಸುವ ಭಾರವು ನನ್ನದಾಗಿರಲಿ!" ಎಂದನು. ಹೀಗೆ ಶಚೀದೇವಿಯು ಬೃಹಸ್ಪತಿಯಲ್ಲಿ ಶರಣಾಗತಳಾಗಿ, ಅವನಿಂದ ಅಭಯವನ್ನು ಪಡೆದಿರುವ ಸಂಗತಿಯು ನಹುಷನಿಗೆ ತಿಳಿಯಿತು. ಅವನಿಗೆ ಬೃಹಸ್ಪತಿಯಮೇಲೆ ಬಹಳ ಆಕ್ರೋಶವು ಹುಟ್ಟಿತು.

ಇದು ಹನ್ನೊಂದನೆಯ ಅಧ್ಯಾಯವು.

ನಹುಷನ ಕೋಪಸಮಾಧಾನಕ್ಕಾಗಿ ದೇವತೆಗಳೆಲ್ಲರೂ ಶಚಿ
ಯನ್ನು ಬಿಟ್ಟುಕೊಡಬೇಕೆಂದು ಕೇಳಿದರೂ ಬೃಹಸ್ಪತಿ
ಯು ಅವಳನ್ನು ಬಿಡದಿದ್ದುದು. ಕೊನೆಗೆ ಶಚಿಯು
ಬೃಹಸ್ಪತಿಯ ಅನುಮತಿಯಿಂದ, ನಹುಷನೊ
ಡನೆ ಒಂದು ಸಂಕೇತವನ್ನು ಮಾಡಿಬರು
ವುದಕ್ಕಾಗಿ ಹೋದುದು.

ನಹುಷನು ಕೋಪಗೊಂಡಿರುವುದನ್ನು ನೋಡಿ ದೇವತೆಗಳೂ, ಋಷಿಗಳೂ ಅವನನ್ನು ಕುರಿತು "ಓ ದೇವರಾಜಾ! ನಿನ್ನ ಕ್ರೋಧವನ್ನು ಬಿಟ್ಟುಬಿಡು. ಈ ನಿನ್ನ ಕೋಪಕ್ಕೆ ದೇವ ದಾನವ ಗಂಧರ್ವ ಪನ್ನಗರೊಡಗೂಡಿದ ಸಮಸ್ತ ಜಗತ್ತೂ ಭೀತಿಗೊಂಡಿರುವುದು. ನಿಮ್ಮಂತಹ ಪ್ರಭುಗಳು ಕೋಪಿಸಬಾರದು. ಶಚಿಯು ಮತ್ತೊಬ್ಬನ ಪತ್ನಿಯಲ್ಲವೆ? ಪರದಾರಸ್ಪರ್ಶವೆಂಬ ಮಹಾಪಾಪಕಾರ್ಯದಿಂದ ನಿನ್ನ ಮನಸ್ಸನ್ನು ಹಿಂತಿರುಗಿಸು. ನಮ್ಮಲ್ಲಿ ಪ್ರಸನ್ನನಾಗು. ನಿನಗೆ ಮಂಗಳವಾಗಲಿ! ನೀನು ದೇವತೆಗಳಿಗೆಲ್ಲ ರಾಜನೆನಿಸಿರುವೆ. ನೀನು ಧರ್ಮದಿಂದ ನಡೆದು ಪ್ರಜೆಗಳನ್ನು ಪಾಲಿಸಬೇಕಲ್ಲವೆ?" ಎಂದರು. ಆದರೇನು? ಕಾಮಮೋಹಿತನಾದ ನಹುಷನು ಅವರ ಮಾತನ್ನು ಕೇಳದೆ, ತಿರುಗಿ ಆ ದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ! ನಾನೇನು ಇಂದ್ರನನ್ನು ಕಾಣದವನೇನು? ನನಗೆ ಹಿಂದಿದ್ದ ದೇವರಾಜನು, ಗೌತಮಮಹರ್ಷಿಯ ಪತ್ನಿಯಾದ ಅಹಲ್ಯೆಯೆಂಬವಳನ್ನು, ಪತಿಯು ಜೀವದೊಂದಿಗೆ ಅವಳೊಡನೆ ಗೃಹಧರ್ಮವನ್ನು ನಡೆಸುತಿದ್ದಾಗಲೇ ಅವಳನ್ನು ಕಾಮಿಸಲಿಲ್ಲವೆ? ಆಗ ನೀವೆಲ್ಲರೂ ಅವನನ್ನೇಕೆ ನಿವಾರಿಸದಿದ್ದಿರಿ? ಇಂದ್ರನು ಪೂರ್ವದಲ್ಲಿ ಇನ್ನೂ ಇಂತಹ ಧರ್ಮವಿರುದ್ಧಗಳಾದ, ಕೊಲೆ, (ತ್ರಿಶಿರಸ್ಸಿನ ವಧೆ) ಮೋಸ, (ವೃತ್ರನೊಡನೆ ವಂಚನೆಯ ಸ್ನೇಹ) ಮುಂತಾದ ಕ್ರೂರಕಾರ್ಯಗಳನ್ನು ಮಾಡಿರುವನು. ಆಗ ನೀವೇಕೆ ಅವನನ್ನು ತಡೆಯಲಿಲ್ಲ? ಆ ಶಚಿಯು ನನ್ನಲ್ಲಿಗೆ ಬರಲೇಬೇಕು. ಅದರಿಂದ ಅವಳಿಗೂ ಕ್ಷೇಮವುಂಟು. ನಿಮಗೂ ಇದರಿಂದ ಒಳ್ಳೆಯದಾಗುವುದು" ಎಂದನು. ಈ ಮಾತನ್ನು ಕೇಳಿ

ದೇವತೆಗಳೆಲ್ಲರೂ "ಹಾಗಿದ್ದರೆ ನಿನ್ನ ಇಷ್ಟದಂತೆ ಶಚಿಯನ್ನು ಕರೆತರು ವೆವು. ನೀನು ಕೋಪವನ್ನು ಬಿಟ್ಟು ಶಾಂತನಾಗಿರು" ಎಂದರು.

ಓ ಧರ್ಮರಾಜಾ! ಹೀಗೆಂದು ಹೇಳಿ ದೇವತೆಗಳೆಲ್ಲರೂ, ಋಷಿಗ ಳೊಡನೆ ಬೃಹಸ್ಪತಿಯ ಬಳಿಗೆ ಬಂದರು. ಶಚೀದೇವಿಯೂ ಅಲ್ಲಿರುವಾಗ, ಅವರಿಬ್ಬರ ಮುಂದೆ ಆಡಬಾರದ ಈ ಪ್ರಸ್ತಾವವನ್ನು ಹೇಳತೊಡಗಿದರು. "ಆಚಾರ್ಯ! ಶಚೀದೇವಿಯು ನಿನ್ನ ರಕ್ಷಣೆಯನ್ನು ಬೇಡಿ ನಿನ್ನ ಮನೆ ಯಲ್ಲಿರುವುದನ್ನು ನಾವು ಬಲ್ಲೆವು. ನೀನು ಅವಳಿಗೆ ಅಭಯವನ್ನು ಕೊಟ್ಟಿ ರುವ ಸಂಗತಿಯನ್ನೂ ನಾವು ಬಲ್ಲೆವು. ಹಾಗಿದ್ದರೂ ಈಗ, ಮಹರ್ಷಿ ಗಳು, ಗಂಧರ್ವರು, ಮೊದಲಾಗಿ ನಾವೆಲ್ಲ ನಿನ್ನಲ್ಲಿಗೆ ಬಂದು ಕೇಳಿಕೊಳ್ಳು ವೆವು. ಶಚಿಯನ್ನು ನೀನು ನಹುಷನ ಬಳಿಗೆ ಕಳುಹಿಸಿಕೊಡಬೇಕು. ಅಮ್ಮ ಶಚಿ! ನಹುಷನಾದರೂ ನಿನ್ನ ಪತಿಯಾದ ಇಂದ್ರನಿಗಿಂತಲೂ ಏನೂ ಕಡಿ ಮೆಯಾದವನಲ್ಲ. ದೇವತೆಗಳಿಗೆಲ್ಲ ರಾಜನೆನಿಸಿರುವನು. ಮಹಾತೇಜಸ್ಸು ಳ್ಳವನು. ಆದುದರಿಂದ ನೀನು ಅವನನ್ನು ಪತಿಯನ್ನಾಗಿ ವರಿಸು" ಎಂದರು. ಈ ಮಾತನ್ನು ಕೇಳಿದೊಡನೆ ಶಚೀದೇವಿಗೆ ಕಣ್ಣುಗಳಲ್ಲಿ ನೀರು ತುಳುಕಿತು. ಕಣ್ಣೊರೆಸಿಕೊಂಡು, ಅವಳು ಗಟ್ಟಿಯಾಗಿ ರೋದಿಸುತ್ತ ಬೃಹಸ್ಪತಿಯನ್ನು ನೋಡಿ, "ಓ ದೇವರ್ಷಿಶ್ರೇಷ್ಠನೆ! ನಾನು ನಹುಷನನ್ನು ಎಂದಿಗೂ ಪತಿ ಯನ್ನಾಗಿ ವರಿಸಲಾರೆನು. ನಾನು ನಿನ್ನಲ್ಲಿ ಶರಣಾಗತಳಾಗಿರುವೆನು. ಈ ಮಹಾಭಯದಿಂದ ನನ್ನನ್ನು ತಪ್ಪಿಸಬೇಕು" ಎಂದಳು. ಆಗ ಬೃಹಸ್ಪತಿ ಯು "ಎಲೌ ಇಂದ್ರಾಣೀ! ಮರೆಹೊಕ್ಕವರನ್ನು ನಾನು ಎಂದಿಗೂ ಕೈ ಬಿಡಲಾರೆನು. ಇದು ನನ್ನ ನಿಶ್ಚಯವು. ಅದರಲ್ಲಿಯೂ ನೀನು ಧರ್ಮಗ ಳನ್ನು ಬಲ್ಲವಳು. ಸತ್ಯಶೀಲೆ! ಇಂತಹ ನಿರ್ದುಷ್ಟಳಾದ ನಿನ್ನನ್ನು ಬಿಟ್ಟು ಕೊಡುವೆನೆ? ನಾನು ಬ್ರಾಹ್ಮಣನಾಗಿದ್ದು ಇಂತಹ ಅಕಾರ್ಯವನ್ನು ಮಾ ಡಲು ಇಷ್ಟಪಡುವೆನೆ? ನಾನೂ ಅನೇಕಧರ್ಮಗಳನ್ನು ಕೇಳಿದವನು. ಸತ್ಯವನ್ನು ತಪ್ಪಿ ನಡೆಯುವವನಲ್ಲ. ನೀತಿಧರ್ಮನಿಯಮಗಳನ್ನೆಲ್ಲ ತಿಳಿ ದವನು. ನಾನು ಈ ಅಕಾರ್ಯಕ್ಕೆ ಎಂದಿಗಾದರೂ ಸಮ್ಮತಿಸುವೆನೆ? ಓ ದೇವತೆಗಳಿರಾ! ನೀವು ಹೋಗಿರಿ! ಇದೇ ವಿಷಯವಾಗಿ ಹಿಂದೆ ಬ್ರಹ್ಮದೇ

ವನೇ ಸಾಕ್ಷಾತ್ತಾಗಿ ಹೇಳಿದ ಒಂದು ವಾಕ್ಯವನ್ನು ಹೇಳುವೆನು ಕೇಳಿರಿ! "ಭಯಪಟ್ಟು ತನ್ನಲ್ಲಿ ಮರೆಹೊಕ್ಕವನನ್ನು ಯಾವನು ಶತ್ರುಗಳ ಕೈಗೆ ಬಿಟ್ಟುಕೊಡುವನೋ, ಅವನಿಗೆ ಮೊಳೆಯಬೇಕಾದ ಕಾಲದಲ್ಲಿ ಬೀಜಗಳು ಮೊಳೆಯಲಾರವು. ಮಳೆಗಾಲದಲ್ಲಿ ಮಳೆಯು ಸುರಿಯಲಾರದು. ಬೇರೊಬ್ಬರಿಂದ ತನಗೆ ರಕ್ಷಣೆಯು ಬೇಕಾದಾಗ, ತನ್ನನ್ನು ಅಪಾಯದಿಂದ ರಕ್ಷಿಸುವವರೂ ಅವನಿಗೆ ದೊರೆಯಲಾರರು. ಅವನಿಗೆ ಲಭಿಸಿದ ಅನ್ನವೂ ನಿಷ್ಫಲವಾಗಿ, ಕೈಗೆ ಬಂದ ತುತ್ತು ಬಾಯಿಗೆ ಬರಲಾರದು. ಅವನು ದುರ್ಬಲಹೃದಯನಾಗಿ, ದೇಹವ್ಯಾಪಾರಗಳೆಲ್ಲವೂ ಉಡುಗಿ, ಸ್ವರ್ಗಲೋಕದಲ್ಲಿದ್ದರೂ ಅಲ್ಲಿಂದ ಅಧೋಗತಿಯನ್ನು ಹೊಂದುವನು. ಯಾವನು ಭಯದಿಂದ ಮರೆಹೊಕ್ಕವರನ್ನು ಬಿಟ್ಟುಕೊಡುವನೋ, ಅವನು ಕೊಟ್ಟ ಹವಿರ್ಭಾಗವನ್ನು ದೇವತೆಗಳೂ ಪ್ರತಿಗ್ರಹಿಸಲಾರರು. ಯಾವನು ಭಯದಿಂದ ತನ್ನಲ್ಲಿ ಶರಣಾಗತನಾದವನನ್ನು ಶತ್ರುಗಳ ವಶಕ್ಕೆ ಬಿಟ್ಟುಕೊಡುವನೋ ಅವನ ಮಕ್ಕಳೂ ಅಕಾಲದಲ್ಲಿ ಸಾಯುವುವು. ಅಂತವನ ಪಿತೃಗಳು ತಮ್ಮ ನೆಲೆಯಲ್ಲಿಲ್ಲದೆ ಯಾವಾಗಲೂ ಪ್ರವಾಸದಲ್ಲಿರುವರು. ಇಂದ್ರನೊಡಗೂಡಿದ ಸಮಸ್ತದೇವತೆಗಳೂ ಅವನನ್ನು ವಜ್ರಘಾತದಿಂದ ಹೊಡೆಯುವರು" ಎಂಬೀ ಬ್ರಹ್ಮವಾಕ್ಯವುಂಟು. ಅದನ್ನು ಕೇಳಿಬಲ್ಲ ನಾನು, ಶಕ್ರನಿಗೆ ಪ್ರಿಯಪತ್ನಿಯೆನಿಸಿ ಲೋಕವಿಖ್ಯಾತವಾದ ಕೀರ್ತಿಯುಳ್ಳ ಈಕೆಯನ್ನು ಹೇಗೆತಾನೇ ಬಿಟ್ಟುಕೊಡಲಿ? ನಾನು ಕೊಡಲಾರೆನು. ಇವಳಿಗೆ ಹಿತವಾವುದೋ ಅದೇ ನನಗೂ ಹಿತವು. ನೀವು ನಮ್ಮಿಬ್ಬರಿಗೂ ಅಹಿತವಲ್ಲದ ಕಾರ್ಯವಾವುದೋ ಅದನ್ನು ಯೋಚಿಸಿರಿ. ನಾನು ಶಚಿಯನ್ನು ಮಾತ್ರ ಬಿಟ್ಟುಕೊಡಲಾರೆನು" ಎಂದನು.

ಆಗ ದೇವಗಂಧರ್ವಾದಿಗಳೆಲ್ಲರೂ ಬೃಹಸ್ಪತಿಯನ್ನು ನೋಡಿ, "ಬೃಹಸ್ಪತೀ! ಈಗಿನ ಸ್ಥಿತಿಯಲ್ಲಿ ಬೇರೆ ಯಾವ ನೀತಿಯು ಒಳ್ಳೆಯದೆಂದು ನೀನೇ ಯೋಚಿಸಿ ಹೇಳು" ಎಂದರು. ಅದಕ್ಕಾ ಬೃಹಸ್ಪತಿಯು "ಇದಕ್ಕೆ ನನಗೊಂದು ಮಾರ್ಗವು ತೋರುವುದು. ಈ ಶಚಿಯು ನಹುಷನಲ್ಲಿಗೆ ಹೋಗಿ, ತನಗೆ ಸ್ವಲ್ಪಕಾಲದ ಅವಕಾಶವನ್ನು ಕೊಡಬೇಕೆಂದು ಬೇಡಿಕೊಳ್ಳಲಿ!

ಇದೇ ಈಗ ಅವಳಿಗೂ, ನಮ್ಮೆಲ್ಲರಿಗೂ ಕ್ಷೇಮಕರವಾದ ಮಾರ್ಗವು. ಓ ದೇವತೆಗಳಿರಾ! ತತ್ಕಾಲಕ್ಕೆ ಹೇಗೋ ತಪ್ಪಿಸಿಕೊಂಡರೆ, (ಬೀಸುವ ದೊಣ್ಣೆಗೆ ತಲೆತಪ್ಪಿಸಿಕೊಂಡರೆ ಸಾವಿರ ವರ್ಷದ ಆಯುಸ್ಸು ಎಂಬಂತೆ) ಮುಂದೆ ನೋಡಿಕೊಳ್ಳಬಹುದು. ಕಾಲವೆಂಬುದು ಅನೇಕ ವಿಘ್ನಗಳುಳ್ಳದು. ಈಗ ನಹುಷನು ಕೊಡತಕ್ಕ ಕಾಲಾವಧಿಯಿಂದ ಸ್ವಲ್ಪ ಕಾಲವನ್ನು ಮುಂದೆ ತಳ್ಳಬಹುದು. ಆ ನಹುಷನಾದರೋ ವರಬಲದಿಂದ ಬಹಳವಾಗಿ ಕೊಬ್ಬಿದವನು. ಬಲಾಢ್ಯನು. ಅವನು ಧರ್ಮೋಪದೇಶಗಳಿಗೆ ಬಗ್ಗುವವನಲ್ಲ. ಆದುದರಿಂದ ಇದೇ ಕಾಲೋಚಿತವಾದ ಉಪಾಯವು" ಎಂದನು. ಈ ಉಪಾಯವು ದೇವತೆಗಳ ಮನಸ್ಸಿಗೂ ಒಪ್ಪಿತು. ಆಗ ಅವರು ಸಂತುಷ್ಟರಾಗಿ "ಓ ಬ್ರಾಹ್ಮಣೋತ್ತಮಾ! ನೀನು ಹೇಳಿದ ಉಪಾಯವು ಒಳ್ಳೆಯದೇ! ಇದು ದೇವತೆಗಳೆಲ್ಲರಿಗೂ ಹಿತಕರವಾದುದು. ಈ ವಿಚಾರದಲ್ಲಿ ಶಚೀದೇವಿಯನ್ನು ಒಪ್ಪಿಸಬೇಕಲ್ಲವೇ?" ಎಂದು ಹೇಳಿ, ಅಗ್ನಿ ಮೊದಲಾದ ಸಮಸ್ತದೇವತೆಗಳೂ ಒಟ್ಟಾಗಿ ಸೇರಿ ಶಚಿಯಬಳಿಗೆ ಬಂದರು. ಸಮಸ್ತಲೋಕಕ್ಕೂ ಹಿತವನ್ನುಂಟುಮಾಡುವ ಕೋರಿಕೆಯಿಂದ ಅವರು ಆ ಶಚಿಯನ್ನು ಕುರಿತು "ದೇವಿ! ನೀನು ಏಕಪತಿವ್ರತವುಳ್ಳವಳು! ಮತ್ತು ಸತ್ಯಶೀಲೆ! ಆದುದರಿಂದ ಚರಾಚರಾತ್ಮಕವಾದ ಸಮಸ್ತಜಗತ್ತೂ ನಿನ್ನಿಂದ ಧರಿಸಲ್ಪಡುತ್ತಿದೆ. ಆದರೆ ಈಗ ನೀನು ನಹುಷನಲ್ಲಿಗೆ ಹೋಗಿ ಮಾತಾಡಿ ಬರಬೇಕು. ನಿನ್ನನ್ನು ಕಾಮಿಸಿದ ಆ ಪಾಪಕರ್ಮಿಯು ಶೀಘ್ರದಲ್ಲಿಯೇ ನಾಶಹೊಂದುವುದರಲ್ಲಿ ಸಂದೇಹವಿಲ್ಲ. ನಿನ್ನ ಪತಿಯಾದ ಶಕ್ರನೂ ಶೀಘ್ರದಲ್ಲಿಯೇ ಸ್ವರ್ಗಾಧಿಪತ್ಯವನ್ನು ಹೊಂದುವನು. ಈಗ ಎಲ್ಲರ ಹಿತಕ್ಕಾಗಿ ನೀನು ಅವನಲ್ಲಿಗೆ ಹೋಗಿ ಬಾ" ಎಂದರು. ದೇವತೆಗಳ ಮಾತನ್ನು ಕೇಳಿದಮೇಲೆ, ಶಚಿಯು ತನಗೆ ಬಹಳವಾಗಿ ಲಜ್ಜೆಯು ಬಾಧಿಸುತ್ತಿದ್ದರೂ, ಕಾರ್ಯಸಿದ್ಧಿಯನ್ನುದ್ದೇಶಿಸಿ, ಪಾಪಬುದ್ಧಿಯಿಂದ ಕ್ರೂರದರ್ಶನವುಳ್ಳ ನಹುಷನ ಬಳಿಗೆ ಬಂದಳು. ಒಳ್ಳೇ ವಯಸ್ಸಿನಿಂದಲೂ, ರೂಪದಿಂದಲೂ ಶೋಭಿಸುವ ಶಚಿಯ ಸೌಂದರ್ಯವನ್ನು ನೋಡಿ, ಕಾಮಮೋಹಿತನಾದ ನಹುಷನಿಗೆ ಮಿತಿಮೀರಿದ ಸಂತೋಷವುಂಟಾಯಿತು.

ಇದು ಹನ್ನೆರಡನೆಯ ಅಧ್ಯಾಯವು.

ಶಚಿಯು ನಹುಷನೊಡನೆ ಸಂಕೇತವನ್ನು ಮಾಡಿಕೊಂಡು ಬಂದುದು. ಇಂದ್ರನು ಪಾಪನಿವೃತ್ತಿಗಾಗಿ ಅಶ್ವ ಮೇಧವನ್ನು ಮಾಡಿ, ನಹುಷನ ಭಯದಿಂದ ಅದೃಶ್ಯನಾಗಿಯೇ ಇದ್ದುದು. ಶಚೀ ದೇವಿಯು ವ್ಯಸನದಿಂದ ಉಪಶ್ರು ತಿದೇವಿಯನ್ನು ಪೂಜಿಸಿದುದು.

"ಧರ್ಮಪುತ್ರಾ! ದೇವಾಧಿಪತಿಯಾದ ನಹುಷನು ಶಚಿಯನ್ನು ಕಂಡೊಡನೆ ಆತುರದಿಂದ ಆಕೆಯನ್ನು ಕುರಿತು 'ಓ ಶುಚಿಸ್ಮಿತೆ! ನಾನು ಮೂರು ಲೋಕಗಳಿಗೂ ಇಂದ್ರನು. ನನ್ನನ್ನು ಪತಿಯನ್ನಾಗಿ ವರಿಸು" ಎಂದನು. ಈ ಮಾತನ್ನು ಕೇಳಿ ಮಹಾಪತಿವ್ರತೆಯಾದ ಆ ಶಚೀದೇವಿಯು, ಬಿರುಗಾಳಿಗಿದಿರಾದ ಬಾಳೆಯಂತೆ ನಡುಗುತ್ತ, ಮನಸ್ಸಿನಲ್ಲಿ ಬ್ರಹ್ಮದೇವನನ್ನು ಧ್ಯಾನಿಸಿ, ಅವನಿಗೆ ಕೈಮುಗಿದು ಬಗ್ಗಿ ನಮಸ್ಕರಿಸಿ, ಆಮೇಲೆ ಭಯಂಕರದರ್ಶನವುಳ್ಳ ಆ ನಹುಷನ ಕಡೆಗೆ ತಿರುಗಿ "ಓ ದೇವರಾಜಾ! ನೀನು ನನಗೆ ಸ್ವಲ್ಪ ಕಾಲಾವಧಿಯನ್ನು ಕೊಡಬೇಕು. ಏಕೆಂದರೆ! ನನ್ನ ಪತಿಯಾದ ಶಕ್ರನು ಈಗ ಎಲ್ಲಿರುವನೋ ತಿಳಿಯದು. ಅವನು ಒಂದು ವೇಳೆ ಹಿಂತಿರುಗಿ ಬಂದಿರುವನೋ, ಇಲ್ಲವೇ ಬೇರೆಲ್ಲಿಯಾದರೂ ಹೋದನೋ ಯಾವುದೂ ತಿಳಿಯದು. ಅವನ ವಿಚಾರವಾದ ನಿಶ್ಚಯಾಂಶವನ್ನು ತಿಳಿದುಕೊಂಡು, ಕೊನೆಗೂ ಅವನ ವಿಚಾರವೊಂದೂ ತಿಳಿಯದೆ ಹೋದರೆ, ಆಗ ನಾನು ನಿನ್ನಲ್ಲಿಯೇ ಬಂದು ಸೇರುವೆನು. ಇದನ್ನು ಸತ್ಯವಾಗಿ ಹೇಳುವೆನೆಂದು ತಿಳಿ" ಎಂದಳು. ಅದಕ್ಕಾ ನಹುಷನು "ಎಲೆ ಸುಶ್ರೋಣಿ! ನೀನು ಹೇಳಿದಂತೆಯೇ ಆಗಲಿ! ನಿನ್ನ ಪತಿಯ ವಿಚಾರವನ್ನು ನೀನು ಚೆನ್ನಾಗಿ ತಿಳಿದುಕೊಂಡಮೇಲಾದರೂ ನೀನು ಬಂದುಬಿಡಬೇಕು. ನೀನು ಈಗ ಮಾಡಿದ ಸತ್ಯವನ್ನು ಮಾತ್ರ ಮರೆಯದೆ ಜ್ಞಾಪಕದಲ್ಲಿಡು" ಎಂದನು. ಒಡನೆಯೇ ಶಚಿಯು ನಹುಷನಿಂದ ಬಿಡುಗಡೆಹೊಂದಿ, ಗುರುವಾದ ಬೃಹಸ್ಪತಿಯ ಮನೆಗೆ ಬಂದು ಸೇರಿದಳು.೦ ಅಗ್ನಿ ಮೊದಲಾದ ದೇವತೆಗಳೆಲ್ಲರೂ, ಶಚಿಯು ನಹುಷನೊಡನೆ ಮಾಡಿಕೊಂಡುಬಂದ ಸಂಕೇತವನ್ನು ಕೇಳಿ ಸಂತುಷ್ಟರಾದರು. ಆಮೇಲೆ ಅವರಿಗೆ ಇಂದ್ರನ ವಿಚಾರವು

ಮನಸ್ಸಿಗೆ ಹತ್ತಿತು. ಎಲ್ಲರೂ ಒಟ್ಟಾಗಿ ಸೇರಿ, ಸರ್ವಸಮರ್ಥನೂ, ಸರ್ವ ಕರ್ತನೂ ಆದ ಶ್ರೀಮಹಾವಿಷ್ಣುವಿನ ಬಳಿಗೆ ಬಂದು, ಬಹಳ ವ್ಯಾಕುಲ ಮನಸ್ಕರಾಗಿ ಅವನನ್ನು ಕುರಿತು ಹೀಗೆಂದು ಹೇಳುವರು "ಓ ದೇವ ದೇವಾ! ದೇವಗಣಗಳಿಗೆಲ್ಲಾ ಪ್ರಭುವೆನಿಸಿದ ಇಂದ್ರನು ಬ್ರಹ್ಮಹತ್ಯಾಪಾತ ಕದಿಂದ ದೂಷಿತನಾಗಿರುವನು. ಪ್ರಭೂ! ನೀನೇ ನಮ್ಮೆಲ್ಲರಿಗೂ ದಿಕ್ಕಾ ಗಿರುವೆ. ನೀನು ಸಮಸ್ತಜಗತ್ತಿಗೂ ಆದಿಯಲ್ಲಿದ್ದವನು. ಸರ್ವಭೂತ ಗಳ ರಕ್ಷಣೆಗಾಗಿಯೇ ನೀನು ವಿಷ್ಣುತ್ವವನ್ನು (ಸರ್ವವ್ಯಾಪಿತ್ವವನ್ನು) ತಾಳಿದವನು. ಆ ವೃತ್ರಾಸುರನಾದರೂ ನಿನ್ನ ವೀರ್ಯಪ್ರಭಾವದಿಂದಲೇ ಹತನಾದನು. ಆದರೆ, ಅವನನ್ನು ಕೊಂದ ಬ್ರಹ್ಮಹತ್ಯಾಪಾತಕಕ್ಕೆ ಈಗ ಇಂದ್ರನು ಗುರಿಯಾಗಿ ಸಂಕಟಪಡುತ್ತಿರುವನು. ಆದುದರಿಂದ ನೀನೇ ಅವನಿಗೆ ಈ ಪಾಪದಿಂದ ಬಿಡುಗಡೆಹೊಂದುವ ಮಾರ್ಗವನ್ನು ತೋರಿಸ ಬೇಕು" ಎಂದರು.

ಆಗ ವಿಷ್ಣುವು "ಓ ದೇವಶ್ರೇಷ್ಠರೇ! ಆ ಇಂದ್ರನು ಪುಣ್ಯಕರವಾದ ಅಶ್ವಮೇಧಯಾಗದಿಂದ ನನ್ನನ್ನು ಆರಾಧಿಸಿದರೆ, ಆಗ ಅವನು ಪವಿತ್ರನಾಗಿ ಯಾವ ಭಯವೂ ಇಲ್ಲದಂತೆ ತಿರುಗಿ ಸ್ವರ್ಗಾಧಿಪತ್ಯಕ್ಕೆ ಬರುವನು. ದು ರ್ಬುದ್ಧಿಯುಳ್ಳ ಆ ನಹುಷನುಕೂಡ, ತನ್ನ ಅಕೃತ್ಯಗಳಿಗೆ ಫಲವಾಗಿ ನಾಶ ವನ್ನು ಹೊಂದುವನು. ಆದರೆ ದೇವತೆಗಳಿರಾ! ನೀವು ಇನ್ನೂ ಕೆಲವು ಕಾಲ ದವರೆಗೆ ಈ ಕಷ್ಟವನ್ನು ಸಹಿಸಿಕೊಂಡು ಎಚ್ಚರದಿಂದ ಕಾಲನಿರೀಕ್ಷಣೆಯ ನ್ನು ಮಾಡಿಕೊಂಡಿರಬೇಕಾಗುವುದು" ಎಂದನು. ಹೀಗೆ ವಿಷ್ಣುವು ಹೇ ಳಿದ ಅಮೃತಸಮಾನವಾದ ಪ್ರಿಯವಾಕ್ಯವನ್ನು ಕೇಳಿ ದೇವತೆಗಳೆಲ್ಲರೂ ತಮ್ಮ ಉಪಾಧ್ಯಾಯನಾದ ಬೃಹಸ್ಪತಿಯೊಡನೆ, ಇಂದ್ರನು ಭಯಗ್ರಸ್ತ ನಾಗಿ ಅವಿತುಕೊಂಡಿದ್ದ ಸ್ಥಳಕ್ಕೆ ಬಂದರು. ಅಲ್ಲಿ ಅವರೆಲ್ಲರೂ ದೇವೇಂದ್ರ ನ ಬ್ರಹ್ಮಹತ್ಯಾಪಾಪವನ್ನು ನೀಗಿಸತಕ್ಕ ದೊಡ್ಡ ಅಶ್ವಮೇಧಯಾಗವನ್ನು ಆರಂಭಿಸಿದರು. ಆ ಯಾಗದ ಫಲದಿಂದ ಇಂದ್ರನು, ಶುದ್ಧನಾಗಿ ತನ್ನಲ್ಲಿ ಅಂಟಿದ್ದ ಬ್ರಹ್ಮಹತ್ಯೆಯನ್ನು ಐದು ವಿಭಾಗವಮಾಡಿ, ವೃಕ್ಷಗಳಲ್ಲಿಯೂ, ನದಿಗಳಲ್ಲಿಯೂ, ಪರ್ವತಗಳಲ್ಲಿಯೂ, ಭೂಮಿಯಲ್ಲಿಯೂ, ಹೆಂಗಸ

ರಲ್ಲಿಯೂ, ಸೇರುವಂತೆ ಹಂಚಿಬಿಟ್ಟನು. ಹೀಗೆ ಇಂದ್ರನು ತನ್ನ ಪಾಪವನ್ನು ಮೇಲ್ಕಂಡ ಭೂತಗಳಿಗೆ ಸೇರಿಸಿ, ತಾನು ಶುದ್ಧನಾಗಿ ನಿರ್ಮಲಚಿತ್ತನಾಗಿದ್ದರೂ, ಅವನಿಗೆ ನಹುಷನ ಭಯವು ಮಾತ್ರ ತಪ್ಪಲಿಲ್ಲ. ಸ್ವರ್ಗರಾಜ್ಯವನ್ನು ನಹುಷನು ಆಕ್ರಮಿಸಿಕೊಂಡಿರುವನು. ಆ ಪದವಿಯಿಂದ ಅವನನ್ನು ಕದಲಿಸುವುದಕ್ಕೆ ಈಗ ಯಾರಿಗೂ ಸಾಧ್ಯವಲ್ಲ. ವರಬಲದಿಂದ, ಅವನಿಗೆ ತಾನು ಕಣ್ಣಿಂದ ನೋಡಿದ ಸಮಸ್ತ ಭೂತಗಳ ಬಲವನ್ನೂ ತಗ್ಗಿಸಿ ಅದನ್ನೆಲ್ಲ ಆಕರ್ಷಿಸಿಕೊಳ್ಳುವ ಶಕ್ತಿಯುಂಟು. ಇಂತವನ ಮುಂದೆ ತಾನು ಹೋಗುವುದು ಹೇಗೆ? ಎಂಬ ಚಿಂತೆಯು ಅವನ ಮನಸ್ಸನ್ನು ಆವರಿಸಿತು. ಆ ಭಯದಿಂದ ಅವನು ತಿರುಗಿ ಯಾರ ಕಣ್ಣಿಗೂ ಕಾಣಿಸದೆ ಸಂಚರಿಸುತ್ತ, ಕಾಲನಿರೀಕ್ಷಣೆ ಮಾಡುತ್ತಿದ್ದನು. ಹೀಗೆ ಇಂದ್ರನು ತಿರುಗಿ ಕಣ್ಮರೆಯಾದುದನ್ನು ನೋಡಿ ಶಚೀದೇವಿಗೆ ಭೀತಿ ಹುಟ್ಟಿತು. ಅವಳು ಮಹಾಶೋಕಪೀಡಿತೆಯಾಗಿ, "ಹಾ ಶಕ್ರಾ! ಎಲ್ಲಿರುವೆ?" ಎಂದು ರೋದಿಸತೊಡಗಿದಳು. ಮತ್ತು ಅವಳು ದುಃಖವನ್ನು ತಡೆಯಲಾರದೆ, "ನಾನು ಏನಾದರೂ ದಾನವನ್ನು ಮಾಡಿದ್ದರೆ, ಹೋಮವನ್ನು ನಡೆಸಿದ್ದರೆ, ಗುರುಗಳನ್ನು ಪೂಜಿಸಿ ಸಂತೋಷಗೊಳಿಸಿದ್ದರೆ, ನನ್ನಲ್ಲಿ ಸತ್ಯವೇನಾದರೂ ಇದ್ದರೆ, ಅದರ ಫಲದಿಂದ, ನನಗೆ ಈ ಏಕಪತಿತ್ವವೇ ಯಾವಾಗಲೂ ಇರಲಿ! ಈ ನನ್ನ ಮನೋರಥಸಿದ್ಧಿಗಾಗಿ, ಉತ್ತರಾಯಣಕಾಲದ ಪವಿತ್ರವಾದ ರಾತ್ರಿದೇವತೆಯನ್ನು ನಮಸ್ಕರಿಸುವೆನು. ನನ್ನ ಕೋರಿಕೆಯು ಕೈಗೂಡಲಿ" ಎಂದು ನಿಶಾದೇವಿಯನ್ನು ಶುದ್ಧವಾದ ನಿಯಮದಿಂದ ಉಪಾಸಿಸಿದಳು. ಹೀಗೆ ಶಚಿಯು ತನ್ನ ಪಾತಿವ್ರತ್ಯದ, ಮತ್ತು ಸತ್ಯದಮೇಲೆ ಆಣೆಯಿಟ್ಟು *"ಉಪಶ್ರುತಿದೇವಿ"ಯನ್ನು ಕರೆಯುತ್ತ "ನನ್ನ ಪತಿಯಾದ ದೇವರಾಜನೆಲ್ಲಿರುವನೋ ಆ ಸ್ಥಳವನ್ನು ನನಗೆ ತೋರಿಸಿಕೊಡು! ಸತ್ಯವು (ನಿಜಾಂಶವು) ಸತ್ಯದಿಂದಲೇ ಪ್ರಕಾಶಕ್ಕೆ ಬರಲಿ!" ಎಂದು ಪ್ರಾರ್ಥಿಸಿದಳು.

ಇದು ಹದಿಮೂರನೆಯ ಅಧ್ಯಾಯವು.

---

* ಪರೋಕ್ಷ ಮತ್ತು ಭವಿಷ್ಯದ್ವ್ಯಾಪಾರಗಳನ್ನು ತಿಳಿಸತಕ್ಕ ಒಂದು ದೇವತಾಶಕ್ತಿ.

ತನ್ನ ಸ್ತೋತ್ರಕ್ಕೆ ಪ್ರಸನ್ನಳಾಗಿ ಗೋಚರಿಸಿದ ಉಪಶ್ರುತಿ
ಯೊಡನೆ ಶಚೀದೇವಿಯು ಒಂದು ತಾವರೆದಂಟಿನ ವಿವ
ರದ ಮಾರ್ಗವಾಗಿ ಹೋಗಿ, ಅಲ್ಲಿದ್ದ ಇಂದ್ರನನ್ನು
ಕಂಡು, ಅವನನ್ನು ಸ್ತುತಿಸಿ ಅವನಿಗೆ ನಹು
ಷನ ವೃತ್ತಾಂತವನ್ನು ತಿಳಿಸಿದುದು.

"ಓ ಧರ್ಮಪುತ್ರಾ! ಒಡನೆಯೇ ಉಪಶ್ರುತಿದೇವಿಯು, ಸಾಧ್ವಿ ಯಾದ ಶಚಿಯಮುಂದೆ ಆಕಾರದೊಡನೆ ಕಾಣಿಸಿಕೊಂಡಳು. ದಿವ್ಯರೂಪ ದಿಂದಲೂ, ಒಳ್ಳೇ ವಯಸ್ಸಿನಿಂದಲೂ ತನ್ನ ಮುಂದೆಬಂದು ನಿಂತ ಆ ದೇ ವಿಯನ್ನು ನೋಡಿ ಶಚಿಯು ಅತ್ಯಂತ ಹರ್ಷಿತಳಾಗಿ, ಅವಳನ್ನು ಪೂಜಿಸಿ, "ಅಮ್ಮಾ! ನೀನು ಯಾರು ಹೇಳು! ನಿನ್ನ ನಿಜವನ್ನು ತಿಳಿಯಬೇಕೆಂದಿ ರುವೆನು" ಎಂದು ಕೇಳಲು, ಆ ಉಪಶ್ರುತಿಯು "ಅಮ್ಮಾ ಶಚೀದೇವಿ! ನಾನು ಉಪಶ್ರುತಿದೇವತೆ! ನಿನ್ನ ಸತ್ಯಕ್ಕೆ ಮೆಚ್ಚಿ ನಾನು ನಿನ್ನ ಬಳಿಗೆ ಬಂದೆನು. ನೀನು ಮಹಾಪತಿವ್ರತೆ! ಯಮನಿಯಮಗಳಿಂದ ಕೂಡಿ ದವಳು. ವೃತ್ರಸಂಹಾರಿಯಾದ ನಿನ್ನ ಪತಿಯನ್ನು ತೋರಿಸಿಕೊಡುವೆನು. ಈಗಲೇ ನೀನು ನನ್ನೊಡನೆ ಬಾ! ದೇವಶ್ರೇಷ್ಠನಾದ ಆ ನಿನ್ನ ಪತಿಯ ನ್ನು ನೀನು ನೋಡುವೆ" ಎಂದಳು. ಕೂಡಲೆ ಶಚಿಯು ಆ ದೇವಿಯನ್ನು ಹಿಂಬಾಲಿಸಿ ಹೊರಟಳು. ಅವರಿಬ್ಬರೂ ದೇವತೆಗಳ ನಿವಾಸವಾದ ಅರಣ್ಯ ಗಳನ್ನೂ, ಅನೇಕ ಪರ್ವತಗಳನ್ನೂ ದಾಟಿ, ಹಿಮವತ್ಪರ್ವತಕ್ಕೆ ಬಂದರು. ಅಲ್ಲಿಂದ ಆ ಪರ್ವತದ ಉತ್ತರಕ್ಕಿದ್ದ ಒಂದು ಸಮುದ್ರವನ್ನು ಸೇರಿ, ಅಲ್ಲಿಂ ದಾಚೆಗೆ ಬಹುಯೋಜನ ವಿಶಾಲವಾಗಿಯೂ, ನಾನಾ ತರದ ಮರಗಿಡ ಬಳ್ಳಿಗಳಿಂದ ನಿಬಿಡವಾಗಿಯೂ ಇದ್ದ ಒಂದು ದೊಡ್ಡ ದ್ವೀಪವನ್ನು ಸೇರಿ ದರು. ಆ ದ್ವೀಪದ ನಡುವೆ ಅನೇಕ ಜಲಪಕ್ಷಿಗಳಿಗೆ ಆಶ್ರಯವಾದ ಒಂದು ದಿವ್ಯ ಸರೋವರವಿದ್ದಿತು. ಆ ಸರೋವರವು ನೂರು ಯೋಜನದುದ್ದ ವಾಗಿ, ಅಷ್ಟೇ ಅಗಲವಾಗಿ, ಅತ್ಯಂತ ಮಂಗಳಕರವಾಗಿ ಕಾಣಿಸುತ್ತಿತ್ತು. ಅಲ್ಲಿ ಪಂಚವರ್ಣಗಳಿಂದ ಶೋಭಿತಗಳಾದ ಸಾವಿರಾರು ತಾವರೆಹೂಗಳಿ ದ್ದುವು. ಆ ತಾವರೆಹೂಗಳೆಲ್ಲವೂ ಅರಳಿ ಭ್ರಮರಝುಂಕಾರದಿಂದ ಮನೋ ಹರವಾಗಿದ್ದುವು. ಆ ಸರೋವರದ ನಟ್ಟನಡುವೆ ಶ್ರೇಷ್ಠವೆ ಎಲ್ಲಕ್ಕಿಂತಲೂ

ದೊಡ್ಡದಾಗಿಯೂ, ಅಂದವಾಗಿಯೂ ಇದ್ದ ಒಂದೇ ತಾವರೆಗಿಡವಿದ್ದಿತು. ಅದರ ದಂಟು ಗೌರವರ್ಣವಾಗಿ, ಚೆನ್ನಾಗಿ ಅರಳಿದ ಒಂದು ದೊಡ್ಡ ಕಮಲದ ಹೂವಿನಿಂದ ಶೋಭಿಸುತಿದ್ದಿತು. ಉಪಶ್ರುತಿದೇವಿಯು, ಆ ಹೂವಿನ ನಾಳವನ್ನು ಕೊರೆದುಕೊಂಡು, ಶಚಿಯನ್ನೂ ತನ್ನೊಡನೆ ಕರೆದುಕೊಂಡು ಅದರೊಳಗೆ ಪ್ರವೇಶಿಸಿದಳು. ಆ ತಾವರೆದಂಟಿನಲ್ಲಿದ್ದ ಒಂದು ನೂಲೆಳೆಯ ರಂಧ್ರದಲ್ಲಿ ಇಂದ್ರನು ಅತಿ ಸೂಕ್ಷ್ಮರೂಪದಿಂದ ಅಡಗಿದ್ದುದನ್ನು ಕಂಡು ಉಪಶ್ರುತಿ, ಶಚಿ ಇವರಿಬ್ಬರೂ ತಾವೂ ಅದಕ್ಕೆ ತಕ್ಕ ಸೂಕ್ಷ್ಮರೂಪದಿಂದ ಅವನಿದ್ದಲ್ಲಿಗೆ ಹೋದರು. ಆಗ ಶಚಿಯು ಆ ಇಂದ್ರನು ಹಿಂದೆ ನಡೆಸಿದ ಪ್ರಸಿದ್ಧಕಾರ್ಯಗಳನ್ನೆಲ್ಲ ನಿರೂಪಿಸಿ ಸ್ತೋತ್ರಮಾಡಿದಳು. ಅದನ್ನು ಕೇಳಿ ಇಂದ್ರನು ಶಚಿಯನ್ನು ಕುರಿತು "ಪ್ರಿಯೇ! ಇಲ್ಲಿಗೇಕೆ ಬಂದೆ?" ಎಂದನು. ಆಗ ಶಚಿಯು ನಹುಷನ ದುಶ್ಚರ್ಯೆಗಳನ್ನೆಲ್ಲ ಇಂದ್ರನಿಗೆ ತಿಳಿಸುತ್ತ "ಕಾಂತಾ! ಆ ನಹುಷನು ತ್ರೈಲೋಕಾಧಿಪತ್ಯವನ್ನು ಪಡೆದು, ಮಹಾವೀರ್ಯವಂತನಾಗಿ, ಬಹಳವಾಗಿ ಕೊಬ್ಬಿರುವನು. ದುಷ್ಟಾತ್ಮನಾದ ಆ ಪಾಪಿಯು, ನನ್ನನ್ನು ತನಗೆ ಪತ್ನಿಯಾಗಬೇಕೆಂದು ನಿರ್ಬಂಧಿಸಿದನು. ಕೊನೆಗೂ ಬಿಡದೆ, ಕ್ರೂರಸ್ವಭಾವವುಳ್ಳ ಆತನು, ನನಗೆ ಒಂದು ಕಾಲಾವಧಿಯನ್ನು ನಿರ್ಣಯಮಾಡಿರುವನು. ಈಗಲೂ ನೀನು ನನ್ನನ್ನು ರಕ್ಷಿಸಿಕೊಳ್ಳದಿದ್ದರೆ ಅವನು ನನ್ನನ್ನು ಕೈಸೇರಿಸಿಕೊಳ್ಳುವುದು ನಿಶ್ಚಯವು. ಇದಕ್ಕಾಗಿಯೇ ನಾನು ಇಷ್ಟು ಶ್ರಮದಿಂದ ನಿನ್ನಲ್ಲಿಗೆ ಬಂದೆನು. ಮಹಾಬಾಹೂ! ಪಾಪದಲ್ಲಿಯೇ ನಿಶ್ಚಯಬುದ್ಧಿಯುಳ್ಳ ಕ್ರೂರನಾದ ಆ ನಹುಷನನ್ನು ಬೇಗನೆ ಕೊಲ್ಲುವ ಯೋಚನೆಯನ್ನು ಮಾಡು. ನೀನು ಇಲ್ಲಿ ಅವಿತುಕೊಂಡಿರದೆ, ನಿನ್ನ ಸ್ವರೂಪವನ್ನು ಹೊರಕ್ಕೆ ಕಾಣಿಸು. ನಿನ್ನ ಸಹಜವಾದ ತೇಜಸ್ಸನ್ನು ಅವಲಂಬಿಸಿ, ನಿನ್ನ ದೇವರಾಜ್ಯವನ್ನು ಕೈಸೇರಿಸಿಕೊಂಡು ಮೊದಲಿನಂತೆ ಅದನ್ನು ಪಾಲಿಸು" ಎಂದಳು.

ಇದು ಹದಿನಾಲ್ಕನೆಯ ಅಧ್ಯಾಯವು.



ಇಂದ್ರಪ್ರೇರಿತೆಯಾದ ಶಚಿಯು ಪ್ರಾರ್ಥನೆಯಮೇಲೆ ನಹು
ಷನು ತನ್ನ ಪಲ್ಲಕ್ಕಿಯನ್ನು ಹೊರುವುದಕ್ಕಾಗಿ ಸಪ್ತರ್ಷಿ
ಗಳಿಗೆ ನಿಯಮಿಸಿದುದು. ಬೃಹಸ್ಪತಿಯ ಮಾತಿನಿಂದ
ಅಗ್ನಿಯು, ನೀರಿರುವ ಸ್ಥಳವನ್ನು ಮಾತ್ರ ಬಿಟ್ಟು
ಬೇರೆ ಎಲ್ಲಾ ಕಡೆಯೂ ಹುಡುಕಿ ವಿಫಲಪ್ರಯ
ತ್ನನಾಗಿ ಬಂದುದು.

ಓ ಧರ್ಮಪುತ್ರಾ! ಆಗ ಇಂದ್ರನು ಶಚಿಯನ್ನು ಕುರಿತು “ದೇವಿ! ಇದು ಪರಾಕ್ರಮಕ್ಕೆ ಕಾಲವಲ್ಲ. ಈಗ ನಹುಷನು ಬಹಳ ಪ್ರಬಲನಾಗಿ ರುವನು. ಋಷಿಗಳ ವರಬಲದಿಂದಲೂ, ಹವ್ಯಕವ್ಯಗಳಿಂದಲೂ ಅವನು ಬಹಳ ಪ್ರಬಲದಶೆಗೆ ಬಂದಿರುವನು. ಎಲ್ಲರೂ ಅವನನ್ನು ಬಹಳ ದೂರಕ್ಕೆ ಏರಿಸಿಬಿಟ್ಟಿರುವರು. ಪ್ರಿಯೇ! ಇದಕ್ಕಾಗಿ ನಾನೊಂದುಪಾಯವನ್ನು ಹೇಳುವೆನು. ನೀನು ಅದರಂತೆ ನಡೆಸು. ನೀನು ಈ ವಿಚಾರವನ್ನು ಕುರಿ ತು ಯಾರಲ್ಲಿಯೂ ಬಾಯಿಬಿಡದೆ, ಬಹಳ ರಹಸ್ಯವಾಗಿ ಈ ಕಾರ್ಯವನ್ನು ನಡೆಸಬೇಕು. ನೀನು ಏಕಾಂತದಲ್ಲಿ ಆ ನಹುಷನ ಬಳಿಗೆ ಹೋಗಿ, ಅವನ ಇಷ್ಟದಂತೆ ನಡೆಯಲು ಸಮ್ಮತಿಸುವುದಾಗಿಯೂ, ದೇವಯೋಗ್ಯವಾದ ಪಲ್ಲಕ್ಕಿಯನ್ನು ಮಹರ್ಷಿಗಳಮೇಲೆ ಹೊರಿಸಿಕೊಂಡು ನನ್ನಲ್ಲಿಗೆ ನೀನು ಬರುವುದಾದರೆ, ನಾನು ನಿನಗೆ ಸ್ವಾಧೀನಳಾಗುವೆನೆಂದೂ ಅವನಿಗೆ ತಿಳಿಸು. ಅದರಂತೆ ಅವನು ನಡೆಸುವುದಾದರೆ, ಅದರಿಂದಲೇ ಅವನಿಗೆ ಅಧೋಗತಿ ಯು ಸಿದ್ಧವು” ಎಂದನು. ಹೀಗೆ ದೇವೇಂದ್ರನು ಹೇಳಿದ ಮಾತನ್ನು ಕೇಳಿ ಶಚಿಯು ‘ಹಾಗೆಯೇ ಆಗ’ಲೆಂದು ಹೇಳಿ, ನೆಟ್ಟಗೆ ನಹುಷನ ಬಳಿಗೆ ಬಂದಳು. ಇವಳನ್ನು ಕಂಡೊಡನೆ ನಹುಷನು ಸಂತೋಷದಿಂದುಬ್ಬಿ ಮುಗುಳ್ನಗೆಯೊಡನೆ “ಓ ಶುಭಾಂಗಿ! ಎಲೆ ಶುಚಿಸ್ಮಿತೆ! ನಿನಗೆ ಸ್ವಾಗ ತವು. ನನ್ನಿಂದ ನಿನಗೆ ಆಗಬೇಕಾದುದೇನಿದ್ದರೂ ಹೇಳು. ನಿನ್ನ ಭಕ್ತ ನನ್ನಾಗಿ ಭಾವಿಸಿ ನನ್ನನ್ನು ಸೇರು! ಎಲೆ ಕಲ್ಯಾಣೀ! ನಿನಗೆ ಬೇಕಾದು ದೇನು ಹೇಳು. ಯಾವುದನ್ನು ಬೇಕಾದರೂ ನಡೆಸಿಕೊಡುವೆನು. ಯಾವ ವಿಷಯಕ್ಕೂ ಲಜ್ಜೆಪಡಬೇಡ. ನನ್ನಲ್ಲಿ ಪೂರ್ಣವಿಶ್ವಾಸವನ್ನಿಡು. ಸತ್ಯದ

ಮೇಲೆ ಆಣೆಯಿಟ್ಟು ಹೇಳುವೆನು. ಖಂಡಿತವಾಗಿ ನೀನು ಕೇಳಿದುದನ್ನು ನಡೆಸಿಕೊಡುವೆನು" ಎಂದನು.

ಆಗ ಶಚಿಯು "ಓ ದೇವರಾಜಾ! ನೀನು ನನಗೆ ನಿರ್ಣಯಮಾಡಿ ಕೊಟ್ಟಿದ್ದ ಕಾಲಾವಧಿಯನ್ನು ಇದಿರುನೋಡುತ್ತಿದ್ದೆನು. ಆ ಕಾಲವು ತೀರಿದರೆ ನೀನೇ ನನ್ನ ಪತಿ. ನೀನು ನನ್ನ ಮನಸ್ಸಿನ ಉದ್ದೇಶವೇನೆಂದು ಕೇಳಿದೆಯಲ್ಲವೆ? ನನಗೆ ಪ್ರಿಯವಾದ ಕಾರ್ಯವನ್ನು ಮಾಡುವುದಾದರೆ ಎಂದೆಂದಿಗೂ ನಾನು ನಿನ್ನ ವಶಳಾಗಿರುವೆನು. ಓ ಲೋಕಪ್ರಭೂ! ಇಂದ್ರ ನಿಗೆ ಆನೆಗಳೂ, ಕುದುರೆಗಳೂ, ರಥಗಳೂ ವಾಹನಗಳಾಗಿದ್ದುದನ್ನು ಹಿಂದೆ ನಾನು ಅನೇಕಾವರ್ತಿ ನೋಡಿರುವೆನು. ಅನುಭವಿಸಿಯೂ ಇರುವೆನು. ಈಗ ನೀನು ಇದುವರೆಗಿಲ್ಲದೆ ಇರುವ ಅಪೂರ್ವವಾದ ಒಂದು ವಾಹನದ ಮೇಲೆ ಕುಳಿತು ನನ್ನಲ್ಲಿಗೆ ಬರಬೇಕೆಂಬುದು ನನ್ನ ಕೋರಿಕೆ! ಇದುವ ರೆಗೆ ವಿಷ್ಣುವಿಗಾಗಲಿ, ರುದ್ರನಿಗಾಗಲಿ, ದೇವತೆಗಳಿಗಾಗಲಿ, ರಾಕ್ಷಸರಿಗಾ ಗಲಿ ಲಭಿಸದ ಹೊಸತರದ ವಾಹನವನ್ನು ನೀನು ಕಲ್ಪಿಸಿಕೊಳ್ಳಬೇಕು. ಮಹಾತ್ಮರಾದ ಸಪ್ತರ್ಷಿಗಳು ಪಲ್ಲಕ್ಕಿಯಮೇಲೆ ನಿನ್ನನ್ನೇರಿಸಿಕೊಂಡು ನನ್ನಲ್ಲಿಗೆ ಬರುವಂತೆ ಮಾಡು. ಇಂತಹ ಅಪೂರ್ವವೈಭವವು ಇದುವರೆಗೆ ದೇವಾಸುರರೊಬ್ಬರಲ್ಲಿಯೂ ಇಲ್ಲದುದರಿಂದ, ನೀನು ಎಲ್ಲರಿಗಿಂತಲೂ ಮೇಲೆ ನಿಸುವೆ. ಓ ಪ್ರಭೂ! ನೀನು ನಿನ್ನ ನೋಟದಿಂದಲೇ ಎಲ್ಲರ ತೇಜಸ್ಸನ್ನೂ ಆಕರ್ಷಿಸತಕ್ಕ ಮಹಾಮಹಿಮೆಯುಳ್ಳವನು. ಇದರಿಂದ ಸಮಸ್ತದೇವತೆ ಗಳ ವೀರ್ಯವೂ ನಿನ್ನಲ್ಲಿ ಒಂದಾಗಿ ಸೇರಿರುವುದು. ಯಾರೊಬ್ಬರೂ ನಿನ್ನಿ ದಿರಿಗೆ ನಿಲ್ಲಲು ಶಕ್ತರಲ್ಲ" ಎಂದಳು. ಈ ಮಾತನ್ನು ಕೇಳಿ ನಹುಷನಿಗೆ ಮತ್ತಷ್ಟು ಸಂತೋಷವಾಯಿತು. ಆ ಸಂತೋಷದಿಂದ ಅವನು ತಿರುಗಿ ಶಚಿಯನ್ನು ನೋಡಿ "ಎಲೈ ವರವರ್ಣಿನೀ! ನೀನು ಹೇಳಿದಂತೆ ಅದೊಂ ದು ಅಪೂರ್ವವಾದ ವಾಹನವೇ ನಿಜವು. ನನಗೂ ಅದು ಪ್ರಿಯವಾದ ಕಾರ್ಯವು. ಎಲೆ ಮಂಗಳಾಂಗಿ! ಸರ್ವವಿಧದಲ್ಲಿಯೂ ನಾನು ನಿನ್ನ ವಶ ನಾಗಿರುವೆನು. ಮಹರ್ಷಿಗಳನ್ನೇ ವಾಹಕರನ್ನಾಗಿ ಮಾಡಿಕೊಂಡು ಬರು ವವನು ಎಂತಹ ವೀರ್ಯವುಳ್ಳವನಾಗಿರಬೇಕು? ನಾನಾದರೋ ಮಹಾ

ತಪಸ್ವಿ. ಎಣೆಯಿಲ್ಲದ ಬಲವುಳ್ಳವನು. ಭೂತಭವಿಷ್ಯದ್ವರ್ತಮಾನ ಕಾಲಿಗಳ ಸಮಸ್ತವಸ್ತುಗಳಿಗೂ ಒಡೆಯನು. ನಾನು ಕೋಪಗೊಂಡರೆ ಈ ಜಗತ್ತೇ ನಿಲ್ಲಲಾರದು. ಸಮಸ್ತವೂ ನನ್ನಲ್ಲಿ ನೆಲೆಗೊಂಡಿರುವುವು. ದೇವ ದಾನವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗರಾಗಲಿ, ಬೇರೆ ಯಾರಾಗಲಿ ನನ್ನ ಕೋಪಕ್ಕೆ ತಡೆದುಕೊಳ್ಳಲಾರರು. ನಾನು ಕಣ್ಣಿನಿಂದ ಯಾರನ್ನು ನೋಡುವೆನೋ ಅವರ ತೇಜಸ್ಸನ್ನು ಎಳೆದುಕೊಳ್ಳುವೆನು. ದೇವತೆಗಳಿಗೆಲ್ಲ ನಾನು ಇಂದ್ರನು! ಲೋಕಗಳಿಗೆಲ್ಲ ನಾನು ಮಹೇಶ್ವರನು! ಹವ್ಯ, ಕವ್ಯಗಳೂ, ಸನಾತನ ಲೋಕಗಳೂ, ನನ್ನ ಅಧೀನವಾಗಿವೆ. ನನಗೆ ಸಮಾನನೊಬ್ಬನಿಲ್ಲವು. ಅಂತಹ ನಾನೇ ನಿನ್ನ ಮಾತಿಗೆ ವಿಧೇಯನಾಗಿ ನಡೆಸಲು ಸಿದ್ಧನಾಗಿರುವೆನು. ಇದರಲ್ಲಿ ಸಂದೇಹವಿಲ್ಲ. ಸಪ್ತರ್ಷಿಗಳೊಡನೆ ಎಲ್ಲಾ ಬ್ರಹ್ಮರ್ಷಿಗಳೂ ಸೇರಿ ನನ್ನನ್ನು ನೀನಿರುವ ಸ್ಥಳಕ್ಕೆ ಹೊತ್ತು ತರುವಂತೆ ಮಾಡುವೆನು. ನನ್ನ ಮಹಿಮೆಯೂ, ನನ್ನ ಐಶ್ವರ್ಯವೂ ಎಂತಹದೆಂದು ಆಗ ನೀನೇ ತಿಳಿಯುವೆ'' ಎಂದನು.

ಓ ಧರ್ಮಪುತ್ರಾ! ನಹುಷನು ಶಚಿಗೆ ಹೀಗೆಂದು ಹೇಳಿ, ಅವಳನ್ನು ಕಳುಹಿಸಿಬಿಟ್ಟನು. ಬಲದಿಂದಲೂ, ವೀರ್ಯದಿಂದಲೂ ಕೊಬ್ಬಿದ ಆ ನಹುಷನು ಶಚಿಯ ಬಳಿಗೆ ಹೋಗುವುದಕ್ಕಾಗಿ ಐರಾವತ, ಸುಪ್ರತೀಕಗಳೆಂಬ ತನ್ನ ಉತ್ತಮ ಗಜಗಳನ್ನಾಗಲಿ, ಹಂಸಯುಕ್ತಗಳಾದ ತನ್ನ ದಿವ್ಯ ವಿಮಾನಗಳನ್ನಾಗಲಿ, ದಿವ್ಯಾಶ್ವಗಳಿಂದ ಕೂಡಿದ ತನ್ನ ರಥಗಳನ್ನಾಗಲಿ, ಯಾವುದನ್ನೂ ಅಪೇಕ್ಷಿಸದೆ, ತನ್ನ ಪಲ್ಲಕ್ಕಿಯನ್ನು ಹೊರುವುದಕ್ಕಾಗಿ ಮಹರ್ಷಿಗಳನ್ನೇ ಕರೆಸುವುದಾಗಿ ನಿಶ್ಚಯಿಸಿಕೊಂಡನು. ಹೀಗೆ ನಹುಷನು ತನಗಿದ್ದ ವೀರ್ಯದ ಕೊಬ್ಬಿನಿಂದ, ತಪಸ್ವಿಗಳೂ, ನಿಯಮನಿಷ್ಠರೂ ಆದ ಮಹರ್ಷಿಗಳನ್ನೆಲ್ಲಾ ಕರೆಸಿದನು. ಮದೋನ್ಮತ್ತನೂ, ಕಾಮಮೋಹಿತನೂ, ದುರಾತ್ಮನೂ ಆದ ಆ ನಹುಷನು ಬ್ರಾಹ್ಮಣಕುಲವನ್ನೇ ಅವಮಾನಗೊಳಿಸುವಂತೆ ಆ ಋಷಿಗಳಮೇಲೆ ತನ್ನ ಪಲ್ಲಕ್ಕಿಯನ್ನೇರಿಸಿದನು. ಓ ಧರ್ಮಪುತ್ರಾ! ಇಷ್ಟರಲ್ಲಿ ಇತ್ತಲಾಗಿ ಶಚಿಯು ನಹುಷನೊಡನೆ ಮಾತಾಡಿ ಬಂದೊಡನೆ, ಗುರುವಾದ ಬೃಹಸ್ಪತಿಯ ಬಳಿಗೆ ಬಂದು "ಆಚಾ

ರ್ಯ! ನಾನು ನಹುಷನಿಗೆ ಹೇಳಿದ್ದ ಕಾಲಾವಧಿಯು ಮುಗಿಯುತ್ತ ಬಂದಿತು. ಇನ್ನು ಸ್ವಲ್ಪಕಾಲವೇ ಉಳಿದಿರುವುದು. ಇಷ್ಟರೊಳಗಾಗಿ ನೀನು ನನ್ನ ಪತಿಯಾದ ಇಂದ್ರನನ್ನು ಹುಡುಕಿಕರೆತರುವ ಪ್ರಯತ್ನ ವನ್ನು ಮಾಡು. ಕಾಲವಿಳಂಬಕ್ಕೆ ಅವಕಾಶವಿಲ್ಲ. ನಿನ್ನ ಭಕ್ತಳಾದ ನನ್ನಲ್ಲಿ ದಯೆಯನ್ನು ತೋರಿಸು" ಎಂದಳು. ಆಗ ಬೃಹಸ್ಪತಿಯು ಅವಳನ್ನು ಕುರಿತು "ದೇವಿ! ಹಾಗೆಯೇ ಆಗಲಿ! ದುರಾತ್ಮನಾದ ಆ ನಹುಷನಿಗಾಗಿ ನೀನು ಭಯಪಡಬೇಡ. ಅವನು ಇನ್ನು ಬಹುಕಾಲದ ವರೆಗೆ ನಿಲ್ಲಲಾರನು. ಅವನ ಅಹಂಕಾರವು ಮಿತಿಮಿರಿತು. ಧರ್ಮ ಜ್ಞಾನವಿಲ್ಲದ ಆತನು ಮಹರ್ಷಿಗಳನ್ನು ತನಗೆ ವಾಹನವನ್ನಾಗಿ ಮಾಡಿ ಕೊಂಡಾಗಲೇ ಮೃತಪ್ರಾಯನೆಂದು ತಿಳಿ. ಇದರಮೇಲೆ ಆ ದುರಾತ್ಮನ ವಿನಾಶಕ್ಕಾಗಿ ನಾನೊಂದು ಇಷ್ಟಿಯನ್ನು ನಡೆಯಿಸುವೆನು. ಇಂದ್ರ ನನ್ನು ಹುಡುಕಿಸುವೆನು. ನೀನು ಹೆದರಬೇಡ. ನಿನಗೆ ಮಂಗಳವಾಗಲಿ" ಎಂದನು. ಒಡನೆಯೇ ಬೃಹಸ್ಪತಿಯು ಅಗ್ನಿಯನ್ನುರಿಸಿ, ಮಂತ್ರವತ್ತಾಗಿ ಹವಿಸ್ಸನ್ನು ಅದರಲ್ಲಿ ಹೋಮಮಾಡಿ "ಓ ವೀತಿಹೋತ್ರಾ! ನೀನು ಇಂದ್ರನನ್ನು ಕಂಡುಹಿಡಿಯಬೇಕು" ಎಂದು ಪ್ರಾರ್ಥಿಸಿದನು.

ಒಡನೆಯೇ ಅಗ್ನಿದೇವನು ಅದ್ಭುತವಾದ ಒಂದು ಸ್ತ್ರೀವೇಷವನ್ನು ತೋರಿಸಿ, ಅಲ್ಲಿಯೇ ಕಣ್ಮರೆಯಾದನು. ಆ ಅಗ್ನಿಯು ಒಡನೆಯೇ ಅಲ್ಲಿಂದ ಹೊರಟು, ಎಲ್ಲಾ ದಿಕ್ಕು ವಿದಿಕ್ಕುಗಳನ್ನೂ, ಎಲ್ಲಾ ಪರ್ವತಾರಣ್ಯಗಳ ನ್ನೂ, ಭೂಮ್ಯಾಕಾಶಗಳನ್ನೂ ಮನೋವೇಗದಿಂದ ಸುತ್ತಿ ನೋಡಿ, ಎವೆಹಾರುವಷ್ಟರಲ್ಲಿಯೇ ಬೃಹಸ್ಪತಿಯ ಬಳಿಗೆ ಹಿಂತಿರುಗಿ ಬಂದು "ಓ ಬೃಹಸ್ಪತೀ! ಆ ಇಂದ್ರನನ್ನು ನಾನು ಎಲ್ಲೆಲ್ಲಿ ಹುಡುಕಿದರೂ ಸಿಕ್ಕ ಲಿಲ್ಲ. ನೀರು ನಿಂತಸ್ಥಳಗಳಲ್ಲಿ ಹೋಗುವುದಕ್ಕೆ ನನಗೆ ಸಾಧ್ಯವಿಲ್ಲದುದ ರಿಂದ ಅದೊಂದು ಮಾತ್ರ ನಾನು ಹುಡುಕದೆ ಉಳಿದಿರುವ ಸ್ಥಳವು. ಓ ಪುರುಷೋತ್ತಮಾ! ನೀರಿರುವ ಸ್ಥಳಗಳಲ್ಲಿ ಹೋಗಲು ನನಗೆ ಸಾಧ್ಯವಿಲ್ಲ. ಅದನ್ನು ಬಿಟ್ಟು ಬೇರೆ ಯಾವ ಕೆಲಸವನ್ನಾದರೂ ಮಾಡಲು ಸಿದ್ಧನಾಗಿರು ವೆನು" ಎಂದನು. ಆಗ ಬೃಹಸ್ಪತಿಯು ಅಗ್ನಿಯನ್ನು ಕುರಿತು "ಎಲೈ

ಮಹಾತೇಜಸ್ವಿಯೇ! ನೀನು ನೀರಿರುವ ಸ್ಥಳಗಳಲ್ಲಿಯೂ ಹುಡುಕಿಬರಬಹುದು" ಎಂದನು. ಅದಕ್ಕಾ ಅಗ್ನಿಯು, ನಾನು ಆ ಕಾರ್ಯಕ್ಕೆ ಎಂದಿಗೂ ಶಕ್ತನಲ್ಲ. ಅದರಿಂದ ನನಗೆ ನಾಶವು ಸಿದ್ಧವು. ಗುರೂ! ನಾನು ನಿನ್ನಲ್ಲಿ ಮರೆಹೊಕ್ಕು ಪ್ರಾರ್ಥಿಸುವೆನು. ನಾನು ಆ ಕಾರ್ಯವನ್ನೊಲ್ಲೆನು. ನಿನಗೆ ಮಂಗಳವಾಗಲಿ. ನೀರಿನಿಂದ ಅಗ್ನಿಯೂ, ಬ್ರಾಹ್ಮಣಜಾತಿಯಿಂದ ಕ್ಷತ್ರಿಯ ಜಾತಿಯೂ, ಕಲ್ಲಿನಿಂದ ಲೋಹವೂ ಉತ್ಪನ್ನವಾಗಿವೆ. ಆದುದರಿಂದ ಈ ಮೇಲಿನ ವಸ್ತುಗಳು ಬೇರೆ ಎಲ್ಲಾ ಕಡೆಯಲ್ಲಿಯೂ ತಮ್ಮ ಶಕ್ತಿಯನ್ನು ತೋರಿಸಬಲ್ಲುದಾದರೂ, ತಮಗೆ ಉತ್ಪತ್ತಿಕಾರಣಗಳಾದ ವಸ್ತುಗಳಲ್ಲಿ ಅವುಗಳ ಶಕ್ತಿಯು ಸಾಗದೆ ಅವು ಅಡಗಿಹೋಗುವುವು" ಎಂದನು.

ಇದು ಹದಿನೈದನೆಯ ಅಧ್ಯಾಯವು.



ಬೃಹಸ್ಪತಿಯ ಮಂತ್ರಪ್ರಭಾವದಿಂದ ಅಗ್ನಿಯು ಜಲದಲ್ಲಿದ್ದ ಇಂದ್ರನನ್ನು ಕಂಡುಹಿಡಿದುದು. ಬೃಹಸ್ಪತಿಯು ಇಂದ್ರನಿದ್ದಲ್ಲಿಗೆ ಬಂದುದು. ಕುಬೇರಾದಿ ದಿಕ್ಪಾಲಕರೂ ಅಲ್ಲಿಗೆ ಬಂದು ಸೇರಿದುದು. ಇಂದ್ರನು ತನಗೆ ಸಹಾಯಮಾಡಿದ ಅಗ್ನಿಗೆ ಸಮಭಾಗವನ್ನು ಕೊಟ್ಟು, ಕುಬೇರಾದಿಗಳನ್ನು ದಿಕ್ಪಾಲಕರನ್ನಾಗಿ ಮಾಡಿದುದು.

ಆಮೇಲೆ ಬೃಹಸ್ಪತಿಯು ಅಗ್ನಿಯನ್ನು ಕುರಿತು "ಓ ಅಗ್ನೀ! ನೀನು ಎಲ್ಲಾ ದೇವತೆಗಳಿಗೆ ಮುಖವೆನಿಸಿರುವೆ. ನೀನೇ ಅವರಿಗೆ ಹವಿಸ್ಸನ್ನು ತೆಗೆದುಕೊಂಡುಹೋಗಿ ಕೊಡತಕ್ಕವನು. ಎಲ್ಲಾ ಭೂತಗಳೊಳಗೆ ನೀನು ಗೂಢವಾಗಿ ಅಡಗಿದ್ದು, ಅವರವರ ಕಾರ್ಯಗಳಿಗೆ ಸಾಕ್ಷೀಭೂತನಾಗಿರುವೆ. ವಿದ್ವಾಂಸರು ನಿನ್ನನ್ನು ಒಬ್ಬನೇ ಎಂಬ ಭಾವದಿಂದಲೂ, (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ) ಮೂರು ಬಗೆಯಿಂದಲೂ ಉಪಾಸಿಸುವರು. ನೀನು ಕೈಬಿಟ್ಟರೆ ಈ ಜಗತ್ತೆಲ್ಲವೂ ಆಕ್ಷಣವೇ ನಾಶ

ಹೊಂದುವುದು. ಬ್ರಾಹ್ಮಣರು ನಿನ್ನನ್ನು ನಮಸ್ಕರಿಸಿ, ತಮ್ಮ ಪತ್ನೀ ಪುತ್ರರೊಡಗೂಡಿ, ತಮ್ಮತಮ್ಮ ಕರ್ಮಗಳಿಂದ ಸಾಧಿಸಲ್ಪಟ್ಟ ಶಾಶ್ವತ ಗತಿಯನ್ನು ಹೊಂದುವರು. ಓ ಅಗ್ನೀ! ಎಲ್ಲಾ ದೇವತೆಗಳಿಗೆ ಹವಿಸ್ಸನ್ನು ಸಾಗಿಸಿಕೊಂಡು ಹೋಗುವವನೂ, ಉತ್ತಮವಾದ ಹವಿಸ್ಸೂ ನೀನೇ! ನಿನ್ನನ್ನೇ ಜನರು ಸತ್ರಗಳಿಂದಲೂ, ಮಹಾಯಜ್ಞಗಳಿಂದಲೂ ಆರಾಧಿಸುವರು. ಓ ಹವ್ಯವಾಹಾ! ಈ ಮೂರು ಲೋಕಗಳನ್ನೂ ನೀನೇ ಸೃಷ್ಟಿಸಿ, ಕಾಲವು ಬಂದಾಗ ಅವುಗಳನ್ನು ನೀನೇ ನಿನ್ನ ಜ್ವಾಲೆಗಳಿಂದ ದಹಿಸುವೆ. ಸಮಸ್ತ ಭುವನಕ್ಕೂ ನೀನೇ ಉತ್ಪತ್ತಿಸ್ಥಾನವು. ನೀನೇ ಅವುಗಳನ್ನು ನೆಲೆಗೊಳಿಸತಕ್ಕವನು. ಓ ಅಗ್ನೀ! ವಿದ್ವಾಂಸರು ಮೇಘಗಳೆಂದೂ, ಮಿಂಚುಗಳೆಂದೂ ನಿನ್ನನ್ನೇ ವ್ಯವಹರಿಸುವರು. ನಿನ್ನಿಂದ ಹೊರಟ ಜ್ವಾಲೆಗಳೇ ಸಮಸ್ತಭೂತಗಳನ್ನೂ ದಹಿಸುವುವು. ಸಮಸ್ತಜಲಗಳೂ ನಿನ್ನಲ್ಲಿಯೇ ನೆಲೆಗೊಂಡಿವೆ. ಈ ಜಗತ್ತೆಲ್ಲವೂ ನಿನ್ನಲ್ಲಿಯೇ ಅಡಗಿದೆ. ಈ ತ್ರೈಲೋಕ್ಯದಲ್ಲಿ ನಿನಗೆ ತಿಳಿಯದಿರುವುದು ಯಾವುದೂ ಇಲ್ಲವು. ಎಲ್ಲರೂ ತಮ್ಮ ಉತ್ಪತ್ತಿಸ್ಥಾನವನ್ನೇ ಸೇರುವರು. ಆದುದರಿಂದ, ನೀನೂ (ನಿನಗೆ ಜನ್ಮಸ್ಥಾನವಾದ) ಜಲದಲ್ಲಿ ನಿರ್ಭಯವಾಗಿ ಪ್ರವೇಶಿಸು. ಬ್ರಾಹ್ಮಮಂತ್ರಗಳಿಂದ ನಾನು ನಿನ್ನನ್ನು ವೃದ್ಧಿಗೊಳಿಸುವೆನು'' ಎಂದನು. ಪೂಜ್ಯನಾದ ಅಗ್ನಿಯು ಬೃಹಸ್ಪತಿಯಿಂದ ಹೀಗೆ ಸ್ತುತಿಸಲ್ಪಟ್ಟವನಾಗಿ, ಸಂತೋಷದಿಂದ ಅವನನ್ನು ಕುರಿತು ''ಓ ಬೃಹಸ್ಪತೀ! ನಾನು ಹೇಗಾದರೂ ಮಾಡಿ ಆ ಇಂದ್ರನನ್ನು ನಿನಗೆ ತೋರಿಸಿಕೊಡುವೆನು. ಇದು ಸತ್ಯವು'' ಎಂದನು.

ಧರ್ಮಪುತ್ರಾ! ಅಗ್ನಿಯು ಹೀಗೆಂದು ಹೇಳಿ, ಒಡನೆಯೇ ಅಲ್ಲಲ್ಲಿರುವ ಸಮುದ್ರಗಳಲ್ಲಿಯೂ, ಅಲ್ಪ ಜಲವುಳ್ಳ ಜಲಾಶಯಗಳಲ್ಲಿಯೂ ಪ್ರವೇಶಿಸಿ ಹುಡುಕುತ್ತ, ಕೊನೆಗೆ ಇಂದ್ರನು ತಲೆಮರೆಸಿಕೊಂಡು ಕುಳಿತಿದ್ದ ಸರೋವರಕ್ಕೂ ಹೋದನು. ಅಲ್ಲಿರುವ ಎಲ್ಲಾ ಕಮಲಗಳನ್ನೂ ಹುಡುಕಿನೋಡುತ್ತಿರುವಾಗ, ಅಲ್ಲಿ ಒಂದಾನೊಂದು ತಾವರೆದಂಟಿನ ರಂಧ್ರದೊಳಗೆ ಅಡಗಿದ್ದ ದೇವೇಂದ್ರನನ್ನು ಕಂಡನು. ಒಡನೆಯೇ ಅಲ್ಲಿಂದ ಹೊ

ರಟ್ಟು, ಬೃಹಸ್ಪತಿಯ ಬಳಿಗೆ ಬಂದು, ತಾವರೆದಂಟಿನ ಸೂತ್ರನಾಳದಲ್ಲಿ ತಮ್ಮ ಪ್ರಭುವು ಅಣುರೂಪದಿಂದ ಅವಿತುಕೊಂಡಿರುವ ಸಂಗತಿಯನ್ನು ತಿಳಿಸಿದನು. ಕೂಡಲೇ ಬೃಹಸ್ಪತಿಯು, ದೇವರ್ಷಿಗಳೊಡನೆಯೂ, ಗಂಧರ್ವ ರೊಡನೆಯೂ ಸೇರಿ ಅಲ್ಲಿಗೆ ಬಂದು, ಇಂದ್ರನು ಹಿಂದೆ ನಡೆಸಿದ ಕಾರ್ಯಗ ಳಿಂದ ಅವನನ್ನು ಸ್ತುತಿಸಲಾರಂಭಿಸಿದನು. "ಓ ಪ್ರಭೂ! ಶಕ್ರಾ! ನೀನು ಪೂರ್ವದಲ್ಲಿ ಅತಿಭಯಂಕರನಾದ ನಮುಚಿಯೆಂಬ ಮಹಾಸುರ ನನ್ನು ಕೊಂದಿರುವೆ. ಧೀರಪರಾಕ್ರಮವುಳ್ಳ ಬಲ ಮತ್ತು ಶಂಬರರೆಂಬವ ರಿಬ್ಬರನ್ನೂ ನೀನು ಸಂಹರಿಸಿದೆ. ನೂರು ಯಾಗಗಳನ್ನು ನಡೆಸಿದ ಓ ದೇವೇಂದ್ರಾ! ಪರಾಕ್ರಮದಿಂದ ಅಭಿವರ್ಧಿಸು. ನಿನ್ನ ಶತ್ರುಗಳೆಲ್ಲರನ್ನೂ ಅಡಗಿಸು. ಶಕ್ರಾ! ಏಳು! ಇಲ್ಲಿ ಬಂದಿರುವ ದೇವರ್ಷಿಗಳೆಲ್ಲರನ್ನೂ ನೋಡು. ಮಹೇಂದ್ರಾ! ಹಿಂದೆ ನೀನು ದಾನವರನ್ನು ಕೊಂದು ಲೋಕ ಗಳನ್ನು ಕಾಪಾಡಿದೆ. ಓ ದೇವರಾಜಾ! ಪ್ರಭೂ! ನೀನು ಮೊದಲು ವಿಷ್ಣುತೇಜಸ್ಸನ್ನೊಳಕೊಂಡ ಸಮುದ್ರದ ನೊರೆಯಿಂದ ವೃತ್ರನನ್ನು ಸಂಹ ರಿಸಿದೆ. ನೀನು ಸಮಸ್ತಭೂತಗಳಿಗೂ ಶರಣ್ಯನು. ನಿನಗೆ ಸಮಾನವಾದ ಭೂತವು ಜಗತ್ತಿನಲ್ಲಿ ಬೇರೊಂದಿಲ್ಲ. ಸಮಸ್ತಭೂತಗಳೂ ನಿನ್ನಿಂದ ಧರಿಸ ಲ್ಪಟ್ಟಿವೆ. ದೇವತೆಗಳಿಗೆ ಮಹತ್ವವನ್ನು ಕೊಡುವವನೂ ನೀನೇ. ಮಹೇಂ ದ್ರಾ! ಸಮಸ್ತಲೋಕಗಳನ್ನೂ ಪಾಲಿಸುವನಾಗು. ನೀನು ನಿನ್ನ ಸಹಜ ವಾದ ಬಲವನ್ನು ಹೊಂದು" ಎಂದರು. ಹೀಗೆ ಸ್ತೋತ್ರಮಾಡಲ್ಪಟ್ಟ ಇಂದ್ರನು ಮೆಲ್ಲಮೆಲ್ಲಗೆ ಆಕಾರದಲ್ಲಿ ಬೆಳೆಯುತ್ತ ಬಂದು, ತನ್ನ ಸಹಜ ವಾದ ರೂಪವನ್ನು ತಾಳಿ, ಮೊದಲಿನಂತೆ ಬಲಾಢ್ಯನೂ ಆದನು. ಆಗ ಆ ದೇವೇಂದ್ರನು ಗುರುವಾದ ಬೃಹಸ್ಪತಿಯನ್ನು ನೋಡಿ, "ಓ ದೇವತೆಗ ಳಿರಾ! ಇನ್ನು ನಿಮ್ಮ ಹಿತಕ್ಕಾಗಿ ಮಾಡಬೇಕಾದ ಕಾರ್ಯವೇನುಳಿದಿದೆ? ತ್ವಷ್ಟೃಪುತ್ರನಾದ ತ್ರಿಶಿರಸ್ಸೆಂಬ ಮಹಾಸುರನು ಹತನಾದನು. ಲೋಕವ ನ್ನೆಲ್ಲ ನಾಶಗೊಳಿಸುತಿದ್ದ ಮಹಾಕಾಯವುಳ್ಳ ವೃತ್ರನೂ ಹತನಾದನು. ಇನ್ನು ನಿಮಗೆ ಆಗಬೇಕಾದುದೇನು?" ಎಂದನು. ಅದಕ್ಕೆ ಬೃಹಸ್ಪತಿ ಯು "ದೇವೇಂದ್ರಾ! ನಹುಷನೆಂಬ ಮಾನವರಾಜನು, ದೇವತೆಗಳ ಮತ್ತು ಋಷಿಗಳ ತೇಜಸ್ಸಿನಿಂದ ಪ್ರಬಲನಾಗಿ, ಈಗ ದೇವರಾಜ್ಯವನ್ನು

ಪಡೆದಿರುವನು. ಅವನು ನಮ್ಮೆಲ್ಲರನ್ನೂ ಬಹಳವಾಗಿ ಬಾಧಿಸುತ್ತಿರುವನು" ಎಂದರು. ಆಗ ದೇವೇಂದ್ರನು ಅವರನ್ನು ಕುರಿತು "ಆತನು ಮಾನವನಾಗಿದ್ದು ದುರ್ಲಭವಾದ ದೇವರಾಜ್ಯವನ್ನು ಪಡೆದುದು ಹೇಗೆ? ಅವನು ಮಾಡಿದ ಅಂತಹ ತಪಸ್ಸಾವುದು? ಅವನ ವೀರ್ಯವೆಂತದು? ಓ ಬೃಹಸ್ಪತೀ! ಅವೆಲ್ಲವನ್ನೂ ನನಗೆ ತಿಳಿಸಬೇಕು. ಅವನಿಗೆ ಇಂದ್ರತ್ವವು ಹೇಗೆ ಬಂದಿತು?" ಎಂದು ಕೇಳಲು, ಬೃಹಸ್ಪತಿಯು "ಓ ದೇವೇಶಾ! ನೀನು ಎಲ್ಲಿಯೋ ಕಣ್ಮರೆಯಾಗಿ ಹೊರಟುಹೋದಮೇಲೆ, ರಾಜ್ಯವು ಅನಾಯಕವಾಗಿ, ಜಗತ್ತೆಲ್ಲವೂ ಕಷ್ಟಕ್ಕೆ ಗುರಿಯಾಯಿತು. ಒಬ್ಬರಿಂದೊಬ್ಬರಿಗೆ ಭಯವುಂಟಾಗಿ, ಪ್ರಾಣಕ್ಕೆ ನೆಮ್ಮದಿಯಿಲ್ಲದೆ, ಲೋಕವೆಲ್ಲವೂ ತತ್ತಳಿಸುತಿತ್ತು. ಆಗ ಅಗ್ನಿ ಮೊದಲಾದ ದೇವತೆಗಳು ಗಂಧರ್ವರೊಡನೆಯೂ, ಸಮಸ್ತ ಋಷಿಗಳೊಡನೆಯೂ ಸೇರಿ ನಹುಷನನ್ನು ಕರೆತಂದು ಅವನಿಗೆ ದೇವರಾಜ್ಯದಲ್ಲಿ ಅಭಿಷೇಕವನ್ನು ಮಾಡಿದರು. ಆ ದೇವತೆಗಳು ಆ ನಹುಷನನ್ನು ಕರೆತಂದ ರೀತಿಯನ್ನು ಹೇಳುವೆನು ಕೇಳು. ನೀನು ಬಿಟ್ಟುಹೋದಮೇಲೆ ಇಂದ್ರಪದವಿಗೆ ಯಾರೂ ಇಲ್ಲದುದನ್ನು ನೋಡಿ ದೇವತೆಗಳು ಭಯಪಟ್ಟು, ತಮಗೆ ಇಂದ್ರನೊಬ್ಬನು ಬೇಕೆಂದು ಉದ್ದೇಶಿಸಿದರು. ಆಗ ದೇವತೆಗಳೂ, ಋಷಿಗಳೂ, ಗಂಧರ್ವಪ್ರಮುಖರೂ ಒಟ್ಟಾಗಿ ಸೇರಿ, ನಹುಷನನ್ನು ಕಂಡು "ನೀನು ನಮಗೆ ರಾಜನಾಗಿ ಲೋಕವನ್ನು ಪಾಲಿಸು" ಎಂದು ಕೇಳಿಕೊಂಡರು. ಆಗ ನಹುಷನು ತನಗೆ ಅಂತಹ ಶಕ್ತಿಯಿಲ್ಲವೆಂದೂ, ದೇವತೆಗಳೆಲ್ಲರೂ ತಮ್ಮ ತಪಸ್ಸಿನಿಂದಲೂ, ತೇಜಸ್ಸಿನಿಂದಲೂ ತನಗೆ ಆ ಶಕ್ತಿಯುಂಟಾಗುವಂತೆ ಮಾಡಿದರೆ, ತಾನು ಆ ಪದವಿಯನ್ನು ಅಂಗೀಕರಿಸುವುದಾಗಿಯೂ ಹೇಳಿದನು. ಅದರಂತೆಯೇ ದೇವತೆಗಳು ತಮ್ಮ ತಪಸ್ಸಿನಿಂದಲೂ, ವೀರ್ಯದಿಂದಲೂ ಅವನನ್ನು ಹೆಚ್ಚಿಸಿದರು. ಅದು ಮೊದಲು ಅವನು ಭಯಂಕರ ವೀರ್ಯವುಳ್ಳವನಾಗಿ ರಾಜನೆನಿಸಿದನು. ಅವನಿಗೆ ಈ ತ್ರೈಲೋಕ್ಯರಾಜ್ಯದ ಅಧಿಕಾರವು ಬಂದಮೇಲೆ, ಅಧಿಕಾರದರ್ಪದಿಂದ ಬುದ್ಧಿಗೆಟ್ಟು, ಈಗ ಮಹರ್ಷಿಗಳನ್ನೇ ತನ್ನ ವಾಹನವನ್ನಾಗಿ ಮಾಡಿಕೊಂಡು ಲೋಕಗಳನ್ನು ಸುತ್ತುತ್ತಿರುವನು. ಓ ದೇವೇಂದ್ರಾ! ಈಗ ನೀನಾದರೂ ಆ ನಹುಷನ ಕಣ್ಣೆದಿರಿಗೆ ನಿಂತು ಅವನನ್ನು ನೋಡಬಾರದು. ಏಕೆಂದರೆ,

ತನ್ನ ಕಣ್ಣಿಗೆ ಬಿದ್ದವರ ತೇಜಸ್ಸನ್ನೆಲ್ಲ ಎಳೆದುಕೊಳ್ಳುವ ಘೋರವಿಷ ವೊಂದು ಅವನ ದೃಷ್ಟಿಯಲ್ಲಿರುವುದು. ಇದಕ್ಕಾಗಿ ದೇವತೆಗಳೂ ಕೂಡ ಭಯಪಟ್ಟು, ಆ ನಹುಷನನ್ನು ಕಣ್ಣೆತ್ತಿ ನೋಡದೆ, ಅವನ ದೃಷ್ಟಿಗೆ ತಾವೂ ಗೋಚರಿಸದೆ ಗುಪ್ತರೂಪದಿಂದ ಸಂಚರಿಸುತ್ತಿರುವರು. ಆದುದರಿಂದ ಈಗ ಅವನನ್ನು ನೀನು ನೋಡಬಾರದು" ಎಂದನು. ಬೃಹಸ್ಪತಿಯು ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಲೋಕಪಾಲನಾದ ಕುಬೇರನೂ, ಸೂರ್ಯ ಪುತ್ರನಾದ ಯಮನೂ, ಸೋಮದೇವನೂ, ವರುಣನೂ ಅಲ್ಲಿಗೆ ಬಂದು ಸೇರಿದರು. ಅವರೆಲ್ಲರೂ ಒಟ್ಟಾಗಿ ಸೇರಿ ಮಹೇಂದ್ರನನ್ನು ಕುರಿತು "ಓ ಪ್ರಭೂ! ಅದೃಷ್ಟವಶದಿಂದ ನೀನು ತ್ವಷ್ಟೃಪುತ್ರನಾದ ತ್ರಿಶಿರಸ್ಸನ್ನೂ, ವೃತ್ರನನ್ನೂ ಸಂಹರಿಸಿದೆ. ನೀನು ಹೀಗೆ ಶತ್ರುಗಳನ್ನು ಕೊಂದು ನಿರಪಾ ಯನಾಗಿ ಕ್ಷೇಮದಿಂದಿರುವುದನ್ನು ನೋಡುವಂತಾದುದು ನಮ್ಮ ಭಾ ಗ್ಯವು" ಎಂದರು. ಆಗ ಮಹೇಂದ್ರನು ಆ ಲೋಕಪಾಲಕರನ್ನು ಸಂತೋ ಷದಿಂದ ಆದರಿಸಿ, ಅವರನ್ನು ಪ್ರೀತಿಯಿಂದ ವಿಚಾರಿಸಿ, ನಹುಷನ ವಿಷಯ ದಲ್ಲಿ ಅವರಿಗಿದ್ದ ಅಭಿಪ್ರಾಯವನ್ನು ತಪ್ಪಿಸುವ ಆಲೋಚನೆಯಿಂದ ಅವ ರನ್ನು ಕುರಿತು "ಎಲೈ ಲೋಕಪಾಲಕರೇ! ಈಗ ನಹುಷನು ದೇವತೆಗಳಿ ಗೆಲ್ಲ ರಾಜನೆನಿಸಿಕೊಂಡು, ಘೋರವಾದ ರೂಪದಿಂದಿರುವನಲ್ಲವೆ? ಅವ ನನ್ನು ನಿಗ್ರಹಿಸುವ ವಿಷಯದಲ್ಲಿ ನೀವೆಲ್ಲರೂ ನನಗೆ ಸಹಾಯವನ್ನು ಮಾ ಡಬೇಕು" ಎಂದನು. ಅದಕ್ಕವರು "ಓ ಪ್ರಭೂ! ಆ ನಹುಷನೇನೋ ಭಯಂಕರಸ್ವರೂಪನು. ದೃಷ್ಟಿಯಲ್ಲಿ ವಿಷವುಳ್ಳವನು. ಆದುದರಿಂದ ಅವ ನಿಗೆ ನಾವು ಬಹಳವಾಗಿ ಭಯಪಡುವೆವು. ನೀನು ಆ ನಹುಷನನ್ನು ಏನಾ ದರೂ ಉಪಾಯದಿಂದ ಜಯಿಸಿದರೆ, ಆಗ ಮುಂದೆ ದೊರೆಯುವ ಶ್ರೇಯ ಸ್ಸಿಗೆ ಮಾತ್ರ ನಾವು ಭಾಗಿಗಳಾಗತಕ್ಕವರು" ಎಂದರು. ಆಗ ಇಂದ್ರನು ಅವರನ್ನು ಕುರಿತು "ಸರಿ! ಹಾಗೆಯೇ ಆಗಲಿ! ಓ ವರುಣಾ! ಜಲಾಧಿ ಪತಿಯಾದ ನೀನೂ, ಈ ಯಮನೂ, ಕುಬೇರನೂ, ಈಗಲೇ ನನ್ನಿಂದ ಅಭಿಷಿಕ್ತರಾಗಿರಿ. ದೇವತೆಗಳೊಡನೆ ನಾವೆಲ್ಲರೂ ಸೇರಿ ಘೋರದೃಷ್ಟಿ ಯುಳ್ಳ ಆ ನಹುಷನನ್ನು ಹೇಗಾದರೂ ನಿಗ್ರಹಿಸುವೆವು" ಎಂದನು. ಆಗ ಅಗ್ನಿಯು ಇಂದ್ರನನ್ನು ಕುರಿತು "ಮಹೇಂದ್ರಾ! ನನಗೇನೂ ಭಾಗವಿಲ್ಲ

ವೇನು? ನನಗೂ ಭಾಗವನ್ನು ಕೊಡು! ನಾನೂ ಈ ಕಾರ್ಯಕ್ಕೆ ಸಹಾಯ ಮಾಡುವೆನು'' ಎಂದನು. ಅದಕ್ಕಾ ಇಂದ್ರನು ''ಓ ಅಗ್ನೀ! ನಿನಗಿಲ್ಲದೆ ಉಂಟೆ? ಅವಶ್ಯವಾಗಿ ಕೊಡಿಸುವೆನು. ದೊಡ್ಡ ಯಾಗಗಳಲ್ಲಿ ನಮ್ಮಿಬ್ಬರಿಗೂ (ಇಂದ್ರಾಗ್ನಿಗಳಿಬ್ಬರಿಗೂ) ಸಮಾನವಾದ ಭಾಗವುಂಟಾಗಲಿ'' ಎಂದನು.

ಓ ಧರ್ಮಪುತ್ರಾ! ಹೀಗೆ ಪೂಜ್ಯನಾದ ದೇವೇಂದ್ರನು ಅವರೆಲ್ಲರೊಡನೆ ಆಲೋಚಿಸಿ, ಕುಬೇರನನ್ನು ಎಲ್ಲಾ ಯಕ್ಷರಿಗೂ, ಧನಗಳಿಗೂ ಅಧಿಪತಿಯನ್ನಾಗಿ ಮಾಡಿದನು. ಯಮನನ್ನು ಪಿತೃಗಳಿಗೂ, ವರುಣನನ್ನು ಜಲಗಳಿಗೂ ಅಧಿಪತಿಯಾಗಿರುವಂತೆ ವರಗಳನ್ನು ಕೊಟ್ಟು ಅವರನ್ನು ಸತ್ಕರಿಸಿದನು.

ಇದು ಹದಿನಾರನೆಯ ಅಧ್ಯಾಯವು.

---

ಲೋಕಪಾಲಕರೊಡನೆ ಇಂದ್ರನು ನಹುಷನನ್ನು ನಿಗ್ರಹಿಸುವ ಉಪಾಯವೇನೆಂದು ಆಲೋಚಿಸುತ್ತಿರುವಾಗ, ಅಗಸ್ತ್ಯ ಮುನಿಯು ಬಂದು, ನಹುಷನು ದೇವರಾಜ್ಯದಿಂದ ಚ್ಯುತನಾದುದನ್ನು ತಿಳಿಸಿದುದು.

ಓ ಧರ್ಮಪುತ್ರಾ! ಹೀಗೆ ಇಂದ್ರನು ಲೋಕಪಾಲಕರೊಡನೆ ಮುಂದೆ ನಹುಷನನ್ನು ಕೊಲ್ಲುವ ಉಪಾಯವನ್ನು ಯೋಚಿಸುತ್ತಿರುವಾಗಲೇ, ಪೂಜ್ಯನಾದ ಅಗಸ್ತ್ಯಮುನಿಯು ಅಲ್ಲಿಗೆ ಬಂದು ದೇವೇಂದ್ರನನ್ನು ಸತ್ಕರಿಸಿ ''ಮಹೇಂದ್ರಾ! ನೀನು ಅದೃಷ್ಟವಶದಿಂದ ಆ ವಿಶ್ವರೂಪನನ್ನೂ, ವೃತ್ರಾಸುರನನ್ನೂ ವಧಿಸಿ ಮೇಲ್ಮೆಯನ್ನು ಪಡೆದೆ ನಮ್ಮೆಲ್ಲರ ಅದೃಷ್ಟವಶದಿಂದ ಈಗ ನಹುಷನೂ ದೇವರಾಜ್ಯದಿಂದ ಚ್ಯುತನಾದನು. ಈಗ ನಾವು ಶತ್ರುರಹಿತನಾದ ನಿನ್ನನ್ನು ಅದೃಷ್ಟವಶದಿಂದ ನೋಡುವಂತಾಯಿತು'' ಎಂದನು. ಆಗ ಇಂದ್ರನು ''ಓ ಮಹರ್ಷೀ! ನಿನಗೆ ಸ್ವಾಗತವು. ನಿನ್ನ ದರ್ಶನದಿಂದ ನಾನು ಪ್ರೀತನಾದೆನು. ನಾನು ಕೊಡತಕ್ಕ ಅರ್ಘ್ಯಪಾದ್ಯಾ

ಜಮುನೀಯಮುಗಳನ್ನೂ, ಗೋವನ್ನೂ, ಪ್ರೀತಿಯಿಂದ ಪರಿಗ್ರಹಿಸಬೇಕು" ಎಂದು ಹೇಳಿ, ಯಥೋಚಿತ ಸತ್ಕಾರಗಳನ್ನು ಮಾಡಿ, ಉಚಿತಾಸನದಲ್ಲಿ ಕುಳ್ಳಿರಿಸಿ, ಸಂತೋಷದಿಂದ ಪ್ರಶ್ನೆಮಾಡಿದನು. "ಓ ಮಹಾತ್ಮಾ! ಆ ನಹುಷನ ವೃತ್ತಾಂತವನ್ನು ಚೆನ್ನಾಗಿ ಕೇಳಲಪೇಕ್ಷಿಸುವೆನು. ಪಾಪಬುದ್ಧಿಯುಳ್ಳ ಆ ನಹುಷನು ಸ್ವರ್ಗರಾಜ್ಯದಿಂದ ಭ್ರಷ್ಟನಾದುದು ಹೇಗೆ" ಎಂದನು. ಅದಕ್ಕಾ ಅಗಸ್ತ್ಯನು, "ಓ ದೇವೇಂದ್ರಾ! ನಿನಗೆ ಪ್ರಿಯವಾದ ಆ ವೃತ್ತಾಂತವನ್ನು ಹೇಳುವೆನು ಕೇಳು. ದುರಾತ್ಮನೂ, ದುರಾಚಾರನೂ, ಬಲದರ್ಪಿತನೂ ಆದ ಆ ನಹುಷನು ಹೇಗೆ ಸ್ವರ್ಗಾಧಿಪತ್ಯದಿಂದ ಚ್ಯುತನಾದನೆಂಬುದನ್ನು ವಿವರವಾಗಿ ತಿಳಿಸುವೆನು. ಮಹಾತ್ಮರಾದ ದೇವರ್ಷಿಗಳೂ, ನಿಷ್ಕಳಂಕಮನಸ್ಸುಳ್ಳ ಬ್ರಹ್ಮರ್ಷಿಗಳೂ ಅವನ ಪಲ್ಲಕ್ಕಿಯನ್ನು ಹೊತ್ತುಕೊಂಡು ಬರುವಾಗ, ಬಹಳ ಶ್ರಮದಿಂದ ಬಳಲಿ ಪಾಪಿಯಾದ ಆ ನಹುಷನನ್ನು ಕುರಿತು ಒಂದು ಪ್ರಶ್ನೆಯನ್ನು ಮಾಡಿದರು. 'ಓ ದೇವರಾಜಾ! ಯಜ್ಞದಲ್ಲಿ ಗೋವುಗಳ ಪ್ರೋಕ್ಷಣಕ್ಕಾಗಿ (ಪ್ರೋಕ್ಷಣವೆಂದರೆ ಯಾಗದಲ್ಲಿ ಪಶುಗಳನ್ನು ಕೊಲ್ಲುವುದು) ಯಾವ ಮಂತ್ರಗಳೂ, ಬ್ರಾಹ್ಮಣಗಳೂ ಹೇಳಲ್ಪಟ್ಟವೆಯೋ ಅವು ನಿನಗೆ ಪ್ರಮಾಣಗಳೇ ಅಲ್ಲವೇ?' ಎಂದು ಕೇಳಿದರು. ಕೇವಲ ತಮೋಗುಣದಿಂದ ಬುದ್ಧಿಗೆಟ್ಟ ನಹುಷನು, "ಅವು ನನಗೆ ಪ್ರಮಾಣಗಳಲ್ಲ" ಎಂದು ಉತ್ತರಕೊಟ್ಟನು. ಆಗ ಋಷಿಗಳು, "ಓ ನಹುಷಾ! ನೀನು ಕೇವಲ ಅಧರ್ಮದಲ್ಲಿಯೇ ಪ್ರವರ್ತಿಸತಕ್ಕವನಾದುದರಿಂದ ಧರ್ಮವೇನೆಂಬುದನ್ನೇ ನೀನು ತಿಳಿಯೆ. ಪುರಾತನ ಮಹರ್ಷಿಗಳೆಲ್ಲರೂ ಇದನ್ನು ಪ್ರಮಾಣವೆಂದು ಹೇಳಿರುವರು" ಎಂದರು. ಓ ದೇವೇಂದ್ರಾ! ಇದೇ ವ್ಯಾಜವಾಗಿ ಪಲ್ಲಕ್ಕಿಯನ್ನು ಹೊರುತ್ತಿದ್ದ ಮಹರ್ಷಿಗಳಿಗೂ, ಪಲ್ಲಕ್ಕಿಯಲ್ಲಿ ಕುಳಿತಿದ್ದ ನಹುಷನಿಗೂ ವಾದಪ್ರತಿವಾದಗಳು ಹೆಚ್ಚಿದುವು. ಈ ಸಂದರ್ಭದಲ್ಲಿ ಕೇವಲ ಅಧರ್ಮಬುದ್ಧಿಯುಳ್ಳ ಆ ನಹುಷನು, ತನ್ನ ಕಾಲನ್ನು ನನ್ನ ತಲೆಗೆ ಸೋಕಿಸಿದನು. ಒಡನೆಯೇ ಅವನ ರಾಜತೇಜಸ್ಸೂ, ಅವನ ಐಶ್ವರ್ಯವೂ ನಷ್ಟವಾಯಿತು. ಆಮೇಲೆ ತಮೋಗುಣದಿಂದ ಆವರಿಸಲ್ಪಟ್ಟು, ಬಹಳ ದೀನದಶೆಯಲ್ಲಿದ್ದ ಅವನನ್ನು ಕುರಿತು ನಾನು "ಎಲೆ ಮೂಢಾತ್ಮಾ! ಎಲಾ ಪಾಪೀ! ನೀನು ಪೂರ್ವಿಕ



೬೪. ನಹುಷನು ಸಪ್ತರ್ಷಿಗಳಮೇಲೆ ತನ್ನ ಪಲ್ಲಕ್ಕಿಯನ್ನು ಹೊರಿಸಿ ಶಚಿಯ ಬಳಿಗೆ ಹೊರಟುದು.

ಇಂದ್ರನು ತಿರುಗಿ ದೇವರಾಜ್ಯಕ್ಕೆ ಬಂದುದು. ಶಲ್ಯನು ದುರ್ಯೋಧನನ ಬಳಿಗೆ ಬಂದುದು.

ಓ ಧರ್ಮಪುತ್ರಾ! ಕೇಳು! ಆಮೇಲೆ ದೇವೇಂದ್ರನು ಗಂಧರ್ವರಿಂದಲೂ, ಅಪ್ಸರಸ್ಸುಗಳಿಂದಲೂ ಸ್ತುತಿಸಲ್ಪಡುತ್ತ, ಒಳ್ಳೇ ಶುಭಲಕ್ಷಣಗಳಿಂದ ಕೂಡಿದ ಐರಾವತವೆಂಬ ಆನೆಯನ್ನೇರಿ ಅಲ್ಲಿಂದ ಹೊರಟನು. ಮಹಾತೇಜಸ್ವಿಯಾದ ಅಗ್ನಿಯೂ, ಬೃಹಸ್ಪತಿಯೂ, ಯಮ, ವರುಣ, ಕುಬೇರರೂ ಅವನನ್ನು ಹಿಂಬಾಲಿಸಿದರು. ಹೀಗೆ ಎಲ್ಲಾ ದೇವತೆಗಳೊಡನೆಯೂ, ಗಂಧರ್ವರೊಡನೆಯೂ, ಅಪ್ಸರಸ್ಸುಗಳೊಡನೆಯೂ ಇಂದ್ರನು ಸ್ವರ್ಗವನ್ನು ಸೇರಿದಮೇಲೆ, ಅಲ್ಲಿ ತನ್ನ ಪತ್ನಿಯಾದ ಶಚಿಯೊಡಗೂಡಿ ಪರಮಸಂತೋಷದಿಂದ ಮೊದಲಿನಂತೆ ರಾಜ್ಯವನ್ನು ಪಾಲಿಸುತ್ತಿದ್ದನು. ಇಷ್ಟರಲ್ಲಿ ಅಂಗಿರಸನು ಇಂದ್ರನ ಮುಂದೆ ಕಾಣಿಸಿಕೊಂಡು, ಅಥರ್ವವೇದಮಂತ್ರಗಳಿಂದ ಇಂದ್ರನನ್ನು ಸ್ತೋತ್ರಮಾಡಿದನು. ಇದರಿಂದ ಇಂದ್ರನು ಸಂತುಷ್ಟನಾಗಿ, ಆ ಮಹರ್ಷಿಯನ್ನು ಕುರಿತು, “ಅಥರ್ವವೇದದಲ್ಲಿ ಅಥರ್ವಾಂಗಿರಸವೆಂಬ ಭಾಗವೊಂದುಂಟಾಗಿ, ಆ ಮಂತ್ರಕ್ಕೆ ನೀನೇ ಋಷಿಯೆಂಬುದಕ್ಕೆ ಇದೇ ನಿದರ್ಶಕವಾಗಲಿ! ನೀನು ಯಜ್ಞದಲ್ಲಿ ಭಾಗವನ್ನು ಪಡೆಯುವೆ” ಎಂದನು. ಹೀಗೆ ಇಂದ್ರನು ಆ ಮಹರ್ಷಿಗೆ ವರವನ್ನು ಕೊಟ್ಟು ಕಳುಹಿಸಿದಮೇಲೆ, ತನ್ನನ್ನು ಹಿಂಬಾಲಿಸಿ ಬಂದ ಎಲ್ಲಾ ದೇವತೆಗಳನ್ನೂ, ತಪೋಧನರಾದ ಋಷಿಗಳನ್ನೂ ಸತ್ಕರಿಸಿ ಕಳುಹಿಸಿ, ಧರ್ಮನಿರತನಾಗಿ ಸಂತೋಷದಿಂದ ಪ್ರಜೆಗಳನ್ನು ಪಾಲಿಸುತ್ತಿದ್ದನು. ಓ ಧರ್ಮಪುತ್ರಾ! ದೇವೇಂದ್ರನೂ ಕೂಡ ತನ್ನ ಪತ್ನಿಯೊಡನೆ ಇಂತಹ ಮಹಾದುಃಖವನ್ನನುಭವಿಸಿದನಲ್ಲವೆ? ಅವನೂ ಶತ್ರುವನ್ನು ನಿಗ್ರಹಿಸುವುದಕ್ಕಾಗಿ ಕಾಲನಿರೀಕ್ಷಣೆಯಿಂದ ನಿನ್ನಂತೆ ಅಜ್ಞಾತವಾಸವನ್ನೂ ನಡೆಸಿದನು. ಆದುದರಿಂದ ಈಗ ನೀನು ನಿನ್ನ ಈಗಿನ ಕಷ್ಟಕ್ಕಾಗಿ ಎದೆಗುಂದಬಾರದು. ನೀನು ಪತ್ನಿಯಾದ ದ್ರೌಪದಿಯೊಡನೆಯೂ, ನಿನ್ನ ತಮ್ಮಂದಿರೊಡನೆಯೂ ಕಾಡಿನಲ್ಲಿದ್ದು ಎಷ್ಟೋ ಕಷ್ಟಗಳನ್ನನುಭವಿಸಿದೆ. ಆದರೇನು? ನೀನೂ ಆ ಇಂದ್ರನಂತೆಯೇ ತಿರುಗಿ ನಿನ್ನ ರಾಜ್ಯವನ್ನು ಪಡೆಯುವುದರಲ್ಲಿ ಸಂದೇ

ಹವಿಲ್ಲ. ಆ ಇಂದ್ರನು ವೃತ್ರನನ್ನು ಕೊಂದು ತನ್ನ ರಾಜ್ಯವನ್ನು ತಿರುಗಿ ಪಡೆದನಲ್ಲವೇ ! ಇದಲ್ಲದೆ ಬ್ರಹ್ಮದ್ವೇಷಿಯೂ, ದುರಾಚಾರನೂ, ಪಾಪಾತ್ಮನೂ ಆದ ನಹುಷನು ಕೂಡ ಅಗಸ್ತ್ಯನ ಶಾಪಕ್ಕೆ ಗುರಿಯಾಗಿ ಅನೇಕ ವರ್ಷಗಳವರೆಗೆ ಅಧೋಗತಿಯನ್ನನುಭವಿಸಿದನು. ಅದರಂತೆಯೇ ದುರ್ಬುದ್ಧಿಯುಳ್ಳ ಕರ್ಣದುರ್ಯೋಧನರೇ ಮೊದಲಾದ ನಿನ್ನ ಶತ್ರುಗಳು ಕೂಡ, ತಮ್ಮ ಅಕೃತ್ಯಕ್ಕೆ ಫಲವಾಗಿ ಶೀಘ್ರದಲ್ಲಿಯೇ ನಾಶವನ್ನು ಹೊಂದುವರು. ಆಮೇಲೆ ನೀನು ಈ ನಿನ್ನ ಸಹೋದರರೊಡನೆಯೂ, ದ್ರೌಪದಿಯೊಡನೆಯೂ ಸಮುದ್ರಾಂತವಾದ ಸಮಸ್ತ ಭೂಮಿಯನ್ನೂ ಅನುಭವಿಸುವೆ. ಓ ಧರ್ಮಪುತ್ರಾ ! ಯುದ್ಧಕ್ಕೆ ಮೊದಲು ಸೈನ್ಯಗಳೆಲ್ಲವೂ, ವ್ಯೂಹವಾಗಿ ನಿಂತಿರುವಾಗ, ಯುದ್ಧದಲ್ಲಿ ಜಯವನ್ನಪೇಕ್ಷಿಸತಕ್ಕ ರಾಜನು ಈಗ ನಾನು ಹೇಳಿದ "ಇಂದ್ರವಿಜಯ"ವೆಂಬ ಈ ಚರಿತ್ರವನ್ನು ಅವಶ್ಯವಾಗಿ ಕೇಳಬೇಕು. ಆ ಉದ್ದೇಶದಿಂದಲೇ ನಾನು ಈಗ ನಿನಗೆ ವೇದಮಂತ್ರದಂತೆ ಪವಿತ್ರವಾದ ಆ ಕಥೆಯನ್ನು ಹೇಳಲಾರಂಭಿಸಿದೆನು. ಮಹಾತ್ಮರಾದವರನ್ನು ಸ್ತೋತ್ರಮಾಡಿದಷ್ಟೂ, ಮೇಲೆಮೇಲೆ ಅಭ್ಯುದಯವುಂಟು. ಓ ಯುಧಿಷ್ಠಿರಾ ! ದುರ್ಯೋಧನನ ದೋಷದಿಂದಲೂ, ಭೀಮಾರ್ಜುನರ ಬಲದಿಂದಲೂ, ಮುಂದಿನ ಯುದ್ಧದಲ್ಲಿ ಮಹಾಬಲವುಳ್ಳ ಅನೇಕಕ್ಷತ್ರಿಯರನ್ನು ನಿರ್ಮೂಲಗೊಳಿಸತಕ್ಕ ಭಯಂಕರವಾದ ಮಹಾಕ್ಷಯವು ಶೀಘ್ರದಲ್ಲಿಯೇ ಸಂಭವಿಸುವುದರಲ್ಲಿದೆ. ಈಗ ನಾನು ಹೇಳಿದ ಇಂದ್ರವಿಜಯವೆಂಬ ಉಪಾಖ್ಯಾನವನ್ನು ಅಕ್ಕರೆಯಿಂದ ಯಾವನು ಪಠಿಸುವನೋ, ಅವನು ಪಾಪವಿಮುಕ್ತನಾಗಿ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಸಂತೋಷದಿಂದಿರುವನು. ಅವನು ಸ್ವರ್ಗವನ್ನು ಜಯಿಸುವನು. ಅವನಿಗೆ ಶತ್ರುಗಳಿಂದ ಭೀತಿಯಿಲ್ಲ. ಅವನು ಸಂತತಿಹೀನನೂ ಆಗಲಾರನು. ಅವನಿಗೆ ಯಾವ ಆಪತ್ತೂ ಬಾರದು. ಅವನು ದೀರ್ಘಾಯುಸ್ಸನ್ನು ಪಡೆಯುವನು. ಅವನಿಗೆ ಎಲ್ಲಾ ಕಡೆಯೂ ಜಯವೇಹೊರತು ಪರಾಜಯವೇ ಉಂಟಾಗಲಾರದು" ಎಂದನು.

ಜನಮೇಜಯರಾಜಾ ! ಕೇಳು ! ಹೀಗೆ ಶಲ್ಯನು ಸಮಾಧಾನವಾಕ್ಯಗಳನ್ನು ಹೇಳಿದಮೇಲೆ, ಧರ್ಮರಾಜನು ಅವನನ್ನು ಯಥೋಚಿತವಾಗಿ

ಪೂಜಿಸಿ, “ಓ ಮದ್ರರಾಜಾ! ನೀನು ಕರ್ಣನಿಗೆ ಸಾರಥಿಯಾಗುವುದೇನೋ ನಿಶ್ಚಯವು. ಅದರಲ್ಲಿ ಸಂದೇಹವಿಲ್ಲ. ಆ ಸಂದರ್ಭದಲ್ಲಿ ನೀನು ಆ ಕರ್ಣನನ್ನು ನಿಂದಿಸುವುದರಿಂದಲೂ, ಅರ್ಜುನನನ್ನು ಸ್ತೋತ್ರಮಾಡುವುದರಿಂದಲೂ, ಅವನಿಗೆ ಆಗಾಗ ತೇಜೋವಧೆಯನ್ನು ಮಾಡುತ್ತಿರಬೇಕು” ಎಂದನು. ಅದಕ್ಕಾ ಶಲ್ಯನು “ಧರ್ಮಪುತ್ರಾ! ನೀನು ಹೇಳಿದಂತೆಯೇ ಮಾಡುವೆನು. ಇನ್ನು ನನ್ನಿಂದ ನಿನಗೆ ಬೇರೆ ಸಹಾಯವೇನಾದರೂ ಆಗುವುದಾದರೆ ಅದನ್ನೂ ನಡೆಸುವೆನು” ಎಂದು ಹೇಳಿ ಧರ್ಮರಾಜನ ಅನುಮತಿಯನ್ನು ಪಡೆದು, ಅಲ್ಲಿಂದ ತನ್ನ ಸಮಸ್ತ ಸೈನ್ಯಗಳೊಡನೆ ಹಿಂತಿರುಗಿ, ದುರ್ಯೋಧನನನ್ನು ನೋಡುವುದಕ್ಕಾಗಿ ಹೊರಟನು.

ಇದು ಹದಿನೆಂಟನೆಯ ಅಧ್ಯಾಯವು



ಸಾತ್ಯಕಿ ಮೊದಲಾದವರು ತಮ್ಮ ತಮ್ಮ ಸೈನ್ಯಗಳೊಡನೆ ಯುಧಿಷ್ಠಿರನಲ್ಲಿಗೆ ಬಂದು ಸೇರಿದುದು. ಭಗದತ್ತನೇ ಮೊದಲಾದ ರಾಜರು ದುರ್ಯೋಧನನ ಸಹಾಯಕ್ಕಾಗಿ ಅವನ ಕಡೆಗೆ ಹೋದುದು.

ಜನಮೇಜಯರಾಜಾ! ಕೇಳು! ಆಮೇಲೆ ಸಾತ್ವತರೊಳಗೆಲ್ಲಾ ಮಹಾರಥನೆನಿಸಿಕೊಂಡ ಸಾತ್ಯಕಿಯು, ದೊಡ್ಡ ಚತುರಂಗಸೈನ್ಯವನ್ನು ಸೇರಿಸಿಕೊಂಡು ಯುಧಿಷ್ಠಿರನಬಳಿಗೆ ಬಂದನು. ಅವನ ಸೈನ್ಯದ ಯೋಧರಲ್ಲಿ ಒಬ್ಬೊಬ್ಬರೂ ಮಹಾವೀರ್ಯವುಳ್ಳವರು. ನಾನಾದೇಶಗಳಿಂದ ಬಂದು ಸೇರಿದವರು. ನಾನಾಬಗೆಯ ಆಯುಧವುಳ್ಳವರು. ವೀರರಾದ ಅಂತಹ ಅನೇಕ ಯೋಧರು ಅವನ ಸೈನ್ಯವನ್ನಲಂಕರಿಸುತ್ತಿದ್ದರು. ಕೊಡಲಿ, ಭಿಂಡಿವಾಳ, ಶೂಲ, ತೋಮರ, ಮುದ್ಗರ, ಪರಿಘ, ಯಷ್ಟಿ, ಪಾಶ, ಕರವಾಲ, (ಕೈಗತ್ತಿ) ಪಟ್ಟಾಕತ್ತಿ, ಬಿಲ್ಲು ಮೊದಲಾದ ಆಯುಧಗಳಿಂದಲೂ, ಎಣ್ಣೆಹಾಕಿ ತಿಕ್ಕಿ ಬೆಳಗಿದ ನಾನಾಬಗೆಯ ಆಯುಧಗಳಿಂದಲೂ, ಆ ಸೈನ್ಯವು ಅತ್ಯಂತ ಶೋಭಾಯಮಾನವಾಗಿದ್ದಿತು. ಮಹಾಮೇಘದಂತೆ ದೊಡ್ಡದಾದ ಆ ಸೈನ್ಯವು, ಸ್ವರ್ಣಾಭರಣಗಳಿಂದ ಅಲಂಕೃತವಾಗಿ, ಮಿಂಚಿನಿಂದ

ಕೂಡಿದ ಮೇಘದಂತೆ ಕಾಣಿಸುತ್ತಿತ್ತು. ಹೀಗೆ ಸಾತ್ಯಕಿಯು ತಂದ ಸೈನ್ಯವು, ಅಪಾರವಾಗಿ ಅಕ್ಷೌಹಿಣೀ ಸಂಖ್ಯೆಯುಳ್ಳದಾಗಿದ್ದರೂ, ಧರ್ಮರಾಜನ ಸೈನ್ಯದೊಡನೆ ಕಲೆತ ಕೂಡಲೇ, ಸಮುದ್ರದಲ್ಲಿ ಪ್ರವೇಶಿಸಿದ ಒಂದು ಸಣ್ಣ ನದಿಯಂತೆ ಇದ್ದ ಸ್ಥಳವೇ ಕಾಣಿಸದಂತಾಯಿತು. ಇದರಂತೆಯೇ ಚೇದಿದೇಶಾಧಿಪತಿಯಾದ ಧೃಷ್ಟಕೇತುವು, ಅಕ್ಷೌಹಿಣೀ ಸೈನ್ಯದೊಡನೆ ಪಾಂಡವರ ಸಹಾಯಕ್ಕಾಗಿ ಬಂದು ಸೇರಿದನು. ಮಗಧದೇಶಾಧಿಪತಿಯೂ, ಜರಾಸಂಧನ ಮಗನೂ, ಮಹಾಬಲಾಢ್ಯನೂ ಆದ ಜಯತ್ಸೇನನೆಂಬವನು, ಅಕ್ಷೌಹಿಣೀ ಸೈನ್ಯದೊಡನೆ ಬಂದು ಸೇರಿದನು. ಪಾಂಡ್ಯರಾಜನು ಸಮುದ್ರತೀರದ ಜಲಪ್ರಾಯದೇಶಗಳಲ್ಲಿ ವಾಸಮಾಡತಕ್ಕ ಅನೇಕಸೈನಿಕರೊಡನೆ ಧರ್ಮರಾಜನ ಬಳಿಗೆ ಬಂದನು. ವಿಚಿತ್ರವೇಷಭೂಷಣಗಳಿಂದ ಕೂಡಿದ ಆ ಮಹಾಸೈನ್ಯವು ನೋಡುವವರಿಗೆ ಮೇಲೆಮೇಲೆ ಆಸೆಹುಟ್ಟಿಸುವಂತಿದ್ದಿತು. ಕೇಕಯದೇಶಕ್ಕೆ ರಾಜರಾದ ಐದು ಮಂದಿ ಸಹೋದರರೂ ಧರ್ಮರಾಜನ ಸಹಾಯಕ್ಕಾಗಿ ಅಕ್ಷೌಹಿಣೀಸೈನ್ಯದೊಡನೆ ಬಂದು ಸೇರಿದರು. ನಾನಾದೇಶಗಳಿಂದ ಬಂದು ಸೇರಿದ ಶೂರಪುರುಷರುಗಳಿಂದಲೂ, ಮಹಾರಥರಾದ ತನ್ನ ಪುತ್ರರಿಂದಲೂ ಶೋಭಿತವಾದ ದ್ರುಪದನ ಸೈನ್ಯವೂ ಕೂಡ ಪಾಂಡವರ ಸಹಾಯಕ್ಕಾಗಿ ಸಿದ್ಧವಾಯಿತು. ಅನೇಕ ಸೈನ್ಯಗಳಿಗಧಿಪತಿಯೆನಿಸಿಕೊಂಡು ಮತ್ಸ್ಯದೇಶದ ಅರಸನಾದ ವಿರಾಟನು, ಪರ್ವತವಾಸಿಗಳಾದ ಅನೇಕರಾಜರೊಡನೆ ಪಾಂಡವರ ಸಹಾಯಕ್ಕೆ ಸಿದ್ಧನಾದನು. ಹೀಗೆ ಮಹಾತ್ಮರಾದ ಪಾಂಡವರ ಸಹಾಯಕ್ಕಾಗಿ ಅಲ್ಲಲ್ಲಿಂದ ಬಂದು ಸೇರಿದ ಸೈನ್ಯಗಳ ಸಂಖ್ಯೆಯು ಏಳು ಅಕ್ಷೌಹಿಣಿಗಳಷ್ಟು ಆಯಿತು. ಈ ಸೈನಿಕರೆಲ್ಲರೂ ತಮ್ಮ ತಮ್ಮ ಧ್ವಜದ ಗುರುತುಗಳನ್ನೇರಿಸಿಕೊಂಡು, ಯುದ್ಧೋತ್ಸಾಹದಿಂದ ಪಾಂಡವರಿಗೆ ಸಂತೋಷವನ್ನುಂಟುಮಾಡುತ್ತಿದ್ದರು.

ಓ ಜನಮೇಜಯರಾಜಾ! ಇದರಂತೆಯೇ ಅತ್ತಲಾಗಿ ದುರ್ಯೋಧನನ ಕಡೆಗೂ ಬೇರೆಬೇರೆ ದೇಶಗಳಿಂದ ಅನೇಕರಾಜರು ತಮ್ಮ ಸೈನ್ಯಗಳೊಡನೆ ಬಂದು ಸೇರಿದರು. ಭಗದತ್ತನೆಂಬ ರಾಜನು ಒಂದಕ್ಷೌಹಿಣೀ ಸೈನ್ಯವನ್ನು ದುರ್ಯೋಧನನಿಗೆ ಕಳುಹಿಸಿಕೊಟ್ಟನು. ಸುವರ್ಣವರ್ಣವುಳ್ಳ

ಚೀನ, ಕಿರಾತದೇಶದ ವೀರರಿಂದ ನಿಬಿಡವಾದ ಆ ಸೈನ್ಯವು ಕರ್ಣಿಕಾರ ವನದಂತೆ ಶೋಭಿಸುತ್ತಿತ್ತು. ಹಾಗೆಯೇ ಶೂರರಾದ ಭೂರಿಶ್ರವಸ್ಸೂ, ಶಲ್ಯನೂ, ಬೇರೆಬೇರೆಯಾಗಿ ಒಂದೊಂದು ಅಕ್ಷೌಹಿಣೀ ಸೈನ್ಯದೊಡನೆ ದುರ್ಯೋಧನನಬಳಿಗೆ ಬಂದು ಸೇರಿದರು. ಹೃದೀಕಪುತ್ರನಾದ ಕೃತ ವರ್ಮನು, ಭೋಜರು, ಅಂಧಕರು, ಕುಕುರದೇಶಗಳ ಯೋಧರೊಡನೆ, ಒಂದು ಅಕ್ಷೌಹಿಣೀಸೈನ್ಯವನ್ನು ತೆಗೆದುಕೊಂಡು ದುರ್ಯೋಧನನ ಕಡೆಗೆ ಬಂದನು. ಕಂಠದಿಂದ ಪಾದದವರೆಗೆ ಇಳೀಬಿದ್ದ ವನಮಾಲೆಗಳಿಂದಲಂಕೃ ತರಾಗಿ, ಪುರುಷರಲ್ಲಿ ಹುಲಿಗಳಂತಿರುವ ಅನೇಕಯೋಧರಿಂದ ಕೂಡಿದ ಆ ಸೈನ್ಯವು, ಮದಗಜಗಳಿಂದ ತುಂಬಿದ ಮಹಾರಣ್ಯದಂತೆ ಕಾಣಿಸು ತ್ತಿತ್ತು. ಸಿಂಧು, ಸೌವ್ವೀರದೇಶವಾಸಿಗಳಾದ ಜಯದ್ರಥನೇ ಮೊದಲಾದ ರಾಜರು, ಭೂಮಿಯನ್ನು ನಡುಗಿಸುವಂತೆ ದೊಡ್ಡ ಸೈನ್ಯದೊಡನೆ ಬಂದು ಸೇರಿದರು. ಅಕ್ಷೌಹಿಣೀ ಸಂಖ್ಯೆಯುಳ್ಳ ಪ್ರಬಲವಾದ ಆ ಸೈನ್ಯವು ಬಿರು ಗಾಳಿಯಿಂದ ತೂರಿಸಲ್ಪಟ್ಟ ಮಹಾಮೇಘದಂತೆ ಪ್ರಕಾಶಿಸುತ್ತಿತ್ತು. ಕಾಂ ಭೋಜದೇಶಾಧಿಪತಿಯಾದ ಸುದಕ್ಷಿಣನೆಂಬವನು, ಶಕ ಯವನರೆಂಬ ಬೇರೆಬೇರೆ ಸೇನಾಸಮೂಹಗಳೊಡನೆ, ಒಂದು ಅಕ್ಷೌಹಿಣಿಯಷ್ಟು ಸೈನ್ಯ ವನ್ನು ಸೇರಿಸಿಕೊಂಡು ಕೌರವನ ಬಳಿಗೆ ಬಂದನು. ಇವನ ಸೇನಾಸಮೂ ಹವು ಮಿಡಿತೆಗಳ ಕೂಟದಂತೆ ಅಪಾರವಾಗಿ ಕಾಣಿಸುತ್ತ, ದುರ್ಯೋಧನನ ಸೈನ್ಯದೊಡನೆ ಸೇರಿತು. ಹಾಗೆಯೇ ಮಾಹಿಷ್ಮತೀ ನಗರವಾಸಿಯಾದ ನೀಲ ನೆಂಬ ರಾಜನು ದಕ್ಷಿಣಾಪಥವಾಸಿಗಳೂ, ಕಪ್ಪಾದ ಆಯುಧವುಳ್ಳವರೂ ಮಹಾಪರಾಕ್ರಮಿಗಳೂ ಆದ ಅನೇಕ ವೀರಭಟರೊಡನೆ ದುರ್ಯೋಧನನ ಕಡೆಗೆ ಬಂದು ಸೇರಿದರು. ಅವಂತೀದೇಶದ ರಾಜರಿಬ್ಬರು, ಬೇರೆಬೇರೆ ಒಂದೊಂದು ಅಕ್ಷೌಹಿಣೀ ಸೈನ್ಯವನ್ನು ಸೇರಿಸಿಕೊಂಡು, ದುರ್ಯೋಧನನ ಕಡೆಗೆ ಬಂದರು. ಇನ್ನೂ ಅಲ್ಲಲ್ಲಿಂದ ಮಹಾಬಲವುಳ್ಳ ಬೇರೆ ಕೆಲವು ರಾಜರು, ಮೂರು ಅಕ್ಷೌಹಿಣೀಸೈನ್ಯಗಳೊಡನೆ ಬಂದು ಸೇರಿದರು. ಹೀಗೆ ಒಟ್ಟಿನಲ್ಲಿ ಹನ್ನೊಂಗು ಅಕ್ಷೌಹಿಣೀ ಸೈನ್ಯಗಳು ದುರ್ಯೋಧನನ ಕಡೆಗೆ ಬಂದು ಸೇರಿದುವು. ಅವರೆಲ್ಲರೂ ನಾನಾತರದ ಧ್ವಜಗಳಿಂದ ಶೋಭಿತ ರಾಗಿ ಪಾಂಡವರೊಡನೆ ಯುದ್ಧಮಾಡಬೇಕೆಂಬ ಮಹೋತ್ಸಾಹದಿಂದಿದ್ದ

ರು. ಆಗ ಹಸ್ತಿನಾವತಿಯಲ್ಲಿ ಎಳ್ಳಷ್ಟಾದರೂ ಅವಕಾಶವಿಲ್ಲದಂತಾಯಿತು. ಮುಖ್ಯವಾಗಿ ಆಯಾ ಸೇನೆಗಳನ್ನು ನಡೆಸುವ ಪ್ರಧಾನಸೇನಾಧಿಪತಿಗಳಿಗಾಗಲಿ, ರಾಜರಿಗಾಗಲಿ ತಂಗುವುದಕ್ಕೆಕೂಡ ಸ್ಥಳವಿಲ್ಲದಂತಾಯಿತು. ಆದುದರಿಂದ ಈ ಸೈನ್ಯಗಳ ವಸತಿಗಾಗಿ ಮೊತ್ತಕ್ಕೆ ಪಂಚನದ, (ಪಂಜಾಬು) ಕುರುಜಾಂಗಲ ಪ್ರದೇಶಗಳೂ, ರೋಹಿತಕಲವೆಂಬ ಅರಣ್ಯವೂ, ಕೇವಲ ಮರುಭೂಮಿಯೆನಿಸಿಕೊಂಡಿದ್ದ ಸ್ಥಳವೂ, ಅಹಿಛತ್ರ, ಕಾಲಕೂಟ, ಗಂಗಾಕೂಲ, ವಾರಣ, ಸಾವಧಾನ, ಯಮುನಾತೀರದಲ್ಲಿದ್ದ ಯಾಮುನ ಪರ್ವತ ಇವೆಲ್ಲವೂ ಆ ದುರ್ಯೋಧನನ ಸೇನಾನಿವೇಶವಾಗಿತ್ತು. ಧನಧಾನ್ಯಸಮೃದ್ಧವಾಗಿ ಬಹಳ ವಿಶಾಲವಾದ ಈ ಸಮಸ್ತದೇಶವೂ ಕೌರವ ಸೈನ್ಯದಿಂದ ದಟ್ಟವಾಗಿ ತುಂಬಿಹೋಯಿತು.

ಓ ಜನಮೇಜಯರಾಜಾ! ಇಷ್ಟೊಂದು ಸೈನ್ಯವೂ ಹಸ್ತಿನಾವತಿಗೆ ಬಂದು ಸೇರಿದ ಸಮಯಕ್ಕೆ ಸರಿಯಾಗಿ, ದ್ರುಪದನಿಂದ ಕೌರವರ ಬಳಿಗೆ ಕಳುಹಿಸಲ್ಪಟ್ಟ ಪುರೋಹಿತನೂ ಅಲ್ಲಿಗೆ ಬಂದು ಸೇರಿ, ಈ ಅಪಾರವಾದ ಸೈನ್ಯವನ್ನು ಕಂಡನು.

ಇದು ಹತ್ತೊಂಬತ್ತನೆಯ ಅಧ್ಯಾಯವು.

**ಇಲ್ಲಿಗೆ ಸೇನೋದ್ಯೋಗಪರ್ವವು ಮುಗಿದುದು.**

---

# ಸಂಜಯಯಾನಪರ್ವವು.

---

ದ್ರುಪದಪುರೋಹಿತನು ಹಸ್ತಿನಾವತಿಗೆ ಬಂದು, ರಾಜಸಭಾಮಧ್ಯದಲ್ಲಿ ದ್ರುಪದನು ಹೇಳಿಕಳುಹಿಸಿದ ಮಾತನ್ನು ತಿಳಿಸಿದುದು.

ಓ ಜನಮೇಜಯರಾಜಾ! ದ್ರುಪದಪುರೋಹಿತನು ಹಸ್ತಿನಾವತಿಗೆ ಹೊರಟುಬಂದಮೇಲೆ, ಅಲ್ಲಿ* ಧೃತರಾಷ್ಟ್ರನೂ, ಭೀಷ್ಮನೂ, ವಿದುರನೂ

ಅವನನ್ನು ಬಹಳ ಆದರದಿಂದ ಸತ್ಕರಿಸಿ, ಪಾಂಡವರ ಕುಶಲವನ್ನು ಕೇಳಿದರು. ಅವನು ಅವರಿಗೆ ಪಾಂಡವರ ಕ್ಷೇಮಲಾಭಗಳನ್ನು ತಿಳಿಸಿ, ಹಸ್ತಿನಾವತಿಯಲ್ಲಿರುವವರೆಲ್ಲರ ಆರೋಗ್ಯವನ್ನು ವಿಚಾರಿಸಿದನು. ಆ ಮೇಲೆ ರಾಜಸಭೆಗೆ ಬಂದು, ಅಲ್ಲಿ ಕೌರವಸೈನ್ಯಕ್ಕೆ ಪ್ರಮುಖರಾದ, ವೀರರೆಲ್ಲರೂ ನೆರೆದಿದ್ದಾಗ, "ಎಲೈ ವೀರರೇ! ಪೂರ್ವಕಾಲದಿಂದ ನಡೆದು ಬಂದ ರಾಜಧರ್ಮವೆಂತದೆಂಬುದು ನಿಮಗೆಲ್ಲರಿಗೂ ಚೆನ್ನಾಗಿ ತಿಳಿದುದೇ. ಧೃತರಾಷ್ಟ್ರನೂ, ಪಾಂಡುವೂ ಒಬ್ಬ ತಂದೆಯ ಮಕ್ಕಳೆಂಬುದು ಲೋಕ ವಿದಿತವಾಗಿದೆ. ಅವರಿಬ್ಬರಿಗೂ ಅವರ ಪಿತ್ರಾರ್ಜಿತವಾದ ಧನದಲ್ಲಿ ಸಮಾನವಾದ ಭಾಗವುಂಟೆಂಬುದರಲ್ಲಿ ಯಾರೂ ಸಂದೇಹಪಡುವಹಾಗಿಲ್ಲ. ಹೀಗಿರುವಾಗಲೂ, ಈಗ ಧೃತರಾಷ್ಟ್ರನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಮಾತ್ರವೇ; ಅವರ ಕುಲಾಗತವಾದ ಪೈತೃತಧನವೆಲ್ಲವನ್ನೂ ಕೈಸೇರಿಸಿಕೊಂಡಿರುವರು. ಪಾಂಡುವಿನ ಮಕ್ಕಳಿಗೆ ಅವರ ಪಿತೃಧನದಲ್ಲಿ ಸ್ವಲ್ಪ ಮಾತ್ರವಾದರೂ ದೊರೆಯದಿರಲು ಕಾರಣವೇನು? ಹಿಂದೆ ಪಾಂಡವರು ಏತಕ್ಕಾಗಿ ವನಕ್ಕೆ ಹೋದರೋ, ಧೃತರಾಷ್ಟ್ರನ ಸ್ವಾಧೀನದಲ್ಲಿದ್ದ ಪಿತೃಧನವು ಅವರಿಗೆ ಹೇಗೆ ಲಭಿಸದಂತಾಯಿತೋ ಆ ಅಂಶವೆಲ್ಲವೂ ನಿಮಗೂ ತಿಳಿದುದೇ! ಇದಲ್ಲದೆ, ಆ ಪಾಂಡವರನ್ನು ಕೊಲ್ಲುವುದಕ್ಕಾಗಿ ಪ್ರಾಣಾಂತಕರಗಳಾದ ಎಷ್ಟೋ ಉಪಾಯಗಳು ನಡೆದರೂ, ಅವರಿಗೆ ಇನ್ನೂ ಆಯುಶ್ಶೇಷವಿದ್ದುದರಿಂದ, ಅವರನ್ನು ಕೊಲ್ಲುವುದಕ್ಕೆ ಅವರ ವೈರಿಗಳಿಗೆ ಸಾಧ್ಯವಾಗಲಿಲ್ಲ. ಮಹಾತ್ಮರಾದ ಆ ಪಾಂಡವರಾದರೋ, ತಮ್ಮ ಸ್ವಶಕ್ತಿಯಿಂದ ರಾಜ್ಯವನ್ನು ಸಂಪಾದಿಸಿ, ಅದನ್ನು ಎಷ್ಟೋ ಅಭಿವೃದ್ಧಿಗೊಳಿಸಿದರು. ಆದರೆ ಶಕುನಿಯೊಡನೆ ಸೇರಿ, ಅಲ್ಪಬುದ್ಧಿಯುಳ್ಳ ಧೃತರಾಷ್ಟ್ರಪುತ್ರರು ಮೋಸದಿಂದ ಆ ರಾಜ್ಯವನ್ನೂ ಕಿತ್ತುಕೊಂಡರು. ಅಂತಹ ಅಕಾರ್ಯವು ಕೂಡ ಧೃತರಾಷ್ಟ್ರನಿಂದ ಯೋಗ್ಯವಾದ ಕಾರ್ಯದಂತೆಯೇ ಅನುಮತಿಸಲ್ಪಟ್ಟಿತು. ಪಾಂಡವರು ರಾಜ್ಯವನ್ನು ಕಳೆದುಕೊಂಡುದಲ್ಲದೆ, ಹದಿಮೂರು ವರ್ಷಗಳ ವರೆಗೆ ವನವಾಸಕ್ಕಾಗಿ ಕಳುಹಿಸಲ್ಪಟ್ಟರು. ಸಭೆಯಲ್ಲಿ ಅವಮಾನಕ್ಕೊಳಗಾಗಿ ಬಹಳ ಸಂಕಟಪಡಿಸಲ್ಪಟ್ಟ ಆ ವೀರರು, ಪತ್ನೀಸಮೇತರಾಗಿ ಅರಣ್ಯದಲ್ಲಿ ಘೋರವಾದ ಕಷ್ಟಗಳನ್ನೆಲ್ಲ ಅನು

ಭವಿಸಿದರು. ಆಮೇಲೆ ಇವರು, ವಿರಾಟನಗರದಲ್ಲಿ ಬೇರೊಂದು ಜನ್ಮ ವನ್ನೇ ಕಳೆದಂತೆ ವೇಷಧಾರಿಗಳಾಗಿ ತಲೆಮರೆಸಿಕೊಂಡಿದ್ದರು. ಮಹಾತ್ಮ ರಾದರೂ ಇವರು ಪಾಪಮಾಡಿದವರು ಹೇಗೋಹಾಗೆ ಪಡಬಾರದ ಕಷ್ಟ ಗಳನ್ನೆಲ್ಲ ಪಟ್ಟರು. ಇಷ್ಟು ಕಷ್ಟಕ್ಕೊಳಗಾದರೂ ಕೌರವರು ತಮಗೆ ಹಿಂದೆ ಮಾಡಿದ ಅಪರಾಧಗಳನ್ನೆಲ್ಲ ಮರೆತು, ಅದೊಂದನ್ನೂ ಮನಸ್ಸಿಗೆ ತಂದುಕೊಳ್ಳದೆ, ಈಗಲೂ ಸಾಮೋಪಾಯದಿಂದಲೇ ಕುರುಗಳೊಡನೆ ಸಂಧಿ ಯನ್ನು ಮಾಡಿಕೊಳ್ಳಲು ಅಪೇಕ್ಷಿಸುವರು. ಎಲೈ ಸಭಾಸದರೇ! ಈ ಪೂರ್ವೋತ್ತರಗಳನ್ನೆಲ್ಲ ನೀವು ಚೆನ್ನಾಗಿ ಯೋಚಿಸಿ, ಅತ್ತಲಾಗಿ ಪಾಂಡ ವರ ಪ್ರವರ್ತನೆಯನ್ನೂ, ಇತ್ತಲಾಗಿ ದುರ್ಯೋಧನನ ನಡತೆಯನ್ನೂ ಪರಿಶೀಲಿಸಿ, ಮಿತ್ರರಾದ ನೀವೆಲ್ಲರೂ ಇವನಿಗೆ ತಕ್ಕ ಬುದ್ಧಿವಾದಗಳನ್ನು ಹೇಳಿ ಸಮಾಧಾನಕ್ಕೆ ತರಬೇಕು. ಆ ಪಾಂಡವರು ಕೌರವರೊಡನೆ ಯು ದ್ಧಕ್ಕಾಗಿ ಎಂದಿಗೂ ಆಸೆಪಡುವವರಲ್ಲ. ಈ ಯುದ್ಧದಿಂದ ಮುಂದೆ ಲೋ ಕಕ್ಕೆ ಹಾನಿಯೆಂಬುದನ್ನು ತಿಳಿದು, ಆ ಪಾಂಡವರು ಯುದ್ಧಕ್ಕೆ ಅವಕಾಶ ಕೊಡದೆ, ಮೃದುಮಾರ್ಗದಿಂದಲೇ ತಮ್ಮ ರಾಜ್ಯವನ್ನು ಪಡೆಯಬೇಕೆಂದು ಅಪೇಕ್ಷಿಸುವರು. ದುರ್ಯೋಧನನಿಗೆ ತಾನು ಯುದ್ಧಮಾಡಿಯೇ ತೀರ ಬೇಕೆಂಬ ಉತ್ಸಾಹಕ್ಕೆ ಕಾರಣಗಳೇನಾದರೂ ಇದ್ದರೂ ಇರಬಹುದು. ತನ್ನಲ್ಲಿರುವ ಸೇನಾಬಲವು ಹೆಚ್ಚೆಂದೂ, ತಾನು ಪಾಂಡವರಿಗಿಂತಲೂ ಪ್ರ ಬಲನೆಂದೂ ಅವನು ತಿಳಿದುಕೊಂಡಿದ್ದರೆ, ಆ ತಿಳಿವಳಿಕೆಯು ತಪ್ಪೆಂದು ನೀವು ನಿರೂಪಿಸಬೇಕು. ವಾಸ್ತವಾಂಶದಲ್ಲಿ ಆ ಪಾಂಡವರೇ ಹೆಚ್ಚು ಬಲ ಶಾಲಿಗಳೇ ಹೊರತು ಇವರಿಗಿಂತಲೂ ಕಡಿಮೆಯಲ್ಲ. ಧರ್ಮಪುತ್ರನಿಗೆ ಸಹಾಯಕ್ಕಾಗಿ ಏಳಕ್ಷೌಹಿಣೀ ಸೈನ್ಯಗಳು ಸಿದ್ಧವಾಗಿರುವುವು. ಅವೆ ಲ್ಲವೂ ಕೌರವರೊಡನೆ ಯುದ್ಧಮಾಡಬೇಕೆಂಬ ಮಹೋತ್ಸಾಹದಿಂದ ಯು ಧಿಷ್ಠಿರನ ಆಜ್ಞೆಯನ್ನು ಆತುರದಿಂದ ನಿರೀಕ್ಷಿಸುತ್ತಿರುವುವು. ಆ ಸೈನ್ಯ ಗಳು ಲೆಕ್ಕಕ್ಕೆ ಏಳಕ್ಷೌಹಿಣಿಗಳೇ ಆಗಿದ್ದರೂ, ಅವರ ಕಡೆಯಲ್ಲಿರುವ ರುವ ಸಾತ್ಯಕಿ, ಭೀಮಸೇನ, ನಕುಲ, ಸಹದೇವರೇ ಮುಂತಾದ ಮಹಾ ವೀರರೊಬ್ಬೊಬ್ಬರೂ ಒಂದೊಂದು ಸಾವಿರ ಅಕ್ಷೌಹಿಣೀಸೈನ್ಯಕ್ಕೆ ಸಮಾ ನರೆನಿಸಿರುವರು. ಓ ಕೌರವರೇ! ನಿಮ್ಮ ಕಡೆಗೆ ಹನ್ನೊಂದು ಅಕ್ಷೌ

ಹಿಣೀ ಸೈನ್ಯಗಳು ಸೇರಿರುವುದು ನಿಜವೇ! ಆದರೇನು? ಇಲ್ಲಿ ಹನ್ನೊಂದು ಅಕ್ಷೌಹಿಣೀ ಸೈನ್ಯಗಳಿದ್ದರೂ, ಅತ್ತಲಾಗಿ ಮಹಾಬಾಹುವಾದ ಧನಂಜಯನೊಬ್ಬನೇ ಸಾಕಾಗಿರುವನು. ಅವನು ಅಲ್ಲಿ ಏಕಾಕಿಯಾಗಿ ಇದಿರಿಸಿ ನಿಂತರೂ, ಬಹುರೂಪದಿಂದ ಎಲ್ಲರನ್ನೂ ನಿಗ್ರಹಿಸಬಲ್ಲನು. ಹೀಗೆ ಅರ್ಜುನನು ನಿಮ್ಮ ಸಮಸ್ತಸೇನೆಗಳಿಗಿಂತಲೂ ಒಂದು ಕೈಮೇಲೆನಿಸಿರುವನು. ಮಹಾಬಾಹುವೂ, ಮಹಾತೇಜಸ್ವಿಯೂ ಆದ ಶ್ರೀಕೃಷ್ಣನೇನು ಸಾಮಾನ್ಯನೇ! ಎಲೈ ಸಭಾಸದರೇ! ಪಾಂಡವರ ಕಡೆಯ ಸೇನೆಗಳ ಆಧಿಕ್ಯವನ್ನೂ, ಅರ್ಜುನನ ಪರಾಕ್ರಮವನ್ನೂ, ಶ್ರೀಕೃಷ್ಣನ ಬುದ್ಧಿಚಾತುರ್ಯವನ್ನೂ ತಿಳಿದು, ಯಾವನು ತಾನೇ ಅವರೊಡನೆ ಯುದ್ಧಕ್ಕೆ ಮುಂದಾಗುವನು? ಆದುದರಿಂದ ನೀವೆಲ್ಲರೂ ಧರ್ಮವನ್ನೂ, ಕಾಲವನ್ನೂ ಅನುಸರಿಸಿ, ಆ ಪಾಂಡವರಿಗೆ ಸಲ್ಲಬೇಕಾದುದನ್ನು ಸಲ್ಲಿಸುವಹಾಗೆ ಮಾಡಿರಿ. ಈ ಒಳ್ಳೆಯ ಸಮಯವನ್ನು ಅನ್ಯಾಯವಾಗಿ ಕೆಡಿಸಿಕೊಳ್ಳಬೇಡಿರಿ" ಎಂದನು.

ಇದು ಇಪ್ಪತ್ತನೆಯ ಅಧ್ಯಾಯವು.

ಭೀಷ್ಮನು ಪುರೋಹಿತನ ಮಾತನ್ನು ಅನುಮೋದಿಸಿದುದು.
ಕರ್ಣನು ಭೀಷ್ಮನನ್ನಾಕ್ಷೇಪಿಸಿ, ಪಾಂಡವರ ಪ್ರತಿಜ್ಞೆ
ಯಂತೆ ಅವರು ತಿರುಗಿ ವನವಾಸಕ್ಕೆ ಹೋಗಲೇ
ಬೇಕೆಂದುದು. ಧೃತರಾಷ್ಟ್ರನು ಪಾಂಡವರ ಬಳಿಗೆ
ಸಂಜಯನನ್ನು ಕಳುಹಿಸುವುದಾಗಿ ಪುರೋ
ಹಿತನನ್ನು ಸಮಾಧಾನಪಡಿಸಿ
ಕಳುಹಿಸಿದುದು.

ಪುರೋಹಿತನು ಹೇಳಿದ ಈ ಮಾತುಗಳನ್ನು ಕೇಳಿ, ಆ ಸಭೆಯಲ್ಲಿ ಜ್ಞಾನವೃದ್ಧನೂ, ಮಹಾತೇಜಸ್ವಿಯೂ ಆದ ಭೀಷ್ಮನು ಅವನನ್ನು ಗೌರವಿಸಿ, ಕಾಲೋಚಿತವಾದ ತನ್ನ ಅಭಿಪ್ರಾಯವನ್ನು ಹೇಳತೊಡಗಿದನು. "ಓ ಬ್ರಾಹ್ಮಣೋತ್ತಮಾ! ನೀನು ಹೇಳಿದುದೆಲ್ಲ ಸತ್ಯವು. ದೈವಾಧೀನದಿಂದ ಆ ಪಾಂಡವರು ಶ್ರೀಕೃಷ್ಣನೊಡನೆ ಕುಶಲದಿಂದಿರುವರು. ದೈವಾನು

ಕೂಲ್ಯದಿಂದ ಅವರಿಗೆ ಅಲ್ಲಲ್ಲಿ ಸಹಾಯಗಳೊದಗಿ, ಅವರು ತಮ್ಮ ಧರ್ಮ ದಲ್ಲಿ ನೆಲೆಗೊಳ್ಳುವಂತಾಯಿತು. ಅವರಿಗೆ ಯುದ್ಧದಲ್ಲಿ ಮನಸ್ಸು ಹುಟ್ಟದೆ ಕೌರವರೊಡನೆ ಸಮಾಧಾನಮಾಡಿಕೊಳ್ಳಬೇಕೆಂಬ ಬುದ್ಧಿಯು ಹುಟ್ಟಿರು ವುದೂ ನಮ್ಮೆಲ್ಲರ ಅದೃಷ್ಟವೇ! ನೀನು ಇದುವರೆಗೆ ಹೇಳಿದುದೆಲ್ಲ ವಾಸ್ತವ ವೆಂಬುದರಲ್ಲಿ ಸಂದೇಹವಿಲ್ಲ. ಇಲ್ಲಿ ನೀನು ಧೈರ್ಯದಿಂದ ಬಹಳ ಖಂಡಿತ ವಾಗಿಯೇ ಮಾತಾಡಿದೆ. ನೀನು ಬ್ರಾಹ್ಮಣನಾಗಿರುವುದೇ ಇದಕ್ಕೆ ಕಾರಣ ವೆಂದು ನನಗೆ ತೋರಿದೆ. ಆ ಪಾಂಡವರು ಹಿಂದೆ ಈ ನಗರದಲ್ಲಿದ್ದಾಗಲೂ, ವನವಾಸಕ್ಕಾಗಿ ಕಾಡಿಗೆ ಹೋದಮೇಲೆಯೂ, ನಾನಾವಿಧವಾಗಿ ಕಷ್ಟಪಡಿಸ ಲ್ಪಟ್ಟಿರುವರು. ಅವರಿಗೆ ನ್ಯಾಯವಾಗಿ ಅವರ ಪಿತೃಧನವೆಲ್ಲ ಸೇರಬೇಕೆಂ ಬುದು ನಿಜವೇ! ಇದರಲ್ಲಿ ಸಂದೇಹವಿಲ್ಲ. ನೀನು ಹೇಳಿದಂತೆ ಆ ಕಿರೀ ಟಿಯು ಬಹಳ ಬಲಶಾಲಿ! ಸರ್ವಾಸ್ತ್ರಗಳಲ್ಲಿಯೂ ಸುಶಿಕ್ಷಿತನು. ಮಹಾ ರಥನು. ಅವನಿಗಿದಿರಾಗಿ ನಿಂತು ಯಾವನು ತಾನೇ ಯುದ್ಧಮಾಡಬಲ್ಲನು? ವಜ್ರಧಾರಿಯಾದ ಸಾಕ್ಷಾದ್ದೇವೇಂದ್ರನಾದರೂ, ಅವನಿದಿರಿಗೆ ನಿಲ್ಲಲಾರನು. ಇನ್ನು ಇತರಧನುರ್ಧಾರಿಗಳ ಪಾಡೇನು? ಈ ಮೂರು ಲೋಕಗಳಿಗೆಲ್ಲ ಅವನೊಬ್ಬನೇ ಸಮಾನನೆಂಬುದು ನನ್ನ ಅಭಿಪ್ರಾಯವು” ಎಂದನು. ಓ ಜನಮೇಜಯರಾಜಾ! ಭೀಷ್ಮನು ಹೇಳಿದ ಈ ಮಾತುಗಳು ಕರ್ಣನಿಗೆ ದುಸ್ಸಹವಾದುವು. ಅವನು ದುರ್ಯೋಧನನ ಕಡೆಗೆ ತಿರುಗಿತಿರುಗಿ ನೋ ಡುತ್ತ, ನಿರ್ಭಯವಾಗಿ ಭೀಷ್ಮನನ್ನು ಆಕ್ಷೇಪಿಸಿ, ಆಮೇಲೆ ಪುರೋಹಿತ ನನ್ನು ಕುರಿತು ಹೀಗೆಂದು ಹೇಳುವನು. “ಓ ಬ್ರಾಹ್ಮಣಾ! ನೀನು ಇದುವರೆಗೆ ಹೇಳಿದ ಸಂಗತಿಗಳಲ್ಲಿ ಯಾರಿಗೂ ತಿಳಿಯದ ಹೊಸಸಂಗತಿ ಯಾವುದೂ ಇಲ್ಲ. ಸುಮ್ಮನೆ ಹೇಳಿದುದನ್ನೆಲ್ಲ ತಿರುಗಿಸಿ ತಿರುಗಿಸಿ ಹೇಳು ತ್ತಿರುವುದರಿಂದ ಫಲವೇನು? ದುರ್ಯೋಧನನಿಗಾಗಿ ಶಕುನಿಯು ಪಾಂಡ ವರನ್ನು ಜೂಜಿನಲ್ಲಿ ಜಯಿಸಿದುದು ವಾಸ್ತವವೇ. ಆ ಜೂಜಿನಲ್ಲಿ ಮಾಡಿ ಕೊಂಡ ನಿರ್ಣಯದಮೇರೆಗೆ ಯುಧಿಷ್ಠಿರನು ವನವಾಸದಲ್ಲಿರಬೇಕಾಯಿತು. ಅವನು ತನ್ನ ಪ್ರತಿಜ್ಞೆಯನ್ನು ಪೂರ್ಣವಾಗಿ ಮುಗಿಸಿ ಬಂದು, ತನ್ನ ಪಿತೃ ಧನವನ್ನು ಅಪೇಕ್ಷಿಸಿದ್ದರೆ, ಆಗ ಅದು ನ್ಯಾಯವಾಗಿದ್ದಿತು. ಅವನು ಹಾಗೆ ಮಾಡಲಿಲ್ಲ. ಪ್ರತಿಜ್ಞಾಕಾಲವು ಮುಗಿಯುವುದಕ್ಕೆ ಮೊದಲೇ ಅವನು

ಮತ್ಸ್ಯಪಾಂಚಾಲರ ಬೆಂಬಲವನ್ನು ನಂಬಿಕೊಂಡು ಮೂರ್ಖನಂತೆ ಆತುರ ಪಟ್ಟನು. ಎಲೈ ವಿದ್ವಾಂಸನೇ! ಈ ಗುಟ್ಟುಬೆದರಿಕೆಗಳಿಗೆಲ್ಲ ದುರ್ಯೋಧನನು ಲವಮಾತ್ರವೂ ಅಂಜುವವನಲ್ಲ. ದುರ್ಯೋಧನನು ಪಾಂಡವರಿಗೆ ಭಯಪಟ್ಟು ರಾಜ್ಯದಲ್ಲಿ ಕಾಲುಭಾಗವನ್ನಾದರೂ ಕೊಡುವನೆಂದೆಣಿಸಬೇಡ. ಈತನು ಧರ್ಮದಿಂದ ಶತ್ರುವಿಗಾದರೂ ತನ್ನ ಸಮಸ್ತ ಭೂಮಿಯನ್ನೂ ಕೊಡುವುದಕ್ಕೆ ಸಿದ್ಧನಾಗಿರುವನು. ಓ ಬ್ರಾಹ್ಮಣಾ! ಆ ಪಾಂಡವರು ತಮ್ಮ ಪಿತ್ರಾರ್ಜಿತವಾದ ರಾಜ್ಯವನ್ನು ತಿರುಗಿ ನ್ಯಾಯದಿಂದ ಪಡೆಯಬೇಕಾದರೆ, ಅವರು ಮಾಡಿದ ಪ್ರತಿಜ್ಞೆಯಂತೆ ತಿರುಗಿ ವನವಾಸಕಾಲವನ್ನು ಮುಗಿಸಿಬರಲಿ! ಆಗ ಅವರು ದುರ್ಯೋಧನನ ತೊಡೆಯಲ್ಲಿ ಬಿದ್ದು ನಿರ್ಭಯವಾಗಿರಬಹುದು. ಹಾಗಿಲ್ಲದೆ ಆ ಪಾಂಡವರು ಮೂರ್ಖಸ್ವಭಾವವನ್ನು ಹಿಡಿದು ಅಧರ್ಮದಲ್ಲಿ ಪ್ರವರ್ತಿಸಬಾರದು. ಅವರು ಧರ್ಮವನ್ನು ಬಿಟ್ಟು ಯುದ್ಧವನ್ನೇ ಮಾಡುವುದಕ್ಕೆ ಅಪೇಕ್ಷಿಸುವುದಾದರೆ, ಈ ಕೌರವರಿಂದ ಪರಾಜಯಹೊಂದಿದಮೇಲೆ ಈಗ ನಾನು ಹೇಳುವ ಮಾತನ್ನು ಸ್ಮರಿಸಿಕೊಳ್ಳಲಿ" ಎಂದನು.

ಆಗ ಭೀಷ್ಮನು "ರಾಧೇಯಾ! ಈ ನಿನ್ನ ಕೂಗಾಟದಿಂದ ಪ್ರಯೋಜನವಿಲ್ಲ. ಹಿಂದೆ ನಡೆದ ಕಾರ್ಯಗಳನ್ನೆಲ್ಲ ನೀನೇ ನೆನೆಸಿಕೊಂಡು ನೋಡು. ಆ ಅರ್ಜುನನ ಪರಾಕ್ರಮವನ್ನು ಕುರಿತು ಅಪಲಪಿಸಬೇಡ. ಧೀರನಾದ ಆ ಅರ್ಜುನನು ವಿರಾಟನಗರದಲ್ಲಿ ತಾನೊಬ್ಬನೇ ಆರು ಮಂದಿ ಮಹಾರಥಿಕರನ್ನಿದಿರಿಸಿ ಜಯಿಸಲಿಲ್ಲವೆ? ಆಗ ನೀನೂ ಬಂದಿರಲಿಲ್ಲವೇನು? ಹೀಗೆಯೇ ಅನೇಕಾವರ್ತಿ ನೀನು ಅವನ ಜಯಕಾರ್ಯಗಳನ್ನು ನೋಡಿ ಅನುಭವಿಸಿಯೂ ಇರುವೆ. ಕರ್ಣಾ! ಈಗಲಾದರೂ ಈ ಬ್ರಾಹ್ಮಣನು ಹೇಳಿದಂತೆ ನಾವು ನಡೆಸದೆಹೋದರೆ, ನಾವೆಲ್ಲರೂ ಯುದ್ಧದಲ್ಲಿ ಹತರಾಗಿ ಬಿದ್ದು, ನೆಲದ ಮಣ್ಣನ್ನು ಮುಕ್ಕಬೇಕಾದುದೇ ನಿಶ್ಚಯವು. ಈ ದುರ್ಯೋಧನನು ತನ್ನ ಸಮಸ್ತಪರಿವಾರಗಳೊಡನೆ ಸಾಯುವುದರಲ್ಲಿ ಸಂದೇಹವಿಲ್ಲ" ಎಂದನು. ಆಗ ಧೃತರಾಷ್ಟ್ರನು ಭೀಷ್ಮನಿಗೆ ಸಮಾಧಾನವಾಕ್ಯಗಳನ್ನು ಹೇಳಿ, ಅವನನ್ನು ಪ್ರಸನ್ನನನ್ನಾಗಿ ಮಾಡಿ, ಇತ್ತಲಾಗಿ ಕರ್ಣನನ್ನೂ

ಖಂಡಿಸಿ ನಿಂದಿಸುತ್ತ ಹೀಗೆಂದು ಹೇಳುವನು. "ಕರ್ಣಾ! ಭೀಷ್ಮನು ನಮಗೆ ಹಿತವನ್ನೇ ಹೇಳಿರುವನು. ನಮಗೆ ಮಾತ್ರವಲ್ಲದೆ ಪಾಂಡವರಿಗೂ, ಸಮಸ್ತಜಗತ್ತಿಗೂ ಕ್ಷೇಮವನ್ನು ಯೋಚಿಸಿಯೇ ಅವನು ಆ ಮಾತನ್ನಾಡಿ ರುವನು. ಅದು ಹಾಗಿರಲಿ. ಮುಂದೆ ನಾನೂ ಚೆನ್ನಾಗಿ ಆಲೋಚಿಸಿ ಕೊಂಡು, ಪಾಂಡವರ ಬಳಿಗೆ ಸಂಜಯನನ್ನು ಕಳುಹಿಸುವೆನು. ಓ ಬ್ರಾಹ್ಮ ಣೋತ್ತಮಾ! ನೀನು ಹಿಂತಿರುಗಿ ಹೋಗು. ಇಲ್ಲಿ ವೃಥಾ ಕಾಲಕ್ಷೇಪ ವನ್ನು ಮಾಡಬೇಡ" ಎಂದು ಹೇಳಿ, ಪುರೋಹಿತನನ್ನು ಸತ್ಕರಿಸಿ ಕಳುಹಿಸಿ ಬಿಟ್ಟನು. ಆಮೇಲೆ ಆ ಸಭಾಮಧ್ಯದಲ್ಲಿಯೇ ಸಂಜಯನನ್ನು ಕರೆಸಿ ಕೊಂಡನು.

ಇದು ಇಪ್ಪತ್ತೊಂದನೆಯ ಅಧ್ಯಾಯವು.



ಧೃತರಾಷ್ಟ್ರನು ಪಾಂಡವರ ಪ್ರಶಂಸಾಪೂರ್ವಕವಾಗಿ ದುರ್ಯೋ ಧನಾದಿಗಳನ್ನು ನಿಂದಿಸಿ, ಸಂಜಯನನ್ನು ಪಾಂಡವರ ಬಳಿಗೆ ಕಳುಹಿಸಿದುದು.

ಧೃತರಾಷ್ಟ್ರನು ಸಂಜಯನನ್ನು ನೋಡಿ "ಸಂಜಯಾ! ಪಾಂಡ ವರು ಉಪಪ್ಲಾವ್ಯದಲ್ಲಿರುವುದಾಗಿ ಕೇಳಿದೆನು. ನೀನು ಹೋಗಿ ಅವರನ್ನು ವಿಚಾರಿಸಿ ಬಾ! ಅಜಾತಶತ್ರುವೆನಿಸಿದ ಯುಧಿಷ್ಠಿರನನ್ನು ಉಚಿತರೀತಿ ಯಿಂದ ಗೌರವಿಸು. ನೀನು ಈ ಸಮಯಕ್ಕೆ ಸರಿಯಾಗಿ ವನವನ್ನು ಬಿಟ್ಟು ಇಲ್ಲಿಗೆ ಬಂದು ಸೇರಿದುದು ಅದೃಷ್ಟವು. ಸಂಜಯಾ! ನೀನು ಅಲ್ಲಿ ಹೋಗಿ ಪಾಂಡವರಿಗೆ ನಮ್ಮೆಲ್ಲರ ಕ್ಷೇಮವನ್ನು ತಿಳಿಸು. ವನವಾಸಕಷ್ಟಕ್ಕೆ ಅರ್ಹರಲ್ಲದ ಆ ಪಾಂಡವರು, ಇದುವರೆಗೆ ಅಲ್ಲಿ ಬಹಳ ಕಷ್ಟದಿಂದ ಕಾಲ ವನ್ನು ಕಳೆದು ಬಂದರೂ, ನಮ್ಮಲ್ಲಿ ಕೋಪವಿಲ್ಲದೆ ಶಾಂತಿಯನ್ನೇ ತೋರಿ ಸುತ್ತಿರುವರು. ಅವರಲ್ಲಿ ಕಪಟವೆಂಬುದೇ ಇಲ್ಲ. ಅವರು ಉಪಕಾರಸ್ವ ಭಾವವುಳ್ಳವರು. ಸಜ್ಜನರು! ನಾನು ಅವರಲ್ಲಿ ಸುಳ್ಳೆಂಬುದನ್ನು ಯಾವಾ ಗಲೂ ಕಂಡವನಲ್ಲ. ಅವರು ಪಿತೃಧನವನ್ನು ಮಾತ್ರವಲ್ಲದೆ, ತಮ್ಮ ಸ್ವವೀರ್ಯದಿಂದ ಸಂಪಾದಿಸಿದ ಐಶ್ವರ್ಯವೆಲ್ಲವನ್ನೂ ಕೂಡ ನನಗಾಗಿ

ಯೇ ತಂದೊಪ್ಪಿಸುತ್ತಿದ್ದರು. ಅವರಲ್ಲಿ ಏನಾದರೂ ದೋಷವನ್ನೆತ್ತಿ ತೋರಿಸಬೇಕೆಂದು ಹುಡುಕಿದರೂ, ಲವಮಾತ್ರವಾದರೂ ತಪ್ಪನ್ನು ಕಂಡುಹಿಡಿಯುವುದು ಸಾಧ್ಯವಲ್ಲ. ಅವರು ಯಾವಾಗಲೂ ಧರ್ಮಾರ್ಥಗಳನ್ನು ಅನುಸರಿಸಿಯೇ ಕಾರ್ಯಗಳನ್ನು ಮಾಡುವರು. ಕೇವಲ ಕಾಮದಿಂದ ತಮ್ಮ ಸುಖವನ್ನೂ, ತಮ್ಮ ಪ್ರಿಯವನ್ನೂ ನೋಡಿಕೊಂಡು ಪ್ರವರ್ತಿಸತಕ್ಕವರಲ್ಲ. ಆ ಪಾಂಡವರು ಉಷ್ಣ, ಶೀತ, ಹಸಿವು, ಬಾಯಾರಿಕೆ, ನಿದ್ರೆ, ಬೇಸರ, ಕೋಪ, ಹರ್ಷ, ಅಜಾಗರೂಕತೆ ಎಂಬಿವುಗಳನ್ನೆಲ್ಲ ತಮ್ಮ ಧೈರ್ಯದಿಂದಲೂ, ಪ್ರಜ್ಞಾಬಲದಿಂದಲೂ ಅಡಗಿಸಿ, ಧರ್ಮಾರ್ಥಸಾಧನಗಳಲ್ಲಿಯೇ ಪ್ರಯತ್ನಪಡುವರು. ಸಮಯದಲ್ಲಿ ತಮ್ಮ ಮಿತ್ರರಿಗಾಗಿ ತಮ್ಮ ಧನವನ್ನೆಲ್ಲ ಬಿಟ್ಟುಕೊಡುವರು. ಬಹುಕಾಲವಾದರೂ ಅವರಲ್ಲಿ ಸ್ನೇಹವೆಂಬುದು ತಗ್ಗುವುದಿಲ್ಲ. ಅವರು ಯೋಗ್ಯವಾದ ರೀತಿಯಲ್ಲಿ ಅವರವರಿಗೆ ಧನವನ್ನೂ, ಗೌರವವನ್ನೂ ಕೊಟ್ಟು ಆದರಿಸುವರು. ಪಾಪಿಯೂ, ಮೂರ್ಖನೂ, ಮಂದಬುದ್ಧಿಯುಳ್ಳವನೂ ಆದ ನನ್ನ ಮಗನು ದುರ್ಯೋಧನನೊಬ್ಬನು, ಅಲ್ಪ ಸ್ವಭಾವವುಳ್ಳ ಆ ಕರ್ಣನೊಬ್ಬನು, ಇವರಿಬ್ಬರು ಹೊರತು ಈ ಪ್ರಪಂಚದಲ್ಲಿ ಅವರನ್ನು ದ್ವೇಷಿಸುವವರು ಬೇರೊಬ್ಬರಿಲ್ಲ. ಒಂದು ವೇಳೆ ಭೀಮಾದಿಗಳನ್ನು ದ್ವೇಷಿಸತಕ್ಕವರಾದರೂ ಕೆಲವರಿರಬಹುದು. ಧರ್ಮಪುತ್ರನನ್ನು ದ್ವೇಷಿಸತಕ್ಕವನು ಒಬ್ಬನಾದರೂ ಇಲ್ಲವು. ಓ ಸಂಜಯಾ! ಕೇವಲ ದುರಾಶೆಯುಳ್ಳ ನನ್ನ ಮಗನಾದ ದುರ್ಯೋಧನನು ಹೇಗೂ ಮೃತ್ಯುವಿನ ಬಾಯಿಗೆ ಸಿಕ್ಕಿಬಿದ್ದಿರುನು. ಕರ್ಣದುರ್ಯೋಧನರಿಬ್ಬರೂ ಆತ್ಮಸುಖವನ್ನೂ, ಪ್ರಿಯವನ್ನೂ ಲಕ್ಷ್ಯಕ್ಕೆ ತಾರದೆ ಮಹಾತ್ಮರಾದ ಆ ಪಾಂಡವರಿಗೆ ಕೋಪವನ್ನು ಹೆಚ್ಚಿಸಿಬಿಟ್ಟರು. ಆರಂಭಶೂರನೂ, ಕೇವಲ ಸುಖಾಪೇಕ್ಷಿಯೂ ಆದ ಈ ದುರ್ಯೋಧನನು ಹುಡುಗುತನದಿಂದ ತಾನು ಮಾಡಿದುದೆಲ್ಲವೂ ಸರಿಯೆಂದೇ ತಿಳಿದಿರುವನು. ಪಾಂಡವರು ಬದುಕಿರುವಾಗಲೇ ಅವರ ಭಾಗಗಳನ್ನೆಲ್ಲಾ ಅಪಹರಿಸಲು ಪ್ರಯತ್ನಿಸಿರುವನು. ಓ ಸಂಜಯಾ! ಅರ್ಜುನನೂ, ಕೃಷ್ಣನೂ ಆ ಭೀಮನೂ, ಸಾತ್ಯಕಿಯೂ, ಮಾದ್ರೀಪುತ್ರರಾದ ನಕುಲಸಹದೇವರೂ, ಸೃಂಜಯರೂ, ಯಾವನ ಆಜ್ಞಾಬದ್ಧರಾಗಿ ಯುದ್ಧಕ್ಕೆ ಸಿದ್ಧರಾಗಿರುವರೋ, ಅಂತಹ

ಅಜಾತಶತ್ರುವಿನ ಮನಸ್ಸನ್ನು ನೋಯಿಸದೆ, ಯುದ್ಧಕ್ಕೆ ಮೊದಲೇ ಅವ ನಿಗೆ ಕೊಡಬೇಕಾದ ಭಾಗಗಳನ್ನು ಕೊಟ್ಟುಬಿಡುವುದು ಒಳ್ಳೆಯದು. ಗಾಂ ಡೀವವೆಂಬ ಧನುಸ್ಸನ್ನು ಹಿಡಿದು, ಸವ್ಯಸಾಚಿಯೆನಿಸಿಕೊಂಡ ಆ ಅರ್ಜುನ ನೊಬ್ಬನೇ ಈ ಸಮಸ್ತಭೂಮಿಯನ್ನೂ ತಲೆಕೆಳಗಾಗಿ ಮಾಡಬಲ್ಲನು. ಇದಲ್ಲದೆ ತ್ರಿಲೋಕಾಧಿಪತಿಯೂ, ಎಂತವರಿಗೂ ದುರ್ಜಯನೂ, ಸದಾ ಜಯಶೀಲನೂ, ಸಮಸ್ತಲೋಕಗಳಿಗೂ ಮೇಲೆನಿಸಿದ ಮಹಾತ್ಮನೂ ಆದ ಶ್ರೀಕೃಷ್ಣನ ಮುಂದೆ ಯಾವನು ತಾನೇ ಯುದ್ಧಕ್ಕಿದಿರಾಗಿ ನಿಲ್ಲಬಲ್ಲನು? ಅರ್ಜುನನು ರಥಾರೂಢನಾಗಿ, ಮೇಘಧ್ವನಿಯಂತೆ ಮಹಾಘೋಷವುಳ್ಳ ವುಗಳಾಗಿಯೂ, ತೀವ್ರ ವೇಗವುಳ್ಳವುಗಳಾಗಿಯೂ ಇರುವ ಬಾಣಪರಂಪರೆ ಗಳನ್ನು ಪ್ರಯೋಗಿಸತೊಡಗಿದರೆ, ಆ ಬಾಣಗಳೇ ಆಕಾಶದಲ್ಲಿ ಶಲಭಸ ಮೂಹಗಳಂತೆ ದಿಕ್ಕುಗಳೆಲ್ಲವನ್ನೂ ವ್ಯಾಪಿಸುವುವು. ಇಂತಹ ಬಾಣಗ ಳಿಂದ ಅವನು ಉತ್ತರದಿಕ್ಕೆಲ್ಲವನ್ನೂ, ಉತ್ತರ ಕುರುದೇಶಗಳೆಲ್ಲವನ್ನೂ ತಾನೊಬ್ಬನೇ ಜಯಿಸಿದನು. ಅಲ್ಲಿ ಅವರ ಧನವನ್ನೆಲ್ಲ ಅಪಹರಿಸಿದನು. ಅಲ್ಲಿ ತನ್ನಿದಿರಿಗೆ ಯುದ್ಧಕ್ಕಾಗಿ ನಿಂತ ದ್ರವಿಡರನ್ನೆಲ್ಲ ಸೇನೆಯಲ್ಲಿ ಹಿಂದೆ ಬಿ ಳುವಂತೆ ಮಾಡಿದನು. ಮತ್ತು ಅವನು, ಹಿಂದೆ ಖಾಂಡವವನದಲ್ಲಿ ಇಂದ್ರ ನೊಡಗೂಡಿದ ಸಮಸ್ತದೇವತೆಗಳನ್ನೂ ಜಯಿಸಿ, ಅಗ್ನಿಯನ್ನು ಸಂತೋ ಷಗೊಳಿಸಿ, ಪಾಂಡವರೆಲ್ಲರಿಗೂ ಕೀರ್ತಿ ಗೌರವಗಳು ಹೆಚ್ಚುವಂತೆ ಮಾಡಿ ದನು. ಓ ಸಂಜಯಾ! ಗದೆಯನ್ನು ಹಿಡಿದವರಲ್ಲಿ ಭೀಮನಿಗೆ ಸಮಾ ನನು ಬೇರೊಬ್ಬನಿಲ್ಲ. ಆನೆಯನ್ನೇರಿ ಯುದ್ಧಮಾಡುವುದರಲ್ಲಿಯೂ, ಅವ ನಿಗೆ ಸಮಾನರಿಲ್ಲ. ರಥಿಕರಲ್ಲಿಯೂ ಅವನು ಅರ್ಜುನನಿಗೇನೂ ಕಡಿಮೆ ಯಾದವನಲ್ಲವೆಂದು ಕೇಳಿರುವೆನು. ಬಾಹುಬಲದಲ್ಲಿ ಅವನನ್ನು ಹತ್ತು ಸಾವಿರ ಆನೆಗಳ ಬಲವುಳ್ಳವನೆಂದು ಹೇಳುವರು. ಆಯುಧಗಳಲ್ಲಿ ಸುಶಿಕ್ಷಿ ತನೂ, ಮೊದಲಿಂದಲೂ ನಮ್ಮ ದ್ವೇಷಕ್ಕೆ ಗುರಿಮಾಡಲ್ಪಟ್ಟವನೂ ಆದ ಆ ಭೀಮಸೇನನು, ಅಲ್ಪರಾದ ನನ್ನ ಮಕ್ಕಳನ್ನು ಒಂದೇ ನಿಮಿಷದಲ್ಲಿ ದಹಿಸಿಬಿಡಬಲ್ಲನು. ಸಾಕ್ಷಾದ್ದೇವೇಂದ್ರನೇ ಇದಿರಾಗಿ ಬಂದರೂ, ದೇಹ ಬಲದಿಂದ ಅವನನ್ನು ಯುದ್ಧದಲ್ಲಿ ಜಯಿಸುವುದಕ್ಕೆ ಸಾಧ್ಯವಿಲ್ಲ. ಮಾದ್ರೀ ಪುತ್ರರಾದ ನಕುಲಸಹದೇವರಾದರೂ ಸಾಮಾನ್ಯರೆ? ಅವರೂ ಮಹಾತೇಜ

ಸ್ವಿಗಳು. ಬಲಾಢ್ಯರು. ಬಾಣಪ್ರಯೋಗದಲ್ಲಿ ಅಧಿಕವಾದ ಕೈ ಚಳಕವುಳ್ಳವರು. ಶಸ್ತ್ರಾಸ್ತ್ರಗಳಲ್ಲಿ ಸುಶಿಕ್ಷಿತರು. ಆ ಸಹೋದರರಿಬ್ಬರೂ ಗಿಡಗಗಳು ಪಕ್ಷಿಸಮೂಹವನ್ನು ಹೇಗೋಹಾಗೆ ಶತ್ರುಗಳನ್ನು ನಿಶ್ಶೇಷವಾಗಿ ನಾಶಮಾಡಬಲ್ಲವರು. ನಮ್ಮ ಕಡೆಯಲ್ಲಿ ಸೈನ್ಯವು ಸಮೃದ್ಧವಾಗಿದೆಯೆಂಬುದು ವಾಸ್ತವವೇ. ಆದರೇನು? ಇಷ್ಟು ಸೈನ್ಯವಿದ್ದರೂ ಆ ಪಾಂಡವರ ಮುಂದೆ ಈ ಸೈನ್ಯವು ಏನೇನೂ ಕೆಲಸಕ್ಕೆ ಬಾರದೆ ಶೂನ್ಯಪ್ರಾಯವೆಂದು ನನಗೆ ತೋರಿದೆ. ಅಲ್ಲದೆ ಸೋಮಕರಿಗೆಲ್ಲ ಪ್ರಮುಖನಾಗಿ, ಮಹಾಪರಾಕ್ರಮಿಯೆನಿಸಿದ ಧೃಷ್ಟದ್ಯುಮ್ನನೆಂಬವನು ತನ್ನ ಎಲ್ಲಾ ಮಂತ್ರಿವರ್ಗಗಳೊಡನೆ, ಆ ಪಾಂಡವರಿಗಾಗಿ ಪ್ರಾಣವನ್ನಾದರೂ ಒಪ್ಪಿಸಲು ಸಿದ್ಧನಾಗಿರುವನೆಂದು ನಾನು ಕೇಳುವೆನು. ಆ ಧೃಷ್ಟದ್ಯುಮ್ನನು ವೀರ್ಯದಲ್ಲಿ ಅಸಮಾನನು. ವೃಷ್ಣಿಕುಲಕ್ಕೆ ಸಿಂಹನೆನಿಸಿದ ಕೃಷ್ಣನೇ ಯಾರಿಗೆ ನಿಯಾಮಕನೆನಿಸಿರುವನೋ, ಅಂತಹ ಅಜಾತಶತ್ರುವಿನ ತೇಜಸ್ಸನ್ನು ಯಾವನು ತಾನೇ ಸಹಿಸಿ ನಿಲ್ಲಬಲ್ಲನು? ವಯೋವೃದ್ಧನಾಗಿ, ಆ ಧರ್ಮರಾಜಾದಿಗಳೊಡನೆ ಬಹುಕಾಲದ ಸಹವಾಸವನ್ನು ಮಾಡಿ, ಅವರಿಂದ ಉಪಕಾರವನ್ನೂ ಪಡೆದ ಮತ್ಸ್ಯಾಧಿಪತಿಯಾದ ವಿರಾಟನು, ಈಗ ತನ್ನ ಪುತ್ರರೊಡನೆ ಯುಧಿಷ್ಠಿರನಿಗೆ ಪರಮಭಕ್ತನಾಗಿ ಆ ಪಾಂಡವರ ಪಕ್ಷಕ್ಕಿರುವನೆಂದು ಕೇಳುವೆನು. ಇದಲ್ಲದೆ, ಹಿಂದೆ ಕೇಕಯದೇಶದಿಂದ ಹೊರಕ್ಕೆ ಹೊರಡಿಸಲ್ಪಟ್ಟ ಐದು ಮಂದಿ ಸಹೋದರರುಂಟು. ಅವರೆಲ್ಲರೂ ಮಹಾರಥಿಕರು. ಮಹಾಧನುರ್ಧಾರಿಗಳು. ಅವರೆಲ್ಲರೂ ಕೇಕಯರಾಜ್ಯವನ್ನು ತಮ್ಮ ಕೈ ಸೇರಿಸಿಕೊಳ್ಳಬೇಕೆಂಬ ಉದ್ದೇಶದಿಂದ, ಯುದ್ಧಾರ್ಥಿಗಳಾಗಿ ಈಗ ಪಾಂಡವರ ಪಕ್ಷಕ್ಕೆ ಸೇರಿರುವರೆಂದೂ ಕೇಳುವೆನು. ಮಹಾವೀರರೆನಿಸಿಕೊಂಡ ಅನೇಕ ರಾಜರು ಪಾಂಡವರಲ್ಲಿ ತಮಗಿರುವ ವಿಶ್ವಾಸದಿಂದ, ಅವರ ಸಹಾಯಕ್ಕಾಗಿ ಬಂದು, ಯುಧಿಷ್ಠಿರನಲ್ಲಿ ಪರಮಭಕ್ತಿಯುಳ್ಳವರಾಗಿರುವರೆಂದು ನಾನು ಕೇಳುವೆನು. ಮತ್ತು ಪರ್ವತಗಳಲ್ಲಿಯೂ, ದುರ್ಗಗಳಲ್ಲಿಯೂ ವಾಸಮಾಡುತ್ತ, ಕುಲದಲ್ಲಿಯೂ, ಜಾತಿಯಲ್ಲಿಯೂ ಶುದ್ಧರಾದ ಅನೇಕ ಯೋಧರೂ, ನಾನಾಬಗೆಯ ಆಯುಧಗಳಲ್ಲಿ ನೈಪುಣ್ಯವುಳ್ಳ ವೀರ್ಯವಂತರಾದ ಮ್ಲೇಚ್ಛಯೋಧರೂ, ಆ ಪಾಂಡವರ ಸಹಾಯಕ್ಕಾಗಿ ಬಂದು, ಅವರ

ಅಧೀನರಾಗಿರುವರು. ಯುದ್ಧದಲ್ಲಿ ಇಂದ್ರನಿಗೆಣೆಯೆನಿಸಿದ ಪಾಂಡ್ಯರಾಜನು ಅನೇಕ ವೀರಯೋಧರೊಡಗೂಡಿ ಪಾಂಡವರ ಸಹಾಯಕ್ಕಾಗಿ ಬಂದಿರುವನು. ಅವನು ಮಹಾಬಲವುಳ್ಳವನು. ಇದಿರಿಲ್ಲದ ಮಹಾವೀರ್ಯವುಳ್ಳವನು. ಲೋಕಕ್ಕೆಲ್ಲ ತಾನೊಬ್ಬನೇ ವೀರನೆನಿಸಿದವನು. ಯಾವನು ಭೀಷ್ಮ, ದ್ರೋಣ, ಕೃಪಾಚಾರ್ಯರಿಂದಲೂ, ಅರ್ಜುನನಿಂದಲೂ, ಶ್ರೀಕೃಷ್ಣನಿಂದಲೂ ಬೇರೆಬೇರೆಯಾಗಿ ಅಸ್ತ್ರವಿದ್ಯೆಯನ್ನು ಕಲಿತಿರುವನೋ, ಲೋಕದಲ್ಲಿ ಯಾವನೊಬ್ಬನೇ ಕೃಷ್ಣಪುತ್ರನಾದ ಪ್ರದ್ಯುಮ್ನನಿಗೆ ಸಾಟಿಯೆಂದು ಜನರು ಹೇಳುವರೋ ಅಂತಹ ಸಾತ್ಯಕಿಯೂ ಈಗ ಪಾಂಡವರ ಪಕ್ಷಕ್ಕೆ ನಿಂತಿರುವನು. ಹಿಂದೆ ಚೇದಿ, ಕರೂಶ ಮೊದಲಾದ ದೇಶದವರೆಲ್ಲರೂ ಸರ್ವಸನ್ನಾಹಗಳೊಡನೆ ತನ್ನನ್ನಿದಿರಿಸುವುದಕ್ಕಾಗಿ ಒಟ್ಟುಗೂಡಿದ್ದಾಗ, ಅವರೆಲ್ಲರ ನಡುವೆ ಸೂರ್ಯನಂತೆ ಜ್ವಲಿಸುತ್ತ, ಯುದ್ಧದಲ್ಲಿ ತನಗೆ ಇದಿರೇ ಇಲ್ಲವೆಂಬ ಹೆಮ್ಮೆಯಿಂದ ಉಬ್ಬುತಿದ್ದ ಶಿಶುಪಾಲನನ್ನು ಕೃಷ್ಣನು ಕ್ಷಣಮಾತ್ರದಲ್ಲಿ ನಿಗ್ರಹಿಸಿದನಲ್ಲವೆ? ಹಿಂದೆ ಪಾಂಡವರ ಕೀರ್ತಿಯನ್ನೂ, ಮಾನವನ್ನೂ ಕಾಪಾಡುವುದಕ್ಕಾಗಿಯೇ ಕೃಷ್ಣನು ಅವನನ್ನು ಕೊಂದನು. ಕರೂಶರಾಜನೇ ಮೊದಲಾದ ರಾಜಶ್ರೇಷ್ಠರೆಲ್ಲರೂ ಆ ಶಿಶುಪಾಲನನ್ನು ಬಹಳವಾಗಿ ಗೌರವಿಸುತಿದ್ದವರು. ಅವರೆಲ್ಲರೂ, ಆಗ ಶ್ರೀಕೃಷ್ಣನು ಸುಗ್ರೀವವೆಂಬ ಉತ್ತಮಾಶ್ವದಮೇಲೆ ಹೂಡಿದ ರಥವನ್ನೇರಿ ಬರುವುದನ್ನು ನೋಡಿ, ಅವನ ಮುಂದೆ ನಿಲ್ಲುವುದು ತಮಗೆ ಸಾಧ್ಯವಲ್ಲವೆಂದು ತಿಳಿದು, ಸಿಂಹವನ್ನು ನೋಡಿ ಕ್ಷುದ್ರಮೃಗಗಳು ಹೇಗೋಹಾಗೆ ಒಡನೆಯೇ ಶಿಶುಪಾಲನನ್ನು ಬಿಟ್ಟು ಓಡಿಹೋದರು. ಕೃಷ್ಣನೊಡನೆ ದ್ವೈರಥಯುದ್ಧವನ್ನು (ಇಬ್ಬರು ರಥಿಕರು ಒಬ್ಬರಿಗೊಬ್ಬರಿಗೆ ಮಾಡುವ ದ್ವಂದ್ವಯುದ್ಧವನ್ನು) ಮಾಡಬೇಕೆಂದು ಆತುರದಿಂದ ಬಂದ ಶಿಶುಪಾಲನು, ಬಿರುಗಾಳಿಗಿದಿರಾದ ಕರ್ಣಿಕಾರದ ಗಿಡದಂತೆ ನಿಮಿಷಮಾತ್ರದಲ್ಲಿ ಗತಪ್ರಾಣನಾಗಿ ಕೆಳಗೆ ಮಲಗಿದನು. ಗವಲ್ಗಣಕುಮಾರನಾದ ಓ ಸಂಜಯಾ! ಆ ಶ್ರೀಕೃಷ್ಣನ ಪರಾಕ್ರಮಕಾರ್ಯಗಳೆಲ್ಲವನ್ನೂ ಆಗಾಗ ನಾನು ಚಾರರ ಮೂಲಕವಾಗಿ ಕೇಳಿರುವುದರಿಂದ, ನನ್ನ ಮನಸ್ಸಿಗೆ ಸ್ವಲ್ಪವೂ ಶಾಂತಿಯಿಲ್ಲದಂತಾಗಿದೆ. ವೃಷ್ಣಿಕುಲಕ್ಕೆ ಸಿಂಹನೆನಿಸಿದ ಆ ಶ್ರೀಕೃಷ್ಣನೇ ಪಾಂಡವರ ಸಹಾಯಕ್ಕೆ

ರುವಾಗ, ಅವರಿಗೆ ಶತ್ರುವಾಗಿ ಯಾವನುತಾನೇ ನಿಂತು ಜಯಿಸಬಲ್ಲನು? ಇಬ್ಬರು ಕೃಷ್ಣರೂ (ಕೃಷ್ಣಾರ್ಜುನರಿಬ್ಬರೂ) ಒಂದೇ ರಥವನ್ನೇರುವ ರೆಂಬ ಸುದ್ದಿಯನ್ನು ಕೇಳಿ ನನ್ನ ಹೃದಯವು ನಡುಗುತ್ತಿದೆ. ಮೂಢಬುದ್ಧಿಯುಳ್ಳ ನನ್ನ ಮಗನು, ಅವರಿಬ್ಬರೊಡನೆ ಯುದ್ಧಕ್ಕೆ ನಿಲ್ಲದಿದ್ದರೆಮಾತ್ರವೇ ಅವನಿಗೆ ಕ್ಷೇಮವುಂಟು ಹಾಗಿಲ್ಲದಿದ್ದರೆ ಇಂದ್ರೋಪೇಂದ್ರರು ದೈತ್ಯಸೇನೆಯನ್ನು ಹೇಗೋಹಾಗೆ, ಅವರಿಬ್ಬರೂ ಕೌರವರನ್ನು ಸಂಪೂರ್ಣವಾಗಿ ನಾಶಮಾಡುವುದರಲ್ಲಿ ಸಂದೇಹವಿಲ್ಲ. ಆ ಧನಂಜಯನು ಸಾಕ್ಷಾದ್ದೇವೇಂದ್ರನಿಗೆ ಸಮಾನನೆಂದೂ, ವೃಷ್ಣಿತಿಲಕನಾದ ಆ ಕೃಷ್ಣನು ಸಾಕ್ಷಾನ್ಮಹಾವಿಷ್ಣುವೆಂದೂ ನನಗೆ ತೋರಿದೆ. ಧರ್ಮಗಳಿಗೆಲ್ಲ ನೆಲೆಯಾಗಿ, ಅಕಾರ್ಯಗಳಿಗೆ ನಾಚುವ ಕುಂತೀಪುತ್ರನಾದ ಧರ್ಮರಾಜನಾದರೋ, ಮಹಾಬಲಶಾಲಿ! ಯಾರಲ್ಲಿಯೂ ದ್ವೇಷಬುದ್ಧಿಯಿಲ್ಲದೆ ಅಜಾತಶತ್ರುವೆನಿಸಿಕೊಂಡವನು. ಅಂತವನನ್ನೇ ದುರ್ಯೋಧನನು ವಂಚಿಸಿಬಿಟ್ಟನು. ಆ ಧರ್ಮಪುತ್ರನು ಉದಾರಮನಸ್ಸುಳ್ಳವನಲ್ಲದ ಪಕ್ಷದಲ್ಲಿ ತನ್ನ ಕೋಪಕ್ಕೆ ನನ್ನ ಮಕ್ಕಳನ್ನು ನಿಮಿಷಮಾತ್ರದಲ್ಲಿ ದಹಿಸಿಬಿಡುತಿದ್ದನು. ಸಂಜಯಾ! ಮಹಾತ್ಮನಾದ ಆ ಧರ್ಮರಾಜನ ಕೋಪಕ್ಕಾಗಿ ಹೆದರುವೆನೇ ಹೊರತು, ಅರ್ಜುನನಿಗಾಗಲಿ, ಭೀಮನಿಗಾಗಲಿ, ನಕುಲಸಹದೇವರಿಗಾಗಲಿ, ಕೊನೆಗೆ ಕೃಷ್ಣನಿಗಾಗಲಿ ನಾನು ಅಷ್ಟೊಂದು ಭಯಪಡುವುದಿಲ್ಲ. ಆ ಧರ್ಮರಾಜನಾದರೋ ಮಹಾತಪಸ್ವಿ! ಬ್ರಹ್ಮಚರ್ಯವನ್ನು ಹಿಡಿದವನು. ಅವನು ಮನಸ್ಸಿನಿಂದ ಯಾವ ಸಂಕಲ್ಪವನ್ನು ಹಿಡಿದರೂ, ಅದು ತಪ್ಪದೆ ಸಿದ್ಧಿಸುವುದು. ಅಂತಹ ಧರ್ಮರಾಜನ ಕೋಪವನ್ನು ನೋಡಿ ಅದರ ತತ್ವವನ್ನು ತಿಳಿದ ನಾನು ಬಹಳವಾಗಿ ಹೆದರುತ್ತಿರುವೆನು. ಆದುದರಿಂದ ಓ ಸಂಜಯಾ! ನೀನು ಈಗಲೇ ರಥವನ್ನೇರಿ ದ್ರುಪದರಾಜನ ಶಿಬಿರಕ್ಕೆ ಹೋಗು. ಅಲ್ಲಿ ಧರ್ಮರಾಜನ ಕ್ಷೇಮಲಾಭಗಳನ್ನು ವಿಚಾರಿಸು. ಅವನಿಗೆ ಪ್ರಿಯವಾದ ಮಾತುಗಳನ್ನೇ ಬಾರಿಬಾರಿಗೂ ಹೇಳುತ್ತಿರು. ಹಾಗೆಯೇ ಮಹಾತ್ಮನೂ, ವೀರ್ಯವಂತರಲ್ಲಿ ಪ್ರಮುಖನೂ ಆದ ಆ ಶ್ರೀಕೃಷ್ಣನನ್ನು ಸಂಧಿಸಿ, ನನ್ನ ಮಾತಿನಿಂದ ಅವನ ಆರೋಗ್ಯವನ್ನು ವಿಚಾರಿಸು. ಪಾಂಡವರೊಡನೆ ಸಂಧಿಯನ್ನು ಮಾಡಿಕೊಳ್ಳಬೇಕೆಂಬುದೇ ನನ್ನ ಉದ್ದೇ

ಶವೆಂಬುದನ್ನೂ ಅವನಿಗೆ ತಿಳಿಸು. ಓ ಸೂತಾ! ಧರ್ಮರಾಜನಾಗಲಿ, ಅ ರ್ಜುನನಾಗಲಿ ಶ್ರೀಕೃಷ್ಣನು ಹೇಳಿದ ಯಾವ ಮಾತನ್ನೂ ಮೀರಿ ನಡೆಯ ತಕ್ಕವರಲ್ಲ. ಶ್ರೀಕೃಷ್ಣನು ಅವರಿಗೆ ಅತ್ಯಂತ ಹಿತನಾಗಿಯೂ, ಪ್ರಾಣಕ್ಕೆ ಸಮಾನನಾಗಿಯೂ, ಅವರ ಪೂರ್ವೋತ್ತರಗಳನ್ನು ಚೆನ್ನಾಗಿ ಬಲ್ಲವನಾಗಿ ಯೂ, ಅವರ ಕಾರ್ಯದಲ್ಲಿಯೇ ನಿತ್ಯಾಸಕ್ತನಾಗಿಯೂ ಇರುವನು. ಸಂಜಯಾ! ನೀನು ಅಲ್ಲಿಗೆ ಹೋದೊಡನೆ, ಪಾಂಡವರನ್ನೂ, ಸೃಂಜಯ ರನ್ನೂ, ಶ್ರೀಕೃಷ್ಣನನ್ನೂ, ಸಾತ್ಯಕಿಯನ್ನೂ, ವಿರಾಟನನ್ನೂ, ದ್ರೌಪದಿ ಯ ಮಕ್ಕಳಾದ ಐದು ಮಂದಿ ಉಪಪಾಂಡವರನ್ನೂ, ಇವರೆಲ್ಲರನ್ನೂ ಒಂ ದಾಗಿ ಸೇರಿಸಿ, ನನ್ನ ಮಾತಿನಿಂದ ಅವರೆಲ್ಲರ ಆರೋಗ್ಯವನ್ನು ವಿಚಾ ರಿಸು. ನೀನು ಅಲ್ಲಿ ಹೋದಮೇಲೆ, ಸಮಯೋಚಿತವಾಗಿ ನಮ್ಮ ಭರತಕು ಲಕ್ಕೆ ಯಾವ ಮಾರ್ಗವು ಹಿತವೆಂದು ತೋರುವುದೋ, ಅಂತಹ ಮಾತು ಗಳನ್ನಾಡು. ಅಲ್ಲಿ ಯಾರಿಗೂ ಕೋಪವನ್ನು ಹುಟ್ಟಿಸಬೇಡ. ಯುದ್ಧಕ್ಕೆ ಕಾರಣವಾಗುವ ಮಾತುಗಳಾವುವನ್ನೂ ಆ ರಾಜರ ಮಧ್ಯದಲ್ಲಿ ನುಡಿಯದೆ ಸಮಾಧಾನವಾಗುವ ರೀತಿಯನ್ನೇ ನೋಡು" ಎಂದನು.

ಇದು ಇಪ್ಪತ್ತೆರಡನೆಯ ಅಧ್ಯಾಯವು.



{ ಸಂಜಯನು ಉಪಪ್ಲಾವ್ಯಕ್ಕೆ ಹೋಗಿ ಪಾಂಡವರನ್ನು ಕಂಡು ಕುಶಲಪ್ರಶ್ನೆ ಮಾಡಿದುದು. ಯುಧಿಷ್ಠಿರನು ಧೃತರಾ ಷ್ಟ್ರಾದಿಗಳ ಆರೋಗ್ಯವನ್ನು ವಿಚಾರಿಸಿದುದು. }

ಓ ಜನಮೇಜಯರಾಜಾ! ಧೃತರಾಷ್ಟ್ರನ ಮಾತಿನಂತೆ ಸಂಜಯನು ಅಲ್ಲಿಂದ ಹೊರಟು, ಪಾಂಡವರನ್ನು ನೋಡುವುದಕ್ಕಾಗಿ ಉಪಪ್ಲಾವ್ಯಕ್ಕೆ ಬಂದನು. ಅಲ್ಲಿಗೆ ಬಂದೊಡನೆ ಮೊದಲು ಯುಧಿಷ್ಠಿರನನ್ನು ಕಂಡು ನಮಸ್ಕರಿಸಿ, "ಮಹಾರಾಜಾ! ಆರೋಗ್ಯವಂತನಾಗಿ, ಇಂತಹ ಸಹಾಯ ಸಂಪತ್ತುಗಳೊಡನೆ, ಮಹೇಂದ್ರನಿಗೆ ಸಮಾನನಾಗಿರುವ ನಿನ್ನನ್ನು ಈಗ ನಾನು ನೋಡುವಂತಾದುದು ನನ್ನ ಭಾಗ್ಯವಿಶೇಷವು! ಅಂಬಿಕಾಪುತ್ರನೂ,

ವಯೋವೃದ್ಧನೂ ಆದ ಧೃತರಾಷ್ಟ್ರಮಹಾರಾಜನು, ನಿನ್ನ ಆರೋಗ್ಯ ವನ್ನು ವಿಚಾರಿಸಿದನು. ಪಾಂಡವಶ್ರೇಷ್ಠನಾದ ಭೀಮಸೇನನು ಕ್ಷೇಮ ದಿಂದಿರುವನೇ? ಅರ್ಜುನನಿಗೂ, ನಕುಲಸಹದೇವರಿಗೂ ಕುಶಲವೆ? ವೀರ ಪತ್ನಿಯೂ, ಸುಪುತ್ರವತಿಯೂ, ಸತ್ಯವ್ರತೆಯೂ ಆದ ದ್ರುಪದರಾಜಕು ಮಾರಿಯು ಕ್ಷೇಮದಿಂದಿರುವಳಷ್ಟೆ? ಓ ಭರತಪುತ್ರಾ! ನೀನು ಯಾವಳ ಕ್ಷೇಮಚಿಂತಕನಾಗಿ, ಯಾವಳ ಮೂಲಕವಾಗಿ ನಿನ್ನ ಇಷ್ಟಭೋಗಗಳೆಲ್ಲ ವನ್ನೂ ಪಡೆಯಲೆಳಿಸುವೆಯೋ ಆ ನಿನ್ನ ಪತ್ನಿಯು ಕ್ಷೇಮವಷ್ಟೆ?'' ಎಂದನು. ಅದಕ್ಕಾ ಯುಧಿಷ್ಠಿರನು "ಗಾವಲ್ಗಣೀ! ನಿನಗೆ ಸುಖಾಗಮ ನವು. ನಿನ್ನನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ನೀನು ಕ್ಷೇಮದಿಂದಿರುವೆಯಷ್ಟೆ? ನನ್ನ ತಮ್ಮಂದಿರೊಡನೆ ನಾನೂ ಕ್ಷೇಮದಿಂದಿ ರುವೆನು. ಕುರುವೃದ್ಧನಾದ ಧೃತರಾಷ್ಟ್ರಮಹಾರಾಜನ ಕ್ಷೇಮವನ್ನುಕೇಳಿ ಬಹಳ ದಿನವಾಗಿದ್ದಿತು. ಓ ಸಂಜಯಾ! ಈಗ ನಿನ್ನನ್ನು ನೋಡಿದುದು ಆ ವೃದ್ಧರಾಜನನ್ನೇ ಸಾಕ್ಷಾತ್ತಾಗಿ ನೋಡಿದಂತಾಯಿತು. ನಮಗೆಲ್ಲಾ ಮುತ್ತಾತನಾಗಿ, ಉದಾರಮನಸ್ಸುಳ್ಳವನೂ, ಮಹಾಪ್ರಾಜ್ಞನೂ, ಸರ್ವಧ ರ್ಮಗಳನ್ನೂ ಬಲ್ಲವನೂ ಆದ ಭೀಷ್ಮನು ಸಮಸ್ತಕೌರವರೊಡನೆ ಕ್ಷೇಮ ದಿಂದಿರುವನೆ? ಆ ಭೀಷ್ಮಾಚಾರ್ಯನು ನಮ್ಮಲ್ಲಿ ಮೊದಲಿನಂತೆಯೇ ವಾ ತ್ಸಲ್ಯವನ್ನಿಟ್ಟಿರುವನೇ! ವಿಚಿತ್ರವೀರ್ಯನ ಪುತ್ರನೂ, ಮಹಾತ್ಮನೂ ಆದ ಧೃತರಾಷ್ಟ್ರನು, ತನ್ನ ಎಲ್ಲಾ ಮಕ್ಕಳೊಡನೆ ಕ್ಷೇಮದಿಂದಿರುವನಷ್ಟೆ? ಪ್ರತೀಪರಾಜಕುಮಾರನೂ, ವಿದ್ವಾಂಸನೂ ಆದ ಬಾಹ್ಲೀಕನು ಕುಶಲದಿಂ ದಿರುವನೆ? ಮಹಾಧನುರ್ಧಾರಿಗಳಾದ ಸೋಮದತ್ತ, ಭೂರಿಶ್ರವಸ್ಸು, ಶಲ, ದ್ರೋಣ, ಅಶ್ವತ್ಥಾಮ, ಕೃಪಾಚಾರ್ಯನೇ ಮೊದಲಾದವರೆಲ್ಲರೂ ಆರೋ ಗ್ಯದಿಂದಿರುವರಷ್ಟೆ? ಓ ಸಂಜಯಾ! ಈ ಭೂಮಿಯಲ್ಲಿ ಧನುರ್ಧಾರಿಗ ಳಲ್ಲಿ ಪ್ರಮುಖರೂ, ಮಹಾಪ್ರಾಜ್ಞರೂ, ಎಲ್ಲಾ ಶಾಸ್ತ್ರಗಳನ್ನೂ ತಿಳಿದ ವರೂ ಆಗಿರುವ ಆ ವೀರರೆಲ್ಲರೂ ಕೌರವರಲ್ಲಿ ನಿಜವಾದ ಅಭಿಮಾನವು ಳ್ಳವರಾಗಿರುವರಷ್ಟೆ? ಮಹಾಧನುರ್ಧಾರಿಯೂ, ಒಳ್ಳೇ ಶೀಲವಂತನೂ, ರೂಪವಂತನೂ ಆದ ದ್ರೋಣಪುತ್ರನು ಯಾವ ರಾಜಾಸ್ಥಾನದಲ್ಲಿರುವ ನೋ, ಅಂತಹ ಕೌರವರಾಜ್ಯಕ್ಕೆ ಕೊರತೆಯೇನಿದೆ? ಮೇಲೆ ಹೇಳಿದ ವೀ

ಶರೆಲ್ಲರಿಗೂ ರಾಜಾಸ್ಥಾನದಲ್ಲಿ ತಕ್ಕ ಸನ್ಮಾನವು ದೊರೆಯುತ್ತಿರುವುದೇ? ಅವರೆಲ್ಲರೂ ಕ್ಷೇಮದಿಂದಿರುವರೇ? ಓ ಸಂಜಯಾ! ಧೃತರಾಷ್ಟ್ರನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಮಹಾಪ್ರಾಜ್ಞನಾದ ಯುಯುತ್ಸುವು ಕ್ಷೇಮ ದಿಂದಿರುವನೇ? ಯಾವನು ಕೇವಲ ಮೂಢಬುದ್ಧಿಯುಳ್ಳ ದುರ್ಯೋಧ ನನನ್ನು ಕೈವಶಮಾಡಿಕೊಂಡು ಆಡಿಸುತ್ತಿರುವನೋ ಆ ಕರ್ಣನು ಕ್ಷೇಮದಿಂದಿರುವನೇ? ಭರತಕುಲಕ್ಕೆ ತಾಯಿಯರಾದ ವೃದ್ಧಸ್ತ್ರೀಯ ರೂ, ದಾಸಿಯರಲ್ಲಿ ಪ್ರಮುಖರಾದವರೂ, ದಾಸಪತ್ನಿಯರೂ ನಮ್ಮ ಸೊಸೆಯರೂ, ಮಕ್ಕಳೂ, ಹೆಣ್ಣುಮಕ್ಕಳೂ, ಸೋದರಳಿಯಂದಿರೂ, ಮು ಮ್ಮಕ್ಕಳೂ ಇವರೆಲ್ಲರೂ ಆರೋಗ್ಯದಿಂದಿರುವರೇ? ಅವರೆಲ್ಲರೂ ರಾಜನಲ್ಲಿ ವಿಶ್ವಾಸದಿಂದಿರುವರೆ? ಧೃತರಾಷ್ಟ್ರರಾಜನು ಮೊದಲಿನಂತೆ ಬ್ರಾಹ್ಮಣರ ಜೀವನಕ್ಕೆ ಲೋಪವಿಲ್ಲದಂತೆ ನಡೆಸುತ್ತಿರುವನೆ? ನಾನು ಬ್ರಾಹ್ಮಣರಿಗೆ ಕೊಟ್ಟಿದ್ದ ದಾಯಭಾಗಗಳನ್ನು ತಪ್ಪಿಸದೆ ಈಗಲೂ ದುರ್ಯೋಧನನು ಸರಿ ಯಾಗಿ ನಡೆಸುತ್ತ ಬರುವನೆ? ಧೃತರಾಷ್ಟ್ರನೂ, ಅವನ ಮಕ್ಕಳೂ, ಬ್ರಾಹ್ಮಣರ ವಿಷಯದಲ್ಲಿ ಇತರರು ನಡೆಸಿದ ಯಾವುದಾದರೂ ಅತಿಕ್ರಮಗ ಳನ್ನು ವಿಚಾರಿಸದೆ ಉಪೇಕ್ಷಿಸುವುದಿಲ್ಲವಷ್ಟೆ? ಪರಲೋಕದಲ್ಲಿ ಸದ್ಗತಿ ಯನ್ನೂ, ಇಹಲೋಕದಲ್ಲಿ ಯಶಸ್ಸನ್ನೂ ಕೊಡತಕ್ಕ ಬ್ರಾಹ್ಮಣಪರಿಪಾಲನ ವೃತ್ತಿಯನ್ನು ಅವರು ಸರಿಯಾಗಿ ನಡೆಸುತ್ತಿರುವರಷ್ಟೆ? ಓ ಸಂಜಯಾ! ಜೀವಲೋಕದಲ್ಲಿ ಬ್ರಾಹ್ಮಣಪರಿಪಾಲನವೆಂಬ ಈ ವೃತ್ತಿಯೇ ಪ್ರಜೆಗಳಿಗೆ ಉತ್ತಮವಾದ ಮತ್ತು ಸದ್ಗತಿಯನ್ನು ಕಾಣಿಸತಕ್ಕ ಜ್ಯೋತಿಯಂತೆ ಬ್ರಹ್ಮ ನಿಂದ ಕಲ್ಪಿಸಲ್ಪಟ್ಟಿದೆ. ಮಂದಬುದ್ಧಿಯುಳ್ಳ ದುರ್ಯೋಧನಾದಿಗಳು, ಆ ಬ್ರಾಹ್ಮಣರ ವಿಷಯದಲ್ಲಿ ಪ್ರಜೆಗಳಿಂದುಂಟಾಗುವ ಅಪರಾಧವನ್ನು ತಡೆಯ ದಿದ್ದರೆ, ಕೌರವರಿಗೆ ಅದರಿಂದಲೇ ನಾಶವು ಸಿದ್ಧವು. ಸಂಜಯಾ! ಪುತ್ರಸಹಿತನಾದ ಧೃತರಾಷ್ಟ್ರರಾಜನು ತನ್ನ ಮಂತ್ರಿವರ್ಗಗಳಲ್ಲಿ ವಿಶ್ವಾಸ ವನ್ನಿಟ್ಟು, ಅವರ ಜೀವನವನ್ನು ನಡೆಸುತ್ತಿರುವನೆ? ಸ್ವಾರ್ಥಪರರಾದ ದುರ್ಜನರು, ರಾಜನಿಗೆ ಸ್ನೇಹಿತರಂತೆ ನಟಿಸುತ್ತ, ತಮ್ಮ ಜೀವನಕ್ಕಾಗಿ ಐಕಮತ್ಯವಿದ್ದ ಕಡೆಯಲ್ಲಿ ಕಲಹಗಳನ್ನು ತಂದೊಡ್ಡುವುದುಂಟು. ಅದೇ ನೂ ಇಲ್ಲವಷ್ಟೆ? ಅಲ್ಲಿ ಕುರುಗಳೆಲ್ಲರೂ ಪಾಂಡವರಾದ ನಮ್ಮ ವಿಷಯದಲ್ಲಿ

ದೋಷವನ್ನೇನಾದರೂ ಹೇಳುತ್ತಿರುವರೆ? ದ್ರೋಣನಾಗಲಿ, ಅವನ ಮಗ ನಾದ ಅಶ್ವತ್ಥಾಮನಾಗಲಿ, ಕೃಪನಾಗಲಿ ನಮ್ಮಲ್ಲಿ ಲೋಪಗಳನ್ನೇನೂ ಹೇಳುವುದಿಲ್ಲವಷ್ಟೆ? ಕುರುದೇಶವಾಸಿಗಳೆಲ್ಲರೂ ಆಗಾಗ ಪುತ್ರಸಹಿತನಾದ ಧೃತರಾಷ್ಟ್ರನ ಬಳಿಗೆ ಬಂದು, ತಮ್ಮ ಕೋರಿಕೆಗಳನ್ನು ಹೇಳಿಕೊಳ್ಳುತ್ತಿರು ವರೆ? ಅಲ್ಲಿ ಗುಂಪುಗುಂಪಾಗಿ ಸೇರಿ ಬರುವ ಕಳ್ಳರ ಕೂಟವನ್ನು ನೋಡಿ ದಾಗಲಾದರೂ, ಅವರಿಗೆ ಯುದ್ಧವೀರನಾದ ಅರ್ಜುನನ ಸ್ಮರಣವು ಬರು ವುದೆ? ಮಹಾಧನುರ್ಧಾರಿಯಾದ ಅರ್ಜುನನು ಸಿಡಿಲಿನಂತೆ ಧ್ವನಿಯುಳ್ಳ ಬಾಣಗಳನ್ನು ತನ್ನ ಗಾಂಡೀವದಲ್ಲಿ ಸೇರಿಸಿ, ನಾಣನ್ನೆಳೆದುಬಿಡುತಿದ್ದ ರೀತಿಯನ್ನಾದರೂ ಅವರು ನೆನೆಸಿಕೊಳ್ಳುತ್ತಿರುವರೆ? ಸಂಜಯಾ! ಈ ಲೋಕದಲ್ಲಿ ಅರ್ಜುನನಿಗೆ ಸಮಾನನಾದ, ಅಥವಾ ಅವನಿಗಿಂತ ಮೇಲಾದ ಯೋಧನೊಬ್ಬನನ್ನೂ ನಾನು ನೋಡಲಿಲ್ಲ. ಯಾವನು ಒಂದೇ ಕೈಯಾ ಟದಿಂದ ಅರುವತ್ತೊಂದು ಬಾಣಗಳನ್ನು ಏಕಕಾಲದಲ್ಲಿ ಬಿಡಬಲ್ಲನೋ, ಅಂತಹ ಅರ್ಜುನನ ಬಾಣಪ್ರಯೋಗಚಾತುರ್ಯವಾದರೂ ಅವರ ನೆನಪಿ ನಲ್ಲಿರುವುದೇ? ಮಹಾವೇಗಶಾಲಿಯೂ, ಗದಾಪಾಣಿಯೂ ಆದ ಭೀಮ ಸೇನನು, ಸೈನ್ಯದಲ್ಲಿ ಶತ್ರುಸಮೂಹಗಳನ್ನೆಲ್ಲ ನಡುಗಿಸುತ್ತ, ಹೊಡಕೆಯ ಕಾಡುಗಳಲ್ಲಿ ಮದದಾನೆಯಂತೆ ಸಂಚರಿಸಬಲ್ಲವನೆಂಬುದನ್ನು ಅವರು ಸ್ಮರಿ ಸುತ್ತಿರುವರೆ? ಒಂದೇ ಕೂಟವಾಗಿ ಸೇರಿಬಂದ ಕಳಿಂಗಸೈನ್ಯದೊಡನೆ ಯುದ್ಧದಲ್ಲಿ ಯಾವನು ಎಡಬಲ ಪಾರ್ಶ್ವಗಳೆರಡಕ್ಕೂ ಏಕಕಾಲದಲ್ಲಿ ತಾನೊಬ್ಬನೇ ಬಾಣಗಳನ್ನು ಪ್ರಯೋಗಿಸಿ ಜಯಿಸಿದನೋ ಅಂತಹ ಮಹಾ ಬಲವುಳ್ಳ ಸಹದೇವನು ಅವರ ಸ್ಮರಣೆಯಲ್ಲಿರುವನೆ? ಓ ಸಂಜಯಾ! ನೀನು ನೋಡುತ್ತಿರುವಾಗಲೇ ಹಿಂದೆ ಶಿಬಿಗಳನ್ನೂ, ತ್ರಿಗರ್ತರನ್ನೂ ಜಯಿ ಸುವುದಕ್ಕಾಗಿ ನನ್ನಿಂದ ಕಳುಹಿಸಲ್ಪಟ್ಟ ಯಾವ ನಕುಲನು ಪಶ್ಚಿಮದಿಕ್ಕ ನ್ನೆಲ್ಲ ಜಯಿಸಿ ನನಗೆ ವಶಮಾಡಿಕೊಟ್ಟನೋ, ಆ ನಕುಲನ ಸ್ಮರಣೆಯು ಅವರಿಗಿರುವುದಷ್ಟೆ? ಹಿಂದೆ ದುರ್ಮಂತ್ರಿಗಳ ದುರ್ಬೋಧನೆಯಮೇಲೆ, ದುರ್ಯೋಧನನು ಘೋಷಯಾತ್ರೆಯ ನೆವದಿಂದ ದ್ವೈತವನಕ್ಕೆ ಹೋಗಿ, ಅಲ್ಲಿ ತನ್ನ ಕಡೆಯವರೆಲ್ಲರೊಡನೆ ಶತ್ರುಗಳ ಕೈಯ್ಯಲ್ಲಿ ಸೆರೆಸಿಕ್ಕಿ, ಅವಮಾ ನಕ್ಕೆ ಗುರಿಯಾದಾಗ, ಭೀಮಾರ್ಜುನರಿಬ್ಬರೂ ಅವನನ್ನು ಬಿಡಿಸಿ ಕಾಪಾ

ಡಿದರು. ನಾವು ಅರ್ಜುನನಿಗೂ, ಭೀಮಸೇನನು ನಕುಲಸಹದೇವರಿಗೂ ಬೆಂಬಲವಾಗಿರಲು, ಗಾಂಡೀವಧಾರಿಯಾದ ಅರ್ಜುನನು ಆ ಶತ್ರುಸ ಮೂಹನ್ನೋಡಿಸಿ ಕ್ಷೇಮದಿಂದ ಬಂದನು. ಈ ಸಂಗತಿಯನ್ನೆಲ್ಲ ಆ ದುರ್ಯೋಧನನು ನೆನಪಿನಲ್ಲಿಟ್ಟಿರುವನೆ? ಓ ಸಂಜಯಾ! ಆ ಧೃತರಾಷ್ಟ್ರ ಪುತ್ರನನ್ನೇನೋ ನಾವು ಯಾವ ಉಪಾಯಗಳಿಂದಲೂ ಮೆಚ್ಚಿಸುವುದಕ್ಕೆ ಸಾಧ್ಯವಿಲ್ಲದಿರುವಾಗ, (ಮೇಲೆ ಹೇಳಿದಂತೆ) ಅವನಿಗೆ ಹಿತವಾದ ಈ ಒಂ ದು ಒಳ್ಳೇ ಕಾರ್ಯದಿಂದ ಮಾತ್ರ ಮೆಚ್ಚಿಕೆಯನ್ನುಂಟುಮಾಡಲು ಹೇಗೆ ತಾನೇ ಶಕ್ಯವು?'' ಎಂದನು.

ಇದು ಇಪ್ಪತ್ತುಮೂರನೆಯ ಅಧ್ಯಾಯವು.

---

ಸಂಜಯನು ಯುಧಿಷ್ಠಿರನ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳಿ ಧೃತರಾಷ್ಟ್ರನ ಸಂದೇಶವನ್ನೂ ತಿಳಿಸಿದುದು.

ಆಗ ಸಂಜಯನು ಯುಧಿಷ್ಠಿರನನ್ನು ಕುರಿತು "ಓ ಪಾಂಡುಪುತ್ರಾ! ನೀನು ಇದುವರೆಗೆ ಯಾರಯಾರ ವಿಚಾರವನ್ನು ಕೇಳಿದೆಯೋ ಅವರೆಲ್ಲರೂ ಕ್ಷೇಮದಿಂದಿರುವರು. ನೀನು ವಿಚಾರಿಸಿದ ಕುರುಗಳೂ, ಕುರುದೇಶದ ಸಮಸ್ತಜನರೂ ಆರೋಗ್ಯದಿಂದಿರುವರು. ಆ ದುರ್ಯೋಧನನಲ್ಲಿ ಸಾಧು ಗಳಾದ ವೃದ್ಧರೂ ಇರುವರು, ಅಲ್ಪ ಬುದ್ಧಿಯುಳ್ಳ ಪಾಪಿಗಳೂ ಸೇರಿಕೊಂ ಡಿರುವರು. ಆ ದುರ್ಯೋಧನನು ತನ್ನ ಶತ್ರುಗಳಿಗಾದರೂ ಉದಾರ ಮನ ಸ್ಸಿನಿಂದ ಕೊಡತಕ್ಕವನು. ಅಂತವನು ಬ್ರಾಹ್ಮಣರಿಗೆ ನೀನು ಕೊಟ್ಟಿರುವ ಮಾನ್ಯಗಳನ್ನೇಕೆ ತಪ್ಪಿಸುವನು? ಆದರೆ ಈಗಲೂ ದುರ್ಯೋಧನನು ತನಗೆ ಯಾವ ವಿಧದಲ್ಲಿಯೂ ದ್ರೋಹಮಾಡದ ಪರಮಸಾಧುಗಳಾದ ನಿಮ್ಮ ವಿಷಯದಲ್ಲಿ ದ್ರೋಹವನ್ನೆಣಿಸುತ್ತಿರುವುದು ಮಾತ್ರ ಅನುಚಿತವು. ಸಾಧು ಚರಿತ್ರವುಳ್ಳ ನಿಮ್ಮನ್ನು ದ್ವೇಷಿಸುವ ಆ ಧೃತರಾಷ್ಟ್ರಪುತ್ರನು ಮಿತ್ರದ್ರೋ ಹಿಯೆನಿಸಿಕೊಂಡಿರುವನು. ಓ ಅಜಾತಶತ್ರೂ! ಮಾಡುವುದೇನು? ಆ ದುರ್ಯೋಧನನ ಕೆಟ್ಟ ನಡತೆಯನ್ನು ಅವನ ಮುದಿತಂದೆಯೂ ಚೆನ್ನಾಗ

ಬಲ್ಲನು. ಅದಕ್ಕಾಗಿ ಅವನು ಬಹಳವಾಗಿ ಕೊರಗುತ್ತಲೂ ಇರುವನು. ಒಳಗೊಳಗೆ ಸಂಕಟಪಡುವನು. ಮಿತ್ರದ್ರೋಹವೆಂಬುದು ಎಲ್ಲಾ ಪಾತಕಗಳಿಗಿಂತಲೂ ಬಹಳ ಪ್ರಬಲವಾದ ಪಾಪವೆಂಬುದು ಆಗಾಗ ಬ್ರಾಹ್ಮಣರ ಗೋಷ್ಠಿಯಲ್ಲಿ ಹೇಳುತ್ತಿರುವುದನ್ನೂ ಅವನು ಕೇಳುತ್ತಿರುವನು. ಮಹಾರಾಜಾ! ಈಗಲೂ ರಾಜಸಭೆಯಲ್ಲಿ ಎಲ್ಲರಿಗೂ ನಿನ್ನ ಸ್ಮರಣವು ಆಗಾಗ ಬರುತ್ತಲೇ ಇರುವುದು. ಯುದ್ಧಕಾಲದಲ್ಲೆಲ್ಲ ಅರ್ಜುನನನ್ನು ನೆನೆಸಿಕೊಳ್ಳುವರು. ಶಂಖ ದುಂದುಭಿಧ್ವನಿಗಳು ಕಿವಿಗೆ ಬಿದ್ದಾಗಲೆಲ್ಲಾ ಅವರಿಗೆ ಗದಾಪಾಣಿಯಾದ ಭೀಮನ ಸ್ಮರಣವು ಬರುವುದು. ಇದರಂತೆಯೇ ಯುದ್ಧಕಾಲವು ಬಂದಾಗ ಅವರಿಗೆ, ಯುದ್ಧದಲ್ಲಿ ಎಂತವರಿಗೂ ದುರ್ಜಯರಾಗಿ, ಸಮಸ್ತದಿಕ್ಕುಗಳನ್ನೂ ನಿರಂಕುಶವಾಗಿ ಸುತ್ತಿಸುತ್ತಿ ತಮ್ಮ ಬಾಣವರ್ಷಗಳಿಂದ ಶತ್ರುಸೇನೆಯನ್ನು ಮರೆಸತಕ್ಕ ಮಹಾರಥರಾದ ಮಾದ್ರೀಪುತ್ರರ ಸ್ಮರಣೆಯೂ ಬರುವುದು. ರಾಜೇಂದ್ರಾ! ಸಮಸ್ತಧರ್ಮಗಳಿಗೂ ನೆಲೆಯಾದ ನೀನೇ ಅಂತಹ ಕಷ್ಟಕ್ಕೆ ಗುರಿಯಾದೆಯಲ್ಲವೆ? ಇದನ್ನು ನೋಡಿದರೆ ಮನುಷ್ಯನಿಗೆ ಮುಂದೆ ಯಾವ ಕಾಲಕ್ಕೆ ಏನೇನು ಬರುವುದೆಂಬುದನ್ನು ಯಾರಿಗೂ ತಿಳಿಯಲು ಸಾಧ್ಯವಿಲ್ಲವೆಂದೆಣಿಸುವೆನು. ಓ ಅಜಾತಶತ್ರೂ! ಅನೇಕ ಕಷ್ಟಗಳನ್ನನುಭವಿಸಿದ ನೀನು ಮುಂದೆ ಸಮಾಧಾನಸ್ಥಿತಿಗೆ ಬರುವ ಮಾರ್ಗವನ್ನು ನಿನ್ನ ಪ್ರಜ್ಞಾಬಲದಿಂದ ತೋರಿಸಬೇಕು. ಇಂದ್ರನಿಗೆ ಣೆಯೆನಿಸಿದ ಪಂಚಪಾಂಡವರಲ್ಲಿ, ಯಾರೂ ಕಾಮಕ್ಕಾಗಿ ಧರ್ಮವನ್ನು ಬಿಟ್ಟುಕೊಡುವರಲ್ಲವೆಂಬುದು ಲೋಕಪ್ರಸಿದ್ಧವಾದ ಸಂಗತಿ! ಆದುದರಿಂದ ಓ ಧರ್ಮಪುತ್ರಾ! ಕೌರವರೂ, ಸೃಂಜಯರೂ, ಪಾಂಡವರೂ, ಇನ್ನೂ ಈ ಉಭಯಪಕ್ಷಗಳಿಗೆ ಸೇರಿದ ಬೇರೆ ಎಲ್ಲಾ ರಾಜರೂ ಹೇಗೆ ಕ್ಷೇಮದಿಂದಿರುವರೋ ಆ ಮಾರ್ಗವನ್ನು ನೀನು ನಿನ್ನ ವಿವೇಚನೆಯಿಂದ ಪರ್ಯಾಲೋಚಿಸಿ, ಸಮಾಧಾನಕ್ಕೆ ತರಬೇಕು. ನಿನ್ನ ತಂದೆಯಾದ ಧೃತರಾಷ್ಟ್ರನು ನಿನ್ನಿನ ರಾತ್ರಿಯಲ್ಲಿ, ನನ್ನೊಡನೆ ಹೇಳಿಕಳುಹಿಸಿರುವ ಮಾತುಗಳನ್ನೆಲ್ಲ ನೀನು ನಿನ್ನ ಎಲ್ಲಾ ಮಂತ್ರಿಪುತ್ರಾದಿಗಳೊಡನೆ ಸೇರಿ ಸಾವಧಾನವಾಗಿ ಕೇಳಬೇಕು'' ಎಂದನು.

ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು.

ಮುಂದೆ ಯುದ್ಧಪ್ರಯತ್ನವನ್ನು ಬಿಟ್ಟು ಕೌರವಪಾಂಡವ
ರಿಬ್ಬರೂ ಸಮಾಧಾನಮಾಡಿಕೊಳ್ಳುವುದೇ ಭೀಷ್ಮಾದಿ
ಗಳೆಲ್ಲರ ಅಭಿಪ್ರಾಯವೆಂದು ಸಂಜಯನು
ಧರ್ಮರಾಜನಿಗೆ ತಿಳಿಸಿದುದು.

ಆಮೇಲೆ ಯುಧಿಷ್ಠಿರನು ಸಂಜಯನನ್ನು ಕುರಿತು “ಓ ಗಾವಲ್ಗಣೇ! ಪಾಂಡವರೂ, ಸೃಂಜಯರೂ, ಶ್ರೀಕೃಷ್ಣನೂ ಸಾತ್ಯಕಿಯೂ, ವಿರಾಟನೂ, ಎಲ್ಲರೂ ಇಲ್ಲಿ ಒಂದಾಗಿ ಸೇರಿರುವರು. ಆದುದರಿಂದ ಧೃತರಾಷ್ಟ್ರಮಹಾರಾಜನು ನಿನ್ನೊಡನೆ ಹೇಳಿಕಳುಹಿಸಿರುವ ಸಂಗತಿಗಳನ್ನೆಲ್ಲ ನೀನು ಅವರೆಲ್ಲರ ಮುಂದೆಯೇ ತಿಳಿಸು” ಎಂದನು. ಆದರಂತೆಯೇ ಸಂಜಯನು, ಅವರೆಲ್ಲರೂ ನೆರೆದಿದ್ದ ಸಭೆಯಮುಂದೆ ಹೀಗೆಂದು ಹೇಳಲಾರಂಭಿಸಿದನು. “ಓ ಮಹಾತ್ಮರೇ! ಎಲ್ಲರೂ ಸಾವಧಾನವಾಗಿ ಕೇಳಬೇಕು. ಅಜಾತಶತ್ರುವಾದ ಈ ಧರ್ಮರಾಜನು, ಈ ಭೀಮಾರ್ಜುನರು, ಮಾದ್ರೀಪುತ್ರರಾದ ಈ ನಕುಲಸಹದೇವರು, ವಸುದೇವಪುತ್ರನಾದ ಶ್ರೀಕೃಷ್ಣನು, ಸಾತ್ಯಕಿ, ವೃದ್ಧರಾದ ವಿರಾಟ ದ್ರುಪದರು, ಪೃಷತವಂಶದಲ್ಲಿ ಹುಟ್ಟಿ ಯಜ್ಞಸೇನಪುತ್ರನೆನಿಸಿದ ಧೃಷ್ಟದ್ಯುಮ್ನನು, ಮತ್ತು ಇಲ್ಲಿ ನೆರೆದಿರುವ ನೀವೆಲ್ಲರೂ ಈಗ ಕೌರವರೆಲ್ಲರ ಕ್ಷೇಮವನ್ನು ಕೋರಿ ನಾನು ತಿಳಿಸುವ ಮಾತನ್ನು ಸಾವಧಾನದಿಂದ ಕೇಳಬೇಕು. ಧೃತರಾಷ್ಟ್ರಮಹಾರಾಜನು ಕೌರವಪಾಂಡವರಲ್ಲಿ ಸಮಾಧಾನಕ್ಕೆ ಅನುಮೋದಿಸಿ, ಒಡನೆಯೇ ನನ್ನನ್ನು ರಥದಮೇಲೇರಿಸಿ ಇಲ್ಲಿಗೆ ಕಳುಹಿಸಿದನು. ಪುತ್ರ ಮಿತ್ರ ಬಂಧು ಸಹೋದರರೊಡಗೂಡಿದ ಆ ಧೃತರಾಷ್ಟ್ರರಾಜನು ಹೇಳಿದ ಮಾತನ್ನು ಇಲ್ಲಿ ನೀವೂ, ಪಾಂಡವರೂ ಅನುಮೋದಿಸಬೇಕು. ಹೇಗಾದರೂ ಸಮಾಧಾನವು ಏರ್ಪಡಬೇಕಾದುದು ಮುಖ್ಯವು. ಕುಂತೀಪುತ್ರರೆ! ನೀವಾದರೋ ಎಲ್ಲಾ ಧರ್ಮಗಳನ್ನು ತಿಳಿದವರು. ಶುದ್ಧವಾದ ಆಕಾರದಿಂದಲೂ, ಆಕಾರಕ್ಕೆ ತಕ್ಕ ಮೃದುಸ್ವಭಾವದಿಂದಲೂ, ಕಪಟವಿಲ್ಲದ ಋಜುತ್ವದಿಂದಲೂ ಕೂಡಿದವರು. ಉತ್ತಮ ಕುಲದಲ್ಲಿ ಹುಟ್ಟಿದವರು. ಕಠಿನ ಸ್ವಭಾವವಿಲ್ಲದವರು. ಉದಾರಿಗಳು. ಅಕಾರ್ಯಕ್ಕೆ ಲಜ್ಜೆಪಡತಕ್ಕವರು. ಕಾರ್ಯನಿಶ್ಚಯವನ್ನು ಚೆನ್ನಾಗಿ ಬಲ್ಲವರು. ಶತ್ರುಭಯಂಕರವಾದ ಸೇನಾಬಲ

ವುಳ್ಳವರು. ಹೀನಕಾರ್ಯವು ನಿಮ್ಮನ್ನು ಹೊಂದಲಾರದು. ಏಕೆಂದರೆ, ನಿಮ್ಮ ಸದ್ಗುಣಗಳು ಅಂತಹ ಪ್ರವೃತ್ತಿಗೆ ದಾರಿಯನ್ನೇ ಕೊಡುವುದಿಲ್ಲ. ನಿಮ್ಮಲ್ಲಿ ಆಕಸ್ಮಾತ್ತಾಗಿ ಏನಾದರೂ ಅಲ್ಪಸ್ವಲ್ಪ ದೋಷವು ನಿಮಗೂ ತಿಳಿಯದಂತೆ ತಲೆದೋರಿದರೂ, ಅದು ಶುದ್ಧವಾದ ಬಿಳಿಯ ಬಟ್ಟೆಯಲ್ಲಿ ಕರಿಯ ಚುಕ್ಕಿಯಂತೆ ಬಹುಬೇಗನೆ ಪ್ರಕಾಶಕ್ಕೆ ಬರುವುದು. ಇಂತಹ ನಿಮ್ಮೊಡನೆ ವೈರವನ್ನು ಬೆಳೆಸಿ, ಯುದ್ಧಮಾಡಲು ಯಾವ ವಿವೇಕಿಯು ತಾನೇ ಇಷ್ಟಪಡುವನು? ಯುದ್ಧವೆಂಬುದು ಕುರುಗಳ ಸರ್ವನಾಶಕ್ಕೆ ಕಾರಣವೆಂದೂ ಪಾಪಗಳಿಗೆಲ್ಲ ಜನ್ಮಸ್ಥಾನವಾಗಿ ನರಕಕಾರಣವೆಂದೂ, ಯುದ್ಧದ ಪರಿಣಾಮವು, ಜಯವಾದರೂ, ಅಪಜಯವಾದರೂ ಎರಡೂ ಸಮಾನವೇ ಎಂದೂ ತಿಳಿದ ವಿವೇಕಿಯು ಯಾವನು ತಾನೇ ಯುದ್ಧಕಾರ್ಯದಲ್ಲಿ ಪ್ರವರ್ತಿಸುವನು? ತಮ್ಮ ಜ್ಞಾತಿಗಳಾದ ದುರ್ಯೋಧನಾದಿಗಳಿಗೆ ಬಂದ ವಿಪತ್ತನ್ನು ತಪ್ಪಿಸಿ, ಅವರಿಗೆ ಕ್ಷೇಮಕರವಾದ ಕಾರ್ಯವನ್ನು ಮಾಡಿದ ಈ ಪಾಂಡವರೇ ಪರಮ ಧನ್ಯರು! ಕುರುವಂಶಕ್ಕೆ ಅವರೇ ನಿಜವಾದ ಸ್ನೇಹಿತರು. ಅವರೇ ಬಂಧುಗಳು. ತಾವು ಪಾಂಡವರ ರಕ್ಷಣೆಗೊಳಗಾಗಿಯೂ, ಅವರಲ್ಲಿ ದ್ವೇಷವನ್ನು ಬೆಳೆಸಿದುದರಿಂದ ಕೌರವರು ಲೋಕನಿಂದಿತರಾಗಿ, ತಮ್ಮ ಜೀವನವನ್ನೇ ಕೆಡಿಸಿಕೊಂಡರು. ಈಗ ನೀವೂ ನಿಮ್ಮ ಜ್ಞಾತಿಗಳಾದ ಕೌರವರನ್ನು ಯುದ್ಧದಲ್ಲಿ ಕೊಂದು, ನಿರಂಕುಶವಾದ ರಾಜ್ಯಸುಖವನ್ನು ಅನುಭವಿಸುವುದಾದರೂ, ಆ ನಿಮ್ಮ ಜೀವನವು ಮರಣಕ್ಕೆ ಸಮಾನವೇ ಹೊರತು ಅದು ಶುದ್ಧವಾದ ಜೀವನವೆನಿಸುವುದಿಲ್ಲ. ಏಕೆಂದರೆ, ಜ್ಞಾತಿಗಳನ್ನು ಕೊಲ್ಲುವುದರಿಂದ ಸಂಪಾದಿಸಿದ ಬದುಕು ನೆಮ್ಮದಿಯಾದ ಬದುಕಲ್ಲ. ಧೃಷ್ಟದ್ಯುಮ್ನನ ಬಾಹುಬಲದಿಂದ ರಕ್ಷಿತರಾಗಿ, ಕೃಷ್ಣ, ಸಾತ್ಯಕಿ, ಚೇಕಿತಾನ ಮೊದಲಾದವರೊಡನೆ ಕೂಡಿದ ನಿಮ್ಮನ್ನು ಸಮಸ್ತ ದೇವತೆಗಳೊಡಗೂಡಿದ ದೇವೇಂದ್ರನಾದರೂ ಜಯಿಸಲಾರನೆಂಬುದು ನಿಜವು. ಇದರಂತೆಯೇ ಅತ್ತಲಾಗಿ ಭೀಷ್ಮ, ದ್ರೋಣ, ಕೃಪಾಶ್ವತ್ಥಾಮರಿಂದಲೂ, ಕರ್ಣಶಲ್ಯರಿಂದಲೂ, ಇನ್ನೂ ಅನೇಕ ರಾಜರಿಂದಲೂ ರಕ್ಷಿತರಾದ ಆ ಕೌರವರನ್ನಾದರೂ ಯುದ್ಧದಲ್ಲಿ ಜಯಿಸಲು ಯಾರಿಗೆ ತಾನೇ ಸಾಧ್ಯವು? ಧೃತರಾಷ್ಟ್ರಪುತ್ರನಾದ ಆ ದುರ್ಯೋಧನನಲ್ಲಿರುವ ಮಹತ್ತಾದ ಸೈನ್ಯವನ್ನಿ

ದಿರಿಸಿ, ಅಪಾಯಕ್ಕೀಡಾಗದೆ ತಿರುಗಿಬರುವುದಕ್ಕೂ ಯಾವನೂ ಸಮರ್ಥ ನಲ್ಲ. ಆದುದರಿಂದ ಓ ಮಹಾತ್ಮರೇ! ಈ ವಿಷಯಗಳನ್ನೆಲ್ಲ ಪರ್ಯಾಲೋಚಿಸಿದ ನನಗೆ, ಮುಂದೆ ಯುದ್ಧದಲ್ಲಿ ಜಯದಿಂದಾಗಲಿ, ಅಪಜಯ ದಿಂದಾಗಲಿ, ಯಾರಿಗೂ ಯಾವ ವಿಧವಾದ ಕ್ಷೇಮವೂ ಉಂಟಾಗುವಹಾಗೆ ತೋರಲಿಲ್ಲ. ಈ ಪಾಂಡವರಾದರೂ ನೀಚಕುಲದಲ್ಲಿ ಹುಟ್ಟಿದ ಅಲ್ಪ ಜನಗಳಂತೆ ಧರ್ಮಾರ್ಥಗಳೆರಡಕ್ಕೂ ಹಾನಿಕರವಾದ ಈ ಕಾರ್ಯದಲ್ಲಿ ಹೇಗೆತಾನೇ ವರ್ತಿಸುವರು? ಆದುದರಿಂದ ಈಗ ನಾನು ಶ್ರೀಕೃಷ್ಣನನ್ನೂ, ವೃದ್ಧನಾದ ಪಾಂಚಾಲರಾಜನನ್ನೂ, ವಿನಯದಿಂದ ತಲೆಬಗ್ಗಿ ಪ್ರಾರ್ಥಿಸಿ ಕೊಳ್ಳುವೆನು. ನಿಮ್ಮಲ್ಲಿ ಶರಣಾಗತನಾಗಿ ಕೈಮುಗಿದು ಬೇಡುವೆನು. ಕೌರವರಿಗೂ, ಸಂಜಯರಿಗೂ ಹೇಗೆ ಕ್ಷೇಮವುಂಟಾಗುವುದೋ ಹಾಗೆ ನಡೆಸಬೇಕು. ಮುಂದೆ ಸರ್ವನಾಶಕವಾದ ಯುದ್ಧಕ್ಕೆ ಅವಕಾಶಕೊಡ ದಂತೆ ಮಾಡಬೇಕು. ಈ ವಿಷಯದಲ್ಲಿ ಶ್ರೀಕೃಷ್ಣನಾಗಲಿ, ಧನಂಜಯ ನಾಗಲಿ "ಇದು ಹಾಗಲ್ಲ! ಇದು ಹೀಗೆ!" ಎಂದು ಯಾವ ಪ್ರತಿಮಾತ ನ್ನೂ ಆಡಲಾರರೆಂದು ನಂಬಿರುವೆನು. ತನ್ನಲ್ಲಿ ಯಾಚಿಸಿದವರಿಗೆ ಅವರು ಪ್ರಾಣಗಳನ್ನಾದರೂ ಕೊಡಲು ಸಿದ್ಧರಾಗಿರತಕ್ಕವರು. ಇತರ ವಿಷ ಯಗಳಲ್ಲಿ ಹೇಳಬೇಕಾದುದೇನು? ಸಂಧಿಕಾರ್ಯವು ಸಿದ್ಧಿಸುವುದಕ್ಕಾ ಗಿಯೇ ನಾನು ಇಷ್ಟನ್ನು ಹೇಳಬೇಕಾಯಿತು. ಧೃತರಾಷ್ಟ್ರನಿಗೂ, ಭೀಷ್ಮ ನಿಗೂ ನಿಮ್ಮಲ್ಲಿ ಶಾಂತಿಯುಂಟಾಗಬೇಕೆಂಬುದೇ ಉದ್ದೇಶವು" ಎಂದನು.

ಇದು ಇಪ್ಪತ್ತೈದನೆಯ ಅಧ್ಯಾಯವು.

---

ಧರ್ಮರಾಜನು ದುರ್ಯೋಧನನಿಗೆ ತಮ್ಮನ್ನು ಜಯಿಸುವುದು
ಅಸಾಧ್ಯವೆಂದು ತಿಳಿಸಿ, ತಮಗೆ ರಾಜ್ಯದಾನ
ದಿಂದಲೇ ಸಮಾಧಾನವು ಏರ್ಪಡು
ವುದಾಗಿ ಹೇಳಿದುದು.

ಆಮೇಲೆ ಯುಧಿಷ್ಠಿರನು ಸಂಜಯನನ್ನು ಕುರಿತು, "ಸಂಜಯಾ! ನೀನು ಯುದ್ಧಕ್ಕಾಗಿ ಇಷ್ಟೊಂದು ಹೆದರುತ್ತಿರುವೆಯಲ್ಲವೆ? ನಾನಾದರೂ

ಆ ಯುದ್ಧವನ್ನನುಮೋದಿಸಿ ನಿನಗೆ ಹೇಳಿದ ಮಾತೇನಿದೆ? ಯುದ್ಧಕ್ಕಿಂತಲೂ, ಯುದ್ಧವಿಲ್ಲದೆ ಶಾಂತಿಯನ್ನು ಮಾಡಿಕೊಳ್ಳುವುದೇ ಎಷ್ಟೋ ಮೇಲು! ಆದರೆ, ಯುದ್ಧಕ್ಕೆ ಕಾರಣವಾದ ಸ್ವತ್ತು ಕೈಗೆ ಬಂದಮೇಲೆ ಯಾವನು ತಾನೇ ಅದಕ್ಕೆ ಪ್ರಯತ್ನಿಸುವನು? ಮನುಷ್ಯನು ಯಾವ ಕಾರ್ಯವನ್ನೂ ಮಾಡದೆ, ಅವನ ಮನಸ್ಸಿನಲ್ಲಿ ಕೋರಿದುದೆಲ್ಲ ಕೈಗೂಡುವುದಾದರೆ, ಯುದ್ಧಕ್ಕಿಂತಲೂ ಸುಲಭವಾದ ಕಾರ್ಯಕ್ಕಾದರೂ ಅವನು ಪ್ರವರ್ತಿಸಲಾರನೆಂಬುದು ಎಲ್ಲರಿಗೂ ಚೆನ್ನಾಗಿ ತಿಳಿದ ವಿಷಯವೇ! ಹೀಗಿರುವಾಗ ಯಾವನು ತಾನೇ ನಿಷ್ಕಾರಣವಾಗಿ ಯುದ್ಧವನ್ನು ಬಯಸುವನು? ದೈವಶಾಪಕ್ಕೆ ಗುರಿಯಾದವನಲ್ಲದೇ ಅಂತಹ ಅನರ್ಥಕ್ಕಾಗಿ ಬಯಸುವನು? ನಾವೂ ನಮ್ಮ ಸುಖವನ್ನೇಪೇಕ್ಷಿಸಿ ಕಾರ್ಯಗಳನ್ನು ಮಾಡುವವರಾದರೂ, ಧರ್ಮಕ್ಕೆ ವಿರುದ್ಧವಲ್ಲದೆಯೂ, ಲೋಕಕ್ಕೆ ಸಮ್ಮತವಾಗಿಯೂ ಇರುವ ಕಾರ್ಯವನ್ನೇ ನಡೆಸತಕ್ಕವರು ವಾಸ್ತವದಲ್ಲಿ ಇಂದ್ರಿಯಪ್ರೀತಿಗಾಗಿ ನಡೆಸತಕ್ಕ ಕಾರ್ಯವೆಲ್ಲ ದುಃಖವೆನಿಸುವುದು. ಸುಖಪ್ರಾಪ್ತಿಯನ್ನೂ, ದುಃಖನಿವೃತ್ತಿಯನ್ನೂ ಅಪೇಕ್ಷಿಸುವವನು, ಧರ್ಮಕ್ಕೆ ವಿರುದ್ಧವಲ್ಲದ ಕಾರ್ಯವನ್ನು ಆರಂಭಿಸಬೇಕು. ಆಶೆಗೆ ವಶವಾದ ಇಂದ್ರಿಯಗಳ ಪ್ರವೃತ್ತಿಯನ್ನು ತಿಳಿದ ವಿವೇಕಿಯು ಆ ಇಂದ್ರಿಯತೃಪ್ತಿಗಾಗಿ ಶರೀರವನ್ನು ಕಷ್ಟಪಡಿಸಲಾರನು. ಸರ್ವ ಧರ್ಮಗಳಿಗೂ ದೂರವಾದ ಅಂತಹ ತೃಷ್ಣೆಯನ್ನು (ದುರಾಶೆಯನ್ನು) ಸಂಪೂರ್ಣವಾಗಿ ತ್ಯಜಿಸಬೇಕು. ಉರಿಯುವ ಬೆಂಕಿಗೆ ಕಟ್ಟಿಗೆಯನ್ನು ತಂದುಹಾಕಿದಷ್ಟೂ ಮೇಲೆಮೇಲೆ ಉರಿಯು ಹೆಚ್ಚುತ್ತಾ ಬರುವಂತೆ, ಅರ್ಥಕಾಮುಗಳಲ್ಲಿ ಆಸೆಯಿದ್ದವನಿಗೆ ಅವು ಲಭಿಸುತ್ತಿದ್ದಷ್ಟೂ ಆ ಆಶೆಯು ತುಪ್ಪದಿಂದ ಹೋಮಮಾಡಲ್ಪಟ್ಟ ಅಗ್ನಿಯಂತೆ ಮೇಲೆಮೇಲೆ ಹೆಚ್ಚುತ್ತ ಹೋಗುವುದೇ ಹೊರತು, ಅವುಗಳಲ್ಲಿ ತೃಪ್ತಿ ಹುಟ್ಟಲಾರದು. ಸಂಜಯಾ! ಧೃತರಾಷ್ಟ್ರನೇ ಈಗ ಇದಕ್ಕೆ ಒಳ್ಳೇ ನಿದರ್ಶನವು. ಈಗ ಅವನು ಅನುಭವಿಸುತ್ತಿರುವ ಐಶ್ವರ್ಯವೆಷ್ಟೆಂಬುದನ್ನೂ, ನಾವು ಅನುಭವಿಸುತ್ತಿರುವ ಕಷ್ಟವನ್ನೂ ನೀನೇ ಹೋಲಿಸಿನೋಡು! ಎಲ್ಲಾ ರಾಜ್ಯವೂ ತಮಗೇ ಬಂದರೆ, ತಾವೇ ಪೂರ್ಣಸುಖವನ್ನನುಭವಿಸಬಹುದೆಂದು ಅವರು ತಿಳಿದಿರುವರು. ಆಗಲೂ ಅದು ಅವರಿಗೆ ತೃಪ್ತಿ

ಯನ್ನು ಕೊಡಲಾರದು. ಕಲಹಕ್ಕೆ ನಿಂತರೂ, ಪುಣ್ಯಮಾಡಿದವನೇ ಯು
ದ್ಧಗಳಲ್ಲಿ ಜಯಿಸುವನೇ ಹೊರತು, ಪುಣ್ಯಹೀನನು ಆ ಮೇಲ್ಮೆಗೆ ಪಾತ್ರ
ನಾಗನು. ಹಾಗೆಯೇ ಪುಣ್ಯಹೀನನು ಒಳ್ಳೇ ಗಾನಗಳನ್ನು ಕೇಳಲಾ
ರನು. ಪುಷ್ಪ ಚಂದನಾದಿ ಸುಗಂಧಗಳನ್ನೂ ಅನುಭವಿಸಲಾರನು. ಉತ್ತ
ಮ ವಸ್ತ್ರಗಳನ್ನೂ ಉಡಲಾರನು. ಈ ಭಾಗಗಳನ್ನೆಲ್ಲ ಯೋಚಿಸಿದಾಗ,
ಆ ಕೌರವರೆಲ್ಲರೂ ಪುಣ್ಯವಂತರೆಂದೇ ಹೇಳಬೇಕು. ನಾವು ಅಂತಹ
ಪುಣ್ಯಭಾಗಿಗಳಲ್ಲದುದರಿಂದಲೇ ಮೇಲೆ ಹೇಳಿದ ಸಮಸ್ತ ಭೋಗಗಳಿಗೂ
ದೂರವಾಗಿ ಕಾಡಿನಲ್ಲಿ ಅಲೆಯುತಿದ್ದೆವು. ನಮಗೆ ಆ ದುರ್ದಶೆಯಿಲ್ಲ
ದಿದ್ದರೆ, ಆ ಧೃತರಾಷ್ಟ್ರನು ಹೇಗೆತಾನೇ ನಮ್ಮನ್ನು ಕೌರವರಿಂದ ದೂರ
ಮಾಡಿ ಅಟ್ಟಿಬಿಡುತಿದ್ದನು. ಆದರೇನು? ತಿಳಿವಳಿಕೆಯಿಲ್ಲದವನೇ ಇಂತ
ಹ ಭೋಗಗಳಿಗೆ ಆಸೆಪಡುವನು? ಇಂತಹ ಕಾಮವು ಶರೀರದೊಳಗೆ
ಸೇರಿದಾಗ ಹೃದಯವನ್ನು ಸಂಕಟಗೊಳಿಸುತ್ತಲೇ ಇರುವುದು. ಇಂತಹ
ಕಾಮಕ್ಕೊಳಗಾಗಿ ಸಂಕಟದಲ್ಲಿ ಸಿಕ್ಕಿಬಿದ್ದಾಗ ರಾಜನು ಇತರರಿಂದ
ತನಗೆ ಸಹಾಯವನ್ನಪೇಕ್ಷಿಸುವನು. ಇದು ತಪ್ಪು! ಏಕೆಂದರೆ ತನ್ನಂತೆ
ಯೇ ಇತರರೂ ತನ್ನಲ್ಲಿರುವರೆಂದು ಅವನು ಭಾವಿಸಬೇಕು. ವಸಂತ
ಋತುವಿನಲ್ಲಿ ಒಳ್ಳೇ ಬಿಸಿಲೇರಿದ್ದಾಗ, ದಟ್ಟವಾಗಿ ಬೆಳೆದ ಒಂದು ಪೊದೆಗೆ
ತಾನೇ ಬೆಂಕಿಯನ್ನಿಟ್ಟು, ಅದು ವಾಯುವಶದಿಂದ ಮೇಲೆಮೇಲೆ ಪ್ರಬಲ
ವಾಗಿ ಉರಿಯುತ್ತಿದ್ದಾಗ, ಅದರಿಂದ ತಾನು ತಪ್ಪಿಸಿಕೊಂಡು ಬರಲಾರದೆ,
ತನ್ನ ಸ್ಥಿತಿಗಾಗಿ ತಾನು ಸಂಕಟಪಡುವಂತೆ, ಧೃತರಾಷ್ಟ್ರನು ತನ್ನಿಂದ
ತಾನೇ ಈ ಸಂಕಟಗಳನ್ನೆಲ್ಲ ತಂದುಕೊಂಡನು. ಆ ಧೃತರಾಷ್ಟ್ರನು, ಕೇ
ವಲ ದುರ್ಬುದ್ಧಿಯುಳ್ಳವನೂ, ಯಾವಾಗಲೂ ವಕ್ರಮಾರ್ಗವನ್ನೇ ಹಿಡಿಯ
ತಕ್ಕವನೂ, ಮೂಢನೂ, ಯೋಗ್ಯಮಂತ್ರಿಗಳಿಲ್ಲದವನೂ ಆದ ತನ್ನ ಮಗ
ನನ್ನು ಕಟ್ಟಿಕೊಂಡು, ಅವನನ್ನು ಅಷ್ಟು ಮೇಲಕ್ಕೇರಿಸಿ, ಈಗ ಇಷ್ಟು ದೈ
ನ್ಯದಿಂದ ಮಾತಾಡುವುದೇಕೆ? ಆ ದುರ್ಯೋಧನನಾದರೋ, ತನಗೆ ಪರ
ಮಾಪ್ತನಾದ ವಿದುರನನ್ನೇ ಅನಾಪ್ತನಂತೆ ಭಾವಿಸಿ, ಆವನ ಮಾತುಗಳ
ನ್ನು ತಿರಸ್ಕರಿಸಿ, ಅವನನ್ನು ಅವಮಾನಗೊಳಿಸುತ್ತಿರುವನು. ಮಗನಲ್ಲಿ
ವಿಶೇಷ ಮೋಹವುಳ್ಳ ಧೃತರಾಷ್ಟ್ರನೂ ಕೂಡ, ಆ ಮಗನ ಮೆಚ್ಚಿಕೆಗಾಗಿ,

ತಿಳಿದೂತಿಳಿದೂ ಅಧರ್ಮವನ್ನೇ ಹಿಡಿಯುತ್ತಿರುವನು. ವಿದುರನಾದರೋ ಮಹಾಮೇಧಾವಿ! ಕುರುಗಳಿಗೆ ಯಾವಾಗಲೂ ಮೇಲ್ಮೆಯನ್ನೇ ಕೋರತಕ್ಕವನು. ಅನೇಕ ವಿಷಯಗಳನ್ನು ಕೇಳಿಬಲ್ಲವನು. ಒಳ್ಳೇ ವಾಕ್ಪಟುತ್ವವುಳ್ಳವನು. ಶೀಲವಂತನು. ಧೃತರಾಷ್ಟ್ರನು ತನ್ನ ಮಗನಲ್ಲಿರುವ ಮೋಹದಿಂದ, ಅಂತಹ ಗುಣಾಢ್ಯನಾದ ವಿದುರನನ್ನು ಕೂಡ, ಕುರುಗಳಿಗೆ ಹಿತಚಿಂತಕನೆಂದು ಭಾವಿಸಿಲ್ಲ. ಆ ದುರ್ಯೋಧನನಾದರೋ ನಮ್ಮೆಲ್ಲರ ಮಾನವನ್ನೂ ಕೆಡಿಸಿ, ತನ್ನ ಅಭಿಮಾನದಲ್ಲಿಯೇ ದೃಷ್ಟಿಯುಳ್ಳವನು. ಇತರರ ಮೇಲ್ಮೆಯನ್ನು ನೋಡಿ ಸಹಿಸಲಾರದ ಈರ್ಷ್ಯಾಗುಣವುಳ್ಳವನು. ಆತುರಗಾರನು. ಧರ್ಮಾರ್ಥಗಳನ್ನು ಮೀರಿ ನಡೆಯತಕ್ಕವನು. ಕೆಟ್ಟ ಮಾತಾಡುವುದೇ ಅವನ ಸ್ವಭಾವವು. ಕೋಪಕ್ಕೆ ಬಹುಸುಲಭವಾಗಿ ಈಡಾಗತಕ್ಕವನು. ಕಾಮಸ್ವಭಾವವುಳ್ಳವನು. ದುರ್ಬುದ್ಧಿಯುಳ್ಳವರಿಂದಲೇ ಆದರಿಸಲ್ಪಡತಕ್ಕವನು. ಯಾರಿಂದಲೂ ಅಡಗಿಸಲಸಾಧ್ಯನಾದ ಮೂರ್ಖನು. ಅಲ್ಪಸ್ವಭಾವವುಳ್ಳವನು. ಬಹುಕಾಲದವರೆಗೆ ಕೋಪವನ್ನು ಸಾಧಿಸತಕ್ಕವನು. ಮಿತ್ರದ್ರೋಹಿ. ಪಾಪಬುದ್ಧಿಯುಳ್ಳವನು. ಇಂತಹ ಮಗನಲ್ಲಿರುವ ಮೋಹದಿಂದ ಧೃತರಾಷ್ಟ್ರನು, ಅವನ ಬುದ್ಧಿಯನ್ನು ಚೆನ್ನಾಗಿ ತಿಳಿದೂ, ಅವನ ಪ್ರೀತಿಯನ್ನೇ ಬಯಸಿ, ಧರ್ಮಕಾಮಗಳೆರಡನ್ನೂ ಬಿಟ್ಟಿರುವನು. ಸಂಜಯಾ! ಹಿಂದೆ ದ್ಯೂತಸಭೆಯಲ್ಲಿ ಜೂಜಾಟವು ನಡೆಯುತ್ತಿದ್ದಾಗ, ವಿದುರನು ಅನೇಕ ಬುದ್ಧಿವಾದಗಳನ್ನು ಹೇಳುತ್ತಿದ್ದಾಗಲೂ, ಧೃತರಾಷ್ಟ್ರಪುತ್ರನು ಅವುಗಳನ್ನು ಕೇಳದೆ ನಿರಾಕರಿಸಿದನು. ಅದನ್ನು ನೋಡಿದಾಗಲೇ ಕೌರವರಿಗೆ ವಿನಾಶಕಾಲವು ಸನ್ನಿಹಿತವಾಯಿತೆಂದು ನನ್ನ ಬುದ್ಧಿಗೆ ತೋರಿತು. ಹೆಚ್ಚೇಕೆ? ಆ ವಿದುರನ ಮಾತನ್ನು ಅವರು ಎಲ್ಲಿಯವರೆಗೆ ಅನುಸರಿಸಿ ನಡೆಯುತ್ತಿದ್ದರೋ, ಅದುವರೆಗೆ ಅವರಿಗೆ ಮೇಲೆಮೇಲೆ ರಾಜ್ಯಾಭಿವೃದ್ಧಿಯಾಗುತ್ತ ಬಂದಿತು. ಯಾವಾಗಿನಿಂದ ಅವರು ಅವನ ಮಾತನ್ನು ಕೇಳದಿದ್ದರೋ, ಅದುಮೊದಲು ಅವರಿಗೆ ಕಷ್ಟವೇ ಇದಿರುನೋಡುತ್ತಿದೆಯೆಂದು ತಿಳಿ. ಕೇವಲ ಅರ್ಥಾಶೆಯುಳ್ಳ ಆ ಧೃತರಾಷ್ಟ್ರಪುತ್ರನಿಗೆ ಎಂತಹ ಮಂತ್ರಿಗಳಿರುವರೋ ನೋಡು. ದುಶ್ಶಾಸನನೊಬ್ಬನು! ಶಕುನಿಯೊಬ್ಬನು! ಸೂತಪುತ್ರನಾದ ಕರ್ಣನೊಬ್ಬನು! ಈ

ಮೂವರೂ ಅವನಿಗೆ ಆಪ್ತಮಂತ್ರಿಗಳು. ಓ ಗಾವಲ್ಗಣೀ! ಆ ದುರ್ಯೋಧನನ ವಿವೇಕವೆಷ್ಟೆಂದು ನೋಡಿದೆಯಾ? ಅವನು ಆ ದುರ್ಮಂತ್ರಿಗಳ ಮಾತಿನಂತೆ ನಡೆಯುತ್ತಿರುವಾಗ, ಕೌರವರಿಗೂ, ಸೃಂಜಯರಿಗೂ ಹೇಗೆ ಕ್ಷೇಮವುಂಟಾಗುವುದು? ಇದನ್ನು ಎಷ್ಟು ವಿಧದಿಂದ ಯೋಚಿಸಿದರೂ ನನಗೆ ತೋರದಿದೆ. ಧೃತರಾಷ್ಟ್ರನು ಬೇರೆಯವರ ಐಶ್ವರ್ಯವನ್ನೆಲ್ಲ ಕೈಸೇರಿಸಿಕೊಂಡಿರುವುದಲ್ಲದೆ, ದೀರ್ಘದೃಷ್ಟಿಯುಳ್ಳ ವಿದುರನನ್ನು ಅಲಕ್ಷ್ಯದಿಂದ ದೂರಮಾಡಿ, ಈಗಲೂ ತನ್ನ ಮಕ್ಕಳೊಡನೆ ನಿಷ್ಕಂಟಕವಾದ ಸಾರ್ವಭೌಮಪದವಿಯನ್ನು ಅನುಭವಿಸಲು ಆಶೆಪಡುವನಲ್ಲವೆ? ನಮ್ಮನ್ನು ಕಾಡಿಗಟ್ಟಿಬಿಟ್ಟು, "ಸಮಸ್ತ ಭಾಗ್ಯವೂ ತಮ್ಮದೇ" ಎಂದು ನೆನಿಸಿಕೊಂಡಿರುವ ಆ ಧೃತರಾಷ್ಟ್ರನೊಡನೆ ಈಗ ನಮಗೆ ಸಮಾಧಾನವು ಹೇಗೆ ತಾನೇ ಸಾಧ್ಯವಾದೀತು? ಅಲ್ಲದೆ ಈಗ ಕರ್ಣನೂ, ಯುದ್ಧದಲ್ಲಿ ಆಯುಧಪಾಣಿಯಾದ ಅರ್ಜುನನನ್ನು ತಾನು ಸುಲಭವಾಗಿ ಜಯಿಸಬಹುದೆಂದು ಹೆಮ್ಮೆಯಿಂದಿರುವನು. ಇದಕ್ಕೆ ಮೊದಲು ಎಷ್ಟೋ ಮಹಾಯುದ್ಧಗಳು ನಡೆಯಲಿಲ್ಲವೇ? ಆಗ ಇದೇ ಕರ್ಣನು ಆ ಕೌರವರಿಗೆ ಬೆಂಬಲವಾಗಿದ್ದು ಅವರನ್ನೇಕೆ ಮಾನದಿಂದ ಕಾಪಾಡಬಾರದಾಗಿತ್ತು? ಅರ್ಜುನನಿಗಿಂತಲೂ ಸಮರ್ಥನಾದ ಧನುರ್ಧಾರಿಯು ಬೇರೆ ಯಾವನೂ ಇಲ್ಲವೆಂಬುದನ್ನು ಕರ್ಣನು ಚೆನ್ನಾಗಿ ಬಲ್ಲನು. ಸುಯೋಧನನೂ ಬಲ್ಲನು! ದ್ರೋಣನೂ ಬಲ್ಲನು! ಪಿತಾಮಹನಾದ ಭೀಷ್ಮನೂ ಚೆನ್ನಾಗಿ ಬಲ್ಲನು. ಕೌರವರೆಲ್ಲರಿಗೂ ಇದು ಚೆನ್ನಾಗಿ ತಿಳಿದಿದೆ. ಅವರ ಕಡೆಗೆ ಬಂದು ಸೇರಿರುವ ರಾಜರೆಲ್ಲರೂ ಈ ಅಂಶವನ್ನು ಚೆನ್ನಾಗಿ ತಿಳಿದುಕೊಂಡಿರುವರು. ಅರ್ಜುನನಿಲ್ಲದುದರಿಂದಲೇ ರಾಜ್ಯವು ದುರ್ಯೋಧನನ ವಶವಾಗಿದೆಯೆಂಬುದುಕೂಡ ಎಲ್ಲರ ಮನಸ್ಸಿಗೂ ಚೆನ್ನಾಗಿ ತಿಳಿದೇ ಇದೆ. ತಾಳಪ್ರಮಾಣವಾದ ಮಹಾಯುಧವುಳ್ಳವನೂ, ಧನುರ್ವಿದ್ಯಾವಿಶಾರದನೂ ಆದ ಅಂತಹ ಅರ್ಜುನನ ಬೆಂಬಲವಿರುವಾಗಲೂ ಪಾಂಡವರನ್ನು ಯುದ್ಧದಲ್ಲಿ ಜಯಿಸಿ, ರಾಜ್ಯವನ್ನು ಕಿತ್ತುಕೊಳ್ಳುವುದು ತನಗೆ ಸಾಧ್ಯವೆಂದು ದುರ್ಯೋಧನನು ನೆನೆಸುವಂತಿದೆ. ಸಂಜಯಾ! ಅರ್ಜುನನ ಗಾಂಡೀವ ಧ್ವನಿಯನ್ನು ಕೇಳಿದಮಾತ್ರದಲ್ಲಿ ಧಾರ್ತರಾಷ್ಟ್ರರು ಸಾಯತಕ್ಕವರೆಂದು ತಿಳಿ! ಕೋಪಗೊಂಡ ಭೀಮ

ಸೇನನ ಮುಖವನ್ನು ನೋಡದಿರುವವರೆಗೆ ಮಾತ್ರವೇ, ಆ ದುರ್ಯೋಧನನು ತನ್ನ ಇಷ್ಟವು ಕೈಗೂಡಿದುದಾಗಿ ಭಾವಿಸಿ ಸಂತೋಷಿಸುತ್ತಿರಬಹುದು. ತಾತ ಸಂಜಯಾ! ಭೀಮಸೇನನಾಗಲಿ, ಧನಂಜಯನಾಗಲಿ, ನಕುಲನಾಗಲಿ, ಸಹದೇವನಾಗಲಿ ಬದುಕಿರುವವರೆಗೆ, ಸಾಕ್ಷಾದ್ದೇವೇಂದ್ರನಾದರೂ ನಮ್ಮ ರಾಜ್ಯವನ್ನು ದಕ್ಕಿಸಿಕೊಳ್ಳಲಾರನು. ಆದುದರಿಂದ ಓ ಸಂಜಯಾ! ಈಗಲಾದರೂ, ಆ ವೃದ್ಧರಾಜನು ತನ್ನ ಮಕ್ಕಳೊಡನೆ ಮೇಲೆ ಹೇಳಿದ ಅಂಶಗಳನ್ನೆಲ್ಲ ಮನಸ್ಸಿಗೆ ತಂದುಕೊಂಡು, ಸರಿಯಾದ ನ್ಯಾಯಕ್ಕೆ ಬಂದರೆ, ಆಗ ಆ ಧೃತರಾಷ್ಟ್ರನ ಪುತ್ರರು ಪಾಂಡವರ ಕೋಪಾಗ್ನಿಗೆ ಆಹುತಿಯಾಗದಿರಬಹುದು. ಸಂಜಯಾ! ನಾವು ಇದುವರೆಗೆ ಅನುಭವಿಸಿದ ಕಷ್ಟಗಳನ್ನೆಲ್ಲ ನೀನೂ ಚೆನ್ನಾಗಿ ತಿಳಿದಿರುವೆ. ಹಾಗಿದ್ದರೂ ನಿನ್ನಲ್ಲಿ ನಮಗಿರುವ ಗೌರವಬುದ್ಧಿಯಿಂದ, ನಿನ್ನ ಮೆಚ್ಚಿಕೆಗಾಗಿ ಅವನ್ನೆಲ್ಲ ನಾವು ಮನ್ನಿಸುವೆವು. ಆ ದುರ್ಯೋಧನನು ನಮಗೆ ಮಾಡಿದ ಕೆಡುಕುಗಳೊಂದನ್ನೂ ಮನಸ್ಸಿಗೆ ತಂದುಕೊಳ್ಳದೆ, ಹಿಂದೆ ಅವನಲ್ಲಿ ನಡೆದುಕೊಳ್ಳುತ್ತಿದ್ದಂತೆಯೇ ಈಗಲೂ ನಡೆದುಕೊಳ್ಳಲು ಸಿದ್ಧರಾಗಿರುವೆವು. ನೀನು ಹೇಗೆ ಹೇಳಿದರೆ ಆ ರೀತಿಯಾಗಿ ನಾವು ಸಮಾಧಾನಕ್ಕೆ ಬರಲು ಸಿದ್ಧರಾಗಿಯೂ ಇರುವೆವು. ನನಗೆ ಇಂದ್ರಪ್ರಸ್ಥದಲ್ಲಿಯೇ ರಾಜ್ಯಭಾಗವಿದ್ದರೂ ಸಾಕು. ಭರತಕುಲಕ್ಕೆ ತಾನೇ ಮೇಲೆಂದು ಭಾವಿಸಿರುವ ದುರ್ಯೋಧನನು, ಅಷ್ಟನ್ನಾದರೂ ನಮಗೆ ಬಿಟ್ಟುಕೊಡಲಿ!" ಎಂದನು.

ಇದು ಇಪ್ಪತ್ತಾರನೆಯ ಅಧ್ಯಾಯವು.

---

ಸಂಜಯನು ಯುದ್ಧದಲ್ಲಿರುವ ದೋಷಗಳನ್ನೆಲ್ಲ ತಿಳಿಸಿ, ದುರ್ಯೋಧನಾದಿಗಳು ಒಂದುವೇಳೆ ರಾಜ್ಯವನ್ನು ಕೊಡದಿದ್ದರೂ ಶಾಂತಿಯನ್ನು ವಹಿಸುವುದೇ ಮೇಲೆಂದು ಹೇಳಿದುದು.

ಆಗ ಸಂಜಯನು ಧರ್ಮಪುತ್ರನನ್ನು ಕುರಿತು "ಪಾಂಡುಪುತ್ರಾ! ನಿನ್ನ ಪ್ರವರ್ತನೆಯೆಲ್ಲವೂ ಯಾವಾಗಲೂ 'ಧರ್ಮವನ್ನೇ ಅವಲಂಬಿಸಿರು

ವುದು. ಇದು ಲೋಕಕ್ಕೆಲ್ಲ ತಿಳಿದ ಸಂಗತಿ! ಈಗ ಪ್ರತ್ಯಕ್ಷವಾಗಿ ಅನು ಭವದಿಂದಲೂ ತಿಳಿಯುತ್ತಲೇ ಇದೆ. ಪರಮಧಾರ್ಮಿಕನೆಂದು ಲೋಕ ಪ್ರಸಿದ್ಧವಾದ ಈ ನಿನ್ನ ಕೀರ್ತಿಯನ್ನೂ, ಜೀವಿತವು ಅನಿತ್ಯವೆಂಬುದನ್ನೂ ನೀನು ಚೆನ್ನಾಗಿ ಯೋಚಿಸಿ, ಕುರುಕುಲಕ್ಕೆ ನಾಶವು ಬಾರದಂತೆ ನೋಡ ಬೇಕು. ಓ ಅಜಾತಶತ್ರೂ! ಕೌರವರು ಒಂದುವೇಳೆ ಯುದ್ಧದಿಂದ ಹೊರತು ಬೇರೆ ವಿಧದಿಂದ ನಿನಗೆ ರಾಜ್ಯವನ್ನು ಬಿಟ್ಟುಕೊಡದೆ ಹೋದರೂ, ನೀನು ಅಂಧಕರ ಮತ್ತು ವೃಷ್ಣಿಗಳ ರಾಜ್ಯದಲ್ಲಿ ಭಿಕ್ಷೆಯನ್ನಾದರೂ ಎತ್ತಿ ಜೀವಿಸುವುದು ಮೇಲೆಂದು ನನಗೆ ತೋರುವುದು. ಹಾಗಿಲ್ಲದೆ ಯುದ್ಧ ದಿಂದಾದರೂ ರಾಜ್ಯವನ್ನು ಪಡೆಯಬೇಕೆಂಬ ಆಲೋಚನೆಯೇನೋ ನನಗೆ ಸರ್ವಥಾ ಸಮ್ಮತವಲ್ಲ. ಮನುಷ್ಯನ ಜೀವಿತಕಾಲವೇ ಅತ್ಯಲ್ಪವಾದುದು. ಆ ಜೀವವು ಹೋಗುವುದಕ್ಕೆ ಹಲವು ಮಾರ್ಗಗಳು ಏರ್ಪಟ್ಟಿವೆ. ಮತ್ತು ಅದು ನಿತ್ಯದುಃಖಕ್ಕೆ ಎಡೆಯೆನಿಸಿದುದು. ಅಸ್ಥಿರವಾದುದು. ಜೀವಿತ ವೆಂಬುದು ಯಾವ ಭಾಗದಲ್ಲಿಯೂ ಕೀರ್ತಿಗೆ ಸಾಟಿಯೆನಿಸುವುದಿಲ್ಲ. ಆದು ದರಿಂದ ಓ ಪಾಂಡುಪುತ್ರಾ! ಅಂತಹ ಕೀರ್ತಿಯನ್ನು ಕೆಡಿಸಿಕೊಂಡು, ಜೀವಿತಸುಖಕ್ಕಾಗಿ ಪಾಪಕಾರ್ಯದಲ್ಲಿ ಮಾತ್ರ ನೀನು ಪ್ರವರ್ತಿಸಬಾರದು. ಧರ್ಮಕ್ಕೆ ವಿಘ್ನಕಾರಿಗಳಾದ ಕಾಮಗಳು ಮನುಷ್ಯನನ್ನು ನಾನಾವಿಧವಾಗಿ ಬಲಾತ್ಕರಿಸಿ ನಾನಾಕಡೆಗೆ ಎಳೆಯುತ್ತಿರುವುವು. ವಿವೇಕಿಯಾದವನು ಆ ಕಾಮವನ್ನು ಮೊದಲಿನಿಂದಲೇ ನಿಗ್ರಹಿಸಿಬಿಟ್ಟರೆ, ಅದರಿಂದ ಲೋಕದಲ್ಲಿ ನಿಷ್ಕಲಂಕವಾದ ಕೀರ್ತಿಯನ್ನು ಸಂಪಾದಿಸಬಹುದು. ಮನುಷ್ಯನಿಗೆ ಹಣ ದಾಶೆಯೆಂಬುದೇ ಒಂದು ದೊಡ್ಡ ಪಾಶವೆನಿಸಿದೆ. ಆ ಪಾಶದಲ್ಲಿ ಕಟ್ಟು ಬಿದ್ದವರಿಗೆ ಧರ್ಮವು ಕೈತಪ್ಪಿಹೋಗುವುದು ನಿಶ್ಚಯವು. ಧರ್ಮವನ್ನು ದೃಢವಾಗಿ ಹಿಡಿದವನೇ ವಿದ್ವಾಂಸನು. ಕಾಮಕ್ಕೊಳಗಾದವನು ಅರ್ಥ ತೃಷ್ಣೆಯೆಂಬ ಪಾಶದಲ್ಲಿ ಸಿಕ್ಕಿ ಕೆಟ್ಟುಹೋಗುವನು. ಕರ್ಮಗಳಿಗೆಲ್ಲ ಪ್ರಧಾನವೆನಿಸಿದ ಧರ್ಮವನ್ನು ಹಿಡಿದವನು ಸೂರ್ಯನಂತೆ ಮಹಾಪ್ರಕಾಶ ದಿಂದ ಬೆಳಗುವನು. ಧರ್ಮವನ್ನು ದೂರಮಾಡಿದವನು ಈ ಸಮಸ್ತ ಭೂಮಿಯನ್ನೂ ಕೈವಶಮಾಡಿಕೊಂಡರೂ, ಪಾಪಪ್ರವರ್ತನೆಯಿಂದ ದುಃಖ ಭಾಗಿಯಾಗುವನು. ಮೇಲಾದ ಸ್ವರ್ಗಗತಿಯನ್ನು ಬಯಸಿ ನೀನು, ಅದ

ಕ್ಕಾಗಿ ಇದುವರೆಗೆ ವೇದಗಳನ್ನೆಲ್ಲ ಅಧ್ಯಯನಮಾಡಿದೆ! ಬ್ರಹ್ಮಚರ್ಯ ವನ್ನು ಅನುಷ್ಠಿಸಿದೆ! ಯಾಗಗಳನ್ನು ಮಾಡಿದೆ. ಬ್ರಾಹ್ಮಣರಿಗೆ ಅನೇಕ ದಾನಗಳನ್ನು ಮಾಡಿದೆ. ಅನೇಕವರ್ಷಗಳ ಶಾಶ್ವತಸುಖವನ್ನು ಬಯ ಸಿ ನೀನು, ಎಷ್ಟೋ ವಿಧದಲ್ಲಿ ಅದಕ್ಕಾಗಿ ಆತ್ಮತ್ಯಾಗವನ್ನೂ ಮಾಡಿರುವೆ. ಮಿತಿಮೀರಿ ಸುಖದಲ್ಲಿಯೂ, ಮೋಹದಲ್ಲಿಯೂ ಮುಳುಗಿ, ಯೋಗಾ ಭ್ಯಾಸಸಾಧಕಗಳಾದ ಕರ್ಮಗಳನ್ನು ಯಾವನು ನಡೆಸುವುದಿಲ್ಲವೋ, ಅವ ನು ಆ ಕಾಮವೇಗದಿಂದ ಎಳೆಯಲ್ಪಟ್ಟು, ಅದರಲ್ಲಿ ತನ್ನ ಹಣವೆಲ್ಲ ನಷ್ಟ ವಾದಮೇಲೆ, ಕೊನೆಗೆ ಅಪಾರವಾದ ದುಃಖದಲ್ಲಿ ಸಿಕ್ಕಿಬೀಳುವನು. ಹೀಗೆ ಯೇ ಯಾವನು ಬ್ರಹ್ಮಚರ್ಯೆಯನ್ನು ಹಿಡಿಯದೆ, ಧರ್ಮಮಾರ್ಗವನ್ನು ತ್ಯಜಿಸಿ, ಅಧರ್ಮದಲ್ಲಿ ಪ್ರವರ್ತಿಸುವನೋ, ಮತ್ತು ಪರಲೋಕದಲ್ಲಿ ಶ್ರದ್ಧೆಯಿಲ್ಲದೆ ಕೇವಲ ಮೂಢನೆನಿಸಿರುವನೋ ಅವನು, ಈ ದೇಹವನ್ನು ಬಿಟ್ಟಮೇಲೆ ಪರಲೋಕದಲ್ಲಿಯೂ ಬಹಳ ಸಂಕಟದಿಂದ ತಪಿಸಬೇಕಾಗು ವುದು. ಪುಣ್ಯಕರ್ಮಗಳಿಗಾಗಲಿ, ಪಾಪಕರ್ಮಗಳಿಗಾಗಲಿ ಪರಲೋಕ ದಲ್ಲಿ ಫಲವಿಲ್ಲದೆ ಹೋಗಲಾರದು. ಅವು ಎಂದಿಗೂ ನಿಷ್ಫಲವಾಗಲಾರವು. ಪುಣ್ಯಪಾಪಗಳೆರಡೂ ಮಾಡಿದವನಿಗೆ ಮುಂದಾಗಿಯೇ ಪರಲೋಕಕ್ಕೆ ಹೋಗಿ ಕಾದಿರುವುವು. ಆಮೇಲೆ ಅದನ್ನು ಮಾಡಿದ ಮನುಷ್ಯನು ಅವು ಗಳನ್ನು ಹಿಂಬಾಲಿಸಿ ಹೋಗುವನು. ಇವೆಲ್ಲವನ್ನೂ ತಿಳಿದವನಾದುದ ರಿಂದಲೇ ನೀನು, ಧರ್ಮಾರ್ಜನೆಗಾಗಿ ಉತ್ತಮತರದ ಭೂರಿದಕ್ಷಿಣೆಗಳುಳ್ಳ ಅನೇಕ ಯಾಗಗಳನ್ನು ಮಾಡಿ, ಅವುಗಳಲ್ಲಿ ಬ್ರಾಹ್ಮಣರಿಗೆ ವಿಧಿವಿಹಿತ ಗಳಾಗಿಯೂ, ಶ್ರದ್ಧೆಯಿಂದ ಪರಿಶುದ್ಧಗಳೆನಿಸಿಯೂ, ಒಳ್ಳೇ ರಸಗಂಧ ಗಳಿಂದ ಭೋಗ್ಯಗಳಾಗಿಯೂ ಇರುವ ಅನ್ನದಾನಗಳನ್ನೂ ಮಾಡಿರುವೆ. ಓ ಪಾರ್ಥ! ಯಾವ ಸತ್ಕಾರ್ಯವನ್ನಾದರೂ ಈ ಲೋಕದಲ್ಲಿಯೇ ಮಾ ಡಬೇಕೇಹೊರತು, ಪರಲೋಕದಲ್ಲಿ ಕರ್ಮವನ್ನೇನೂ ಮಾಡಲು ಸಾಧ್ಯ ವಿಲ್ಲ. ಅದನ್ನು ತಿಳಿದೇ ನೀನು ಪರಲೋಕಸಾಧನೆಗಾಗಿ ಸಜ್ಜನರಿಂದ ವಿಶೇಷವಾಗಿ ಶ್ಲಾಘಿಸಲ್ಪಡುವ ಮಹಾಪುಣ್ಯಕಾರ್ಯಗಳನ್ನು ನಡೆಸಿರುವೆ. ಧರ್ಮಪುತ್ರಾ! ಪರಲೋಕಕ್ಕೆ ಹೋದಮೇಲೆ, ಮುಪ್ಪು, ಸಾವು, ಭಯ, ಹಸಿವು, ದಾಹ, ಮನಸ್ಸಿಗೆ ಅಪ್ರಿಯವಾದ ವಿಷಯಗಳು, ಇವೊಂದೂ ಅಲ್ಲಿ

ರುವುದಿಲ್ಲ. ಇಂದ್ರಿಯಗಳನ್ನು ಯಥೇಚ್ಛವಾಗಿ ತೃಪ್ತಿಗೊಳಿಸುವುದೊಂದು ಹೊರತು, ಅಲ್ಲಿ ಮಾಡಬೇಕಾದ ಬೇರೆ ಕಾರ್ಯವೊಂದೂ ಇರುವುದಿಲ್ಲ. ಇದು ನಿನಗೂ ತಿಳಿದ ಸಂಗತಿಯೇ ಅಲ್ಲವೆ? ಕರ್ಮಫಲವೆಂಬುದು ಈ ವಿಧವಾದುದು. ಹೀಗಿರುವಾಗ ನೀನು ಸೋದರರಿಗೆ ಹರ್ಷವನ್ನುಂಟುಮಾಡಲು, ನಿನ್ನ ತಂದೆತಾಯಿಗಳ ಹೃದಯಕ್ಕೆ ಅಪ್ರಿಯವಾದ ಕೋಪಕ್ಕೆ ಅವಕಾಶಕೊಡದೆ ಅದನ್ನು ಅಡಗಿಸು. ಕರ್ಮವಶನಾಗಿ, ಸ್ವರ್ಗವನ್ನೋ ನರಕವನ್ನೋ ಬಯಸಿ ಮೋಕ್ಷವನ್ನು ಕೆಡಿಸಿಕೊಳ್ಳಬೇಡ. ನಿನ್ನ ಸತ್ಕರ್ಮಗಳಿಗೆ ಫಲವಾಗಿ ನೀನು ಯಾವ ಕೀರ್ತಿಯನ್ನು ಪಡೆದಿರುವೆಯೋ, ಅದಕ್ಕೂ, ನಿನ್ನ ಸತ್ಯ, ಇಂದ್ರಿಯನಿಗ್ರಹ, ಋಜುತ್ವ, ಆನೃಶಂಸ್ಯ, ಮೊದಲಾದ ಗುಣಗಳಿಗೂ ಲೋಪವನ್ನು ತರಬೇಡ. ಅಶ್ವಮೇಧವನ್ನೂ, ರಾಜಸೂಯವನ್ನೂ ನಡೆಸಿದ ನೀನು ತಿರುಗಿ ಪಾಪಕರ್ಮದ ಪರಿಣಾಮಗಳಿಗೆ ಪಾತ್ರನಾಗಬೇಡ! ಈಗ ದಾಯಾದದ್ವೇಷದಿಂದ ನೀವು ಪಾಪಕರ್ಮವನ್ನೇ ಮಾಡುವ ನಿಶ್ಚಯವುಳ್ಳವರಾಗಿದ್ದರೆ, ಹಿಂದೆ ನೀವು ಧರ್ಮದಲ್ಲಿಯೇ ನೆಲೆಗೊಂಡು, ಅನೇಕವರ್ಷಗಳವರೆಗೆ ವನದಲ್ಲಿ ದುಃಖದಿಂದ ವಾಸಮಾಡುವ ಕಾರಣವೇನಿದ್ದಿತು? ನಿಮಗೆ ಆಗ ಸ್ವಾಧೀನವಾಗಿದ್ದ ಸಮಸ್ತಬಲವನ್ನೂ ಕಳೆದುಕೊಂಡು, ನೀವು ದೇಶಭ್ರಷ್ಟರಾಗಿ ಕಾಲವನ್ನು ಕಳೆಯಬೇಕಾದ ಆವಶ್ಯವೇನಿದ್ದಿತು? ಜನಾರ್ದನನಾದ ಶ್ರೀಕೃಷ್ಣನು, ವೀರನಾದ ಸಾತ್ಯಕಿ, ಪುತ್ರರೊಡಗೂಡಿದ ರುಕ್ಮರಥನೆಂಬ ಮತ್ಸ್ಯರಾಜನು, ಒಳ್ಳೇ ಶಸ್ತ್ರಧಾರಿಗಳಾದ ಪುತ್ರರೊಡಗೂಡಿದ ವಿರಾಟರಾಜನು, ಇವರೆಲ್ಲರೂ ನಿನಗೆ ಯಾವಾಗಲೂ ವಶರಾಗಿ ಮಂತ್ರಿಗಳಂತಿದ್ದವರು. ಅಲ್ಲದೆ, ಹಿಂದೆ ನಿನ್ನಿಂದ ಯಾವಯಾವ ರಾಜರು ಯುದ್ಧದಲ್ಲಿ ಜಿತರಾಗಿದ್ದರೋ ಅವರೆಲ್ಲರೂ ನಿನ್ನ ಕಡೆಗೆ ಸೇರಲು ಸಿದ್ಧವಾಗಿದ್ದರು. ಹೀಗೆ ದೊಡ್ಡ ಸಹಾಯಬಲವುಳ್ಳವನಾಗಿ, ದೊಡ್ಡ ಸೇನಾಸಮೃದ್ಧಿಯುಳ್ಳವನಾಗಿ, ಕೃಷ್ಣಾರ್ಜುನರ ಗೌರವಕ್ಕೂ ಪಾತ್ರನಾಗಿದ್ದ ನೀನು, ಆಗಿನ ದ್ಯೂತಸಭೆಯಲ್ಲಿಯೇ ಆ ಕೌರವರನ್ನೆಲ್ಲ ಕೊಂದು ದುರ್ಯೋಧನನ ಕೊಬ್ಬನ್ನು ಆಗಲೇ ಮುರಿಯಬಹುದಾಗಿತ್ತಲ್ಲವೇ? ಹಾಗಿಲ್ಲದೆ ನೀವು ಆಗ ಸುಮ್ಮನಿದ್ದುದೇಕೆ? ಧರ್ಮಕ್ಕಾಗಿಯೇ ಅಲ್ಲವೆ? ಈಗ ಯುದ್ಧವನ್ನಾರಂಭಿಸಿದರೆ ಅದೆಲ್ಲ ವ್ಯರ್ಥ

ವಾಗುವುದಲ್ಲವೇ ? ಇದುವರೆಗೆ ಮೇಲೆಮೇಲೆ ಶತ್ರುಗಳ ವೃದ್ಧಿಗೂ, ನಿಮ್ಮ ಕ್ಷೀಣತೆಗೂ ಅವಕಾಶಕೊಟ್ಟು, ಅನೇಕ ವರ್ಷಗಳ ವನವಾಸದ ಕಷ್ಟವನ್ನನುಭವಿಸಿ, ಕೇವಲ ದುರ್ಬಲದಶೆಗೆ ಬಂದ ನೀವು ಈಗ ಯುದ್ಧವನ್ನು ಮಾಡಲು ಅಪೇಕ್ಷಿಸುವುದು ಉಚಿತವೇ? ಏನೂ ತಿಳಿಯದ ಅಜ್ಞರೂ, ಧರ್ಮವನ್ನು ನಡೆಸದವರೂ ಯುದ್ಧದ ಮೂಲಕವಾಗಿ ಐಶ್ವರ್ಯವನ್ನು ಪಡೆಯುವುದುಂಟು. ವಿವೇಕಬುದ್ಧಿಯುಳ್ಳವರೂ, ಧರ್ಮವನ್ನು ಚೆನ್ನಾಗಿ ಬಲ್ಲವರೂ ದುರ್ದೈವವಶದಿಂದ ಯುದ್ಧದಲ್ಲಿ ಜಿತರಾಗಿ ತಮ್ಮ ಐಶ್ವರ್ಯವನ್ನು ಕಳೆದುಕೊಳ್ಳುವುದೂ ಉಂಟು. ಆದುದರಿಂದ ಜಯಾಪಜಯಗಳು ಎಂತವರಿಗೂ ನಿಶ್ಚಿತವಲ್ಲ. ಓ ಧರ್ಮಪುತ್ರಾ ! ನಿನ್ನ ಬುದ್ಧಿಯು ಎಂದಿಗೂ ಅಧರ್ಮದಲ್ಲಿ ಪ್ರವರ್ತಿಸತಕ್ಕುದಲ್ಲ. ನೀನು ಶೋಕಾತುರದಿಂದಲಾದರೂ ಪಾಪಕಾರ್ಯವನ್ನು ಮಾಡತಕ್ಕವನಲ್ಲ. ಹೀಗಿರುವಾಗ ನೀನು ವಿವೇಕಕ್ಕೆ ವಿರುದ್ಧವಾದ ಕಾರ್ಯದಲ್ಲಿ ಪ್ರವರ್ತಿಸಲು ಉದ್ದೇಶಿಸುವುದಕ್ಕೆ ಕಾರಣವೇನಿದೆ? ಮಹಾರಾಜಾ ! ಕೋಪವೆಂಬುದು ಒಂದು ವಿಲಕ್ಷಣವಾದ ಪಾನೀಯವು. ಅದು ವ್ಯಾಧಿಗಾಗಿ ಏರ್ಪಟ್ಟುದಲ್ಲ. ಬಹು ಕಟುವಾದುದು. ಅದು ತಾನಾಗಿ ತಲೆಶೂಲೆಯನ್ನು ತರತಕ್ಕುದು. ಯಶಸ್ಸನ್ನೂ ಅಪಹರಿಸತಕ್ಕುದು. ಪಾಪಕ್ಕೆ ಕಾರಣವಾದುದು. ಸತ್ಪುರುಷರು ಮಾತ್ರ ಅದನ್ನು ಕುಡಿದುಬಿಡಬಲ್ಲರು. ಅಸತ್ತುಗಳಿಗೆ ಅದನ್ನು ಕುಡಿಯಲು ಸಾಧ್ಯವಲ್ಲ. ಅಂತಹ ಪಾನೀಯವನ್ನು ಕುಡಿದುಬಿಟ್ಟು ನೀನು ಶಾಂತಚಿತ್ತನಾಗಿರು. ಪಾಪಕ್ಕೆ ಮೂಲವಾದ ಆ ಕೋಪವನ್ನು ವಿವೇಕಿಯಾದವನು ಬಯಸಬಾರದು. ಆದರಲ್ಲಿಯೂ ನಿನಗೆ ಬೇರೆ ಎಲ್ಲಾ ಭೋಗಗಳಿಗಿಂತಲೂ ತಾಳ್ಮೆಯೇ ಮೇಲೆನಿಸಿದೆ. ಅಂತಹ ನೀನು ಕೋಪವನ್ನು ಡಗಿಸುವುದೇನು ದೊಡ್ಡದು? ಯಾವ ಯುದ್ಧದಲ್ಲಿ ಶಂತನುಪುತ್ರನಾದ ಭೀಷ್ಮನೂ, ಪುತ್ರರೊಡಗೂಡಿದ ದ್ರೋಣಾಚಾರ್ಯನೂ, ಕೃಪನೂ, ಶಲ್ಯನೂ, ಸೋಮದತ್ತಪುತ್ರನೂ, ವಿಕರ್ಣನೂ, ವಿವಿಂಶತಿಯೂ, ಕರ್ಣದುರ್ಯೋಧನನೂ ಪ್ರಾಣವನ್ನೊಪ್ಪಿಸಬೇಕಾಗಿರುವುದೋ, ಅಂತಹ ಯುದ್ಧದಲ್ಲಿ ನೀನು ಅವರನ್ನೆಲ್ಲ ಕೊಂದು ಜಯಹೊಂದಿದರೂ, ಆಮೇಲೆ ನೀನು ಅನುಭವಿಸಬೇಕಾದ ಸುಖವಾದರೂ ಎಂತಹದೆಂದು ನೋಡು. ನೀನು ಆದರಿಂದ

ಪಡೆಯಬಹುದಾದ ಬೇರೆ ಲಾಭವಾದರೂ ಇದ್ದರೆ ಅದನ್ನು ನನಗೆ ತಿಳಿಸು. ಓ ಧರ್ಮಪುತ್ರಾ ! ಒಂದುವೇಳೆ ಯುದ್ಧದಲ್ಲಿ ನೀನು ಜಯಿಸಿ, ಸಮುದ್ರಾಂತವಾದ ಸಮಸ್ತ ಭೂಮಿಯನ್ನೂ ನಿನ್ನ ಕೈವಶಮಾಡಿಕೊಂಡರೂ, ಮುಪ್ಪನ್ನೂ, ಸಾವನ್ನೂ ನೀನು ಎಂದಿಗೂ ತಪ್ಪಿಸಿಕೊಳ್ಳಲಾರೆ. ಮತ್ತು ಪ್ರಿಯಾಪ್ರಿಯಗಳೂ, ಸುಖದುಃಖಗಳೂ ನಿನ್ನನ್ನು ಬಿಟ್ಟುಹೋಗತಕ್ಕವುಗಳಲ್ಲ. ಇವೆಲ್ಲವನ್ನೂ ತಿಳಿದ ನೀನು ಯುದ್ಧಕ್ಕೆ ಎಂದಿಗೂ ಮನಸ್ಸು ಮಾಡಬಾರದು. ಒಂದುವೇಳೆ ನಿನ್ನ ಸುತ್ತುಮುತ್ತಿನಲ್ಲಿ ಸೇರಿರುವ ಮಂತ್ರಿಗಳ ಉದ್ದೇಶವನ್ನು ಮೀರಲಾರದೆ, ನೀನು ಆ ಪಾಪಕಾರ್ಯಕ್ಕೆ ಸಮ್ಮತಿಸಬೇಕಾಗಿ ಬಂದರೂ, ನಿನ್ನ ಸ್ವತ್ತನ್ನೆಲ್ಲ ಅವರಿಗೇ ಬಿಟ್ಟು, ನೀನಾದರೂ ದೂರವಾಗಿ ಬಿಡು. ನೀನುಮಾತ್ರ ಉತ್ತಮಗತಿಗೆ ಸಾಧಕವಾದ ಮಾರ್ಗವನ್ನು (ಬ್ರಹ್ಮಲೋಕಸಾಧಕವಾದ ಮಾರ್ಗವನ್ನು) ಬಿಟ್ಟು ಬೇರೆ ದಾರಿಗೆ ಹರಿಯಬಾರದು.”

ಇದು ಇಪ್ಪತ್ತೇಳನೆಯ ಅಧ್ಯಾಯವು.



{ಯುಧಿಷ್ಠಿರನು ಸಂಜಯನನ್ನು ಕುರಿತು ತಾನು ಶ್ರೀಕೃಷ್ಣನ ಆಜ್ಞಾನುವರ್ತಿಯಾಗಿ ನಡೆಯುವುದಾಗಿ ತಿಳಿಸಿದುದು.}

ಆಗ ಯುಧಿಷ್ಠಿರನು ಸಂಜಯನನ್ನು ನೋಡಿ, “ಓ ಸಂಜಯಾ ! ಅರ್ಥಕಾಮಾದಿಗಳಿಗೆ ಸಾಧಕಗಳಾದ ಎಲ್ಲಾ ಕರ್ಮಗಳಲ್ಲಿ ಧರ್ಮವೇ ಎಲ್ಲಕ್ಕಿಂತಲೂ ಉತ್ತಮವೆಂದು ನೀನು ಹೇಳಿದುದೇನೋ ಸತ್ಯವೇ. ಅದರಲ್ಲಿ ಸಂದೇಹವಿಲ್ಲ! ಆದರೆ, ಈಗ ನಾನು ಅನುಸರಿಸುತ್ತಿರುವುದಾದರೂ ಧರ್ಮವೋ ಅಧರ್ಮವೋ ಎಂಬುದನ್ನು ನೀನು ಚೆನ್ನಾಗಿ ತಿಳಿದುಕೊಂಡು, ಆ ಮೇಲೆ ನನ್ನನ್ನು ಬೇಕಾದಷ್ಟು ನಿಂದಿಸು. ಧರ್ಮಾಧರ್ಮಗಳನ್ನು ಪರಿಶೀಲಿಸುವುದರಲ್ಲಿ ಮೂರು ಬಗೆಯುಂಟು. ಕೆಲವು ಜನರಲ್ಲಿ, (ಅಭಿಚಾರಾದಿ ಕ್ರೂರಕೃತ್ಯಗಳಿಗಾಗಿ ಜಪಹೋಮಾದಿಗಳನ್ನು ಮಾಡುತ್ತಿರುವ ಡಾಂಭಿಕರಲ್ಲಿ) ಅವರು ಮಾಡತಕ್ಕ ಅಧರ್ಮವೇ ಧರ್ಮರೂಪವಾಗಿ ಹೊರಗೆ ತೋ

ಶುವುವು. ಕೆಲವು ಸಾಧುಗಳಲ್ಲಿ (ಪ್ರಚ್ಛನ್ನಯೋಗಿಗಳಾದ ಶುಕ, ದತ್ತಾತ್ರೇಯಾದಿಗಳಲ್ಲಿ) ಅವರು ರಾಗದ್ವೇಷಾದಿಗಳನ್ನು ಬಿಟ್ಟು ಬಹಳ ಸಾಧುಗಳಂತೆ ನಡೆಯುವ ಧರ್ಮವೇ ಜನಗಳಿಗೆ ಅಧರ್ಮದಂತೆ (ಹುಚ್ಚರ ನಡತೆಯಂತೆ) ತೋರುವುದು. ಕೆಲವರಲ್ಲಿ ಧರ್ಮವು ನಿಜವಾದ ಧರ್ಮರೂಪವಾಗಿಯೇ ತೋರುವುದು. ಹಾಗೆಯೇ (ಚಂಡಾಲಾದಿಗಳಲ್ಲಿ) ಅವರ ಸ್ವಧರ್ಮವೇ ಅಧರ್ಮದಂತೆ ಕಾಣುವುದು. ಆದುದರಿಂದ ವಿದ್ವಾಂಸನಾದವನು ಇವುಗಳನ್ನು ಸೂಕ್ಷ್ಮದೃಷ್ಟಿಯಿಂದ ನೋಡಿ ತಿಳಿಯುವನು. ಇದರಂತೆಯೇ ಆಪತ್ಕಾಲದಲ್ಲಿಯೂ ಅವರವರಿಗೆ ಸಹಜಗಳಾದ ಧರ್ಮಾಧರ್ಮಗಳು ಮೇಲೆ ಹೇಳಿದ ಭಿನ್ನರೂಪಗಳನ್ನು ಕಾಣಿಸಬಹುದು. ಹಾಗಿದ್ದರೂ ಅವರವರಿಗೆ ಮೊದಲು ವಿಹಿತಗಳಾದ ಯಾವಯಾವ ಧರ್ಮಗಳುಂಟೋ, (ಬ್ರಾಹ್ಮಣರಿಗೆ ಯಜನ ಯಾಜನಾದಿಗಳು, ಕ್ಷತ್ರಿಯರಿಗೆ ಯುದ್ಧ ಶಸ್ತ್ರಧಾರಣಗಳು ಇತ್ಯಾದಿ) ಅವೇ ಅವರವರಿಗೆ ಪ್ರಮಾಣಗಳೆನಿಸುವುವು. ಸಂಜಯಾ! ಆಪದ್ಧರ್ಮಗಳು ಎಂತವೆಂಬುದನ್ನು ತಿಳಿಸುವೆನು ಕೇಳು. ಐಶ್ವರ್ಯವನ್ನೆಲ್ಲ ಕಳೆದುಕೊಂಡು ಹೀನದೆಶೆಗೆ ಬಂದವನು, ಯಾವ ಮಾರ್ಗದಿಂದ ತನ್ನ ಕೃತ್ಯವನ್ನು ನಡೆಸಬಹುದೋ, ಆ ವೃತ್ತಿಯನ್ನವಲಂಬಿಸಬಹುದು. ತಾನು ಸರಿಯಾದ ಸಹಜಸ್ಥಿತಿಯಲ್ಲಿರುವಾಗ ಯಾವನು ಆಪದ್ಧರ್ಮವನ್ನು ಹಿಡಿಯುವನೋ, ಯಾವನು ಕೇವಲ ಹೀನಸ್ಥಿತಿಗೆ ಬಂದಿರುವಾಗಲೂ ತನ್ನ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ಆಪದ್ಧರ್ಮಗಳನ್ನು ಅನುಸರಿಸುವುದಿಲ್ಲವೋ ಇವರಿಬ್ಬರೂ ನಿಂದಾರ್ಹರೇ! ಆಪತ್ಕಾಲದಲ್ಲಿ ಸ್ವಧರ್ಮಗಳನ್ನು ಬಿಟ್ಟು ವಿಧರ್ಮಗಳನ್ನು ಅನುಸರಿಸಿದರೂ, ಅಂತಹ ಬ್ರಾಹ್ಮಣರಿಗೆ ಅದರಿಂದ ಜಾತಿಭ್ರಂಶವುಂಟಾಗಬಾರದೆಂಬುದಕ್ಕಾಗಿ ಬ್ರಹ್ಮನಿಂದ ಪ್ರಾಯಶ್ಚಿತ್ತಗಳೂ ವಿಧಿಸಲ್ಪಟ್ಟಿವೆ. ಆದುದರಿಂದ ಸಂಜಯಾ! ಒಂದು ಧರ್ಮದವರು ಬೇರೆ ಧರ್ಮವನ್ನು ಅವಲಂಬಿಸಬೇಕಾದ ಪ್ರಸಕ್ತಿಯುಂಟೆಂಬುದು ಈ ಪ್ರಾಯಶ್ಚಿತ್ತವಿಧಿಯಿಂದಲೇ ದೃಢೀಕರಿಸಲ್ಪಡುವುದು. (ನಾವು ಏಕಚಕ್ರಪುರದಲ್ಲಿ ಬ್ರಾಹ್ಮಣಧರ್ಮದಿಂದ ಭಿಕ್ಷಾಟನವಮಾಡುತ್ತಿದ್ದುದೂ ಈ ಆಪದ್ಧರ್ಮವೇಹೊರತು ಅನುಚಿತವಲ್ಲ) ಆದುದರಿಂದ ನೀನು ಕರ್ಮದಲ್ಲಿರುವರೇ? ಅಥವಾ ಕರ್ಮವನ್ನು

ಬಿಟ್ಟುಹೋಗಿರುವರೇ, ಎಂಬುದನ್ನು ಅವರವರ ಸ್ಥಿತಿಗತಿಗಳನ್ನನುಸರಿಸಿ ವಿಮರ್ಶಿಸಬೇಕು. ಅದಕ್ಕೆ ವಿರುದ್ಧವಾದ ನಡತೆಯುಳ್ಳವರನ್ನು ನೀನು ಬೇಕಾದಷ್ಟು ನಿಂದಿಸು! ಮನೋಜಯವನ್ನಪೇಕ್ಷಿಸುವವರಿಗೆ, ಬುದ್ಧಿಯ ಸ್ವೇಚ್ಛಾಪ್ರವರ್ತನೆಯನ್ನು ಅಡಗಿಸುವುದಕ್ಕಾಗಿ, ಯಾವಾಗಲೂ ಸತ್ಪುರುಷರ ಬಳಿಯಲ್ಲಿ ಜೀವಿಕೆಯೇ ಶಾಸ್ತ್ರವಿಹಿತವಾಗಿದೆ. ಯಾರು ಬ್ರಹ್ಮನಿಷ್ಠರೂ (ಬ್ರಾಹ್ಮಣರೂ) ಅಲ್ಲದೆ, ವಿದ್ಯಾವಂತರೂ ಅಲ್ಲದಿರುವರೋ, ಅವರಿಗೆ ಆಪತ್ತುಗಳಲ್ಲಿಯಾಗಲಿ, ಆಪತ್ತಲ್ಲದ ಸಮಯದಲ್ಲಿಯಾಗಲಿ, ಧರ್ಮಾಧರ್ಮವಿಚಾರವಿಲ್ಲದೆ, ಎಲ್ಲರ ಬಳಿಯಲ್ಲಿಯೂ, ಎಲ್ಲಾ ವ್ಯಕ್ತಿಗಳಲ್ಲಿಯೂ ಜೀವನವು ಸಾಧುವೆಂದೇ ತಿಳಿಯಬೇಕು. ಯಜ್ಞಾದಿಕರ್ಮಗಳಲ್ಲಿ ಪ್ರವೃತ್ತಿಯುಳ್ಳವರಾಗಿದ್ದ ನಮ್ಮ ಪೂರ್ವಿಕರಾದ ಪಿತೃಪಿತಾಮಹಾದಿಗಳೂ, ಅವರಂತಿಲ್ಲದೆ ಕೇವಲ ಸರ್ವಕರ್ಮತ್ಯಾಗದಿಂದ ಸನ್ಯಾಸಿಗಳಾಗಿದ್ದವರೂ, ಈಗ ನಾನು ಹೇಳಿದ ಮಾರ್ಗದಲ್ಲಿಯೇ ನಡೆದಿರುವರು. ಆದುದರಿಂದ ಆಸ್ತಿಕನೆಂದೆನಿಸಿಕೊಳ್ಳುವುದಕ್ಕಾಗಿ ನಾನೂ ಅದನ್ನೇ ಹಿಡಿಯತಕ್ಕವನೇ ಹೊರತು, ಅದನ್ನು ಬಿಟ್ಟು ಬೇರೆ ದಾರಿಯನ್ನು ಎಂದಿಗೂ ಉಚಿತವೆಂದೆಣಿಸುವುದಿಲ್ಲ. ಸಂಜಯಾ! ಈ ಭೂಮಿಯಲ್ಲಿರುವ ಎಲ್ಲಾ ಧನವನ್ನಾಗಲಿ, ದೇವತೆಗಳ ಪದವಿಯನ್ನಾಗಲಿ, ಸ್ವರ್ಗಾಧಿಪತ್ಯವನ್ನಾಗಲಿ, ಬ್ರಹ್ಮಲೋಕವನ್ನಾಗಲಿ, ನಾನು ಅಧರ್ಮದಿಂದ ಅಪೇಕ್ಷಿಸುವವನಲ್ಲವೆಂದು ತಿಳಿ! ಧರ್ಮಫಲಗಳನ್ನೆಲ್ಲ ಕೊಡತಕ್ಕವನಾಗಿಯೂ, ಸರ್ವಸಮರ್ಥನಾಗಿಯೂ, ನೀತಿವಂತನಾಗಿಯೂ, ಬ್ರಾಹ್ಮಣೋಪಾಸಕನಾಗಿಯೂ, ಧೀಮಂತನಾಗಿಯೂ ಇರುವ ವಾಸುದೇವನು, ಬಲಶಾಲಿಗಳೂ, ಉತ್ತಮ ರಾಜಕುಲದಲ್ಲಿ ಹುಟ್ಟಿದವರೂ ಆದ ನಾನಾಶಾಖೆಯ ಭೋಜರನ್ನು ವಾತ್ಸಲ್ಯದಿಂದ ಪರಿಪಾಲಿಸುತ್ತಿರುವನು. ಆದುದರಿಂದ ಒಂದುವೇಳೆ ನಾನು ಶಾಂತಿಮಾರ್ಗವನ್ನು ಬಿಟ್ಟು ಯುದ್ಧವನ್ನೇ ಬಯಸಿ ನಿಂದಾಸ್ಪದನಾಗಿದ್ದರೂ, ಕ್ಷತ್ರಿಯ ಧರ್ಮವನ್ನು ಬಿಟ್ಟವನಾಗಿದ್ದರೂ, ಇದರ ಯುಕ್ತಾಯುಕ್ತತೆಯನ್ನು ಕುರಿತು ಮಹಾಯಶಸ್ವಿಯಾದ ಶ್ರೀಕೃಷ್ಣನೇ ತೀರ್ಮಾನಿಸಲಿ! ಏಕೆಂದರೆ, ಆ ಶ್ರೀಕೃಷ್ಣನು ಉಭಯಪಕ್ಷದವರಿಗೂ ಹಿತವನ್ನು ಕೋರತಕ್ಕವನು. ಈ ಸಾತ್ಯಕಿ, ಈ ಚೇದಿದೇಶದವರು, ಅಂಧಕರು, ವೃಷ್ಣಿಕುಲದವರು, ಭೋ

ಜರು, ಕುಕುರರು, ಸೃಂಜಯರು ಇವರೆಲ್ಲರೂ ಶ್ರೀಕೃಷ್ಣನ ನೀತಿಯನ್ನೇ ಅವಲಂಬಿಸಿ ಶತ್ರುಗಳನ್ನು ನಿಗ್ರಹಿಸಿ, ಮಿತ್ರರನ್ನು ಸಂತೋಷಗೊಳಿಸ ತಕ್ಕವರು. ಯದುವಂಶದಲ್ಲಿ ಹುಟ್ಟಿದ ಉಗ್ರಸೇನಾದಿಗಳೆಲ್ಲರೂ, ಆ ಕೃಷ್ಣಾಜ್ಞೆಯಿಂದಲೇ ನಡೆಯತಕ್ಕವರು. ಅವರೆಲ್ಲರೂ ಇಂದ್ರಸಮಾನರು, ಉದಾರಮನಸ್ಸುಳ್ಳವರು, ಸತ್ಯವನ್ನೇ ದೃಢವಾಗಿ ಹಿಡಿದವರು, ಮಹಾ ಬಲಾಢ್ಯರು, ಇಷ್ಟಭೋಗಗಳನ್ನನುಭವಿಸತಕ್ಕವರು, ಅವರೆಲ್ಲರೂ ಕೃಷ್ಣಾಜ್ಞೆಯನ್ನು ಅನುವರ್ತಿಸತಕ್ಕವರು. ಸರ್ವೇಶ್ವರನಾದ ಶ್ರೀಕೃಷ್ಣನನ್ನು ಯಾವನು ತನ್ನ ಭ್ರಾತೃವನ್ನಾಗಿ ಪಡೆದು ಉತ್ತಮ ಭಾಗ್ಯವನ್ನು ಹೊಂದಿದನೋ, ಮಳೆಗಾಲದಲ್ಲಿ ಮೇಘವು ಪ್ರಜೆಗಳಿಗೆ ಮಳೆಯನ್ನು ಸುರಿಸುವಂತೆ ಯಾವನ ಇಷ್ಟಾರ್ಥಗಳನ್ನು ವಾಸುದೇವನು ಸಲ್ಲಿಸುತ್ತಿರುವನೋ, ಅಂತಹ ಕಾಶೀರಾಜನಾದ ಬಭ್ರುವನ್ನು ನೋಡು. ಆ ಶ್ರೀಕೃಷ್ಣನಿಂದಲೇ ಅವನಿಗೆ ಆ ವಿಧವಾದ ಭಾಗ್ಯವುಂಟಾಯಿತು. ಶ್ರೀಕೃಷ್ಣನು ಅಂಥಾ ಮಹಾಮಹಿಮೆಯುಳ್ಳವನು. ಎಲ್ಲವನ್ನೂ ಬಲ್ಲವನು. ಕಾರ್ಯನಿಶ್ಚಯಗಳನ್ನು ಚೆನ್ನಾಗಿ ತಿಳಿದವನು. ನಮ್ಮೆಲ್ಲರಲ್ಲಿಯೂ ವಿಶೇಷ ಪ್ರೇಮವುಳ್ಳವನು. ಅಂಥಾ ಶ್ರೀಕೃಷ್ಣನ ಮಾತನ್ನು ನಾನು ಲವಮಾತ್ರವೂ ಮೀರಿ ನಡೆಯಲಾರೆನು" ಎಂದನು.

ಇದು ಇಪ್ಪತ್ತೆಂಟನೆಯ ಅಧ್ಯಾಯವು.

---

ಶ್ರೀಕೃಷ್ಣನು ದುರ್ಯೋಧನಾದಿಗಳು ಪಾಂಡವರಲ್ಲಿ ನಡೆಸಿದ ಅನ್ಯಾಯಗಳನ್ನು ತಿಳಿಸಿ ಅವರನ್ನು ನಿಗ್ರಹಿಸುವುದೇ ಪಾಂಡವರಿಗೆ ಸ್ವಧರ್ಮವೆಂದುದು. ಸಂಧಿಗಾಗಿ ತಾನೇ ದುರ್ಯೋಧನನಲ್ಲಿಗೆ ಬರುವುದಾಗಿ ಸಂಜಯನಿಗೆ ಸೂಚಿಸಿದುದು.

ಆಮೇಲೆ ಶ್ರೀಕೃಷ್ಣನು ಸಂಜಯನನ್ನು ಕುರಿತು "ಓ ಸಂಜಯಾ! ಪಾಂಡವರಿಗೆ ಹಾನಿಯುಂಟಾಗಬಾರದೆಂಬುದೇ ನನ್ನ ಉದ್ದೇಶವು. ನಾನು ಯಾವಾಗಲೂ ಇವರ ಪುರೋವೃದ್ಧಿಯನ್ನೇ ಕೋರತಕ್ಕವನು. ಇದ

ರಂತೆಯೇ ಅತ್ತಲಾಗಿ ನೂರಾರು ಮಕ್ಕಳನ್ನು ಕಟ್ಟಿಕೊಂಡಿರುವ ಧೃತರಾ ಷ್ಟ್ರನಿಗೂ ಕ್ಷೇಮವುಂಟಾಗಬೇಕೆಂಬುದೇ ನನ್ನ ಕೋರಿಕೆ! ಮೊದಲಿಂದ ಲೂ ನನ್ನ ಉದ್ದೇಶವೇ ಇದು. ಕೋಪವನ್ನು ಬಿಟ್ಟು ಸಮಾಧಾನದಿಂದಿ ರಬೇಕೆಂದು ನಾನು ಇವರಿಬ್ಬರಿಗೂ ಹೇಳುತ್ತಿರುವೆನೇಹೊರತು ಬೇರೆ ಮಾತನ್ನೇ ಆಡತಕ್ಕವನಲ್ಲ. ಧೃತರಾಷ್ಟ್ರರಾಜನಿಗೂ ಇದು ಬಹಳ ಸಮ್ಮ ತವೆಂದೇ ಕೇಳುವೆನು. ಈ ಪಾಂಡವರಿದಿರಾಗಿಯೇ ನಾನೂಕೂಡ ಇದನ್ನು ಮನಃಪೂರ್ವಕವಾಗಿ ಅನುಮೋದಿಸುವೆನು. ಈ ವಿಚಾರದಲ್ಲಿ ಪಾಂ ಡವರು ಇದುವರೆಗೆ ಎಷ್ಟೋ ತಗ್ಗಿ ನಡೆದಿರುವರು. ಆದರೆ, ಸಂಜಯಾ! ಆ ಧೃತರಾಷ್ಟ್ರನು ತನ್ನ ಮಕ್ಕಳೊಡನೆ ಸೇರಿಕೊಂಡು, ಯಾವ ರಾಜ್ಯ ಭಾಗಕ್ಕಾಗಿ ಅತ್ಯಾಶೆಗೊಂಡಿರುವನೋ, ಆ ವಿಷಯದಲ್ಲಿ ಇಬ್ಬರೂ ಸಮಾ ಧಾನಕ್ಕೆ ಬರುವುದೇನೋ ಸಾಧ್ಯವಲ್ಲವೆಂಬ ಅಭಿಪ್ರಾಯವನ್ನು ಈಗ ಯುಧಿಷ್ಠಿರನು ಸ್ಪಷ್ಟವಾಗಿ ತಿಳಿಸಿರುವನು. ಹೀಗಿರುವಾಗ, ಪಾಂಡವ ಕೌರ ವರಲ್ಲಿ ಈ ಕಲಹವು ವೃದ್ಧಿಯಾಗದೆ ನಿಲ್ಲುವ ಬಗೆಯೇನು? ಓ ಸಂಜಯಾ! ನೀನು ನನಗಿಂತಲೂ, ಈ ಧರ್ಮರಾಜನಿಗಿಂತಲೂ ಅಧಿಕವಾಗಿ ವೈದಿಕ ಲೌಕಿಕ ಧರ್ಮಗಳನ್ನು ಬಲ್ಲವನಲ್ಲ. ಹೀಗಿರುವಾಗ ಕಾರ್ಯೋತ್ಸಾ ಹಿಯೂ, ಸ್ವಕರ್ಮನಿರತನೂ, ಯಶಸ್ಸಿಗೆ ಲೋಪವಿಲ್ಲದಂತೆ ಕುಟುಂಬ ದಲ್ಲಿ ನಡೆದುಕೊಳ್ಳತಕ್ಕವನೂ ಆದ ಈ ಧರ್ಮರಾಜನಲ್ಲಿ ನೀನು ನ್ಯೂನತೆ ಯನ್ನು ಶಂಕಿಸಿದುದೇಕೆ? ಅವನು ತನ್ನ ಧರ್ಮವನ್ನು ಬಿಟ್ಟು ಹೋ ಗುವುದಾಗಿ ನೀನು ಯಾವ ಕಾರಣದಿಂದ ಹೇಳುವೆ? ವಾಸ್ತವಸ್ಥಿತಿಯು ಹೀಗಿರುವಾಗಲೂ, ಬ್ರಾಹ್ಮಣರು ಕರ್ಮಗಳ ವಿಷಯದಲ್ಲಿ ಅನೇಕ ವಿಧ ವಾದ ಅಭಿಪ್ರಾಯಭೇದಗಳನ್ನು ಹೇಳುವರು. ಕೆಲವರು ಕರ್ಮದಿಂದಲೇ ಪರಲೋಕ ಸಿದ್ಧಿಯೆನ್ನುವರು. ಬೇರೆ ಕೆಲವರು ಕರ್ಮವನ್ನು ಬಿಟ್ಟು ಜ್ಞಾ ನದಿಂದಲೇ ಸಿದ್ಧಿಯೆನ್ನುವರು. ಆದರೆ; ಎಷ್ಟೇ ಪ್ರಾಜ್ಞನಾಗಿದ್ದರೂ ಈ ಲೋಕದಲ್ಲಿ ಭೋಜನರೂಪವಾದ ಕರ್ಮದಲ್ಲಿ ಪ್ರವರ್ತಿಸಿದ ಹೊರತು ಭಕ್ಷ್ಯಭೋಜ್ಯಗಳಲ್ಲಿ ತೃಪ್ತಿಯನ್ನು ಪಡೆಯಲಾರರು. ಬ್ರಹ್ಮವಿತ್ತುಗಳಾದ ಬ್ರಾಹ್ಮಣರಿಗಾದರೂ ಕರ್ಮವು ವಿಹಿತವಾದುದೇ. ಯಾವ ವಿದ್ಯೆಗಳು ಈ ಲೋಕದಲ್ಲಿ ಕರ್ಮಗಳನ್ನು ಸಾಧಿಸುವುವೋ, ಅಂತಹ ವಿದ್ಯೆಗಳಿಗೆ

ತಕ್ಕ ಫಲವುಂಟೇಹೊರತು, ಕರ್ಮರಹಿತವಾದ ಆ ಜ್ಞಾನಕ್ಕೆ ಫಲವು ಕಾಣುವುದಿಲ್ಲ. ಆದುದರಿಂದ ಕರ್ಮಕ್ಕೆ ಫಲವೆಂಬುದು ಈ ಲೋಕದಲ್ಲಿ ಪ್ರತ್ಯಕ್ಷದೃಷ್ಟವಾಗಿದೆ. ಬಾಯಾರಿಕೆಯಿಂದ ಪೀಡಿತನಾದವನು ನೀರನ್ನು ಕುಡಿದೇ ದಾಹವನ್ನಡಗಿಸಬೇಕಲ್ಲವೆ! ಆದುದರಿಂದ ಕರ್ಮದಿಂದಲೇ ಕಾಮಸಾಧನೆಯೆಂಬ ವಿಧಿಯು ಏರ್ಪಟ್ಟಿದೆ. ಪರಲೋಕವಿಷಯದಲ್ಲಿಯೂ ಹೀಗೆಯೇ! ಕರ್ಮವನ್ನು ಬಿಟ್ಟು ಬೇರೆ ವಿಧದಿಂದ ಯಾವನು ಫಲವನ್ನಪೇಕ್ಷಿಸುವನೋ ಅವನ ಕೋರಿಕೆಯು ನಿಷ್ಫಲವಾಗುವುದು. ಕರ್ಮಬಲದಿಂದಲೇ ದೇವತೆಗಳು ಪರಲೋಕದಲ್ಲಿ ಪ್ರಕಾಶಿಸುವರು. ಕರ್ಮದಿಂದಲೇ ವಾಯುವು ಈ ಲೋಕದಲ್ಲಿ ಸದಾಗತಿಯಿಂದ ಚಲಿಸುತ್ತಿರುವುದು. ಸೂರ್ಯನು ಕರ್ಮದಿಂದಲೇ ರಾತ್ರಿ ಹಗಲುಗಳನ್ನು ಮಾಡುತ್ತ ಬೇಸರವಿಲ್ಲದೆ ಪ್ರತಿದಿನವೂ ಬೆಳಗಾದೊಡನೆ ತಲೆದೋರುತ್ತಿರುವನು. ಹಾಗೆಯೇ ಚಂದ್ರನು, ಮಾಸಗಳು, ಅರ್ಧಮಾಸಗಳು, (ಪಕ್ಷಗಳು) ನಕ್ಷತ್ರಗಳು, ಯೋಗಗಳು, ಎಂಬೀ ಕಾಲವಿಭಾಗಗಳನ್ನು ಬೇಸರವಿಲ್ಲದೆ ಕಾಣಿಸುತ್ತಿರುವನು. ಅಗ್ನಿಯೂ ಬೇಸರಿಸದೆ ಪ್ರಜೆಗಳ ಕ್ಷೇಮಕ್ಕಾಗಿ ದಹನವೆಂಬ ಕರ್ಮವನ್ನು ಮಾಡುತ್ತಿರುವನು. ಈ ಭೂಮಿಯೂ ಕೂಡ ಬೇಸರವಿಲ್ಲದೆ ಸಮಸ್ತಭಾರವನ್ನೂ ಹೊತ್ತಿರುವಳು. ನದಿಗಳು ತಮ್ಮ ಕೆಲಸದಲ್ಲಿ ಬೇಸರವಿಲ್ಲದೆ ಸಮಸ್ತಭೂತಗಳ ತೃಪ್ತಿಗಾಗಿ ಜಲಪ್ರವಾಹವನ್ನು ವೇಗದಿಂದ ಸಾಗಿಸುತ್ತಿರುವುವು. ವರ್ಷಾಧಿಪತಿಯೂ ಕೂಡ ತನ್ನ ತೇಜಸ್ಸಿನಿಂದ ಬೆಳಗುತ್ತ, ತನ್ನ ಧ್ವನಿಯಿಂದ ದಿಕ್ಕುಗಳನ್ನೂ, ಅಂತರಿಕ್ಷವನ್ನೂ ಮೊಳಗಿಸುತ್ತ, ಕಾಲಕಾಲಕ್ಕೆ ಬೇಸರವಿಲ್ಲದೆ ಮಳೆಯನ್ನು ಸುರಿಸುತ್ತಿರುವನು. ಬಲವೈರಿಯಾದ ಇಂದ್ರನೂ ದೇವತೆಗಳ ಮೇಲ್ಮೆಯನ್ನು ಕೋರಿ, ಬೇಸರವಿಲ್ಲದೆ ಬ್ರಹ್ಮಚರ್ಯವನ್ನು ನಡೆಸಿದನು. ಸುಖವನ್ನೂ, ಮನಸ್ಸಿಗೆ ಬೇಕಾದ ಪ್ರಿಯವಸ್ತುಗಳನ್ನೂ ನಿರಾಕರಿಸಿ ಕರ್ಮವನ್ನು ನಡೆಸಿದ್ದರಿಂದಲೇ ಅವನಿಗೆ ಆ ವಿಧವಾದ ಮೇಲ್ಮೆಯುಂಟಾಯಿತು. ಪೂಜ್ಯನಾದ ಆತನು ಸತ್ಯಧರ್ಮಗಳನ್ನು ಲೋಪವಿಲ್ಲದೆ ರಕ್ಷಿಸುತ್ತ, ಇಂದ್ರಿಯನಿಗ್ರಹ, ತಾಳ್ಮೆ, ಸರ್ವಭೂತಗಳಲ್ಲಿಯೂ ಸಮದೃಷ್ಟಿ, ಪ್ರೀತಿ, ಇವನ್ನೆಲ್ಲಾ ಸರಿಯಾಗಿ ಅನುಷ್ಠಿಸಿದುದರಿಂದಲೇ ಆ ತನ್ನ ಕರ್ಮಬಲದಿಂದ ಉತ್ತಮವಾದ ದೇವರಾಜ್ಯವನ್ನು

ಪಡೆದನು. ಇದರಂತೆಯೇ ದೇವಗುರುವಾದ ಬೃಹಸ್ಪತಿಯೂ, ತನ್ನ ಸುಖ ವನ್ನು ಬಿಟ್ಟು ಇಂದ್ರಿಯಗಳನ್ನಡಗಿಸಿ, ದೇಹದಂಡನೆಮಾಡಿ ಬ್ರಹ್ಮಚರ್ಯ ವನ್ನು ನಡೆಸಿದುದರಿಂದಲೇ ದೇವತೆಗಳಿಗೆ ಗುರುಸ್ಥಾನವನ್ನು ಪಡೆದನು. ಸಂಜಯಾ! ಹೀಗೆಯೇ ನಕ್ಷತ್ರಗಳೂ, ಏಕಾದಶರುದ್ರರೂ, ದ್ವಾದಶಾದಿ ತ್ಯರೂ, ಅಷ್ಟವಸುಗಳೂ, ವಿಶ್ವೇದೇವತೆಗಳೂ, ಯಮನೂ, ಕುಬೇರನೂ ಗಂಧರ್ವರೂ, ಯಕ್ಷರೂ, ಅಪ್ಸರಸ್ಸುಗಳೂ ಸ್ವಕರ್ಮದಿಂದಲೇ ಆಕಾಶ ದಲ್ಲಿ ಬೆಳಗುವರು. ಮಹರ್ಷಿಗಳೂ ಕೂಡ ಬೇಸರಿಸದೆಬ್ರಹ್ಮಧ್ಯಾನವನ್ನೂ, ಬ್ರಹ್ಮಚರ್ಯೆಯನ್ನೂ, ಕರ್ಮಗಳನ್ನೂ ನಡೆಸಿ ಪೂಜ್ಯಸ್ಥಾನವನ್ನು ಪಡೆ ದಿರುವರು. ಓ ಸಂಜಯಾ! ಹೀಗೆಯೇ ಸಮಸ್ತಲೋಕಗಳೂ, ಬ್ರಾಹ್ಮ ಣ, ಕ್ಷತ್ರಿಯ, ವೈಶ್ಯಾದಿಗಳೂ ತಮ್ಮ ಮೇಲ್ಮೆಗಾಗಿ ಯಾವಯಾವ ಕರ್ಮಗ ಳನ್ನು ನಡೆಸಬೇಕೆಂಬುದನ್ನು ನೀನೂ ಚೆನ್ನಾಗಿ ಬಲ್ಲವನು. ಹೀಗೆ ನೀನು ಎಲ್ಲವನ್ನೂ ತಿಳಿದವನಾಗಿದ್ದು, ಆ ಕೌರವರಿಗಾಗಿ ವಿವೇಕಿಗಳಾದ ಈ ಪಾಂಡವರ ಪ್ರಯತ್ನಗಳನ್ನು ತಡೆಯುವುದೇಕೆ? ಈ ಪಾಂಡವರು ವೇದಾ ಧ್ಯಯನಗಳಲ್ಲಿಯೂ, ಅಶ್ವಮೇಧ ರಾಜಸೂಯಾದಿ ಯಾಗಗಳಲ್ಲಿಯೂ, ನಿತ್ಯನಿರತರೆಂಬುದನ್ನು ನೀನೂ ಬಲ್ಲೆ. ಅಲ್ಲದೆ, ಇವರಿಗೆ ಯುದ್ಧಸಾ ಧನಗಳಾದ ಬಿಲ್ಲು, ಕವಚ, ಆನೆ, ಕುದುರೆ, ರಥಗಳು, ಶಸ್ತ್ರಗಳು, ಇವೆಲ್ಲ ಪೂರ್ಣವಾಗಿ ಕೈವಶವಾಗಿರುವುವು. ಇಂತಹ ಈ ಪಾಂಡವರು ಆ ಕೌರ ವರ ವಿಷಯದಲ್ಲಿ ವಧೋಪಾಯವನ್ನು ಬಿಟ್ಟು ಬೇರೆ ಯಾವುದಾದರೂ ಮಾರ್ಗವನ್ನು ಯೋಚಿಸುವುದಾದರೆ ಅದು ಎಲ್ಲರಿಗೂ ಒಳ್ಳೆಯದೇ. ನಯ ಮಾರ್ಗದಿಂದ ಹೋದರೆ ಇವರು ಸ್ವಧರ್ಮವನ್ನು ರಕ್ಷಿಸಿಕೊಂಡು ಪುಣ್ಯ ವನ್ನೂ ಸಾಧಿಸಿದಂತಾಗುವುದು. ಆಗಲೂ ಇವರು ಈ ಅಹಿಂಸಾರೂಪವಾ ದ ಕಾರ್ಯವನ್ನು ಭೀಮಸೇನನನ್ನು ನಿರಾಕರಿಸಿಯೇ ನಿರ್ವಹಿಸಬೇಕಾಗು ವುದು. ಹಾಗಿಲ್ಲದೆ ಇವರು ತಮ್ಮ ತಂದೆಯ ಮಾರ್ಗವನ್ನು ಎಂದರೆ, ಕ್ಷತ್ರಿ ಯಧರ್ಮವನ್ನೇ ಹಿಡಿದು ಯುದ್ಧಕ್ಕೆ ನಿಂತು, ತಮ್ಮ ಶಕ್ತ್ಯನುಸಾರವಾಗಿ ಸ್ವಕರ್ಮವನ್ನು ನಡೆಸಿ, ದೈವವಶದಿಂದ ಅದರಲ್ಲಿ ಮರಣಕ್ಕೀಡಾದರೆ, ಆ ಮರಣವೂ ಇವರಿಗೆ ಶ್ರೇಯಸ್ಕರವೇ. ಸಂಜಯಾ! ಅದೂ ಹಾಗಿರಲಿ! ನೀನು ಶಾಂತಿಯನ್ನೇ ಬಯಸುವೆನಾದರೂ ಕ್ಷತ್ರಿಯರಿಗೆ ಯುದ್ಧಮಾಡು-

ವುದು ಉತ್ತಮ ಧರ್ಮವೇ? ಯುದ್ಧಮಾಡದೆ ಬಿಡುವುದು ಉತ್ತಮ ಧರ್ಮವೇ? ಎಂಬೀ ತಾರತಮ್ಯವನ್ನು ಯೋಚಿಸು. ನೀನು ಹೇಳಿದಂತೆ ಕೇಳಲು ಸಿದ್ಧರಾಗಿರುವೆವು. ನೀನು ಮೊದಲು ಬ್ರಾಹ್ಮಣಾದಿ ಚತುರ್ವರ್ಣಗಳ ಧರ್ಮಭೇದಗಳನ್ನು ಚೆನ್ನಾಗಿ ಯೋಚಿಸು. ಆಮೇಲೆ ನೀನು ಪಾಂಡವರನ್ನು ನಿನ್ನ ಇಷ್ಟವಿದ್ದಂತೆ ನಿಂದಿಸು! ಅಥವಾ ಶ್ಲಾಘಿಸು! ಬ್ರಾಹ್ಮಣನಾದವನು ವೇದಗಳನ್ನು ಕಲಿಯಬೇಕು. ಇತರರಿಗೆ ಕಲಿಸಬೇಕು. ತಾನೂ ಯಜ್ಞಗಳನ್ನು ನಡೆಸಬೇಕು. ಇತರರಿಂದ ಯಜ್ಞವನ್ನು ಮಾಡಿಸಬೇಕು. ಯೋಗ್ಯವಾದ ದಾನಗಳನ್ನು ತಾನು ತನಗೆ ಬೇಕಾದಾಗ ತೆಗೆಯಬೇಕು. ತಾನೂ ಇತರರಿಗೆ ಕೊಡಬೇಕು. ಈ ಆರು ಬಗೆಯ ಕರ್ಮಗಳಿಗೂ.ಬ್ರಾಹ್ಮಣರಿಗೆ ಅಧಿಕಾರವುಂಟು. ಕ್ಷತ್ರಿಯನಿಗಾದರೋ ಅಧ್ಯಯನ, ಯಾಗ, ದಾನ, ಈ ಮೂರಕ್ಕೆ ಮಾತ್ರವೇ ಅಧಿಕಾರವುಹೊರತು, ಅವನು ಇತರರಲ್ಲಿ ಯಾಚಿಸಬಾರದು! ಬೇರೆಯವರಿಂದ ಯಜ್ಞವನ್ನು ಮಾಡಿಸಬಾರದು! ಇತರರಿಗೆ ವೇದಾಧ್ಯಯನವನ್ನೂ ಮಾಡಿಸಬಾರದು. ಇದು ಪುರಾತನವಾದ ಕ್ಷತ್ರಿಯಧರ್ಮವು. ಪ್ರಜೆಗಳನ್ನು ಧರ್ಮದಿಂದ ರಕ್ಷಿಸುತ್ತ, ಪಾತ್ರವರಿತು ದಾನಮಾಡುತ್ತ, ಯಜ್ಞಗಳನ್ನು ನಡೆಸುತ್ತ, ವೇದಗಳನ್ನು ಅಭ್ಯಸಿಸುತ್ತ, ಸಪತ್ನೀಕನಾಗಿ ಪುಣ್ಯಕಾರ್ಯಗಳನ್ನು ನಡೆಸುತ್ತ, ಕುಟುಂಬಧರ್ಮದಲ್ಲಿರಬೇಕಾದುದು ಕ್ಷತ್ರಿಯಧರ್ಮವು. ಸ್ವಧರ್ಮನಿರತನಾದ ಅಂತಹ ಕ್ಷತ್ರಿಯನು ಆ ಧರ್ಮದ ಫಲದಿಂದ ಸಹಜಸಿದ್ಧವಾದ ಬ್ರಹ್ಮಲೋಕವನ್ನು ಪಡೆಯುವನು. ಇವೆಲ್ಲವೂ ಕ್ಷತ್ರಿಯಧರ್ಮಗಳು. ವೈಶ್ಯನಾದವನು ಅಧ್ಯಯನ ಮಾಡಬೇಕು. ಕೃಷಿ, ಗೋರಕ್ಷಣೆ, ವರ್ತಕ, ಇವುಗಳಿಂದ ಧನವನ್ನು ಸಂಗ್ರಹಿಸಿ, ಅದನ್ನು ಜಾಗರೂಕತೆಯಿಂದ ಕಾಪಾಡಿಡಬೇಕು. ಇವನು ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ ಸಹಾಯವನ್ನು ಮಾಡುತ್ತ, ಧರ್ಮಶೀಲನಾಗಿ, ಪುಣ್ಯಕಾರ್ಯಗಳಿಂದ ಕುಟುಂಬಧರ್ಮದಲ್ಲಿರಬೇಕು. ನಾಲ್ಕನೆಯ ವರ್ಣದವನಾದ ಶೂದ್ರನಿಗೆ ಉತ್ತಮ ಜಾತಿಯವರ ಪರಿಚರ್ಯೆಯೂ, ವಂದನವೂ ಮುಖ್ಯಧರ್ಮಗಳು. ಅವನಿಗೆ ವೇದಾಧ್ಯಯನವೂ, ಯಜ್ಞವೂ ನಿಷಿದ್ಧಗಳು. ಅವನು ಯಾವಾಗಲೂ ತನ್ನ ಪುರೋವೃದ್ಧಿಯಲ್ಲಿ ಎಚ್ಚರಗೊಂಡವನಾಗಿ, ಬೇಸರವಿಲ್ಲದೆ ಕೆಲಸಮಾಡುತ್ತಿರಬೇಕು. ಇದೇ ಅನಾದಿಯಾಗಿ

ಬಂದ ಶೂದ್ರಧರ್ಮವೆನಿಸಿದೆ. ರಾಜ್ಯವನ್ನಾಳುವ ರಾಜನು ಈ ಸಮಸ್ತ ವರ್ಣಧರ್ಮಗಳನ್ನೂ ಎಚ್ಚರದಿಂದ ಪಾಲಿಸತಕ್ಕವನಾಗಿರಬೇಕು. ಆಯಾ ವರ್ಣದವರು ತಮ್ಮ ಸ್ವಧರ್ಮಗಳನ್ನು ತಪ್ಪಿ ನಡೆಯದಂತೆ ಎಚ್ಚರದಿಂದ ನೋಡಿಕೊಳ್ಳುತ್ತ, ಕಾಮಾಸಕ್ತನಾಗದೆ, ಸಮಸ್ತಪ್ರಜೆಗಳನ್ನೂ ಸಮ ವಾಗಿ ನೋಡುತ್ತಿರಬೇಕು. ಕಾಮದಿಂದ ಅಧರ್ಮದಲ್ಲಿ ಬಿದ್ದವರನ್ನು ತನ್ನಲ್ಲಿ ಹೊದ್ದಿಸಬಾರದು. ರಾಜನಾದವನು ತನಗಿಂತಲೂ ಧರ್ಮಜ್ಞನೂ ಪ್ರಾಜ್ಞನೂ ಆದವನು ಯಾವನಾದರೂ ಒಬ್ಬನಿದ್ದರೆ, ಅಂತವನನ್ನೇ ಪ್ರಜಾಪಾಲನಕಾರ್ಯಕ್ಕಾಗಿ ನಿಯಮಿಸುವ ಪ್ರಯತ್ನವನ್ನು ಮಾಡು ವುದೇನೋ ಉಚಿತವೇ! ಈ ಧರ್ಮರಾಜನಲ್ಲಿ ಆ ಗುಣಗಳಿಲ್ಲವೆಂದೆಣಿ ಸುವುದು ಸಾಧುವಲ್ಲ. ಘಾತುಕಸ್ವಭಾವವುಳ್ಳವನೊಬ್ಬನು ದುರ್ವಿಧಿವಶ ದಿಂದ, ತನ್ನ ಛಲವನ್ನೇ ಹಿಡಿದು, ಇತರರ ಸ್ವತ್ತನ್ನು ಅಪಹರಿಸುವುದಕ್ಕೆ ಆಶೆಪಟ್ಟಾಗ ರಾಜರಿಗೆ ಈ ಯುದ್ಧವೆಂಬುದು ವಿಧಿವಿಹಿತವಾಗಿದೆ. ಈ ಯುದ್ಧಕ್ಕಾಗಿಯೇ ಕವಚಗಳೂ, ಶಸ್ತ್ರಗಳೂ, ಧನುಸ್ಸೂ ಏರ್ಪಟ್ಟಿವೆ. ಈ ಯುದ್ಧಕರ್ಮವೂ, ಅದಕ್ಕೆ ಬೇಕಾದ ಧನುಸ್ಸು, ಶಸ್ತ್ರ, ಕವಚ ಮುಂತಾದ ಸಾಧನಗಳೂ ಕಳ್ಳರನ್ನು ಕೊಲ್ಲುವುದಕ್ಕಾಗಿ ಇಂದ್ರನಿಂದ ಏರ್ಪಟ್ಟಿವೆ. ಚೋರರನ್ನು ಕೊಲ್ಲುವುದರಿಂದ ಪುಣ್ಯವೇ ಲಭಿಸುವುದು. ಓ ಸಂಜಯಾ! ಧರ್ಮವನ್ನೇ ತಿಳಿಯದ ಮೂಢರಾದ ಆ ಕೌರವರು ಈಗ ಮಾಡಿರುವುದೂ ಅತಿಕ್ರೂರವಾದ ಕಳ್ಳತನವೇ ಹೊರತು ಬೇರೆಯಲ್ಲ.

ಕುರುಕುಲಕ್ಕೆ ರಾಜನೆನಿಸಿದ ಆ ಧೃತರಾಷ್ಟ್ರನಾದರೂ ತನ್ನ ಮ ಕ್ಕಳೊಡನೆ ಸೇರಿಕೊಂಡು, ಪಾಂಡವರಿಗೆ ಧರ್ಮಪ್ರಾಪ್ತವಾದ ಅವರ ಪಿತೃಧನವನ್ನು ಮೊತ್ತಕ್ಕೇ ಅಪಹರಿಸಲು ಯತ್ನಿಸುವನು. ಅವನಾದರೂ ಪುರಾತನವಾದ ರಾಜಧರ್ಮವನ್ನು ಯೋಚಿಸಿದಹಾಗಿಲ್ಲ. ಎಲ್ಲಾ ಕುರುಗ ಳೂ, ಅವನ ದಾರಿಯನ್ನೇ ಅನುಸರಿಸುತ್ತಿರುವರು. ಸಂಜಯಾ! ಕಳ್ಳನು ಕೆಲವು ವೇಳೆ ಯಾರ ಕಣ್ಣಿಗೂ ಬೀಳದಂತೆ ಇತರರ ಧನವನ್ನು ಅಪಹರಿ ಸುವುದುಂಟು. ಕೆಲವು ಸಂದರ್ಭಗಳಲ್ಲಿ ಕಣ್ಣೆದಿರಾಗಿಯೇ ಬಂದು ಬಲಾ ತ್ಕಾರದಿಂದ ತಲೆಯೊಡೆದು ಎಲ್ಲವನ್ನೂ ದೋಚಿಕೊಂಡು ಹೋಗುವುದೂ

ಉಂಟು. ಹೇಗಾದರೇನು? ಇವೆರಡೂ ಕಳ್ಳತನವೇ ಅಲ್ಲವೆ? ಇವೆರಡೂ ನಿಂದ್ಯಕಾರ್ಯಗಳೇ. ಈಗ ದುರ್ಯೋಧನನು ನಡೆಸಿದ ಕಾರ್ಯವಾದರೂ ಎಂತದು? ಕಳ್ಳತನದಲ್ಲಿ ಸೇರಿದುದೇ! ಅಂತಹ ಕಳ್ಳನನ್ನು ನಿಗ್ರಹಿಸುವುದೂ ಕ್ಷತ್ರಿಯಧರ್ಮವೇ. ಆ ದುರ್ಯೋಧನನು ಕ್ರೋಧ ಲೋಭಗಳಿಗೆ ವಶನಾಗಿ, ಈಗ ಯಾವ ಕಾರ್ಯವನ್ನು ಮಾಡಬೇಕೆಂದೆಳಸುವನೋ ಅದನ್ನೇ ಅವನು ಧರ್ಮವೆಂದೂ ತಿಳಿದಿರುವನು. ಪಾಂಡವರಿಗಾಗಿ ಯಾವ ರಾಜ್ಯಭಾಗವು ಏರ್ಪಟ್ಟಿದೆಯೋ, ಅದಕ್ಕೆ ಬೇರೆಯವರು ಕೈಯಿಕ್ಕುವುದರಲ್ಲಿ ಯಾವ ನ್ಯಾಯವಿದೆ? ಈ ಸಂದರ್ಭದಲ್ಲಿ ನಾವು ಯುದ್ಧಮಾಡಿ ಅದರಲ್ಲಿ ಮರಣವಾದರೂ ನಮಗೆ ಶ್ಲಾಘ್ಯವೇ. ಬೇರೆ ರಾಜ್ಯಕ್ಕಿಂತ ಪಿತ್ರಾರ್ಜಿತವಾದ ಅಲ್ಪಸ್ವಲ್ಪ ರಾಜ್ಯವಾದರೂ ಮೇಲೆನಿಸುವುದು. ಓ ಸಂಜಯಾ! ನೀನು ಹೋಗಿ ಆ ಧೃತರಾಷ್ಟ್ರರಾಜನ ಸಭೆಯಲ್ಲಿ, ಈ ಪುರಾತನ ಧರ್ಮಗಳೆಲ್ಲವನ್ನೂ ಕೌರವರ ಮುಂದೆ ಸ್ಪಷ್ಟವಾಗಿ ತಿಳಿಸು. ಮೂಢರಾದ ಅನೇಕರಾಜರು ಆ ದುರ್ಯೋಧನನಿಂದ ಮೃತ್ಯುವಿನ ಬಾಯಿಗೆ ಎಳೆಯಲ್ಪಟ್ಟಿರುವರು. ಹಿಂದೆ ರಾಜಸಭಾಮಧ್ಯದಲ್ಲಿ ಎಂತಹ ಪಾಪಕಾರ್ಯವು ನಡೆಯಿತೆಂಬುದನ್ನು ಕಾಣೆಯಾ? ಭೀಷ್ಮನೇ ಮೊದಲಾದ ಕುರುವೃದ್ಧರೆಲ್ಲರೂ ಆಗ ಕಣ್ಣಿದಿರಾಗಿ ಇದ್ದರಲ್ಲವೆ? ದ್ರುಪದಪುತ್ರಿಯಾಗಿಯೂ, ಮಹಾಯಶಸ್ವಿನಿಯಾಗಿಯೂ, ಒಳ್ಳೇ ಶೀಲವತಿಯಾಗಿಯೂ, ಪಾಂಡವರಿಗೆ ಪ್ರಿಯಪತ್ನಿಯಾಗಿಯೂ ಇದ್ದ ದ್ರೌಪದಿಯನ್ನು ಕಾಮಾಂಧನಾದ ದುಶ್ಶಾಸನನು ಬಲಾತ್ಕಾರದಿಂದ ಸೆಳೆಯುತ್ತಿರುವಾಗಲೂ, ಅವರು ಬಾಯೆತ್ತದೆ ಸುಮ್ಮನಿದ್ದರು. ಆಗಲೇ ಆ ಕೌರವಸಭೆಯಲ್ಲಿದ್ದ ಮಕ್ಕಳು, ಮುದುಕರು ಮೊದಲಾಗಿ, ಆ ಕಡೆಯವರೆಲ್ಲರೂ ಸೇರಿ ಆ ಅಕೃತ್ಯವನ್ನು ತಡೆದಿದ್ದ ಪಕ್ಷದಲ್ಲಿ ಧೃತರಾಷ್ಟ್ರನು ನನಗೆ ಎಷ್ಟೋ ಪ್ರಿಯವನ್ನುಂಟುಮಾಡಿದಹಾಗೆ ಭಾವಿಸುತಿದ್ದೆನು. ಅದರಿಂದ ಅವನ ಮಕ್ಕಳಿಗೂ ಎಷ್ಟೋ ಮೇಲ್ಮೆಯುಂಟಾಗುತಿದ್ದಿತು. ಆಗ ದುಶ್ಶಾಸನನು ದ್ರೌಪದಿಯನ್ನು ಅವಳ ಮಾವಂದಿರೆಲ್ಲರೂ ಕಣ್ಣಾರೆ ನೋಡುತ್ತಿದ್ದಹಾಗೆಯೇ ಹಿಂದುಮುಂದಾಗಿ ಸಭಾಮಧ್ಯದಲ್ಲಿ ಸೆಳೆದುತಂದನು. ಆ ಸಂದರ್ಭದಲ್ಲಿ ಆ ದ್ರೌಪದಿಯು ದೈನ್ಯದಿಂದ ಒಬ್ಬೊಬ್ಬರ ಮುಖವನ್ನೂ ನೋಡಿ ಮೊರೆಯಿಡುತ್ತಿದ್ದರೂ, ಮಹಾತ್ಮನಾದ

ಆ ವಿದುರನೊಬ್ಬನುಹೊರತು ಅವಳಿಗೆ ಬೇರೆ ರಕ್ಷಕರಿಲ್ಲದಂತಾಯಿತು. ಅಲ್ಲಿ ಅಷ್ಟು ಮಂದಿ ರಾಜರಿದ್ದರೂ, ಅವರೆಲ್ಲ ದುರ್ಯೋಧನನಿಗೆ ತಾವು ಅಡಿಯಾಳುಗಳೆಂಬ ದೈನ್ಯಭಾವದಿಂದ ಬಾಯೆತ್ತದೆ ಸುಮ್ಮನಿದ್ದರು. ಧರ್ಮ ಬುದ್ಧಿಯುಳ್ಳ ವಿದುರನೊಬ್ಬನೇ ಆಗ ಅಲ್ಪಬುದ್ಧಿಯುಳ್ಳ ಆ ದುರ್ಯೋಧನನನ್ನು ನೋಡಿ ಧರ್ಮವನ್ನು ಹಿಡಿದು ಮಾತಾಡಿದನು. ಓ ಸಂಜಯಾ! ನೀನು ಈ ಅಧರ್ಮಗಳನ್ನೆಲ್ಲ ಯೋಚಿಸದೆ ಈ ಪಾಂಡವರಿಗೆ ಧರ್ಮೋಪದೇಶ ಮಾಡುವುದಕ್ಕಾಗಿ ಬಂದಿರುವೆ. ಆಗ ಆ ದ್ಯೂತಸಭೆಯಲ್ಲಿ ಈ ದ್ರೌಪದಿಯಲ್ಲವೇ ಸಮುದ್ರಪ್ರವಾಹದಿಂದ ದೋಣಿಯನ್ನು ದಡಕ್ಕೆ ಸೇರಿಸುವಂತೆ, ತನ್ನನ್ನೂ, ಪಾಂಡವರನ್ನೂ ಆ ಕಷ್ಟದಿಂದುದ್ಧರಿಸುವುದಕ್ಕೆ ಬೇಕಾದ ಪ್ರಯತ್ನವನ್ನು ನಡೆಸಿದಳು. ಆಗಲೂ ಸೂತಕುಲದವನಾದ ಆ ಕರ್ಣನು, ಸಭಾಮಧ್ಯದಲ್ಲಿ ನಿಂತಿದ್ದ ದ್ರೌಪದಿಯನ್ನು ನೋಡಿ ಅವಳ ಮಾವಂದಿರೆಲ್ಲರೂ ಸಮೀಪದಲ್ಲಿರುವಾಗಲೇ ಎಂತಹ ಕ್ರೂರವಾಕ್ಯಗಳನ್ನಾಡಿದನೆಂಬುದು ನಿನಗೆ ತಿಳಿಯದೇನು? ಆಗ ಕರ್ಣನು ಆ ಸಭೆಯಲ್ಲಿ ಅತಿದೀನೆಯಾಗಿ ನಿಂತಿದ್ದ ದ್ರೌಪದಿಯನ್ನು ನೋಡಿ "ಎಲೆ ಯಾಜ್ಞಸೇನೀ! ನಿನಗೆ ಇನ್ನುಮೇಲೆ ಬೇರೆ ಗತಿಯೇನು? ಧೃತರಾಷ್ಟ್ರಪುತ್ರನ ಮನೆಗೆ ಬಂದು ಸೇರಿಬಿಡು! ನಿನ್ನ ಗಂಡಂದಿರೆಲ್ಲರೂ ಸೋತರು. ಇನ್ನು ನಿನಗೆ ಪತಿಗಳಿಲ್ಲ. ಬೇರೊಬ್ಬ ಪತಿಯನ್ನು ವರಿಸು" ಹೀಗೆಂದು ಹೇಳಿದನಲ್ಲವೆ? ಅತಿ ಭಯಂಕರವಾಗಿಯೂ, ಮೈಯೊಳಗಿನ ಮೂಳೆಯನ್ನು ಮುರಿಯುವಷ್ಟು ಮರ್ಮಭೇದಕವಾಗಿಯೂ ಇದ್ದ ಕರ್ಣನ ಈ ಕಠಿನವಾಕ್ಯವು, ಅತಿತೀಕ್ಷ್ಣಬಾಣದಂತೆ ಅರ್ಜುನನ ಹೃದಯದಲ್ಲಿ ನಾಟಿ, ಅಲ್ಲಿ ಸ್ಥಿರವಾಗಿ ನೆಲಸಿ, ಈಗಲೂ ಅವನ ಹೃದಯವನ್ನು ಒಳಗೊಳಗೆ ಕೊರೆಯುತ್ತಲೇ ಇದೆ. ಸಂಜಯಾ! ಪಾಂಡವರು ದ್ಯೂತದಲ್ಲಿ ಸರ್ವಸ್ವವನ್ನೂ ಕಳೆದುಕೊಂಡು, ಕೃಷ್ಣಾಜಿನವನ್ನು ಧರಿಸಿ ಕಾಡಿಗೆ ಹೊರಡಲು ಸಿದ್ಧರಾಗಿರುವಾಗಲೂ ದುಶ್ಶಾಸನನು ಅವರನ್ನುಕುರಿತು ಎಂತಹ ಕಠಿನವಾಕ್ಯಗಳನ್ನಾಡಿದನು ಬಲ್ಲೆಯಾ? "ಈ ಪಾಂಡವರೆಲ್ಲರೂ ಎಳ್ಳುಗಳಲ್ಲಿರುವ ಜಳ್ಳುಕಾಳುಗಳಂತೆ ಸಾರಹೀನರು! ಮೃತಪ್ರಾಯರು! ಇವರು ಇನ್ನೂ ಬಹುಕಾಲದವರೆಗೆ ನರಕದಲ್ಲಿದ್ದಂತೆ ಕಷ್ಟಪಡತಕ್ಕವರೇ" ಎಂದು ಕರ್ಣನು ಹೇಳಲಿ

ಲ್ಲವೆ? ಇದರಮೇಲೆ ಆ ಶಕುನಿಯು ವಂಚನೆಯಿಂದ ಈ ಧರ್ಮರಾಜನನ್ನು ಸೋಲಿಸಿದುದಲ್ಲದೆ, ಆ ಸಮಯದಲ್ಲಿ ಇವನನ್ನು ನೋಡಿ "ಯುಧಿಷ್ಠಿರಾ! ನಕುಲನು ಪರಾಜಿತನಾದನು! ನಿನಗೆ ಇನ್ನು ಬೇರೇನಿದೆ? ನಿನ್ನ ಪತ್ನಿಯಾದ ಯಾಜ್ಞಸೇನಿಯನ್ನು ತಂದು ಜೂಜಿಗೆ ಒಡ್ಡಬಾರದೇಕೆ?" ಎಂದನಲ್ಲವೆ? ಸಂಜಯಾ! ಆಗಿನ ಜೂಜಾಟದ ಕಾಲದಲ್ಲಿ ನಡೆದ ಈ ಹೀನವಾಕ್ಯಗಳನ್ನೆಲ್ಲ ನೀನೂ ಚೆನ್ನಾಗಿ ತಿಳಿದಿರುವೆ. ಹೀಗೆ ಸರ್ವವಿಧದಿಂದಲೂ ಅನರ್ಥಕರವಾಗಿ ಬಂದೊದಗಿರುವ ಈಗಿನ ಕಾರ್ಯಭಾರವನ್ನು ಕ್ರಮಪಡಿಸಿ ಸಮಾಧಾನಕ್ಕೆ ತರಬೇಕೆಂದರೆ ಬಹಳ ಕಷ್ಟವು. ಇತರರಿಂದ ಸಾಧ್ಯವಲ್ಲ. ಇದಕ್ಕಾಗಿ ನಾನೇ ನೇರವಾಗಿ ಅಲ್ಲಿಗೆ ಹೋಗಬೇಕೆಂದೂ ಕೋರುವೆನು. ಇದಕ್ಕೆ ಎಲ್ಲರ ಅನುಮತಿಯನ್ನೂ ಪ್ರಾರ್ಥಿಸುವೆನು. ಓ ಸಂಜಯಾ! ಕೇವಲ ಪಾಪಚಾರಿಯೂ, ದುರಾತ್ಮನೂ ಆದ ಆ ದುರ್ಯೋಧನನ ಅಜ್ಞತೆಯೆಷ್ಟೆಂಬುದನ್ನು ನೀನೂ ಚೆನ್ನಾಗಿ ತಿಳಿದಿರುವೆ ಇಂತಹ ಸ್ಥಿತಿಯಲ್ಲಿ ಪಾಂಡವರ ಪ್ರಯೋಜನವನ್ನು ಕೆಡಿಸದೆ, ಇವರಿಗೂ ಕೌರವರಿಗೂ ಸಮಾಧಾನವನ್ನು ತರುವುದು ನನ್ನಿಂದ ಸಾಧ್ಯವಾದರೆ ಅದರಿಂದ ನನಗೆ ಒಳ್ಳೇ ಪುಣ್ಯವುಂಟು. ಅದರಿಂದ ನನ್ನ ಚರಿತ್ರವೂ ಪ್ರಖ್ಯಾತಿಗೆ ಬರುವುದು. ಕೌರವರನ್ನೂ ಮೃತ್ಯುವಿನ ಬಾಯಿಂದ ತಪ್ಪಿಸಿದಂತಾಗುವುದು. ಆದರೆ ನಾನು ಅವರಿಗೆ ಹೇಳಬೇಕೆಂದಿರುವ ಬುದ್ಧಿವಾದವು ದೇವಗುರುವಾದ ಶುಕ್ರಾಚಾರ್ಯನ ರಾಜನೀತಿಗೆ ಸಮ್ಮತವಾದುದು. ಧರ್ಮಯುಕ್ತವಾದುದು. ಸಾರವತ್ತಾಗಿಯೂ, ಯಾರಿಗೂ ಅಪಾಯವಿಲ್ಲದುದಾಗಿಯೂ ಇರುವುದು. ಆದರೂ ನನ್ನ ಮಾತುಗಳನ್ನು ಆ ಧೃತರಾಷ್ಟ್ರಪುತ್ರರು ಆದರಿಸಿ ಕೇಳುವರೋ ಇಲ್ಲವೋ, ಅಲ್ಲಿಗೆ ಹೋದಾಗ ನನ್ನನ್ನು ಆದರಿಸುವರೋ ಇಲ್ಲವೋ, ಎಂಬ ಸಂದೇಹವು ನನ್ನ ಮನಸ್ಸನ್ನು ಬಾಧಿಸುವುದು. ಒಂದುವೇಳೆ ಅವರು ನಾನಾಗಿ ಅಲ್ಲಿಗೆ ಹೋದಾಗಲೂ ನನ್ನನ್ನು ಆದರಿಸದೆ, ನನ್ನ ಮಾತನ್ನು ಕೇಳದೆಯೂ ಹೋದಪಕ್ಷದಲ್ಲಿ, ಈಗಲೇ ಯುದ್ಧಕ್ಕಾಗಿ ಆತುರಗೊಂಡಿರುವ ಈ ಭೀಮಾರ್ಜುನರಿಂದ ಆ ಧೃತರಾಷ್ಟ್ರಪುತ್ರರೆಲ್ಲರೂ ಏಕಕಾಲದಲ್ಲಿ ದಗ್ಧರಾಗುವುದು ನಿಶ್ಚಯವು. ಬಲಗರ್ವದಿಂದ ಕೊಬ್ಬಿದ ಆ ಕೌರವರು ತಮ್ಮ ಪಾಪಕ್ಕೆ ತಕ್ಕ ಫಲವನ್ನು ಅನುಭವಿಸುವರು.

ಓ ಸಂಜಯಾ! ಹಿಂದೆ ದ್ಯೂತದಲ್ಲಿ ಪಾಂಡವರು ಸರ್ವಸ್ವವನ್ನೂ ಸೋತಿರುವಾಗಲೂ, ಆ ದುರ್ಯೋಧನನು ಅವರನ್ನು ಕುರಿತು ಕ್ರೂರವಾದ ಮಾತುಗಳನ್ನಾಡಿದನು. ಆಗ ಅವರು ನಿರಾಯುಧರಾಗಿದ್ದರು. ಇನ್ನು ಮೇಲೆ ಅದೇ ಭೀಮನು ಗದಾಪಾಣಿಯಾಗಿ ಎಚ್ಚರಗೊಂಡು ನಿಂತುಬಿಟ್ಟರೆ, ಆಗ ದುರ್ಯೋಧನನಾಡಿದ ಮಾತುಗಳನ್ನು ಸಮಯದಲ್ಲಿ ನೆನೆಸಿಕೊಳ್ಳುವಹಾಗೆ ಮಾಡದೆ ಬಿಡಲಾರನು. ಓ ಸಂಜಯಾ! ಆ ದುರ್ಯೋಧನನು ಸಾಮಾನ್ಯನಾದ ಮನುಷ್ಯನಲ್ಲ. ಕೇವಲ ಕೋಪರೂಪವಾದ ಒಂದು ದೊಡ್ಡ ಮರವೇ ಅವನು. ಕರ್ಣನೇ ಆ ಮರದ ಅಡಿದಿಂಡು! ಶಕುನಿಯು ಅದರ ಕೊಂಬೆಗಳು! ದುಶ್ಶಾಸನನೇ ಆ ಮರದ ಪುಷ್ಪಫಲಗಳು! ಬುದ್ಧಿಹೀನನಾದ ಧೃತರಾಷ್ಟ್ರನು ಆ ವೃಕ್ಷಕ್ಕೆ ಮೂಲವು. ಅದರಂತೆಯೇ ಇತ್ತಲಾಗಿ ಯುಧಿಷ್ಠಿರನು ಧರ್ಮಮಯವಾದ ಮಹಾವೃಕ್ಷವು. ಅರ್ಜುನನೇ ಅದರ ಸ್ಕಂಧವು. ಭೀಮಸೇನನು ಅದರ ಶಾಖೆಗಳು. ನಕುಲಸಹದೇವರಿಬ್ಬರೂ ಅದರ ಪುಷ್ಪಫಲಗಳು. ನಾನೂ, ಬ್ರಹ್ಮಶಬ್ದವಾಚ್ಯವಾದ ವೇದವೂ, ಬ್ರಾಹ್ಮಣರೂ, ಧರ್ಮಮಯವಾದ ಆ ವೃಕ್ಷದ ಬೇರುಗಳೆಂದು ತಿಳಿ! ಪುತ್ರರೊಡಗೂಡಿದ ಆ ಧೃತರಾಷ್ಟ್ರನನ್ನು ಒಂದು ಕಾಡಿಗೂ, ಪಾಂಡವರನ್ನು ಆ ವನದಲ್ಲಿರುವ ಸಿಂಹಗಳಿಗೂ ಹೋಲಿಸಬಹುದು. ವನವು ಸಿಂಹದಿಂದ ರಕ್ಷಿತವಾಗಿರುವವರೆಗೆ, ಇತರಮೃಗಗಳಿಂದಅಪಾಯವಿಲ್ಲದೆ ಸುರಕ್ಷಿತವಾಗಿರುವುದು. ಸಿಂಹಕ್ಕೂ ಆ ವನದಿಂದ ರಕ್ಷಣೆಯುಂಟು. ಹಾಗಿಲ್ಲದೆ, ಸಿಂಹವಿಲ್ಲದ ವನವೂ, ವನದ ಆಶ್ರಯವಿಲ್ಲದ ಸಿಂಹವೂ ಅಪಾಯಕ್ಕೊಳಗಾಗುವುದು ನಿಶ್ಚಯವು. ಆದುದರಿಂದ ಸಿಂಹವು ವನವನ್ನು ಕಾಪಾಡಬೇಕು. ವನವು ಸಿಂಹವನ್ನು ಕಾಪಾಡಬೇಕು. ಇದೇರೀತಿಯಲ್ಲಿ, ಧೃತರಾಷ್ಟ್ರನನ್ನು ವನವೆಂದೂ, ಪಾಂಡವರನ್ನು ಅದರೊಳಗಿನ ಹುಲಿಗಳೆಂದೂ ತಿಳಿ. ಹುಲಿಯಿಲ್ಲದ ವನವೂ, ವನಾಶ್ರಯವಿಲ್ಲದ ಹುಲಿಯೂ ಕ್ಷೇಮದಿಂದಿರಲಾರವು. ಆದುದರಿಂದ ಒಂದಕ್ಕೊಂದು ಆಶ್ರಯವಾಗಿದ್ದು ಕಾಪಾಡಬೇಕು. ಇದಲ್ಲದೆ ಧೃತರಾಷ್ಟ್ರಪುತ್ರರನ್ನು ಲತೆಗಳೆಂದೂ, ಪಾಂಡವರನ್ನು ಆಶ್ರಯವೃಕ್ಷಗಳೆಂದೂ ಹೇಳಬಹುದು. ಮರದ ಆಶ್ರಯವಿಲ್ಲದೆ ಬಳ್ಳಿಯು ಹಬ್ಬಲಾರದು. ಆದುದರಿಂದ ಪಾಂಡವರ ಆಶ್ರಯಬಲದಿಂದಲೇ ಕೌರವರು

ವೃದ್ಧಿಗೆ ಬರಬೇಕು. ಪಾಂಡವರು ಕೌರವರಿಗೆ ಶುಶ್ರೂಷೆಮಾಡುವುದಕ್ಕೂ ಸಿದ್ಧರಾಗಿರುವರು. ಯುದ್ಧಕ್ಕೂ ಸಿದ್ಧರು! ಇನ್ನು ಧೃತರಾಷ್ಟ್ರನಿಗೆ ತೋರಿದಂತೆ ನಡೆಸಲಿ. ಪಾಂಡವರಾದರೋ ಧರ್ಮಚಾರಿಗಳು, ಮಹಾತ್ಮರು, ಯುದ್ಧಸಮರ್ಥರು. ಹಾಗಿದ್ದರೂ ಅವರು ತಾಳ್ಮೆಯನ್ನೇ ಮುಂದಿಟ್ಟುಕೊಂಡು ಹೋಗತಕ್ಕವರು. ಓ ಸಂಜಯಾ! ನೀನು ಇವೆಲ್ಲವನ್ನೂ ಯಥಾವತ್ತಾಗಿ ಆ ದುರ್ಯೋಧನನ ಸಭೆಯಲ್ಲಿ ತಿಳಿಸು" ಎಂದನು.

ಇದು ಇಪ್ಪತ್ತೊಂಭತ್ತನೆಯ ಅಧ್ಯಾಯವು.

---

ಸಂಜಯನು ಅಲ್ಲಿಂದ ಹಿಂತಿರುಗುವುದಕ್ಕಾಗಿ ಯುಧಿಷ್ಠಿರನ ಅನುಮತಿಯನ್ನು ಕೇಳಿದುದು. ಯುಧಿಷ್ಠಿರನು ತಮ್ಮ ಕ್ಷೇಮಲಾಭವನ್ನು ಭೀಷ್ಮಾದಿಗಳಿಗೆಲ್ಲ ತಿಳಿಸುವಂತೆ ಹೇಳಿ, ದುರ್ಯೋಧನನಿಗೆ ತಾನು ಸಂಧಿ ವಿಗ್ರಹಗಳೆರಡಕ್ಕೂ ಸಿದ್ಧನಾಗಿರುವುದಾಗಿ ಹೇಳಿ ಕಳುಹಿಸಿದುದು.

ಆಮೇಲೆ ಸಂಜಯನು ಧರ್ಮರಾಜನನ್ನು ಕುರಿತು "ರಾಜೇಂದ್ರಾ! ಇನ್ನು ನಾನು ಹೊರಡುವೆನು. ನನಗೆ ಅನುಮತಿಯನ್ನು ಕೊಡು. ನಿನಗೆ ಮಂಗಳವಾಗಲಿ! ಮನಸ್ಸಿನ ಆಗ್ರಹದಿಂದ ನಾನೇನೂ ನಿನ್ನಲ್ಲಿ ತಪ್ಪಿ ಮಾತಾಡಲಿಲ್ಲವಷ್ಟೆ? ಹಾಗೇನಾದರೂ ಇದ್ದರೆ ಮನ್ನಿಸಬೇಕು. ಶ್ರೀಕೃಷ್ಣನು, ಭೀಮಾರ್ಜುನರು, ಮಾದ್ರೀಕುಮಾರರು, ಸಾತ್ಯಕಿ, ಚೇಕಿತಾನನು, ಇವರೆಲ್ಲರನ್ನೂ ಕೇಳಿಕೊಳ್ಳುವೆನು. ಓ ರಾಜರೇ! ನಾನು ಹೊರಡುವೆನು. ನಿಮಗೆ ಸೌಖ್ಯವೂ ಮಂಗಳವೂ ಆಗಲಿ! ನೀವೆಲ್ಲರೂ ನನ್ನನ್ನು ಪ್ರಸನ್ನದೃಷ್ಟಿಯಿಂದ ನೋಡಿರಿ" ಎಂದನು. ಆಗ ಯುಧಿಷ್ಠಿರನು "ಸಂಜಯಾ! ಇನ್ನು ಹೋಗಿ ಬಾ! ನಿನಗೆ ಶುಭವಾಗಲಿ! ನಮಗೆ ಯಾವಾಗಲೂ ನೀನು ಅಪ್ರಿಯವನ್ನು ಎಣಿಸತಕ್ಕವನಲ್ಲ. ನೀನು ಅತ್ಯಂತಶುದ್ಧಾತ್ಮನೆಂಬುದನ್ನೂ, ಕೌರವಸಭೆಯಲ್ಲಿದ್ದುಕೊಂಡು ಯಾವಾಗಲೂ ನಿಷ್ಪಕ್ಷಪಾತವಾಗಿಯೇ ವರ್ತಿಸತಕ್ಕವನೆಂಬುದನ್ನೂ ನಾವೂ ಮತ್ತು ಇಲ್ಲಿರುವವ

ರೆಲ್ಲರೂ ಚೆನ್ನಾಗಿ ಬಲ್ಲೆವು. ನೀನು ಎಲ್ಲರಿಗೂ ಆಪ್ತನೂ, ಅತ್ಯಂತ ಪ್ರಿಯನೂ ಆದ ದೂತನೆನಿಸಿರುವೆ. ನೀನು ಯಾವಾಗಲೂ ಶುಭವನ್ನೇ ಆಡತಕ್ಕವನು. ಒಳ್ಳೇ ನಡತೆಯುಳ್ಳವನು. ಇದ್ದುದರಲ್ಲಿ ತೃಪ್ತಿಯುಳ್ಳವನು. ನೀನು ಯಾವ ಸಂದರ್ಭದಲ್ಲಿಯೂ ಬುದ್ಧಿಮೋಹಗೊಳ್ಳುವವನಲ್ಲ. ಅಪ್ರಿಯವಾದ ಮಾತನ್ನಾಡಿದರೂ ಕೋಪಿಸುವವನಲ್ಲ. ಇತರರ ಮನಸ್ಸನ್ನು ನೋಯಿಸುವಂತೆ ಕಠಿನವಾದ ಮಾತುಗಳು ನಿನ್ನ ಬಾಯಿಂದ ಹೊರಡವು. ಕೆಲಸಕ್ಕೆ ಬಾರದ ಮಾತುಗಳನ್ನೂ ನೀನು ಆಡುವುದಿಲ್ಲ. ನೀನು ಹೇಳುವ ಮಾತುಗಳೆಲ್ಲ ಧರ್ಮಸಮ್ಮತವಾಗಿಯೂ, ಇತರರನ್ನು ನೋಯಿಸದುದಾಗಿಯೂ ಇವೆಯೆಂಬುದನ್ನು ನಾವು ಚೆನ್ನಾಗಿ ಬಲ್ಲೆವು. ನೀನು ನಮಗೆಲ್ಲ ಅತ್ಯಂತ ಪ್ರಿಯತಮನು. ನೀನು ಬಂದುದು, ಎರಡನೆಯ ವಿದುರನೇ ನಮ್ಮಲ್ಲಿಗೆ ಬಂದಂತಿದೆ. ಧನಂಜಯನಿಗೆ ನೀನು ಆತ್ಮಸಮಾನನಾದ ಪ್ರಿಯಮಿತ್ರನು. ಸಂಜಯಾ! ಇನ್ನು ನೀನು ಹೊರಡು! ಬೇಗನೆ ಅಲ್ಲಿಗೆ ಹೋಗಿ, ಯೋಗ್ಯರಾದ ಬ್ರಾಹ್ಮಣರನ್ನು ಉಪಾಸಿಸುತ್ತಿರು. ಶುದ್ಧವಾದ ನಿಯಮದಿಂದಲೂ, ಬ್ರಹ್ಮಚರ್ಯೆಯಿಂದಲೂ ಕೂಡಿದವರಾಗಿಯೂ, ಸತ್ಕುಲದಲ್ಲಿ ಹುಟ್ಟಿ ಸಮಸ್ತ ಧರ್ಮಗಳನ್ನೂ ಅನುಸರಿಸತಕ್ಕವರಾಗಿಯೂ, ವೇದಾಧ್ಯಯನಪರರಾಗಿಯೂ ಇರುವ ಬ್ರಾಹ್ಮಣರು ಯಾರುಂಟೋ, ಅವರೆಲ್ಲರಿಗೂ ಮತ್ತು ಯತಿಗಳಿಗೂ, ವನವಾಸಿಗಳಾದ ಇತರ ತಪಸ್ವಿಗಳಿಗೂ, ಇನ್ನೂ ವೃದ್ಧರಿಗೂ ನನ್ನ ನಮಸ್ಕಾರಗಳನ್ನು ತಿಳಿಸಿ, ನಾನು ಅವರ ಕ್ಷೇಮಲಾಭಗಳನ್ನು ವಿಚಾರಿಸಿದುದಾಗಿ ತಿಳಿಸು. ಮತ್ತು ಧೃತರಾಷ್ಟ್ರರಾಜನ ಪುರೋಹಿತನನ್ನೂ, ಋತ್ವಿಕ್ಕುಗಳನ್ನೂ, ಆಚಾರ್ಯರನ್ನೂ ಸಂಧಿಸಿ, ನನ್ನ ಮಾತಿನಿಂದ ಅವರ ಕ್ಷೇಮವನ್ನು ವಿಚಾರಿಸು. ಮೂರು ವರ್ಣದವರಿಗಿಂತ ಹೊರಗಿನವರಾಗಿದ್ದರೂ, ಯಾರು ಒಳ್ಳೇ ಹೃದಯವುಳ್ಳವರಾಗಿ, ವೃದ್ಧರಾಗಿ, ಸೌಶೀಲ್ಯವುಳ್ಳವರಾಗಿ, ಕೈಲಾದಮಟ್ಟಿಗೆ ಅಲ್ಪಸ್ವಲ್ಪವಾದರೂ ಧರ್ಮಗಳನ್ನು ಮಾಡುತ್ತ, ನಮ್ಮ ಕ್ಷೇಮಚಿಂತಕರಾಗಿ, ನಮ್ಮನ್ನು ಆಗಾಗ ಸ್ಮರಿಸುತ್ತಿರುವರೋ, ಅವರಿಗೆಲ್ಲ ನನ್ನ ಕ್ಷೇಮವನ್ನು ತಿಳಿಸು! ನಾನೂ ಅವರ ಆರೋಗ್ಯವನ್ನು ವಿಚಾರಿಸಿದುದಾಗಿ ಹೇಳು. ಯಾರು ಕೃಷಿ, ವಾಣಿಜ್ಯ, ಪಶುಪಾಲನಗಳೆಂಬ ತಮ್ಮ

ವೃತ್ತಿಗಳನ್ನು ನಡೆಸುತ್ತ, ಲೋಕಕ್ಕೆ ಉಪಕಾರಮಾಡಿ ಪೋಷಿಸುತ್ತಿರು ವರೋ ಅವರೆಲ್ಲರ ಕ್ಷೆಮವನ್ನೂ ನಾನು ವಿಚಾರಿಸಿದುದಾಗಿ ಹೇಳು. ನಮ ಗೆ ಆಚಾರ್ಯನೂ, ಇಷ್ಟನೂ, ನೀತಿಮಾರ್ಗದಲ್ಲಿ ನಡೆಯುತಕ್ಕವನೂ, ಎಲ್ಲ ರಲ್ಲಿಯೂ ನಮ್ರತೆಯುಳ್ಳವನೂ, ವೇದಾಧ್ಯಯನಕ್ಕಾಗಿ ಬ್ರಹ್ಮಚರ್ಯೆ ಯನ್ನು ಹಿಡಿದವನೂ ಆಗಿ, ಮಂತ್ರ, ಉಪಚಾರ, ಪ್ರಯೋಗ ಉಪ ಸಂಹಾರಗಳೆಂಬ ನಾಲ್ಕು ಪಾದಗಳುಳ್ಳ ಅಸ್ತ್ರಗಳನ್ನೆಲ್ಲ ಸಾಂಗವಾಗಿ ಅಭ್ಯ ಸಿಸಿ, ಯಾವಾಗಲೂ ಮನಃಪ್ರಸನ್ನತೆಯಿಂದ ಕೂಡಿರುವನೋ ಆ ದ್ರೋ ಣನಿಗೆ ನನ್ನ ನಮಸ್ಕಾರವನ್ನು ತಿಳಿಸು. ಯಾವನು ವೇದಾಧ್ಯಯನ ವನ್ನು ಮಾಡಿ, ಸದಾಚಾರಗಳಿಂದ ಶುದ್ಧನಾಗಿ, ತಂದೆಯಂತೆಯೇ ಚತು ಷ್ಪಾದಗಳುಳ್ಳ ಅಸ್ತ್ರಮಂತ್ರಗಳನ್ನು ಅಭ್ಯಸಿಸಿರುವನೋ, ಗಂಧರ್ವಕುಮಾ ರನಿಗೆ ಸಮಾನನಾದ ಮತ್ತು ಬಲಶಾಲಿಯಾದ ಆ ಅಶ್ವತ್ಥಾಮನನ್ನು ನಾನು ವಿಚಾರಿಸಿದುದಾಗಿ ತಿಳಿಸು. ಸಂಜಯಾ! ಅಲ್ಲಿ ನೀನು ಕೃಪಾ ಚಾರ್ಯನ ಮನೆಗೆ ಹೋಗಿ, ಮಹಾರಥನೂ, ಆತ್ಮಜ್ಞರಲ್ಲಿ ಮೇಲೆನಿಸಿದ ವನೂ ಆದ ಆ ಆಚಾರ್ಯನ ಪಾದಗಳನ್ನು ಹಿಡಿದು, ಆತನಿಗೆ ನನ್ನ ನಮ ಸ್ಕಾರವನ್ನು ಹೇಳು. ಯಾವ ಮಹಾತ್ಮನಲ್ಲಿ ಶೌರ್ಯ, ಅಹಿಂಸೆ, ತಪಸ್ಸು, ಪ್ರಜ್ಞೆ, ಶೀಲ, ಶಾಸ್ತ್ರಶ್ರವಣ, ಧೈರ್ಯ, ಮೊದಲಾದ ಸಮಸ್ತಗುಣಗಳೂ ತುಂಬಿರುವುವೋ, ಅಂತಹ ಕುರುಕುಲ ಪಿತಾಮಹನಾದ ಭೀಷ್ಮನ ಪಾದ ಗಳನ್ನು ಹಿಡಿದು ನನ್ನ ವಂದನೆಗಳನ್ನು ತಿಳಿಸು. ಕಣ್ಣಿಲ್ಲದಿದ್ದರೂ ಯಾ ವನು ಪ್ರಜ್ಞಾದೃಷ್ಟಿಯುಳ್ಳವನಾಗಿ ಕುರುಗಳಿಗೆಲ್ಲ ನಿಯಾಮಕನೆನಿಸಿ ಕೊಂಡು, ಹಿರಿಯರನ್ನು ಉಪಾಸನೆಮಾಡಿ, ಅನೇಕ ವಿಷಯಗಳನ್ನು ಕೇಳಿ ತಿಳಿದು, ಮಹಾಧೀಮಂತನೆನಿಸಿಕೊಂಡಿರುವನೋ, ಅಂತಹ ವೃದ್ಧ ರಾಜನಾದ ಧೃತರಾಷ್ಟ್ರನಿಗೆ ನನ್ನ ನಮಸ್ಕಾರವನ್ನು ತಿಳಿಸಿ, ನಾವೆಲ್ಲರೂ ಆರೋಗ್ಯದಿಂದಿರುವುದಾಗಿ ಹೇಳು. ಆ ಧೃತರಾಷ್ಟ್ರನ ಹಿರಿಯ ಮಗ ನಾದ ದುರ್ಯೋಧನನಾದರೋ ಕೇವಲಮೂರ್ಖನು. ಮಂದಬುದ್ಧಿಯುಳ್ಳ ವನು. ಅವಿಧೇಯನು. ಅಶ್ಯಾಶಾಪರನು. ಇದರಿಂದ ಅವನು ಲೋಕ ದಲ್ಲಿ ಅಪವಾದಕ್ಕೀಡಾಗಿರುವನು. ಹಾಗಿದ್ದರೂ ಅವನ ಕ್ಷೇಮವನ್ನು ನಾನು ವಿಚಾರಿಸಿದುದಾಗಿ ಹೇಳು. ಅವನ ತಮ್ಮನಾದ ದುಶ್ಶಾಸನನೂ

ಅವನಂತೆಯೇ ಬಹಳ ಕೆಟ್ಟಸ್ವಭಾವವುಳ್ಳವನು. ಆದರೂ ಕೌರವರಲ್ಲಿ ಒಳ್ಳೆಯ ಶೂರನಾಗಿಯೂ, ಮಹಾಧನುರ್ಧಾರಿಯಾಗಿಯೂ ಇರುವನು. ಅವನಿಗೂ ನನ್ನ ಕ್ಷೇಮವನ್ನು ತಿಳಿಸು. ಯಾವಾಗಲೂ ನಮ್ಮ ಭರತ ಕುಲದಲ್ಲಿ ಕಲಹಶಾಂತಿಯೊಂದನ್ನೇ ಬಯಸುತ್ತ, ಜಿತೇಂದ್ರಿಯನೂ, ಸುಶೀಲನೂ ಆದ ಬಾಹ್ಲೀಕರಾಜನನ್ನು ನನ್ನ ಮಾತಿನಿಂದ ನೀನು ನಮ ಸ್ಕರಿಸಿ, ನಮ್ಮಲ್ಲಿ ಪ್ರಸನ್ನನಾಗುವಂತೆ ಮಾಡಬೇಕು. ಮುಂದುಬಿದ್ದು ಯುದ್ಧಮಾಡುವುದರಲ್ಲಿ ಮಹಾಧೀರನೂ, ಮಹಾಧನುರ್ಧಾರಿಯೂ, ರಥಿ ಕಾಗ್ರೇಸರನೂ ಆದ ಭೂರಿಶ್ರವಸ್ಸನ್ನು ಕಂಡು, ನೀನು ನನ್ನ ಮಾತಿನಿಂದ ಅವನ ಆರೋಗ್ಯವನ್ನು ವಿಚಾರಿಸು. ಹಾಗೆಯೇ ಶಲ್ಯನಿಗೂ ನನ್ನ ಕ್ಷೇಮ ಲಾಭವನ್ನು ತಿಳಿಸಿ, ಅವನನ್ನು ನಾವು ವಿಚಾರಿಸಿದುದಾಗಿ ಹೇಳು. ಆ ಶಲ್ಯ ನಿಗೆ ಬೆಂಗಾವಲಾಗಿ, ಅವನಿಗೆ ಸಮಾನನಾದ ರಥಿಕಶ್ರೇಷ್ಠನೆನಿಸಿದ ಶಲ ನನ್ನೂ ನಾನು ವಿಚಾರಿಸಿದುದಾಗಿ ತಿಳಿಸು. ಲಜ್ಜಾಸ್ವಭಾವವುಳ್ಳವನೂ, ಅಕ್ಷಹೃದಯವನ್ನು ತಿಳಿದು ಚೆನ್ನಾಗಿ ಜೂಜಾಡತಕ್ಕವನೂ, ಸತ್ಯವ್ರತನೂ ಆದ ಪುರುಮಿತ್ರನನ್ನೂ, ಜಯನನ್ನೂ ನಾನು ವಿಚಾರಿಸಿದುದಾಗಿ ತಿಳಿಸು. ಸಂಜಯಾ! ನಾನು ವನವಾಸಕ್ಕಾಗಿ ಹೊರಟಾಗ ಅಲ್ಲಿ ಯಾರುಯಾರು ಸಂಕಟಪಟ್ಟರೋ, ಅವರೆಲ್ಲರಿಗೂ ನನ್ನ ಕ್ಷೇಮವನ್ನು ತಿಳಿಸಿ, ನಾನು ಅವ ರನ್ನು ವಿಚಾರಿಸಿದುದಾಗಿ ಹೇಳು. ಜ್ಞಾನಿಯೂ, ಗುಣಾಢ್ಯನೂ, ಕಠಿನಸ್ವ ಭಾವವಿಲ್ಲದವನೂ, ಕೋಪವಿಲ್ಲದೆ ಯಾವಾಗಲೂ ಸ್ನೇಹಪರನೂ ಆದ ಆ ಸೋಮದತ್ತನಲ್ಲಿ ನನಗೆ ಬಹಳ ಪೂಜ್ಯಭಾವವುಂಟು. ಅವನನ್ನು ನಾನು ವಿಚಾರಿಸಿದುದಾಗಿ ಹೇಳು. ಅವನಂತೆಯೇ ಅವನ ಮಗನಾದ ಸೌಮದತ್ತಿ ಯುಕೂಡ ಬಹಳ ಪೂಜಾರ್ಹನು. ಅವನು ನಮಗೆ ಭ್ರಾತೃವೂ, ಸ್ನೇಹಿತನೂ ಆಗಿರುವನು. ಅವನು ರಥಿಕರಲ್ಲಿ ಮೇಲೆನಿಸಿದವನು. ಅವನಿಗೂ, ಅವನ ಮಂತ್ರಿಗಳಿಗೂ ನನ್ನ ಕ್ಷೇಮವನ್ನು ತಿಳಿಸಿ, ಅವನನ್ನೂ ನಾನು ವಿಚಾರಿಸಿ ದುದಾಗಿ ಹೇಳು. ಓ ಸಂಜಯಾ! ಇವರಲ್ಲದೆ ಇನ್ನೂ ಹಸ್ತಿನಾವತಿಯ ಲ್ಲಿರುವ ಕೌರವಪ್ರಧಾನರನ್ನೂ, ಯುವಕರನ್ನೂ, ಮಕ್ಕಳು, ಮೊಮ್ಮಕ್ಕಳು, ಭ್ರಾತೃಗಳು, ಮುಂತಾಗಿ ಯಾರುಯಾರನ್ನು ಕಾಣುವೆಯೋ, ಅವರೆಲ್ಲರಿಗೂ ಯಥಾಯೋಗ್ಯವಾಗಿ ನನ್ನ ಕುಶಲವನ್ನು ತಿಳಿಸು. ಇದಲ್ಲದೆ ಈಗ ಯುದ್ಧ

ಕ್ಕಾಗಿ ದುರ್ಯೋಧನನಿಂದ ಕರೆಸಲ್ಪಟ್ಟಿರುವ ಎಲ್ಲಾರಾಜರಿಗೂ ನಾನು ಅವರವರ ಕ್ಷೇಮವನ್ನು ವಿಚಾರಿಸಿದುದಾಗಿ ತಿಳಿಸು. ವಶಾತಿಗಳು, ಸಾಲ್ವರು, ಕೇಕಯರು, ಅಂಬಷ್ಠರು, ತ್ರಿಗರ್ತರು ಮತ್ತು ಪೂರ್ವ, ದಕ್ಷಿಣ, ಪಶ್ಚಿಮೋತ್ತರದೇಶದವರು, ಪರ್ವತವಾಸಿಗಳು ಇವರೆಲ್ಲರೂ ಒಳ್ಳೆಯ ಸ್ವಭಾವದಿಂದಲೂ, ನಡತೆಯಿಂದಲೂ ಕೂಡಿದವರು. ಇತರರನ್ನು ಹಿಂಸಿಸುವ ಕ್ರೂರಸ್ವಭಾವವಿಲ್ಲದವರು. ಶೂರರು, ಅವರೆಲ್ಲರನ್ನೂ ನಾನು ವಿಚಾರಿಸಿದುದಾಗಿ ಹೇಳು. ಆ ಸುಯೋಧನನ ಸಹಾಯಕ್ಕಾಗಿ ಬಂದಿರುವ ವೀರರಲ್ಲಿ, ಗಜ ತುರಗ ಪದಾತಿ ಸೈನ್ಯಗಳಿಗೆ ಪ್ರಮುಖರಾದವರೆಲ್ಲರನ್ನೂ ನೀನು ಕಂಡು, ಅವರಿಗೆ ನನ್ನ ಕ್ಷೇಮವನ್ನು ತಿಳಿಸಿ, ಅವರ ಆರೋಗ್ಯವನ್ನು ನಾನು ವಿಚಾರಿಸಿದುದಾಗಿ ಹೇಳು. ಹಾಗೆಯೇ ಧೃತರಾಷ್ಟ್ರರಾಜನ ಐಶ್ವರ್ಯಾಭಿವೃದ್ಧಿಯಲ್ಲಿ ಅಕ್ಕರೆಯುಳ್ಳ ಮಂತ್ರಿಗಳನ್ನೂ, ಅವನ ದ್ವಾರಪಾಲಕರನ್ನೂ, ಅವನ ಸೇನಾನಾಯಕರನ್ನೂ, ಅವನ ಆಯವ್ಯಯಗಳನ್ನು ಗುಣಿಸುವ ಗಣಕರನ್ನೂ, ಅವನ ದ್ರವ್ಯಾಭಿವೃದ್ಧಿಚಿಂತೆಯಲ್ಲಿಯೇ ಯಾವಾಗಲೂ ಇರತಕ್ಕ ಸಚಿವರನ್ನೂ, ನಾನು ವಿಚಾರಿಸಿದುದಾಗಿ ತಿಳಿಸು ಮತ್ತು ಸಂಜಯಾ! ಯಾವನು ನಮ್ಮ ಕುರುವಂಶದಲ್ಲಿ ದೇವಸಮಾನನಾಗಿ, ಧೀಮಂತನಾಗಿ, ಮಹಾಪ್ರಾಜ್ಞನಾಗಿ, ಸಮಸ್ತ ಧರ್ಮಗಳಿಂದ ಕೂಡಿದವನಾಗಿರುವನೋ, ಯಾವನಿಗೆ ಯುದ್ಧವೆಂಬುದು ಸರ್ವಥಾ ಸಮ್ಮತವಿಲ್ಲವೋ, ಧೃತರಾಷ್ಟ್ರನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಆ ಯುಯುತ್ಸುವನ್ನು ಕಂಡು, ಅವನ ಕ್ಷೇಮಲಾಭವನ್ನು ನಾನು ವಿಚಾರಿಸಿದುದಾಗಿ ಹೇಳು. ದ್ಯೂತದಿಂದ ದ್ರವ್ಯಸಂಗ್ರಹಮಾಡುವುದರಲ್ಲಿಯೂ, ಆಟದಲ್ಲಿಯೂ, ಯಾವನು ಅದ್ವಿತೀಯನೆನಿಸಿಕೊಂಡಿರುವನೋ, ಯಾವನ ಆಟದಮರ್ಮವನ್ನು ತಿಳಿಯುವುದು ಎಂತವರಿಗೂ ಸಾಧ್ಯವಿಲ್ಲವೋ, ಯುದ್ಧದಲ್ಲಿಲ್ಲದಿದ್ದರೂ ಯಾವನು ಪಗಡೆಯಾಟದಲ್ಲಿ ಎಂತವರಿಗೂ ದುರ್ಜಯನೋ, ಅಕ್ಷಹೃದಯಜ್ಞನಾದ ಆ ಚಿತ್ರಸೇನನ ಕ್ಷೇಮವನ್ನು ನಾನು ವಿಚಾರಿಸಿದುದಾಗಿ ಹೇಳು. ಅದರಂತೆಯೇ ಪರ್ವತಪ್ರಾಂತ್ಯಕ್ಕೆ ಸೇರಿದವನಾಗಿ, ದ್ಯೂತದಲ್ಲಿ ಅದ್ವಿತೀಯನೆನಿಸಿಕೊಂಡು, ಯಾವನು ದುರ್ಯೋಧನನಿಗೆ ಗೌರವಾಕಾಂಕ್ಷಿಯಾಗಿರುವನೋ, ಅಂತಹ ಗಾಂಧಾರದೇಶಾಧಿಪತಿಯೂ, ಕಪಟಬುದ್ಧಿಯುಳ್ಳವನೂ

ಆದ ಶಕುನಿಯ ಕ್ಷೇಮವನ್ನೂ ನಾನು ವಿಚಾಸಿದುದಾಗಿ ಹೇಳು. ಯಾವ ನು ತಾನೊಬ್ಬನೇ ಏಕರಥನಾಗಿ ಪಾಂಡವರನ್ನು ಜಯಿಸುವುದಾಗಿ ಉ ತ್ಸಾಹಗೊಂಡಿರುವನೋ, ಯಾವನು ಮೊದಲೇ ಬುದ್ಧಿಮೋಹವುಳ್ಳ ಕೌರವ ರನ್ನು ಮತ್ತಷ್ಟು ಮೋಹಗೊಳಿಸುತ್ತಿರುವನೋ, ಆ ಕರ್ಣನ ಕ್ಷೇಮವನ್ನೂ ನಾನು ವಿಚಾರಿಸಿದುದಾಗಿ ಹೇಳು. ಓ ಸಂಜಯಾ! ಭಕ್ತನೆಂದರೆ ಆ ವಿದುರನೊಬ್ಬನೇ ಭಕ್ತನು. ಅವನೇ ಗುರು! ಅವನೇ ನಮಗೆ ಪೋಷ ಕನು. ನಮಗೆ ತಂದೆ, ತಾಯಿ, ಮಿತ್ರರೆಲ್ಲರೂ ಅವನೇ! ಅಗಾಧಬುದ್ಧಿ ಯುಳ್ಳವನೂ, ದೀರ್ಘದೃಷ್ಟಿಯುಳ್ಳವನೂ, ನಮಗೆ ಮಂತ್ರಿಯೂ ಆದ ಆ ವಿದುರನ ಕ್ಷೇಮವನ್ನು ಬಾರಿಬಾರಿಗೂ ನಾನು ವಿಚಾರಿಸಿದುದಾಗಿ ಹೇಳು. ಮತ್ತು ಹಸ್ತಿನಾವತಿಯಲ್ಲಿ ವೃದ್ಧರಾದ ಮತ್ತು ಗುಣವಂತರಾದ ಸ್ತ್ರೀಯ ರು ಯಾರುಂಟೋ, ನಾವು ಯಾರಲ್ಲಿ ಮಾತೃಭಾವವನ್ನು ಇಟ್ಟಿದ್ದೆವೋ, ಅವರೆಲ್ಲರಿಗೂ ನನ್ನ ನಮಸ್ಕಾರವನ್ನು ತಿಳಿಸು. ನೀನು ಆ ಸ್ತ್ರೀಯರನ್ನು ಕಂಡಾಗ, "ನಿಮ್ಮ ಮಕ್ಕಳೆಲ್ಲರೂ ತಮ್ಮತಮ್ಮ ಮಕ್ಕಳೊಡನೆ ಕ್ಷೇಮದಿಂದಿ ರುವರೇ? ಎಲ್ಲರೂ ಕ್ರೂರಸ್ವಭಾವವಿಲ್ಲದೆ ಸಾಧುತ್ವದಿಂದ ವರ್ತಿಸುವರೆ?" ಎಂದು ಕೇಳು. ಆಮೇಲೆ, "ಅಜಾತಶತ್ರುವಾದ ಧರ್ಮರಾಜನು ತನ್ನ ಮಕ್ಕಳೊಡನೆ ಕ್ಷೇಮದಿಂದಿರುವನು" ಎಂದು ಅವರಿಗೆ ನನ್ನ ಕ್ಷೇಮವನ್ನೂ ತಿಳಿಸು.

ನೀನು ಅಲ್ಲಿನ ರಾಜಪತ್ನಿಯರೆಲ್ಲರನ್ನೂ ಬಲ್ಲೆಯಷ್ಟೆ. ಅವರೆಲ್ಲರ ಕ್ಷೇಮವನ್ನೂ ವಿಚಾರಿಸು. ನೀನು ಅವರನ್ನು ನೋಡಿದಾಗ ನನ್ನ ಮಾತಿನಿಂದ "ನಿಮ್ಮೆಲ್ಲರಿಗೂ ಒಳ್ಳೇ ಪೋಷಣೆಯು ನಡೆಯುವುದೇ? ಯಾ ವಾಗಲೂ ಗಂಧಪುಷ್ಪಾದಿಗಳಿಂದ ಸುವಾಸಿತರಾಗಿರುವಿರಾ? ನಿರ್ದೋಷಿ ಗಳೆನಿಸಿಕೊಂಡು, ಎಚ್ಚರದಿಂದ ಮನೆಯ ಕಾರ್ಯಗಳಲ್ಲಿ ನಿರತರಾಗಿರು ವಿರಾ? ಅತ್ತೆಮಾವಂದಿರಲ್ಲಿ ನೀವು ನಲ್ಮೆಯನ್ನು ಪಡೆದು, ಸಾಧುತ್ವದಿಂದ ಶುಭಕರವಾದ ನಡತೆಯಲ್ಲಿರಬೇಕು. ನಿಮ್ಮ ಪತಿಗಳ್ಳು ನಿಮಗೆ ಅನುಕೂಲ ವಾಗಿರುವಂತೆ ನೀವು ಯಾವಾಗಲೂ ಸರಿಯಾದ ಮಾರ್ಗದಲ್ಲಿ ವರ್ತಿಸ ಬೇಕು" ಎಂದು ತಿಳಿಸು. ಮತ್ತು ಸಂಜಯಾ! ಅಲ್ಲಿ ಉತ್ತಮ ಕುಲ

ದಿಂದ ಬಂದವರೂ, ಗುಣವತಿಯರೂ, ಸುಪುತ್ರವತಿಯರೂ ಆದ ನಮ್ಮ ಸೊಸೆಯರೆಲ್ಲರನ್ನೂ ನೀನು ಚೆನ್ನಾಗಿ ಬಲ್ಲೆಯಷ್ಟೆ? ಅವರ ಬಳಿಗೂ ನೀನು ಹೋಗಿ ನಾನು ಅವರನ್ನು ಅಕ್ಕರೆಯಿಂದ ವಿಚಾರಿಸಿದುದಾಗಿ ತಿಳಿಸು. ನಮ್ಮ ಕುಟುಂಬಕ್ಕೆ ಸೇರಿದ ಕನ್ಯೆಯರೆಲ್ಲರನ್ನೂ ನೋಡಿ ಅವರ ಆರೋಗ್ಯವನ್ನು ನಾನು ವಿಚಾರಿಸಿದುದಾಗಿ ತಿಳಿಸಿ "ನಿಮಗೆ ಒಳ್ಳೇ ಗುಣವುಳ್ಳ ಮತ್ತು ಅನುಕೂಲರಾದ ಗಂಡಂದಿರು ಸಿಕ್ಕಲಿ! ನೀವೂ ನಿಮ್ಮ ಪತಿಗಳಿಗೆ ಅನುಕೂಲರಾಗಿರಿ" ಎಂದು ನನ್ನ ಆಶೀರ್ವಾದಗಳನ್ನು ತಿಳಿಸು. ಮತ್ತು ಆ ಹಸ್ತಿನಾವತಿಯಲ್ಲಿ ನೋಡುವವರಿಗೆ ಬೇಸರಹುಟ್ಟದಂತೆ ಯಾವಾಗಲೂ ಪುಷ್ಪಚಂದನಗಳಿಂದಲೂ, ಒಳ್ಳೇ ಉಡಿಗೆ ತೊಡಿಗೆಗಳಿಂದಲೂ ಅಲಂಕೃತರಾಗಿ, ಸುಖದಿಂದಲೂ, ಉತ್ತಮಭೋಗಗಳಿಂದಲೂ ಕೂಡಿದವರಾಗಿ, ಅಂದವಾದ ರೂಪವೂ, ಪ್ರಿಯವಾದ ಮಾತೂ ಉಳ್ಳ ವೇಶ್ಯಾಸ್ತ್ರೀಯರನ್ನು ಕಂಡಾಗ, ನಾನು ಅವರ ಕ್ಷೇಮವನ್ನು ವಿಚಾರಿಸಿದುದಾಗಿ ಹೇಳು. ಮತ್ತು ಅಲ್ಲಿ ಕೌರವರ ಆಶ್ರಯದಲ್ಲಿ ಬದುಕಿ ಜೀವಿಸುತ್ತಿರುವ ದಾಸದಾಸಿಯರು, ಕುಳ್ಳರು, ಕುಂಟರು, ಗೂನರು ಮುಂತಾದವರೆಲ್ಲರಿಗೂ ನಮ್ಮ ಕ್ಷೇಮವನ್ನು ತಿಳಿಸಿ, ಅವರ ಆರೋಗ್ಯವನ್ನು ನಾನು ವಿಚಾರಿಸಿದುದಾಗಿ ಹೇಳು. ಅವರನ್ನು ಕಂಡಾಗ ನೀನು "ನಿಮ್ಮೆಲ್ಲರಿಗೂ ದುರ್ಯೋಧನನು ಹಿಂದಿನ ಕಾಲದಿಂದ ಬಂದ ನಿಮ್ಮ ಜೀವಿಕೆಯನ್ನು ಸರಿಯಾಗಿ ನಡೆಸುತ್ತ ಬರುವನೆ? ನಿಮಗೆ ಬೇಕಾದ ಸೌಖ್ಯಗಳನ್ನು ಕಲ್ಪಿಸುತ್ತಿರುವನೆ?" ಎಂದು ನನ್ನ ಮಾತಿನಿಂದ ವಿಚಾರಿಸು. ಆ ಧೃತರಾಷ್ಟ್ರಪುತ್ರರ ದಯೆಗೆ ಪಾತ್ರರಾಗಿ, ಅವರಿಂದ ಪೋಷಿಸಲ್ಪಡುವ ಕುಂಟರು, ಕುಳ್ಳರು, ದರಿದ್ರರು, ಅಂಗಹೀನರು, ಕುರುಡರು, ಕಿವುಡರು, ಕೈಕೆಲಸದಿಂದ ಜೀವಿಸತಕ್ಕವರು, ಮುಂತಾಗಿ ಯಾರುಯಾರುಂಟೋ, ಅವರೆಲ್ಲರಿಗೂ ನಾನು ಕ್ಷೇಮದಿಂದಿರುವುದಾಗಿ ತಿಳಿಸಿ, ನಾನೂ ಅವರ ಆರೋಗ್ಯವನ್ನು ವಿಚಾರಿಸಿದುದಾಗಿ ಹೇಳು. ತಮ್ಮ ಕೀಳುತರದ ಜೀವನಕ್ಕಾಗಿ ಪಶ್ಚಾತ್ತಾಪಪಡುವವರನ್ನು ನೀನು ಕಂಡಾಗ "ನಿಮ್ಮ ಹೀನವೃತ್ತಿಗಾಗಿ ನೀವು ಹೆದರಬೇಡಿರಿ. ಇವೆಲ್ಲ ಪೂರ್ವಜನ್ಮದ ಪಾಪದ ಫಲವು. ಶತ್ರುಗಳನ್ನು ನಿಗ್ರಹಿಸಿ, ಮಿತ್ರರನ್ನು ಅನುಗ್ರಹಿಸುವ ಕಾಲವು ನನಗೆ ಬಂದಾಗ, ನಾನು ನಿಮಗೆ ಸಮೃದ್ಧಿ

ಯಾಗಿ ಅನ್ನವಸ್ತ್ರಗಳನ್ನು ಕೊಟ್ಟು ನೆಮ್ಮದಿಯಿಂದಿರಿಸುವೆನು" ಎಂದು ನನ್ನ ಮಾತಿನಿಂದ ಅವರಿಗೆ ಧೈರ್ಯವನ್ನು ಹೇಳು. ಸಂಜಯಾ! ಈಗಲಾದರೋ, ನಾನಾದೇಶಗಳಿಂದ ನಾನಾಜಾತಿಯವರು, ಭಯಂಕರವಾದ ಅನೇಕ ಸೈನ್ಯಗಳನ್ನು ಸೇರಿಸಿಕೊಂಡು ಬಂದಿರುವರು. ಅವರೆಲ್ಲರನ್ನೂ ಕಂಡು ಇವೆಲ್ಲವನ್ನೂ ಹೇಳುವುದೇನೋ ನಿನ್ನೊಬ್ಬನಿಂದ ಸಾಧ್ಯವಾದ ಕಾರ್ಯವಲ್ಲ. ಆದರೂ, ರಾಜ್ಯಭ್ರಷ್ಟನಾಗಿ ಬಂದಿರುವ ನಾನು, ಬಾಲನಂತೆ ಚಪಲಬುದ್ಧಿಯಿಂದ ಅವರೆಲ್ಲರನ್ನೂ ನೋಡಬೇಕೆಂಬ ಆಸೆಯಮೇಲೆ ಇಷ್ಟನ್ನೂ ಹೇಳುವೆನು. ಅಲ್ಲಿ ಕಂಡವರಿಗೆಲ್ಲ ನನ್ನ ನಮಸ್ಕಾರವನ್ನು ತಿಳಿಸು. ಈಗ ನೀನು ನಮ್ಮಿಂದ ತೆಗೆದುಕೊಂಡು ಹೋಗುವ ಸಂದೇಶವನ್ನು ಅವರೆಲ್ಲರೂ ಆದರಿಸುವವಹಾಗೆ ಮಾಡು. ಹಿಂದೆ ನಾನು ಬ್ರಾಹ್ಮಣರಿಗೆ ಬಿಟ್ಟುಕೊಟ್ಟಿರುವ ಮಾನ್ಯ ಮೊದಲಾದುವುಗಳನ್ನು ದುರ್ಯೋಧನನು ಈಗಲೂ ಹಾಗೆಯೇ ನಡೆಸುತ್ತಿರುವವಿಷಯದಲ್ಲಿ, ನನಗೆ ದೂತರ ಮೂಲಕವಾಗಿ ಭರವಸೆಯಮಾತನ್ನು ಹೇಳಿಕಳುಹಿಸುವಂತೆ ದುರ್ಯೋಧನನಿಗೆ ತಿಳಿಸು. ಸಂಜಯಾ! ಇನ್ನೂ ಆ ಹಸ್ತಿನಾವತಿಯಲ್ಲಿ, ಅನಾಥರೂ, ದುರ್ಬಲರೂ, ಕೆಲಸಮಾಡಲಾರದೆ ಮನಸ್ಸಿನಲ್ಲಿ ಮಾತ್ರ ಮನೋರಥಗಳನ್ನು ಗುಣಿಸುತ್ತಿರುವವರೂ, ಮೂಢರೂ, ಕೃಪಣರೂ ಯಾರುಯಾರುಂಟೋ ಅವರೆಲ್ಲರನ್ನೂ ನಾನು ವಿಚಾರಿಸಿದುದಾಗಿ ತಿಳಿಸು. ಓ ಸೂತಪುತ್ರಾ! ದುರ್ಯೋಧನನಿಂದ ಕರೆಸಲ್ಪಟ್ಟಾಗಲಿ, ಅವನು ಕರೆಯದೆ ತಾವಾಗಿಯಾಗಲಿ ಈಗ ನಾನಾದಿಕ್ಕುಗಳಿಂದ ಬಂದು, ಕೌರವರ ಕಡೆಗೆ ಸೇರಿರುವವರೆಲ್ಲರ ಕ್ಷೇಮವನ್ನೂ ವಿಚಾರಿಸಿ, ನಮ್ಮ ಕ್ಷೇಮವನ್ನೂ ಅವರಿಗೆ ತಿಳಿಸು. ಸಂಜಯಾ! ಈಗ ದುರ್ಯೋಧನನ ಬೆಂಬಲಕ್ಕಾಗಿ ಬಂದಿರುವ ಯುದ್ಧವೀರರೇನೋ ಅಸಮಾನ ಪರಾಕ್ರಮಿಗಳು. ಆದರೇನು? ಎಂತಹ ಶತ್ರುಗಳನ್ನೂ ನಿಗ್ರಹಿಸುವ ಮಹಾಬಲವುಳ್ಳ ಧರ್ಮವೊಂದೇ ನನಗೆ ಯಾವಾಗಲೂ ಬೆಂಬಲವಾಗಿದ್ದು, ನನಗೆ ಶತ್ರುಜಯದಲ್ಲಿ ಸಹಾಯಮಾಡತಕ್ಕುದಾಗಿದೆ. ಸಂಜಯಾ! ನೀನು ಇದೊಂದು ಮಾತನ್ನು ಮಾತ್ರ ದುರ್ಯೋಧನನ ಕಿವಿಗೆ ಅವಶ್ಯವಾಗಿ ಮುಟ್ಟಿಸಬೇಕು. "ಕೌರವರಾಜ್ಯಗಳೆಲ್ಲವನ್ನೂ ನಿಷ್ಕಂಟಕವಾಗಿ ನೀನೊಬ್ಬನೇ ಆಳಬೇಕೆಂಬ ಯಾವ

ಮಹತ್ವಾಕಾಂಕ್ಷೆಯು ನಿನ್ನ ಶರೀರದಲ್ಲಿ ಸೇರಿ ಯಾವಾಗಲೂ ನಿನ್ನ ಹೃದಯವನ್ನು ದಹಿಸುತ್ತಿದೆಯೋ, ಅದನ್ನು ಮಾತ್ರ ತೀರಿಸುವುದಕ್ಕೆ ನಿನಗೆ ಉಪಾಯವೇನೂ ಇರದು. ನಿನ್ನ ಇಷ್ಟವನ್ನು ಮಾತ್ರ ನಾನು ಎಂದಿಗೂ ಸಾಗಗೊಡಿಸಲಾರೆನು! ಓ ಭರತಕುಲಾಗ್ರಣೀ! ನನ್ನ ಇಂದ್ರಪ್ರಸ್ಥರಾಜ್ಯವನ್ನು ನನಗೆ ಬಿಟ್ಟುಕೊಡುವುದೊಂದು! ಇಲ್ಲವೇ ಯುದ್ಧಕ್ಕೆ ಸಿದ್ಧನಾಗುವುದೊಂದು. ಇವೆರಡರಲ್ಲಿ ನಿನ್ನ ಇಷ್ಟವು ಹೇಗೋ ಹಾಗೆ ಮಾಡು" ಎಂದು ನನ್ನ ಮಾತಿನಿಂದ ಸ್ಪಷ್ಟವಾಗಿ ಅವನಿಗೆ ತಿಳಿಸಿಬಿಡು" ಎಂದನು.

ಇದು ಮೂವತ್ತನೆಯ ಅಧ್ಯಾಯವು.



ಯುಧಿಷ್ಠಿರನು ಸಂಜಯನೊಡನೆ ತಾನು ಸಮಾಧಾನಕ್ಕೆ ಸಿದ್ಧನಾಗಿರುವೆನೆಂದೂ, ಐದು ಗ್ರಾಮಗಳನ್ನಾದರೂ ತಮಗೆ ಬಿಟ್ಟುಕೊಡುವುದಾದರೆ ಸಂಧಿಗೆ ಒಪ್ಪುವುದಾಗಿಯೂ ಹೇಳಿಕಳುಹಿಸಿದುದು.

ತಿರುಗಿ ಯುಧಿಷ್ಠಿರನು ಸಂಜಯನನ್ನು ಕುರಿತು "ಓ ಸಂಜಯಾ! ಸಜ್ಜನನಾಗಿರಲಿ, ದುರ್ಜನನಾಗಿರಲಿ, ಬಾಲನಾಗಲಿ, ವೃದ್ಧನಾಗಲಿ, ದುರ್ಬಲನಾಗಲಿ, ಬಲಿಷ್ಠನಾಗಲಿ ಎಲ್ಲರನ್ನೂ ಈಶ್ವರನು ತನ್ನ ವಶದಲ್ಲಿರಿಸಿಕೊಳ್ಳುವನು. ಅವರವರ ಪ್ರಾಚೀನಕರ್ಮವನ್ನನುಸರಿಸಿ ಏನೂ ತಿಳಿಯದವನಿಗೆ ಪಾಂಡಿತ್ಯವನ್ನೂ, ಪಂಡಿತನಿಗೆ ಅಜ್ಞಾತೆಯನ್ನೂಕೂಡ ಈಶ್ವರನೇ ಕೊಡುವನು. ಎಲ್ಲವೂ ಈಶ್ವರಾಧೀನವು. ಓ ಸಂಜಯಾ! ಆದುದರಿಂದ ನೀನು ಇಲ್ಲಿ ನಮ್ಮ ಬಲವೆಂತದೆಂದು ತಿಳಿದುಕೊಳ್ಳಬೇಕೆಂದಿರುವ ದುರ್ಯೋಧನನಿಗೆ, ಇದ್ದ ಸ್ಥಿತಿಯನ್ನು ತಿಳಿಸಿಬಿಡು. ಓ ಗಾವಲ್ಗಣೀ! ನೀನು ಕುರುದೇಶಕ್ಕೆ ಹೋದಮೇಲೆ, ಮೊದಲು ಧೃತರಾಷ್ಟ್ರನನ್ನು ಕಂಡು ನನ್ನ ಹೆಸರನ್ನು ಹೇಳುತ್ತ ಅವನ ಪಾದಗಳನ್ನು ಹಿಡಿದು ನಮಸ್ಕರಿಸು. ಆಮೇಲೆ ಅವನ ಆರೋಗ್ಯವನ್ನು ನಾನು ವಿಚಾರಿಸಿದುದಾಗಿ ಹೇಳು. ಸಮಸ್ತಕೌರವರೊಡನೆ ಅವನು ಕುಳಿತಿದ್ದ ಸಮಯದಲ್ಲಿ ಈ ಕೆಳಗಿನ ವಾಕ್ಯಗಳನ್ನು

ಅವನಿಗೆ ತಿಳಿಸಿಬಿಡು. "ಓ ರಾಜೇಂದ್ರಾ! ಪಾಂಡವರೆಲ್ಲರೂ ನಿನ್ನ ಅನುಗ್ರಹಬಲದಿಂದ ಈಗಲೂ ಸುಖವಾಗಿ ಜೀವಿಸುತ್ತಿರುವರು. ಹಿಂದೆ ನಿನ್ನ ಅನುಗ್ರಹದಿಂದಲೇ ಬಾಲಕರಾದ ಅವರು ರಾಜ್ಯವನ್ನು ಪಡೆದರು. ಅವರನ್ನು ಮೊದಲು ನೀನೇ ರಾಜ್ಯದಲ್ಲಿರಿಸಿ, ಈಗ ಅವರು ಕೆಟ್ಟುಹೋಗು ತ್ತಿರುವುದನ್ನು ನೀನು ಉಪೇಕ್ಷಿಸಬಾರದು. ಈ ಸಮಸ್ತಬ್ರಹ್ಮಾಂಡವನ್ನೂ ಒಬ್ಬನಿಗೇ ಕೊಟ್ಟರೂ ಯಾವನಿಗೂ ಅದರಿಂದ ತೃಪ್ತಿಯಿರುವುದಿಲ್ಲ. ಅದೂ ತನಗೆ ಸಾಲದೆಂದೇ ಎಣಿಸುವನು. ಓ ಜನಕಾ! ನೀವು ನಾವೆ ಲ್ಲರೂ ಒಂದಾಗಿ ಸೇರಿ ಸುಖವಾಗಿ ಬದುಕುವೆವು. ನಮ್ಮನಮ್ಮಲ್ಲಿ ಕಲಹ ವನ್ನಿಟ್ಟುಕೊಂಡು ನಾವು ಇತರ ಶತ್ರುಗಳ ವಶವಾಗಬಾರದು" ಎಂದು ಧೃತರಾಷ್ಟ್ರನಿಗೆ ತಿಳಿಸು. ಭರತಕುಲಕ್ಕೆ ಪಿತಾಮಹನಾದ ಭೀಷ್ಮಾಚಾರ್ಯರ ಬಳಿಗೆ ಹೋಗಿ ಮೊದಲು ನನ್ನ ಹೆಸರನ್ನು ಹೇಳಿ ನಮಸ್ಕರಿಸಿ, ಆಮೇಲೆ ನನ್ನ ಮಾತಿನಿಂದ ಅವನನ್ನು ಕುರಿತು "ತಾತಾ! ಮೊದಲೇ ಮುಳುಗಿ ಹೋಗಿದ್ದ ಶಂತನುವಂಶವು ನಿನ್ನಿಂದ ತಿರುಗಿ ಉದ್ಧೃತವಾಯಿತು. ಈಗ ಆ ವಂಶವು ತಿರುಗಿ ಕೆಟ್ಟುಹೋಗದಂತೆ ನಿನಗೆ ಉಚಿತವಾಗಿ ತೋರಿದ ರೀ ತಿಯಲ್ಲಿ ಈ ಕೌರವಪಾಂಡವರಲ್ಲಿ ಕಲಹವಿಲ್ಲದಂತೆಯೂ, ನಿನ್ನ ಪೌತ್ರರಾ ದ ನಾವೆಲ್ಲರೂ ಅನ್ಯೋನ್ಯಪ್ರೀತಿಯಿಂದ ಸುಖವಾಗಿ ಬದುಕುವಂತೆಯೂ ಪ್ರಯತ್ನಿಸು" ಎಂದು ಅವನಿಗೆ ತಿಳಿಸು. ಓ ಸಂಜಯಾ! ಇದರಂತೆಯೇ ಕೌರವರಿಗೆ ಮಂತ್ರಿಯಾದ ವಿದುರನಿಗೂ ನನ್ನ ಮಾತಿನಿಂದ "ಸಾಧು ಸ್ವಭಾವವುಳ್ಳ ಮತ್ತು ಪಾಂಡವರಿಗೆ ಯಾವಾಗಲೂ ಹಿತೈಷಿಯಾದ ನೀನು ಹೇಗಾದರೂ ಈ ಯುದ್ಧವನ್ನು ನಿಲ್ಲಿಸುವ ಪ್ರಯತ್ನವನ್ನು ಮಾಡಬೇಕು" ಎಂದು ತಿಳಿಸು. ಆಮೇಲೆ ದುರ್ಯೋಧನನಿಗೂ ಕೆಲವು ಮಾತನ್ನು ನೀನು ತಿಳಿಸಬೇಕು. ಅವನು ಬಹಳ ಮುಂಗೋಪವುಳ್ಳವನು. ಅವನನ್ನು ಬಾರಿ ಬಾರಿಗೂ ಮೃದುವಾಕ್ಯಗಳಿಂದ ಸಮಾಧಾನಗೊಳಿಸುತ್ತ, ಕೌರವರೆಲ್ಲರೂ ನೆರೆದಿರುವ ಸಮಯದಲ್ಲಿ, ಅವನೊಡನೆ ನೀನು ಈ ಮಾತುಗಳನ್ನಾಡಬೇಕು. "ದುರ್ಯೋಧನಾ! ನಿರಪರಾಧಿನಿಯಾದ ಆ ದ್ರೌಪದಿಯನ್ನು ಸಭಾಮಧ್ಯ ದಲ್ಲಿ ಅವಮಾನಿಸಲ್ಪಡುತಿದ್ದಾಗಲೂ ನೀನು ಉಪೇಕ್ಷಿಸಿದೆ! ಆಗ ನಮ ಗುಂಟಾದ ಅಪಾರ ದುಃಖವನ್ನು ಕೂಡ, ನಮ್ಮ ಕುರುಕುಲವನ್ನು ನಾವೇ

ಕೊಲ್ಲಬಾರದೆಂಬುದಕ್ಕಾಗಿ ಸಹಿಸಿಕೊಂಡೆವು. ನಾವು ಕೌರವರನ್ನು ನಿಗ್ರಹಿಸುವುದಕ್ಕೆ ತಕ್ಕಷ್ಟು ಬಲವುಳ್ಳವರಾಗಿದ್ದರೂ, ಹಿಂದುಮುಂದಿನ ಕಷ್ಟಗಳನ್ನೆಲ್ಲ ಸಹಿಸಿಕೊಂಡು ಸುಮ್ಮನಿದ್ದೆವೆಂಬುದು ನಿಮ್ಮೆಲ್ಲರ ಮನಸ್ಸಿಗೂ ಚೆನ್ನಾಗಿ ತಿಳಿದಿದೆ. ಓ ಸೌಮ್ಯಾ! ನಮಗೆ ಕೃಷ್ಣಾಜಿನವನ್ನುಡಿಸಿ ನೀನು ಕಾಡಿಗಟ್ಟಿದಾಗಲೂ, ಕುರುಗಳನ್ನು ಕೊಲ್ಲಬಾರದೆಂಬುದಕ್ಕಾಗಿಯೇ ನಾವು ಅದನ್ನೂ ಸಹಿಸಿಕೊಂಡೆವು. ಹಿಂದೆ ನಿನ್ನ ಅಭಿಪ್ರಾಯಾನುಸಾರವಾಗಿ ದುಶ್ಶಾಸನನು ನಮ್ಮ ತಾಯಿಯಾದ ಕುಂತೀದೇವಿಯ ಮಾತನ್ನೂ ಲಕ್ಷ್ಯಮಾಡದೆ, ದ್ರೌಪದಿಯ ತುರುಬನ್ನು ಹಿಡಿದು ಸಭೆಗೆ ಸೆಳೆದುತಂದನು. ಅದನ್ನೂ ನಾವು ಉಪೇಕ್ಷಿಸಿದೆವು. ಹೋದುದು ಹೋಗಲಿ! ಈಗಲೂ ನಮಗೆ ಸೇರಬೇಕಾದ ಉಚಿತಭಾಗವನ್ನು ನಮಗೆ ಕೊಟ್ಟುಬಿಡು! ರಾಜಾ! ಪರದ್ರವ್ಯದಲ್ಲಿ ಆಸೆಯನ್ನು ಬಿಟ್ಟುಬಿಡು! ಇದರಿಂದ ನಮ್ಮಲ್ಲಿ ವೈರಶಾಂತಿಯುಂಟಾಗಿ, ಅನ್ಯೋನ್ಯಪ್ರೀತಿಯೂ ಬೆಳೆಯುವುದು. ಹೇಗಾದರೂ ಸಮಾಧಾನವಾಗಬೇಕೆಂದು ಬಯಸುವ ನಮಗೆ ರಾಜ್ಯದ ಕೆಲವು ಭಾಗಗಳನ್ನಾದರೂ ಕೊಟ್ಟುಬಿಡು ಅವಿಸ್ಥಳವೊಂದು, ವೃಕಸ್ಥಳವೊಂದು, ಮಾಕಂದಿ, ಮತ್ತು ವಾರಣಾವತವೆಂಬ ಈ ನಾಲ್ಕು ಪ್ರದೇಶಗಳನ್ನು ಕೊಟ್ಟು, ಐದನೆಯದಕ್ಕೆ ನಿನಗೆ ಇಷ್ಟವಾದ ಯಾವುದಾದರೂ ಒಂದು ಭಾಗವನ್ನು ಬಿಟ್ಟುಕೊಡು. ಓ ಸುಯೋಧನಾ! ನಾವು ಐದುಮಂದಿ ಸಹೋದರರಿರುವೆವು. ಒಬ್ಬೊಬ್ಬರಿಗೆ ಒಂದೊಂದು ಗ್ರಾಮವಾದರೂ ಬೇಡವೆ? ಅದನ್ನಾದರೂ ಹಂಚಿಕೊಡು. ಹೀಗೆ ಮಾಡಿದರೆ ಮಾತ್ರವೇ ನಮ್ಮ ವಿವಾದವು ಕೊನೆಗಾಣುವುದು" ಎಂಬೀ ಮಾತುಗಳನ್ನು ನೀನು ದುರ್ಯೋಧನನಿಗೆ ತಿಳಿಸಬೇಕು. ಓ ಸಂಜಯಾ! ನೀನು ಮಹಾಪ್ರಾಜ್ಞನಾದುದರಿಂದ, ಹೇಗಾದರೂ ನಮ್ಮಲ್ಲಿ ಶಾಂತಿಯನ್ನುಂಟುಮಾಡುವುದಕ್ಕೆ ಪ್ರಯತ್ನಿಸು. ಸಹೋದರರು ಸಹೋದರರೊಡನೆಯೂ, ತಂದೆಯು ಮಕ್ಕಳೊಡನೆಯೂ ಜಗಳವಾಡದೆ ಒಂದಾಗಿ ಸೇರಿ ಸುಖವಾಗಿರಲಿ! ಪಾಂಚಾಲರೂ ಸಂತೋಷದಿಂದ ಕುರುಗಳೊಡನೆ ಸೇರಿರಲಿ! ಕುರುಪಾಂಚಾಲರಿಬ್ಬರೂ ನಿರಪಾಯವಾಗಿರುವುದನ್ನು ನೋಡಬೇಕೆಂಬದು ನನ್ನ ಕೋರಿಕೆ. ಎಲೈ ಭರತಶ್ರೇಷ್ಠನೇ! ನಾವು ನೀವೆಲ್ಲರೂ ಒಳ್ಳೇ ಮನಸ್ಸಿ

ನಿಂದ ಸಮಾಧಾನಕ್ಕೆ ಬಂದು ಸುಖದಿಂದಿರುವೆವು. ಆದರೆ ನಾವು ಯು ದ್ಧಕ್ಕೆ ಭಯಪಟ್ಟು ಈಗ ಸಮಾಧಾನಕ್ಕಾಗಿ ಹೇಳಿಕಳುಹಿಸುವೆಂದುಮಾತ್ರ ಆ ದುರ್ಯೋಧನನು ಎಣಿಸಬಾರದು. ಈಗಲೂ ನಾವು ಸಮಾಧಾನಕ್ಕೆ ಹೇಗೋ, ಹಾಗೆಯೇ ಯುದ್ಧಕ್ಕೂ ಸಿದ್ಧರಾಗಿರುವೆವು. ನಮ್ಮ ಧರ್ಮಾರ್ಥ ಗಳ ಸಾಧನೆಗಾಗಿ ಮೃದುವಾದ ಮಾರ್ಗವನ್ನಾಗಲಿ, ಕಠಿನವಾದ ಮಾರ್ಗ ವನ್ನಾಗಲಿ ಹಿಡಿಯುವುದಕ್ಕೆ ನಾವು ಶಕ್ತರೆಂಬುದನ್ನು ನೀನು ಅವರಿಗೆ ತಿಳಿ ಸಬೇಕು'' ಎಂದನು.

ಇದು ಮೂವತ್ತೊಂದನೆಯ ಅಧ್ಯಾಯವು.



### ಸಂಜಯನು ಉಪಪ್ಲಾವ್ಯದಿಂದ ಹಿಂತಿರುಗಿಬಂದ ರಾತ್ರಿಯೇ ಧೃತರಾಷ್ಟ್ರನನ್ನು ಕಂಡುದು.

ಓ ಜನಮೇಜಯರಾಜಾ! ಕೇಳು! ಧರ್ಮರಾಜನು ಈ ಮಾತುಗ ಳನ್ನು ಹೇಳಿ ಮುಗಿಸಿ, ಅರ್ಜುನನೂ, ಶ್ರೀಕೃಷ್ಣನೂ ಕೇಳುತ್ತಿರುವ ಹಾಗೆ ಯೇ ತಿರುಗಿ ಸಂಜಯನನ್ನು ಕುರಿತು "ಓ ಸಂಜಯಾ! ನೀನು ಅಲ್ಲಿಗೆ ಹೋದಮೇಲೆ, ಪಿತಾಮಹನಾದ ಭೀಷ್ಮನು, ಧೃತರಾಷ್ಟ್ರನು, ದ್ರೋಣಾಶ್ವ ತ್ಥಾಮರು, ಶಲ್ಯ, ಬಾಹ್ಲೀಕ, ವಿಕರ್ಣ, ಸೋಮದತ್ತ, ಶಕುನಿ, ವಿವಿಂಶತಿ, ಚಿತ್ರಸೇನ, ಜಯತ್ಸೇನ, ಭಗದತ್ತನೇ ಮೊದಲಾಗಿ, ದುರ್ಯೋಧನನಿಂದ ಕರೆಸಲ್ಪಟ್ಟು ಯುದ್ಧಕ್ಕಾಗಿ ಅಲ್ಲಿ ಬಂದು ನೆರೆದಿರುದ ಸಮುದ್ರಪ್ರದೇಶವಾ ಸಿಗಳೂ, ಭೂಪ್ರದೇಶವಾಸಿಗಳೂ ಆದ ಇನ್ನೂ ಬೇರೆ ಯಾವಯಾವ ರಾ ಜರುಂಟೋ, ಅವರೆಲ್ಲರಿಗೂ, ಅವರವರ ಅಂತಸ್ಥಿಗೆ ತಕ್ಕಂತೆ ನನ್ನ ನಮ ಸ್ಕಾರವನ್ನೂ, ಕುಶಲಪ್ರಶ್ನವನ್ನೂ ತಿಳಿಸು. ಇದಾದಮೇಲೆ ನೀನು ದುರ್ಯೋ ಧನನ ಸಭೆಯಲ್ಲಿ ಎಲ್ಲರೂ ನೆರೆದಿರುವಾಗ, ಪಾಪಕಾರ್ಯವನ್ನು ಮಾಡುವ ವರಲ್ಲಿ ಮುಂದಾಳೆನಿಸಿಕೊಂಡಿರುವ ಆ ದುರ್ಯೋಧನನಿಗೆ ನಾನು ಹೇಳಿದ ಮಾತುಗಳನ್ನೆಲ್ಲ ತಿಳಿಸು" ಎಂದು ಹೇಳಿ, ತನ್ನ ಕಡೆಯವರಿಗೆ ಸಂತೋಷ ವನ್ನೂ, ಧೃತರಾಷ್ಟ್ರಪುತ್ರರಿಗೆ ನಡುಕವನ್ನೂ ಹುಟ್ಟಿಸುವಂತೆ, ಧರ್ಮಾರ್ಥ

ಗಳಿಗೆ ವಿರೋಧವಿಲ್ಲದ ಕೆಲವು ಮಾತುಗಳನ್ನು ದುರ್ಯೋಧನನ ಮುಂದೆ ಹೇಳುವಂತೆ ತಿಳಿಸಿದನು. ಅದಕ್ಕೆ ಸಂಜಯನು 'ಹಾಗೆಯೇ ಆಗಲಿ' ಎಂದು ಹೇಳಿ, ಪಾಂಡವರ ಮತ್ತು ಶ್ರೀಕೃಷ್ಣನ ಅನುಮತಿಯನ್ನು ಪಡೆದು ಅಲ್ಲಿಂದ ಹಿಂತಿರುಗಿದನು. ಹೀಗೆ ಸಂಜಯನು ತನಗೆ ಧೃತರಾಷ್ಟ್ರನು ಹೇಳಿದ್ದ ಕಾರ್ಯವನ್ನೆಲ್ಲ ಮುಗಿಸಿಕೊಂಡು, ಧರ್ಮರಾಜನ ಅನುಮತಿಯನ್ನು ಪಡೆದು ಅಲ್ಲಿಂದ ಹೊರಟು, ಆ ದಿನವೆಲ್ಲ ಪ್ರಯಾಣಮಾಡಿ ರಾತ್ರಿಹೊತ್ತಿಗೆ ಹಸ್ತಿನಾವತಿಯನ್ನು ಸೇರಿದನು. ಕುದುರೆಗಳು ವೇಗವಾಗಿ ನಡೆದುದರಿಂದ ಒಂದು ಹಗಲಿನಲ್ಲಿಯೇ ಅವನು ಹಸ್ತಿನಾವತಿಯನ್ನು ಮುಟ್ಟಿ, ಆ ರಾತ್ರಿಯೇ ಧೃತರಾಷ್ಟ್ರನ ಅಂತಃಪುರದ ಬಳಿಗೆ ಬಂದನು. ಅಲ್ಲಿದ್ದ ದ್ವಾರಪಾಲಕನೊಡನೆ "ಎಲೈ ಭದ್ರನೇ! ಈಗಲೇ ನೀನು ಹೋಗಿ ಪಾಂಡವರ ಕಡೆಯಿಂದ ಸಂಜಯನು ಬಂದಿರುವುದಾಗಿ ಮಹಾರಾಜನಿಗೆ ತಿಳಿಸು. ವಿಳಂಬ ಮಾಡಬೇಡ. ಮಹಾರಾಜನು ಇನ್ನೂ ಮಲಗದೆ ಎಚ್ಚರಗೊಂಡಿದ್ದ ಪಕ್ಷದಲ್ಲಿಮಾತ್ರ ನನ್ನ ನಮಸ್ಕಾರವನ್ನು ತಿಳಿಸು. ಸೌಕರ್ಯವನ್ನು ತಿಳಿದು ಆಮೇಲೆ ನಾನು ಒಳಕ್ಕೆ ಹೋಗುವೆನು. ನಾನು ಅವನಿಗೆ ಅತ್ಯವಶ್ಯವಾದ ಸಂಗತಿಯನ್ನು ತಿಳಿಸಬೇಕಾಗಿದೆ. ತಿಳಿಸದಿದ್ದರೆ ಅದರಿಂದ ಅಪಾಯವುಂಟು" ಎಂದನು. ಈ ಮಾತನ್ನು ಕೇಳಿದೊಡನೆ ದ್ವಾರಪಾಲಕನು, ಒಳಗೆ ಹೋಗಿ ಧೃತರಾಷ್ಟ್ರನನ್ನು ನೋಡಿ, "ಮಹಾರಾಜಾ! ನಿನಗೆ ವಂದನವು. ನಿನ್ನ ಪ್ರಿಯನಾದ ಸಂಜಯನು ಈಗಲೇ ಪಾಂಡವರ ಕಡೆಯಿಂದ ಬಂದು ನಿನ್ನನ್ನು ನೋಡಲು ಬಾಗಿಲಲ್ಲಿ ಕಾದಿರುವನು. ಈಗ ಅವನಿಗೆ ಏನಪ್ಪಣೆಯೆಂಬುದನ್ನು ತಿಳಿಸಬೇಕು" ಎಂದನು. ಅದಕ್ಕಾ ಧೃತರಾಷ್ಟ್ರನು "ಓ ದ್ವಾರಪಾಲಕಾ! ಅವನನ್ನು ಒಳಕ್ಕೆ ಕಳುಹಿಸು. ನನಗೆ ದೇಹದಲ್ಲಿ ಏನೂ ಆಯಾಸವಿಲ್ಲ. ಅವನನ್ನು ನೋಡಲು ಸಿದ್ಧನಾಗಿರುವೆನೆಂದು ತಿಳಿಸು. ಅವನಿಗೆ ಸುಖಾಗಮನವನ್ನು ಹೇಳು. ನನ್ನಲ್ಲಿಗೆ ಬರಲು ಅವನಿಗೆ ಯಾವಾಗಲೂ ಅಡ್ಡಿಯಿಲ್ಲದಿರುವಾಗ, ಅವನು ಬಾಗಿಲಲ್ಲಿ ನಿಲ್ಲುವುದೇಕೆ?" ಎಂದನು. ಒಡನೆಯೇ ರಾಜಾಜ್ಞೆಯಿಂದ ಸಂಜಯನು ಒಳಗೆ ಪ್ರವೇಶಿಸಿದನು. ಪ್ರಾಜ್ಞರೂ, ಶೂರರೂ, ಮಾನವಂತರೂ ಆದ ಕಾವಲುಗಾರರಿಂದ ರಕ್ಷಿಸಲ್ಪಟ್ಟ ಆ ರಾಜಗೃಹದಲ್ಲಿ, ಸಿಂಹಾಸನದಲ್ಲಿ ಕುಳಿತಿದ್ದ ಧೃತರಾಷ್ಟ್ರ

ನನ್ನು ಕಂಡೊಡನೆ, ಸಂಜಯನು ಕೈ ಮುಗಿದು, "ಮಹಾರಾಜಾ! ಸಂಜಯನಾದ ನಾನು ನಮುಸ್ಕರಿಸುವೆನು. ಈಗಲೇ ಪಾಂಡವರನ್ನು ನೋಡಿ ಬಂದೆನು. ಸಾಧುಹೃದಯವುಳ್ಳ ಯುಧಿಷ್ಠಿರನು, ನಿನಗೆ ತನ್ನ ನಮಸ್ಕಾರವನ್ನು ತಿಳಿಸಿ, ನಿನ್ನ ಕ್ಷೇಮವನ್ನು ವಿಚಾರಿಸಿದನು. ನಿಮ್ಮ ಮಕ್ಕಳ ಕ್ಷೇಮವನ್ನೂ ಸಂತೋಷದೊಡನೆ ವಿಚಾರಿಸಿದನು. ಪುತ್ರ, ಪೌತ್ರ, ಬಂಧು, ಮಿತ್ರ ಪರಿವಾರಗಳೊಡನೆಯೂ, ಸಮಸ್ತಮಂತ್ರಿಗಳೊಡನೆಯೂ, ಅನುಚರರೊಡನೆಯೂ, ನಿಮ್ಮ ಆರೋಗ್ಯವನ್ನೂ, ಅವರಿಂದ ನಿಮಗೆ ನಡೆಯುವ ಉಪಚಾರಗಳನ್ನೂ ಅವನು ವಿಚಾರಿಸಿದನು" ಎಂದನು.

ಆಗ ಧೃತರಾಷ್ಟ್ರನು, "ಅಪ್ಪಾ! ಸಂಜಯಾ! ಅಜಾತಶತ್ರುವಾದ ಆ ಯುಧಿಷ್ಠಿರನ ಮತ್ತು ಆ ಅರ್ಜುನನ ಗುಣಗಳನ್ನು ಎಷ್ಟು ಕೊಂಡಾಡಿದರೂ ಸಾಲದು! ಅವರ ಸೌಖ್ಯವನ್ನೇ ನಾನು ಬಯಸುವೆನು. ಸಂಜಯಾ! ಆ ಧರ್ಮರಾಜನು ತನ್ನ ಮಕ್ಕಳೊಡನೆಯೂ ಸಹೋದರರೊಡನೆಯೂ, ಮಂತ್ರಿಗಳೊಡನೆಯೂ ಕ್ಷೇಮದಿಂದಿರುವನಷ್ಟೆ?" ಎಂದನು. ಅದಕ್ಕಾ ಸಂಜಯನು "ಮಹಾರಾಜಾ! ಎಲ್ಲರಿಗೂ ಕ್ಷೇಮವು. ಹಿಂದೆ ಅವರಿಗೆ ಯಾವ ರಾಜ್ಯಧನಾದಿಗಳು ಸ್ವಂತವಾಗಿದ್ದುವೋ ಅದನ್ನು ಈಗ ಪಡೆಯಬೇಕೆಂಬುದು ಯುಧಿಷ್ಠಿರನ ಉದ್ದೇಶವು. ಆ ಧರ್ಮರಾಜನಿಗೆ ಧರ್ಮಾರ್ಥಗಳನ್ನು ನಿರ್ದುಷ್ಟವಾಗಿ ಸಾಧಿಸುವುದರಲ್ಲಿಯೇ ಪ್ರೀತಿ! ಅವನು ಉದಾರಮನಸ್ಸುಳ್ಳವನು. ಅನೇಕ ವಿಷಯಗಳನ್ನು ಕೇಳಿ ಬಲ್ಲವನು. ಒಳ್ಳೇ ದೂರಾಲೋಚನೆಯುಳ್ಳವನು. ಶೀಲವಂತನು. ಅವನಿಗೆ ದಯೆಯೆಂಬುದೇ ದೊಡ್ಡ ಧರ್ಮವು. ಅವನಿಗೆ ಧನಕ್ಕಿಂತಲೂ ಧರ್ಮವೇ ಹೆಚ್ಚು ಪ್ರಿಯವಾದುದು. ಓ ಮಹಾರಾಜಾ! ಅವನ ಬುದ್ಧಿಯು ಅಧರ್ಮಕ್ಕೆ ಆಸ್ಪದವಿಲ್ಲದ, ಮತ್ತು ಅಸಂಬದ್ಧವಲ್ಲದ ಸುಖವನ್ನೇ ಬಯಸುವುದು. ಅವನ ಕೋರಿಕೆಗಳೆಲ್ಲ ಅಂತಹ ಧರ್ಮಮಾರ್ಗದಲ್ಲಿಯೇ ಪ್ರವರ್ತಿಸುವುವು. ದಾರದಿಂದ ಪೋಣಿಸಲ್ಪಟ್ಟ ದಾರುಮಯವಾದ ಹೆಣ್ಣು ಬೊಂಬೆಯಂತೆ, ಮನುಷ್ಯನು ಈಶ್ವರನಿಗೆ ಅಧೀನನಾಗಿ, ನಾನಾಚೇಷ್ಟೆಗಳನ್ನು ಮಾಡುತ್ತಿರುವನು. ಈಗ ಧರ್ಮಪುತ್ರನು ಧರ್ಮಕ್ಕೆ ಕಟ್ಟು

ಬಿದ್ದು, ಕೋಪವನ್ನಡಗಿಸಿಕೊಂಡು ತಾಳ್ಮೆಯಿಂದಿರುವುದನ್ನೂ, ಕೇವಲ ಪಾಪಹೇತುವಾಗಿ, ಕ್ರೂರವಾಗಿ, ಬಾಯಿಂದ ಹೇಳುವುದಕ್ಕೂ ಸಾಧ್ಯವಿಲ್ಲದ ನಿನ್ನ ಕಡೆಯುವರ ದುರಾಗತವನ್ನೂ ನೋಡಿ ನನಗೆ, ನಿಮ್ಮ ಪೌರುಷ (ಪುರುಷಪ್ರಯತ್ನ) ಕ್ಕಿಂತಲೂ, ಆ ಯುಧಿಷ್ಠಿರನು ನಂಬಿರುವ ದೈವವೇ ಪ್ರಬಲವೆಂದು ತೋರಿದೆ. ಪ್ರಬಲವಾದ ಶತ್ರುವು ತಾನಾಗಿ ಸಮ್ಮತಿಸಿಬಿಟ್ಟಿರುವವರೆಗೂ ಒಬ್ಬ ಮನುಷ್ಯನು ತನಗೆ ಬೇಕಾದ ಹಾಗೆ ನಡೆಯಬಹುದು. ಅದುವರೆಗೆ ಅವನು ಎಲ್ಲರಿಂದಲೂ ಹೊಗಳಿಸಿಕೊಳ್ಳಬಹುದು. ಅದರಂತೆಯೇ ಈಗ ಅಜಾತಶತ್ರುವಾದ ಯುಧಿಷ್ಠಿರನೂ, ನಿಮ್ಮ ವಿಚಾರದಲ್ಲಿ ಯಾವ ಕೇಡನ್ನೂ ಎಣಿಸದೆ, ಸರ್ಪವು ಜೀರ್ಣವಾದ ತನ್ನ ಪರೆಯನ್ನು ಕಳೆದುಬಿಡುವಂತೆ * ತನ್ನ ಪಾಪವನ್ನೆಲ್ಲ ನಿಮ್ಮ ಮೇಲೆ ತಳ್ಳಿ, ತಾನು ಸಾಧುವೆಂಬ ಖ್ಯಾತಿಯಿಂದ ಬೆಳಗುತ್ತಿರುವನು.

ರಾಜಾ! ನಿನ್ನ ಕಾರ್ಯವು ಧರ್ಮಾರ್ಥಸಮ್ಮತವಾದ ಆರ್ಯರ ನಡತೆಗೆ ಕೇವಲ ವಿರುದ್ಧವಾದುದೆಂದು ತಿಳಿ. ನೀನು ಮಾಡಿದ ಕಾರ್ಯಗಳಿಂದ ಈ ಲೋಕದಲ್ಲಿ ನೀನು ನಿಂದೆಗೊಳಗಾದುದಲ್ಲದೆ, ಪರಲೋಕದಲ್ಲಿಯೂ ಪಾಪಕ್ಕೆ ಭಾಗಿಯಾಗಿರುವೆ. ನೀನು ನಿನ್ನ ಪುತ್ರರಿಗೆ ವಶನಾಗಿ, ಆ ಪಾಂಡವರನ್ನು ತೊಲಗಿಸಿ, ದುರ್ಲಭವಾದ ಮತ್ತು ಲಭಿಸಿದರೂ ನಿನಗೆ ದಕ್ಕುವುದೆಂಬ ವಿಚಾರದಲ್ಲಿ ಸಂಶಯಾಸ್ಪದವಾದ ಐಶ್ವರ್ಯವನ್ನು ಅನುಭವಿಸಬೇಕೆಂದು ಅಪೇಕ್ಷಿಸುತ್ತಿರುವೆ. ಈ ಅಧರ್ಮದಿಂದ ನೀನು ಲೋಕದಲ್ಲಿ ಮಹತ್ತಾದ ಅಪವಾದಕ್ಕೊಳಗಾಗಿರುವೆ. ಓ ಭರತಾಗ್ರಣೀ! ಇದು ನಿನ್ನಂತವನಿಗೆ ಯುಕ್ತವಲ್ಲ. ಪ್ರಜ್ಞಾಹೀನರು, ದುಷ್ಕುಲದಲ್ಲಿ ಹುಟ್ಟಿದವರು, ಘಾತುಕರು, ದೀರ್ಘವೈರವುಳ್ಳವರು, ಕ್ಷತ್ರಧರ್ಮಗಳಲ್ಲಿ ಧೈರ್ಯವಿಲ್ಲದವರು, ಅಲ್ಪ ವೀರ್ಯವುಳ್ಳವರು, ಶಿಷ್ಟಾಚಾರಗಳಿಲ್ಲದವರು, ಇಂತವರನ್ನೆಲ್ಲ ವಿಪತ್ತುಗಳು ತಪ್ಪದೆ ಬಂದುಹಿಡಿಯುವುವು. ಸತ್ಕುಲದಲ್ಲಿ ಹುಟ್ಟಿದವನೂ, ಬಲಾಢ್ಯನೂ, ಯಶಸ್ವಿಯೂ, ಬಹಳ ವಿಷಯಗಳನ್ನು ಓದಿಬಲ್ಲ

* ಸಾಧುಗಳಲ್ಲಿ ವೈರವನ್ನು ಸಂಪಾದಿಸುವವನು, ಅವರ ಪಾಪಗಳಿಗೆಲ್ಲ ತಾನು ಭಾಗಿಯಾಗುವನೆಂದು ಸ್ಮೃತಿ.

ವನೂ, ಜಿತೇಂದ್ರಿಯನೂ ಆದವನು ಸದಾ ಸುಖಜೀವಿಯಾಗಿರುವನು. ಅಲ್ಲದೆ, ಯಾವನು ಬಹಳ ಸೂಕ್ಷ್ಮವಾದ ಧರ್ಮಾಧರ್ಮಗಳನ್ನು ಎಚ್ಚರದಿಂದ ಅನುಸರಿಸುವನೋ, ಅವನಿಗೆ ಆ ಗುಣಸಮೂಹವೆಲ್ಲ ಭಾಗ್ಯವಶದಿಂದಲೇ ಬರುವುವು. ನೀನಾದರೋ ಸತ್ಕುಲದಲ್ಲಿ ಹುಟ್ಟಿದವನಾದರೂ, ಮೋಹವಶನಾಗಿ, ಆ ಗುಣಗಳನ್ನೆಲ್ಲ ಕಳೆದುಕೊಂಡಿರುವೆ. ಮಹಾರಾಜಾ! ಭೀಷ್ಮಾದಿಗಳಂತೆ ಉತ್ತಮಮಂತ್ರಿಗಳನ್ನು ಸಮೀಪದಲ್ಲಿಟ್ಟುಕೊಂಡು, ಸ್ವತಃ ಬುದ್ಧಿಶಾಲಿಯೆನಿಸಿದ ನಿನ್ನಂತಹ ಮನುಷ್ಯನು ಮೋಹವಶನಾಗದಿದ್ದ ಪಕ್ಷದಲ್ಲಿ ಎಲ್ಲಾ ಮಂತ್ರಾಲೋಚನೆಗಳನ್ನೂ ನಿರಾಕರಿಸಿ ಹೇಗೆತಾನೇ ಇಂತಹ ಕ್ರೂರಕಾರ್ಯಗಳಿಗೆ ಅವಕಾಶವನ್ನು ಕೊಡುತಿದ್ದನು? ಈಗಲಾದರೋ ಈ ದುರ್ಮಂತ್ರಿಗಳೆಲ್ಲರೂ ಸೇರಿಕೊಂಡು, ಅನುಚಿತಕಾರ್ಯಗಳಿಗೆ ನಿನ್ನನ್ನೂ ಎಳೆಯುತ್ತಿರುವರು. ಕುರುಕುಲಕ್ಕೆಲ್ಲ ಕ್ಷಯವನ್ನುಂಟುಮಾಡುವುದೇ ಅವರೆಲ್ಲರ ದೃಢನಿಶ್ಚಯವು. ಇದಕ್ಕಾಗಿಯೇ ಅವರು ಪಾಂಡವರಿಗೆ ರಾಜ್ಯಲೇಶವನ್ನೂ ಕೊಡಕೂಡದೆಂದು ದುರ್ಬೋಧನೆಯನ್ನೂ ಮಾಡುತ್ತಿರುವರು. ರಾಜಾ! ನಿನ್ನ ಪಾಪಕೃತ್ಯಕ್ಕೆ ಪ್ರತಿಯಾಗಿ ಆ ಅಜಾತಶತ್ರುವೂ ನಿನ್ನ ವಿಷಯದಲ್ಲಿ ಪಾಪವನ್ನೇ ಮಾಡಲು ನಿಶ್ಚಯಿಸಿಬಿಟ್ಟರೆಮಾತ್ರ ಕೌರವರೆಲ್ಲರಿಗೂ ಆಕಸ್ಮಿಕನಾಶವು ಸಿದ್ಧವು. ಅವನು ನಿನ್ನ ವಿಷಯದಲ್ಲಿ ಕೇಡನ್ನಾಲೋಚಿಸಿದರೂ ಕೂಡ, ಕಳ್ಳರನ್ನು ದಂಡಿಸಿದಂತೆ ಅವನು ಮಾಡಿದುದು ನ್ಯಾಯವೆನಿಸುವುದು. ಲೋಕಾಪವಾದವು ನಿನ್ನ ಮೇಲೆಯೇ ಬೀಳುವುದು. ಇದಲ್ಲದೆ, ಓ ಮಹಾರಾಜಾ! ಲೋಕದಲ್ಲಿ ಈಶ್ವರಾಧೀನವಲ್ಲದ ಕಾರ್ಯವೊಂದೂ ಇಲ್ಲ. ಅರ್ಜುನನು ನಾರದಾದಿಗಳಂತೆ ಪರಲೋಕದಲ್ಲಿಯೂ ಸಂಚಾರಮಾಡಿ, ದೇವತೆಗಳಿಗೆ ಸಮ್ಮತನಾಗಿ ಬಂದವನಲ್ಲವೇ? ಅಂತವನು, ಮೋಸದಿಂದ ನೀವು ಕಲ್ಪಿಸಿದ ವನವಾಸಾದಿಗಳಿಗಾಗಿ ಕುಂದುವನೆ? ಆದುದರಿಂದ ಅವನಿಗೆ ದೈವಬಲವಿರುವಾಗ, ನಿಮ್ಮ ಪುರುಷಪ್ರಯತ್ನವೇನೋ ಫಲಕಾರಿಯಾಗದೆಂಬುದರಲ್ಲಿ ಸಂದೇಹವಿಲ್ಲ. ಶೌರ್ಯಾದಿ ಗುಣಗಳೆಲ್ಲವೂ ಕರ್ಮಾಧೀನವಾಗಿ ಲಭಿಸತಕ್ಕುವು. ಐಶ್ವರ್ಯವಾಗಲಿ, ಅನೈಶ್ವರ್ಯವಾಗಲಿ ಎರಡೂ ಅನಿತ್ಯಗಳೇ! ಇದನ್ನು ತಿಳಿದೇ, ಹಿಂದೆ ಬಲಿಚಕ್ರವರ್ತಿಯೂ ಕೂಡ, ಪ್ರಾರಬ್ಧಕರ್ಮಗಳ ಪಾರವನ್ನು ತಿಳಿಯು

ಲಾರದೆ, ಮನುಷ್ಯನ ಸ್ಥಿತಿಗತಿಗಳಿಗೆಲ್ಲ ಕಾಲಕ್ಕಿಂತಲೂ ಕಾರಣವು ಬೇರೊಂದಿಲ್ಲವೆಂದು ನಿಶ್ಚಯಿಸಿಕೊಂಡನು. ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮವೆಂಬೀ ಪಂಚೇಂದ್ರಿಯಗಳೂ ಪ್ರಾಣಿಗಳ ಜ್ಞಾನಕ್ಕೆ ಆಶ್ರಯಸ್ಥಾನಗಳು. ಆಶೆಯೆಂಬುದು ಪೂರ್ಣವಾಗಿ ಬಿಟ್ಟುಹೋದಾಗಲೇ ಇವು ತೃಪ್ತಿ ಹೊಂದುವುವು. ಅವುಗಳ ತೃಪ್ತಿಗಾಗಿ ಮೇಲೆಮೇಲೆ ಭೋಗಸಾಮಗ್ರಿಗಳನ್ನು ತಂದೊಡ್ಡುವುದರಿಂದ, ಎಂದಿಗೂ ಅವುಗಳ ತೃಪ್ತಿಯನ್ನು ಅಡಗಿಸಲು ಸಾಧ್ಯವಲ್ಲ. ಆದುದರಿಂದ, ಚಿಂತೆಯನ್ನೂ, ದುಃಖವನ್ನೂ ನಿಗ್ರಹಿಸಿ, ಅವುಗಳನ್ನು ಆಯಾ ವಿಷಯಗಳಿಂದ ಹಿಂತಿರುಗಿಸಬೇಕು. ಆದರೆ, ಕರ್ಮವು ಕಾರಣವಲ್ಲವೆಂಬುದನ್ನು ಬೇರೆಯವರು ಒಪ್ಪಿಕೊಳ್ಳುವುದಿಲ್ಲ. ಅವರು ಸರಿಯಾಗಿ ನಡೆಸಿದ ಕರ್ಮವೇ ಮನುಷ್ಯನಿಗೆ ಒಳ್ಳೆಯ ಫಲವನ್ನು ಕೊಡುವುದೆಂದು ಹೇಳಿ, ಹೆತ್ತ ಮಕ್ಕಳಿಗೆ ತಂದೆತಾಯಿಗಳು ಒಳ್ಳೇ ಭೋಜನವನ್ನಿಕ್ಕಿದಾಗಲೇ ಅವು ಚೆನ್ನಾಗಿ ಬೆಳೆಯುವುವೆಂಬ ನಿದರ್ಶನವನ್ನು ಕೊಡುವರು. ಮನುಷ್ಯನಿಗೆ ಆಗಾಗ ಪ್ರಿಯಾಪ್ರಿಯಗಳೂ, ಸುಖದುಃಖಗಳೂ, ನಿಂದಾಪ್ರಶಂಸೆಗಳೂ ತಪ್ಪಿದುದಲ್ಲ. ಇವುಗಳಿಗೆ ಒಳಗಾಗುವ ಮನುಷ್ಯನಲ್ಲಿ ಜನಗಳು ತಪ್ಪನ್ನು ಕಂಡಾಗ ನಿಂದಿಸುವರು. ಅವನು ಒಳ್ಳೆಯ ನಡತೆಯವನೆಂದು ತೋರಿದರೆ, ಆಗ ಅವನನ್ನು ಪ್ರಶಂಸಿಸುವರು. ಆದುದರಿಂದ ಮಹಾರಾಜಾ! ನಾನೂ ಈಗ ನಿನ್ನ ದೋಷಕ್ಕಾಗಿ ನಿನ್ನನ್ನು ನಿಂದಿಸಬೇಕಾಗಿದೆ. ಏಕೆಂದರೆ, ಭರತಕುಲದವರಾದ ಪಾಂಡವರನ್ನು ನೀನು ವಿರೋಧಿಸುತ್ತಿರುವೆ. ಇದರಿಂದ ಭರತಕುಲಕ್ಕೆಮಾತ್ರವಲ್ಲದೆ, ಪ್ರಜೆಗಳಿಗೆಲ್ಲ ನಾಶವುಂಟಾಗುವುದು ನಿಶ್ಚಯವು. ಈಗ ನಾನು ಹೇಳುವಂತೆ ಪಾಂಡವರಿಗೆ ರಾಜ್ಯಭಾಗವನ್ನು ಒಪ್ಪಿಸುವುದು ನಿನಗೆ ಸಮ್ಮತವಾಗದೆಹೋದಪಕ್ಷದಲ್ಲಿ, ಆ ನಿನ್ನ ಅಪರಾಧಕ್ಕಾಗಿ ಒಣಗಿದ ಹುಲ್ಲುಮೆದೆಯನ್ನು ಕೃಷ್ಣವರ್ತವು (ಬೆಂಕಿಯು) ಹೇಗೋ ಹಾಗೆ, ಕೃಷ್ಣವರ್ತ್ಮನಾದ (ಕೃಷ್ಣನ ದಾರಿಯನ್ನೇ ಅನುಸರಿಸಿ ನಡೆಯತಕ್ಕ) ಅರ್ಜುನನು ಕೌರವಕುಲವನ್ನೆಲ್ಲ ದಹಿಸಿಬಿಡುವನು. ರಾಜಾ! ಆಗ ಜೂಜಾಟದ ಸಮಯದಲ್ಲಿಯೂ ನೀನು, ಕಾಮವಶನಾದ ನಿನ್ನ ಮಗನಿಗೆ ವಶನಾಗಿ, ಅವನ ಕಾರ್ಯವನ್ನೇ ಅನುಮೋದಿಸಿದೆ! ಅದರಿಂದ ಸಮಸ್ತಲೋಕದಲ್ಲಿಯೂ ತಾನೇ

ಕೃತಾರ್ಥನೆಂದು ತಿಳಿದುಕೊಂಡವನೂ ಆಗ ನೀನೊಬ್ಬನೇ. ಈಗ ಅದರ ಪರಿಣಾಮವು ಹೇಗಾಗಿದೆಯೋ ನೋಡು. ಮಹಾರಾಜಾ! ನೀನು ಆಪ್ತರನ್ನೆಲ್ಲ ನಿಗ್ರಹಿಸಿ, ಅನಾಪ್ತರನ್ನು ಸಮೀಪದಲ್ಲಿ ಸೇರಿಸಿಕೊಂಡುದರಿಂದ ಕೇವಲ ದುರ್ಬಲನಾಗಿ, ಮುಂದೆ ಅನಂತವಾದ ಈ ಭೂಮಿಯನ್ನು ಪಾಲಿಸುವುದಕ್ಕೂ ನೀನು ಅಸಮರ್ಥನಾಗಿ ಬಿಟ್ಟೆ. ಇನ್ನು ನಾನು ಹೊರಡುವೆನು. ಅಲ್ಲಿಂದ ನಾನು ಪ್ರಯಾಣಮಾಡಿಬರುವಾಗ ರಥವೇಗದಿಂದ ಮೈಯೆಲ್ಲ ಆಡಿ ನನಗೆ ಬಹಳ ಆಯಾಸವಾಗಿದೆ. ನಾನು ಹೋಗಿ ಮಲಗುವೆನು. ನಾಳೆ ಬೆಳಗಾದಮೇಲೆ ಕೌರವರೆಲ್ಲರೂ ಒಂದಾಗಿ ಸಭೆಯಲ್ಲಿ ನೆರೆದಿರುವಾಗಲೇ ಅಜಾತಶತ್ರುವು ನನ್ನೊಡನೆ ಹೇಳಿಕಳುಹಿಸಿದ ಮಾತುಗಳನ್ನೆಲ್ಲ ತಿಳಿಸುವೆನು. ಅದನ್ನು ಎಲ್ಲರೂ ಕೇಳಲಿ" ಎಂದನು. ಅದಕ್ಕಾ ಧೃತರಾಷ್ಟ್ರನು "ಸಂಜಯಾ! ಇನ್ನು ನೀನು ಮನೆಗೆ ಹೋಗಿ ಸುಖವಾಗಿ ಮಲಗು. ಯುಧಿಷ್ಠಿರನು ಹೇಳಿಕಳುಹಿಸಿದ ಸಂದೇಶವನ್ನು ನಾಳೆ ಸಭೆಯಲ್ಲಿ ಕೌರವರೆಲ್ಲರೂ ಕೇಳಲಿ!" ಎಂದನು.

ಇದು ಮೂವತ್ತೆರಡನೆಯ ಅಧ್ಯಾಯವು.

**ಇಲ್ಲಿಗೆ ಸಂಜಯಯಾನಪರ್ವವು ಮುಗಿದುದು.**

# ಪ್ರಜಾಗರಪರ್ವವು.

ಧೃತರಾಷ್ಟ್ರನು ಆ ರಾತ್ರಿಯೇ ವಿದುರನನ್ನು ಕರೆಸಿ, ಅವನ ಅಭಿಪ್ರಾಯವನ್ನು ಕೇಳಿದಾಗ, ವಿದುರನು ಅನೇಕನೀತಿಗಳನ್ನು ಹೇಳಿ, ಪಾಂಡವರಿಗೆ ಅವರ ರಾಜ್ಯಭಾಗಗಳನ್ನು ಕೊಟ್ಟುಬಿಡುವುದೇ ಮೇಲೆಂದು ಹೇಳಿದುದು.

ಓ ಜನಮೇಜಯರಾಜಾ! ಕೇಳು! ಸಂಜಯನು ಹೊರಟುಹೋದಮೇಲೆ ಇತ್ತಲಾಗಿ ಧೃತರಾಷ್ಟ್ರನು ದ್ವಾರಪಾಲಕನನ್ನು ಕರೆದು, ವಿದುರ

ನನ್ನು ತಾನು ನೋಡಬೇಕೆಂದೂ, ಈಗಲೇ ಅವನನ್ನು ಕರೆತರಬೇಕೆಂದೂ ಆಜ್ಞಾಪಿಸಿದನು. ಅದರಂತೆ ದ್ವಾರಪಾಲಕನು ವಿದುರನಲ್ಲಿಗೆ ಬಂದು, "ಮಹಾಪ್ರಾಜ್ಞಾ! ಮಹಾರಾಜನು ನಿನ್ನನ್ನು ನೋಡಬೇಕೆಂದು ಬಯಸುವನು" ಎಂದನು. ಕೂಡಲೇ ವಿದುರನು ಧೃತರಾಷ್ಟ್ರನ ಅರಮನೆಯ ಬಳಿಗೆ ಬಂದು, ದ್ವಾರಪಾಲಕನ ಮೂಲಕವಾಗಿ ತಾನು ಬಂದಿರುವ ಸಂಗತಿಯನ್ನು ಹೇಳಿಕಳುಹಿಸಿದನು. ಧೃತರಾಷ್ಟ್ರನು ಪ್ರತಿಹಾರಿಯನ್ನು ನೋಡಿ "ವಿದುರನ ವಿಷಯದಲ್ಲಿ ನಾನು ಎಂದಿಗಾದರೂ ಅಡ್ಡಿಮಾಡುವೆನೇ? ಆತನು ಮಹಾಪ್ರಾಜ್ಞನು. ದೀರ್ಘದೃಷ್ಟಿಯುಳ್ಳವನು. ಒಡನೆಯೇ ಅವನನ್ನು ಒಳಕ್ಕೆ ಬಿಡು" ಎಂದನು. ಅದರಂತೆ ದ್ವಾರಪಾಲಕನು ವಿದುರನಲ್ಲಿಗೆ ಬಂದು ತಿಳಿಸಲು, ವಿದುರನು ಒಳಗೆ ಹೋಗಿ, ಚಿಂತಾತುರನಾಗಿ ಕುಳಿತಿದ್ದ ಧೃತರಾಷ್ಟ್ರನ ಮುಂದೆ ನಿಂತು ಕೈಮುಗಿದು "ಮಹಾರಾಜಾ! ನಾನು ವಿದುರನು. ನಿನ್ನ ಆಜ್ಞೆಯಂತೆ ಬಂದಿರುವೆನು. ನನ್ನಿಂದಾಗಬೇಕಾದುದೇನಾದರೂ ಇದ್ದರೆ ಆಜ್ಞಾಪಿಸಬಹುದು" ಎಂದನು. ಅದಕ್ಕಾ ಧೃತರಾಷ್ಟ್ರನು "ವಿದುರಾ! ಈಗಲೇ ಸಂಜಯನು ನನ್ನಲ್ಲಿಗೆ ಬಂದು ನನ್ನನ್ನು ಬಹಳವಾಗಿ ನಿಂದಿಸಿ ಹೊರಟುಹೋದನು. ನಾಳೆ ಸಭಾಮಧ್ಯದಲ್ಲಿ ಅವನು ಅಜಾತಶತ್ರುವಾದ ಧರ್ಮರಾಜನು ಹೇಳಿಕಳುಹಿಸಿರುವ ಸಂದೇಶವನ್ನೆಲ್ಲ ತಿಳಿಸುವುದಾಗಿ ಹೇಳಿರುವನು. ಆ ಧರ್ಮರಾಜನ ಅಭಿಪ್ರಾಯವೇನೆಂದು ತಿಳಿಯದೆ ನನ್ನ ಹೃದಯದ ತಾಪವು ನನ್ನ ಶರೀರವನ್ನೇ ದಹಿಸುತ್ತಿದೆ. ಆ ಚಿಂತೆಯು ನನಗೆ ನಿದ್ರೆಬಾರದಂತೆ ಮಾಡಿದೆ! ಅಪ್ಪ ವಿದುರಾ! ನೀನು ಧರ್ಮಾರ್ಥಗಳನ್ನು ಚೆನ್ನಾಗಿ ಬಲ್ಲವನು. ನಿದ್ರೆಯಿಲ್ಲದೆ ಚಿಂತಾಗ್ನಿಯಿಂದ ಬೇಯುತ್ತ, ಕಷ್ಟಪಡುತ್ತಿರುವ ನನಗೆ ಮುಂದೆ ಹೇಗೆ ಕ್ಷೇಮವುಂಟಾಗಬೇಕೋ ಅದನ್ನು ತಿಳಿಸಬೇಕು. ಆ ಸಂಜಯನು ಪಾಂಡವರ ಕಡೆಯಿಂದ ಬಂದುದು ಮೊದಲು, ನನ್ನ ಮನಸ್ಸಿಗೆ ಸ್ವಲ್ಪವಾದರೂ ನೆಮ್ಮದಿಯಿಲ್ಲದಿದೆ. ಮೊದಲಿನಂತಿಲ್ಲದೆ ನನ್ನ ಇಂದ್ರಿಯಗಳೆಲ್ಲವೂ ಕಲಗಿಹೋಗಿವೆ. ಆ ಸಂಜಯನು ಹೇಳುವುದೇನೆಂದು ತಿಳಿಯದೆ, ಬಲವಾದ ಚಿಂತೆಯು ನನ್ನನ್ನು ಕೊರಗಿಸುತ್ತಿದೆ. ಆದುದರಿಂದ ಓ ವಿದುರಾ! ಈಗ ನೀನು ಹೇಗೆ ನಡೆದರೆ ಆ ಯುಧಿಷ್ಠಿರನಿಗೆ ಸಮ್ಮತವಾಗು

ವುದೋ, ಆ ರೀತಿಯನ್ನು ಯೋಚಿಸಿ ಹೇಳಬೇಕು. ನಮ್ಮೆಲ್ಲರಿಗೂ ಕ್ಷೇಮ ವುಂಟಾಗಿ, ನಮ್ಮ ಪ್ರಜೆಗಳೆಲ್ಲರೂ ಸೌಖ್ಯದಿಂದಿರುವ ಮಾರ್ಗವನ್ನು ನಿಶ್ಚ ಯಿಸಿ ಹೇಳು" ಎಂದನು.

ಆಗ ವಿದುರನು ಧೃತರಾಷ್ಟ್ರನನ್ನು ಕುರಿತು "ಮಹಾರಾಜಾ! ನಿನಗೆ ನಿದ್ರೆಬಾರದಿರುವುದೇನೋ ಯುಕ್ತವೇ. ಏಕೆಂದರೆ, ಬಲಾಢ್ಯನಾದ ಶತ್ರು ವು ಮೇಲೆ ಬೀಳುವ ಸಂಭವವಿದ್ದಾಗ, ತಕ್ಕಷ್ಟು ಸಹಾಯಸಂಪತ್ತಿಲ್ಲದೆ ದುರ್ಬಲನಾದವನಿಗೂ, ಸ್ವತ್ತನ್ನು ಕಳೆದುಕೊಂಡವನಿಗೂ, ಕಾಮಾತುರ ವುಳ್ಳವನಿಗೂ, ಕಳ್ಳನಿಗೂ ಈ ನಾಲ್ವರಿಗೂ ನಿದ್ರೆಬಾರದಿರುವುದು ಸಹ ಜವೇ! ಇಂತಹ ದೋಷಗಳು ಈಗ ನಿನ್ನಲ್ಲಿ ಯಾವುದೂ ಇಲ್ಲವಷ್ಟೆ? ಪರ ದ್ರವ್ಯಕ್ಕೇನಾದರೂ ಆಸೆಪಟ್ಟು ನೀನು ಅದಕ್ಕಾಗಿ ಮನಸ್ಸಿನಲ್ಲಿ ಕುದಿಯುತ್ತಿ ರುವೆಯೇನು? ಅಂತದೇನೂ ಇಲ್ಲವಷ್ಟೆ? ಇಂತಹ ಕಾರಣವಿದ್ದ ಹೊರತು ಮನುಷ್ಯನಿಗೆ ನಿದ್ರೆಬಾರದಿರುವ ಸಂಭವವಿಲ್ಲ" ಎಂದನು. ಅದಕ್ಕಾ ಧೃತ ರಾಷ್ಟ್ರನು "ವಿದುರಾ! ಧರ್ಮಯುಕ್ತವಾಗಿಯೂ, ಕ್ಷೇಮಕರವಾಗಿಯೂ ಇರುವ ಹಿತವಾಕ್ಯಗಳನ್ನು ನಿನ್ನಿಂದ ಕೇಳಬೇಕೆಂದಿರುವೆನು. ಈ ರಾಜ ರ್ಷಿಕುಲದಲ್ಲಿ ನೀನೊಬ್ಬನೇ ವಿವೇಕಿಗಳಿಗೆಲ್ಲಾ ಸಮ್ಮತನಾದವನು" ಎಂದನು. ಅದಕ್ಕಾ ವಿದುರನು "ಮಹಾರಾಜಾ! ನಿನಗೆ ಆ ಯುಧಿಷ್ಠಿ ರನ ವಿಷಯವಾಗಿ ಬಹಳ ಚಿಂತೆಯುಂಟಾಗಿರುವಂತಿದೆ. ಆ ಯುಧಿಷ್ಠಿರ ನಾದರೋ ಸಾಮಾನ್ಯನಲ್ಲ. ಸಮಸ್ತರಾಜಲಕ್ಷಣಗಳಿಂದ ಕೂಡಿದವನು. ಅಂತವನೇ ತ್ರೈಲೋಕ್ಯಕ್ಕೂ ರಾಜನಾಗತಕ್ಕವನು. ಅವನನ್ನೇ ನೀನು ಈ ರಾಜ್ಯದಿಂದ ಹೊರಡಿಸಿದೆ. ನಿನ್ನ ಸ್ವಭಾವವಾದರೋ ಅದಕ್ಕೆ ಕೇವಲ ವಿಪರೀತವಾಗಿದೆ. ನಿನಗೆ ಕಣ್ಣುಗಳೂ ಇಲ್ಲದುದರಿಂದ ನೀನು ರಾಜ್ಯ ವನ್ನು ನಡೆಸುವುದರಲ್ಲಿ ಅನೇಕರಿಗೆ ಅಭಿಪ್ರಾಯವಿಲ್ಲ. ಆ ಯುಧಿಷ್ಠಿರ ನಾದರೋ ಧರ್ಮಾತ್ಮನು. ಧರ್ಮಗಳನ್ನು ಚೆನ್ನಾಗಿ ಬಲ್ಲವನು. ಅಹಿಂಸೆ, ದಯೆ, ಸತ್ಯ, ಧರ್ಮಾದಿ ಸುಗುಣಗಳಿಂದ ಕೂಡಿದವನು. ಅಲ್ಲದೆ ಅವನಿಗೆ ನಿನ್ನಲ್ಲಿ ಗುರುಭಾವವುಂಟು. ಇದರಿಂದಲೇ ಅವನು ನಿನ್ನಿಂದ ಅನೇಕ ಕಷ್ಟಗಳಿಗೊಳಗಾದರೂ ಎಲ್ಲವನ್ನೂ ಸಹಿಸಿಕೊಂಡಿರುವನು. ಮಹಾರಾಜಾ!

ಆ ದುರ್ಯೋಧನನನ್ನೂ, ಶಕುನಿಯನ್ನೂ, ಕರ್ಣನನ್ನೂ, ದುಶ್ಶಾಸನ ನನ್ನೂ ರಾಜ್ಯಕ್ಕೆ ಸ್ವತಂತ್ರಾಧಿಕಾರಿಗಳನ್ನಾಗಿ ಮಾಡಿಟ್ಟಿರುವ ನಿನಗೆ, ಹೇಗೆ ತಾನೇ ಸಂಪತ್ತು ಕೈಗೂಡುವುದು? ಯಾವನ ಪುರುಷಾರ್ಥಗಳಲ್ಲಿ ಆತ್ಮ ಜ್ಞಾನವೂ, ಕಾರ್ಯಪ್ರಯತ್ನವೂ, ತಾಳ್ಮೆಯೂ ಧರ್ಮಾನುವರ್ತನವೂ, ಯಾವಾಗಲೂ ಹಿಂಬಾಲಿಸುತ್ತಿರುವುವೋ, ಅವನೇ ಪಂಡಿತನೆನಿಸುವನು. ಒಂದೇ ಮರದಿಂದ ಸ್ರುಕ್ಕು, ಸ್ರುವೆ ಮೊದಲಾದ ಯಜ್ಞಪಾತ್ರಗಳೂ, ಪೀಡನಸಾಮಗ್ರಿಗಳೂ ಉಂಟಾಗುವಂತೆ, ಒಬ್ಬನ ದೆಸೆಯಿಂದಲೇ, ಒಳ್ಳೆ ಯದೂ, ಕೆಟ್ಟದೂ ಉಂಟಾಗುವ ಸಂಭವವುಂಟು. ಅವುಗಳಲ್ಲಿ ಪ್ರಶಸ್ತ ವಾದುವುಗಳನ್ನು ಸ್ವೀಕರಿಸಿ, ನಿಂದಿತವಾದುವುಗಳನ್ನು ತ್ಯಜಿಸಿ, ನಾಸ್ತಿಕನ ಲ್ಲದೆ, ಶ್ರದ್ಧಾಳುವಾಗಿರುವುದೇ ಪಂಡಿತನ ಲಕ್ಷಣವು. ಕೋಪ, ಹರ್ಷ, ದರ್ಪ, ಲಜ್ಜೆ, ಹೆಮ್ಮೆ, ತಾನೇ ಮೇಲೆಂಬ ಅಹಂಭಾವ, ಈ ದುರ್ಗುಣಗಳು ಯಾವನನ್ನು ಪುರುಷಾರ್ಥದಿಂದ ಸೆಳೆಯಲಾರವೋ, ಅವನೇ ಪಂಡಿತನೆನಿ ಸುವನು. ಯಾವನ ಕರ್ತವ್ಯವಾಗಲಿ, ಕಾರ್ಯಾಲೋಚನೆಯಾಗಲಿ ಬೇರೊ ಬ್ಬರಿಗೆ ತಿಳಿಯದೆ, ಅವನು ಆ ಕಾರ್ಯವನ್ನು ಮುಗಿಸಿದಮೇಲೆಯೇ ಇತರ ರಿಗೆ ತಿಳಿಯುವುದೋ ಅವನೇ ಪಂಡಿತನೆನಿಸುವನು. ಯಾವನ ಕಾರ್ಯಪ್ರ ಯತ್ನಕ್ಕೆ, ಶೀತೋಷ್ಣಗಳಾಗಲಿ, ಐಶ್ವರ್ಯದಾರಿದ್ರ್ಯಗಳಾಗಲಿ, ಆಶೆ, ಭಯ ಇವುಗಳಾಗಲಿ, ಅಡ್ಡಿಮಾಡಿ ಕೆಡಿಸಲಾರವೋ ಅಂತವನೇ ಪಂಡಿ ತನೆನಿಸುವನು. ಸಹಜವಾಗಿ ಚದರುವ ಸ್ವಭಾವವುಳ್ಳುದಾಗಿದ್ದರೂ ಯಾ ವನ ಬುದ್ಧಿಯು ಧರ್ಮಾರ್ಥಗಳನ್ನೇ ಅನುವರ್ತಿಸುವುದೋ, ಯಾವನು ಕೇವಲ ಇಹಲೋಕಸುಖಕ್ಕಿಂತಲೂ ಇಹಪರಗಳೆರಡಕ್ಕೂ ಸಾಧನವಾದ ಅರ್ಥವನ್ನೇ ಸಾಧಿಸುವನೋ ಅವನೇ ಪಂಡಿತನು. ಒಳ್ಳೇ ವಿವೇಕಬುದ್ಧಿ ಯುಳ್ಳವರು, ತಮ್ಮ ಶಕ್ತಿಗನುಸಾರವಾದ ಕಾರ್ಯಗಳಿಗಾಗಿಯೇ ಪ್ರಯ ತ್ನವನ್ನು ಮಾಡುವರು. ತಮ್ಮ ಶಕ್ತಿಗನುಸಾರವಾಗಿಯೇ ಆ ಕಾರ್ಯಗ ಳನ್ನು ಮಾಡಿ ಮುಗಿಸುವರು. ಯಾವುದನ್ನೂ ಅವಮತಿಸುವುದಿಲ್ಲ. ಪಂಡಿತನಾದವನು 'ವಿಷಯಗಳನ್ನು ಬಹುಬೇಗನೆ ತಿಳಿದುಕೊಳ್ಳುವನು. ಬಹಳ ಹೊತ್ತಿನವರೆಗೆ ಚೆನ್ನಾಗಿ ಕೇಳುವನು. ವಿಷಯವನ್ನು ಚೆನ್ನಾಗಿ ಗ್ರಹಿಸಿ ಪುರುಷಾರ್ಥವನ್ನು ಸಾಧಿಸುವನು. ಆಶೆಯನ್ನೇ ಪ್ರಧಾನವಾ

ಗಿಟ್ಟುಕೊಂಡು ಪ್ರವರ್ತಿಸುವುದಿಲ್ಲ. ಇತರರ ವಿಚಾರದಲ್ಲಿ ಅವರಾಗಿ ಕೇಳಿದಹೊರತು ತಾನು ಬಾಯಿಕ್ಕುವುದಿಲ್ಲ. ಪಂಡಿತನಿಗಿರಬೇಕಾದ ಮೊದಲನೆಯ ಲಕ್ಷಣವೇ ಇದು. ವಿವೇಕಜ್ಞಾನವುಳ್ಳವರು ಅಸಾಧ್ಯವಾದುದನ್ನು ಅಪೇಕ್ಷಿಸಲಾರರು. ಆಪತ್ತುಗಳಲ್ಲಿ ಎದೆಗಿಡಲಾರರು. ಯಾವನು ಮೊದಲೇ ನಿಶ್ಚಯಮಾಡಿಕೊಂಡು ಕಾರ್ಯವನ್ನಾರಂಭಿಸುವನೋ, ಆರಂಭಿಸಿದ ಕಾರ್ಯವನ್ನು ನಡುವೆ ಬಿಟ್ಟುಬಿಡುವುದಿಲ್ಲವೋ, ಕಾಲವನ್ನು ವ್ಯರ್ಥಮಾಡುವುದಿಲ್ಲವೋ, ಮತ್ತು ಮನಸ್ಸನ್ನು ವಶಪಡಿಸಿಕೊಳ್ಳಬಲ್ಲನೋ ಅವನೇ ಪಂಡಿತನೆನಿಸುವನು. ಓ ಭರತರ್ಷಭಾ! ಪಂಡಿತರಾದವರು ಸಜ್ಜನರಿಗೆ ಯೋಗ್ಯವಾದ ಕರ್ಮಗಳಲ್ಲಿಯೇ ಆಸಕ್ತಿಯಿಡುವರು. ಐಶ್ವರ್ಯಸಾಧಕಗಳಾದ ಕಾರ್ಯಗಳನ್ನೇ ಮಾಡುವರು. ಹಿತವಾದ ಕಾರ್ಯದಲ್ಲಿ ಬೇಸರಗೊಳ್ಳುವುದಿಲ್ಲ. ಪಂಡಿತನಾದವನು ತನ್ನ ಅವಮಾನಕ್ಕಾಗಿ ಕೊರಗುವುದಿಲ್ಲ. ಸಮ್ಮಾನಕ್ಕಾಗಿ ಹಿಗ್ಗುವುದೂ ಇಲ್ಲ. ಯಾವ ಸಂದರ್ಭದಲ್ಲಿಯೂ ಮನಸ್ಸು ಕಲಗದೆ, ಗಂಗಾನದಿಯ ಮಡುವಿನಂತೆ ಸಮಸ್ಥಿತಿಯಲ್ಲಿರುವವನೇ ಪಂಡಿತನೆನಿಸುವನು. ಸಮಸ್ತ ಭೂತಗಳ ತತ್ವವನ್ನೂ, ಸಮಸ್ತ ಕಾರ್ಯಗಳ ಸಂವಿಧಾನವನ್ನೂ, ಕಾರ್ಯಸಾಧನೆಯ ಉಪಾಯವನ್ನೂ ತಿಳಿದವನೇ ಮನುಷ್ಯರಲ್ಲಿ ಪಂಡಿತನೆನಿಸುವನು. ಮನೋರಂಜಕವಾಗಿ ತಡೆಯಿಲ್ಲದೆ ಮಾತಾಡುವವನೂ, ಊಹಾಶಕ್ತಿ ಮತ್ತು ಕಾಲೋಚಿತವಾದ ಪ್ರತಿಭೆಗಳುಳ್ಳವನೂ, ಶೀಘ್ರವಾಗಿ ಗ್ರಂಥಗಳನ್ನು ಹೇಳಬಲ್ಲವನೂ ಪಂಡಿತನೆನಿಸುವನು. ಯಾವನ ಶಾಸ್ತ್ರಾಭ್ಯಾಸವು ಅವನ ಪ್ರಜ್ಞೆಗೆ ಅನುಸಾರವಾಗಿದ್ದು, ಪ್ರಜ್ಞೆಯೂ ಶಾಸ್ತ್ರಾಭ್ಯಾಸಕ್ಕೆ ಅನುಗುಣವಾಗಿರುವುದೋ, ಮತ್ತು ಯಾವನು ಆರ್ಯರ ಮರ್ಯಾದೆಯನ್ನು ಮೀರಿಹೋಗುವುದಿಲ್ಲವೋ ಅವನೇ ಪಂಡಿತನೆಂಬ ಖ್ಯಾತಿಯನ್ನು ಪಡೆಯಬಲ್ಲವನು. ಅಪರಿಮಿತವಾದ ಧನವನ್ನೂ, ವಿದ್ಯೆಯನ್ನೂ, ಅಧಿಕಾರವನ್ನೂ ಪಡೆದಿರುವಾಗಲೂ, ಗರ್ವಹೀನನಾಗಿ ನಡೆಯುವವನೇ ಪಂಡಿತನೆನಿಸುವನು. ಯಾವನು ಶಾಸ್ತ್ರವಿಚಾರವೊಂದನ್ನೂ ಕೇಳಿ ತಿಳಿಯದೆ ಗರ್ವಪಡುವನೋ, ತಾನು ದರಿದ್ರನಾಗಿದ್ದು ಔದಾರ್ಯವನ್ನು ತೋರಿಸುವನೋ,

ಯಾವನು ಅಕಾರ್ಯದಿಂದ ಧನವನ್ನರ್ಜಿಸಬೇಕೆಂದೆಣಿಸುವನೋ ಅಂತವನು ಮೂಢನೆನಿಸುವನು. ಯಾವನು ಸ್ವಾರ್ಥವನ್ನು ಬಿಟ್ಟು ಪರಾರ್ಥಕ್ಕೆ ಯತ್ನಿಸುವನೋ, ನಂಬಿದ ಸ್ನೇಹಿತರ ವಿಷಯದಲ್ಲಿ ಕಪಟದಿಂದ ವರ್ತಿಸುಸುವನೋ ಅಂತವನು ಮೂಢನು. ತನ್ನಲ್ಲಿ ಪ್ರೇಮವಿಲ್ಲದವರನ್ನು ಪ್ರೀತಿಸುವವನೂ, ಪ್ರಿಯವುಳ್ಳವರನ್ನು ಪರಿತ್ಯಾಗಮಾಡುವವನೂ, ತನಗಿಂತಲೂ ಬಲಾಢ್ಯರನ್ನು ದ್ವೇಷಿಸುವವನೂ ತಿಳುವಳಿಕೆಯಿಲ್ಲದವನು. ಮಿತ್ರನಲ್ಲದವನನ್ನು ಸ್ನೇಹಮಾಡುವುದೂ, ನಿಜವಾದ ಮಿತ್ರನನ್ನು ದ್ವೇಷಿಸುವುದೂ, ದೋಷಯುಕ್ತವಾದ ಕಾರ್ಯವನ್ನು ಆರಂಭಿಸುವುದೂ ಇವೆಲ್ಲ ಮೂಢನ ಕಾರ್ಯಗಳೇ. ಯಾವನು ಕಾರ್ಯಗಳನ್ನು ಅನವಶ್ಯವಾಗಿ ಬೆಳೆಸುವನೋ, ಯಾವನು ಒಂದೊಂದು ಕಾರ್ಯವಿಷಯದಲ್ಲಿಯೂ ಸಂದೇಹಪಡುವನೋ, ಯಾವನು ಬೇಗನೆ ನಡೆಯತಕ್ಕ ಕಾರ್ಯವನ್ನು ದೀರ್ಘಕಾಲಕ್ಕೆಳೆಯುವನೋ ಆವನು ಮೂಢನು. ಪಿತೃಶ್ರಾದ್ಧಗಳನ್ನೂ, ದೇವತಾರ್ಚನೆಗಳನ್ನೂ ಮಾಡದವನೂ, ಸಹೃದಯರಾದ ಮಿತ್ರರನ್ನು ಪಡೆಯದವನೂ ಮೂಢನೆನಿಸುವನು. ಕರೆಯದ ಸ್ಥಳಕ್ಕೆ ಹೋಗುವುದು, ತನ್ನನ್ನು ಕೇಳದಿದ್ದಾಗಲೂ ಬಹಳವಾಗಿ ಮಾತಾಡುವುದು, ತನ್ನಲ್ಲಿ ನಂಬಿಕೆಯಿಲ್ಲದವರನ್ನು ನಂಬುವುದು, ಇವೆಲ್ಲ ಮೂಢಬುದ್ಧಿಯುಳ್ಳ ನರಾಧಮರ ನಡತೆಗಳು. ತನ್ನಲ್ಲಿ ದೋಷವನ್ನಿಟ್ಟುಕೊಂಡು ಅದೇ ದೋಷಕ್ಕಾಗಿ ಇತರರನ್ನು ನಿಂದಿಸುವವನೂ, ತನಗೆ ಶಕ್ತಿಯಿಲ್ಲದಿರುವಾಗಲೂ ಕೋಪಿಸುವವನೂ ಮೂಢತಮನು. ತನ್ನ ಬಲವೆಷ್ಟೆಂಬುದನ್ನು ತಿಳಿಯದೆ, ಧರ್ಮಾರ್ಥಕ್ಕೆ ವಿರುದ್ಧವಾಗಿ, ತನಗೆ ದುರ್ಲಭವಾದ ವಿಷಯವನ್ನು ಪ್ರಯತ್ನವಿಲ್ಲದೆಯೇ ಪಡೆಯಲೆಳೆಸುವವನು ಮೂಢಾತ್ಮನೆನಿಸುವನು. ತನ್ನಲ್ಲಿ ಉಪದೇಶವನ್ನು ಕೋರದಿದ್ದವನಿಗೆ ಉಪದೇಶಿಸಲು ಹೋಗುವವನೂ, ಉಪದೇಶಕ್ಕೆ ಯೋಗ್ಯನಾದವನಿಗೆ ಉಪದೇಶಿಸದೆ ಬಿಡುವವನೂ, ಲೋಭಿಗಳನ್ನಾಶ್ರಯಿಸುವವನೂ ಮೂಢನೆನಿಸುವನು. ಯಾವನುಆಶ್ರಿತರಿಗೆ ಹಂಚಿಕೊಡದೆ ತಾನೊಬ್ಬನೇ ಉತ್ತಮಾಹಾರಗಳನ್ನು ಭುಜಿಸುವನೋ, ಉತ್ತಮ ವಸ್ತ್ರಗಳನ್ನುಡುವನೋ, ಅವನಿಗಿಂತಲೂ ಘಾತುಕನು ಬೇರೊಬ್ಬನಿಲ್ಲ. ಪಾಪವನ್ನು ಮಾಡುವನೊಬ್ಬನು, ಅದರ ಫಲವನ್ನನುಭವಿಸು

ವವರು ಅನೇಕರು. ಫಲವನ್ನನುಭವಿಸುವವರು ಪಾಪದಿಂದ ಬಿಡುಗಡೆ ಹೊಂದುವರು. ಕರ್ತನು ದೋಷಕ್ಕೆ ಭಾಗಿಯಾಗುವನು. ಒಬ್ಬ ಬಿಲ್ಲುಗಾರನು ಬಿಟ್ಟಬಾಣವು ಒಬ್ಬನನ್ನು ಕೊಲ್ಲಬಹುದು, ಕೊಲ್ಲದೆ ವಿಫಲವೂ ಆಗಬಹುದು. ಬುದ್ಧಿವಂತನಾದವನು ಪ್ರಯೋಗಿಸಿದ ಬುದ್ಧಿಶಸ್ತ್ರವಾದವಾದರೋ, ರಾಜಸಹಿತವಾದ ರಾಷ್ಟ್ರವನ್ನೇ ಮೊತ್ತಕ್ಕೆ ನಾಶಗೊಳಿಸುವುದು. ಮಹಾರಾಜಾ! ಈಗ ನೀನು *ಒಂದರಿಂದ ಎರಡನ್ನು ಪರ್ಯಾಲೋಚಿಸಿ, ಮೂರನ್ನು ನಾಲ್ಕರಿಂದ ವಶೀಕರಿಸಿ, ಐದನ್ನಡಗಿಸಿ, ಆರನ್ನು ಚೆನ್ನಾಗಿ ತಿಳಿದು, ಏಳನ್ನು ಬಿಟ್ಟು ಸುಖಿಯಾಗು! ವಿಷವು ಒಬ್ಬನನ್ನು ಕೊಲ್ಲುವುದು! ಆಯುಧವೂ ಒಬ್ಬನನ್ನು ಕೊಲ್ಲುವುದು. ದುರ್ಮಂತ್ರವಾದರೋ ಎಲ್ಲಾ ರಾಷ್ಟ್ರದ ಪ್ರಜೆಗಳೊಡನೆ ರಾಜನನ್ನು ನಿರ್ಮೂಲವಮಾಡುವುದು. ರುಚಿಯಾದ ಆಹಾರವನ್ನು ಒಬ್ಬನೇ ಭುಜಿಸಬಾರದು. ಒಬ್ಬನೇ ವಿಷಯಗಳನ್ನಾಲೋಚಿಸಬಾರದು. ಒಬ್ಬನೇ ದಾರಿನಡೆಯಬಾರದು. ಮಲಗಿದ್ದವರ ನಡುವೆ ಒಬ್ಬನೇ ಎಚ್ಚರಗೊಂಡಿರಬಾರದು.

೧

ಓ ರಾಜಾ! ಎರಡನೆಯದಿಲ್ಲದ ಒಂದೇ ಒಂದು ವಸ್ತುವುಂಟು. ಅದು ನಿನಗೆ ತಿಳಿಯದು. ಅದೇ ಸತ್ಯವೆಂಬುದು. ಅದು ಸಮುದ್ರಕ್ಕೆ ಹಡಗಿನಂತೆಯೂ, ಸ್ವರ್ಗಕ್ಕೆ ಸೋಪಾನದಂತೆಯೂ ಇರುವುದು. ತಾಳ್ಮೆಯುಳ್ಳವರಲ್ಲಿರುವುದೊಂದೇ ದೋಷವು. ತಾಳ್ಮೆಯುಳ್ಳವರನ್ನು ಜನರು ಕೈಲಾಗದವನೆಂದು ತಿಳಿದು ಹೀಗಳೆಯುವರು. ಆದರೆ ತಾಳ್ಮೆಯಲ್ಲಿ ಬಹುಗುಣಗಳುಂಟು. ಮನುಷ್ಯನಿಗೆ ತಾಳ್ಮೆಯೇ ಉತ್ತಮಬಲವು. ಅಶಕ್ತರಿಗೆ ಅದೇ ಉತ್ತಮ

---

* ಇಲ್ಲಿ ಒಂದೆಂದರೆ ಬುದ್ಧಿ. ಎರಡೆಂದರೆ ಕಾರ್ಯಾಕಾರ್ಯಗಳು. ಮೂರೆಂದರೆ, ಮಿತ್ರರು, ಉದಾಸೀನರು ಮತ್ತು ಶತ್ರುಗಳು. ನಾಲ್ಕೆಂದರೆ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳು. (ಇಲ್ಲಿ ಮಿತ್ರನನ್ನು ಬರೀ ಸಾಮದಿಂದಲೂ, ಉದಾಸೀನರನ್ನು ದಾನ ಭೇದಗಳಿಂದಲೂ, ಶತ್ರುಗಳನ್ನು ನಾಲ್ಕರಿಂದಲೂ ವಶೀಕರಿಸಬೇಕೆಂಬುದು ಭಾವವು.) ಐದೆಂದರೆ ಪಂಚೇಂದ್ರಿಯಗಳು. ಆರೆಂದರೆ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯಗಳೆಂಬ ಷಡ್ಗುಣಗಳು. ಏಳೆಂದರೆ ಜೂಜು, ಮದ್ಯಪಾನ ಮುಂತಾದ ಸಪ್ತ ವ್ಯಸನಗಳು.

ಸಾಧನವು. ಶಕ್ತರಿಗೆ ಆ ತಾಳ್ಮೆಯೇ ಭೂಷಣವು. ಕ್ಷಮೆಯಿಂದ ಎಲ್ಲರನ್ನೂ ವಶೀಕರಿಸಬಹುದು. ಕ್ಷಮೆಯಿಂದ ಸಾಧ್ಯವಾಗದೊಂದಿಲ್ಲ. ತಾಳ್ಮೆಯೆಂಬ ಖಡ್ಗವೊಂದು ಕೈಯಲ್ಲಿದ್ದರೆ ಅವನನ್ನು ದುರ್ಜನನೇನೂ ಮಾಡಲಾರನು? ಹುಲ್ಲಿಲ್ಲದ ಕಡೆಯಲ್ಲಿ ಬಿದ್ದ ಬೆಂಕಿಯು ತಾನೇ ನಂದಿಹೋಗುವುದಲ್ಲವೆ? ತಾಳ್ಮೆಯಿಲ್ಲದವನು ತನ್ನನ್ನೂ, ಇದಿರಾಳಿಯನ್ನೂ ದೋಷಭಾಗಿಯನ್ನಾಗಿ ಮಾಡುವನು. ಧರ್ಮವೆಂಬುದೊಂದೇ ಉತ್ತಮ ಶ್ರೇಯಸ್ಸಾಧನವು. ತಾಳ್ಮೆಯೊಂದೇ ಉತ್ತಮವಾದ ಇಂದ್ರಿಯನಿಗ್ರಹವು. ವಿದ್ಯೆಯೊಂದೇ ಉತ್ತಮವಾದ ತೃಪ್ತಿ. ಅಹಿಂಸೆಯೊಂದೇ ಉತ್ತಮ ಸುಖಕಾರಿಯು.

೨

ಯುದ್ಧಮಾಡಲಾರದ ಕ್ಷತ್ರಿಯನೊಬ್ಬನು, ಪುಣ್ಯಕ್ಷೇತ್ರಗಳನ್ನು ಸುತ್ತಿಬಾರದ ಬ್ರಾಹ್ಮಣನೊಬ್ಬನು, ಇವರಿಬ್ಬರನ್ನೂ ಭೂಮಿಯು ಬಿಲದೊಳಗಿನ ಪ್ರಾಣಿಗಳನ್ನು ಸರ್ಪವು ಹೇಗೋ ಹಾಗೆ ನುಂಗಿಬಿಡುವುದು. ಪರುಷವಾಗಿ ಮಾತಾಡದಿರುವುದೊಂದು, ಅಸತ್ತುಗಳನ್ನು ಆದರಿಸದಿರುವುದೊಂದು, ಈ ಎರಡು ಕೆಲಸಗಳಿಂದ ಮನುಷ್ಯನು ಲೋಕಕ್ಕೆಲ್ಲ ಪ್ರಿಯನಾಗುವನು. ಮತ್ತೊಬ್ಬಳು ಕಾಮಿಸಿದಳೆಂಬುದಕ್ಕಾಗಿಯೇ ಒಬ್ಬ ಪುರುಷನನ್ನು ತಾನೂ ಕಾಮಿಸುವ ಹೆಂಗಸೂ, ಬೇರೊಬ್ಬರು ಪೂಜಿಸುಹರೆಂಬುದಕ್ಕಾಗಿ ಒಬ್ಬ ಮನುಷ್ಯನನ್ನು ತಾನೂ ಗೌರವಿಸುವ ಮನುಷ್ಯನೂ, ಇವರಿಬ್ಬರೂ ಸ್ವಬುದ್ಧಿಯಿಲ್ಲದೆ ಇತರರ ನಂಬಿಕೆಯಂತೆ ನಡೆದುಕೊಳ್ಳುವ ಮೂಢರೆನಿಸುವರು. ಕೈಯಲ್ಲಿ ಕಾಸಿಲ್ಲದೆ ಉತ್ತಮವಸ್ತುಗಳಿಗೆ ಆಸೆಪಡುವುದೊಂದು, ಕೈಲಾಗದಿದ್ದರೂ ಕೋಪದಿಂದ ರೇಗುವುದೊಂದು, ಇವೆರಡೂ ದೇಹವನ್ನು ಒಳಗೊಳಗೇ ಕೊರೆಯುವ ತೀಕ್ಷ್ಣವಾದ ಎರಡು ಮುಳ್ಳುಗಳು. ಉದ್ಯೋಗವಿಲ್ಲದ ಗೃಹಸ್ಥನೊಬ್ಬನು, ಸಲ್ಲದ ಕಾರ್ಯಗಳಿಗಾಗಿ ಪ್ರಯತ್ನಪಡುವ ಭಿಕ್ಷುಕನೊಬ್ಬನು, ಇವರಿಬ್ಬರೂ ತಮ್ಮ ಸ್ಥಿತಿಗೆ ವಿರುದ್ಧವಾದ ಆ ಪ್ರಯತ್ನಗಳಲ್ಲಿ ಎಂದಿಗೂ ವೃದ್ಧಿಗೆ ಬರಲಾರರು. ಶಕ್ತನಾಗಿದ್ದು ತಾಳ್ಮೆಯನ್ನು ವಹಿಸುವವನೂ, ಬಡತನದಲ್ಲಿಯೂ ಉದಾರಸ್ವಭಾವವುಳ್ಳವನೂ, ಇವರಿಬ್ಬರೂ ಸ್ವರ್ಗಕ್ಕಿಂತಲೂ ಉತ್ತಮಗತಿಯಲ್ಲಿ

ನೆಲೆಸುವರು. ಅಪಾತ್ರಕ್ಕೆ ಕೊಡುವುದೂ, ಸತ್ಪಾತ್ರಕ್ಕೆ ಕೊಡದಿರುವುದೂ, ಇವೆರಡೂ ನ್ಯಾಯಾರ್ಜಿತವಾದ ಧನಕ್ಕೆ ದುರುಪಯೋಗಗಳೆನಿಸುವುವು. ದಾನಮಾಡಲಾರದ ಧನಿಕನು, ನಮ್ರತೆಯಿಲ್ಲದ ಬಡವನು, ಇವರಿಬ್ಬರನ್ನೂ ಕುತ್ತಿಗೆಗೆ ಕಲ್ಲುಕಟ್ಟಿ ಕೊಳಕ್ಕೆ ಬಿಸಾಡಬೇಕು. ಯೋಗ್ಯನಿಷ್ಠನಾದ ಸನ್ಯಾಸಿಯೊಬ್ಬನು, ಯುದ್ಧದಲ್ಲಿ ಮಡಿದ ಯೋಧನೊಬ್ಬನು, ಇವರಿಬ್ಬರೂ ಸೂರ್ಯಮಂಡಲವನ್ನು ಭೇದಿಸಿಕೊಂಡು ಸದ್ಗತಿಗೆ ಹೋಗತಕ್ಕವರು.

೩

ಓ ಭರತಶ್ರೇಷ್ಠಾ! ಮನುಷ್ಯರಿಗೆ ಉತ್ತಮಾಧಮಮಧ್ಯಮಗಳೆಂಬ ಮೂರುಬಗೆಯ ಕಾರ್ಯಗಳುಂಟೆಂದು ವೇದಜ್ಞರ ಮತವು. ಮನುಷ್ಯರಲ್ಲಿಯೂ ಉತ್ತಮರೆಂದೂ, ಮಧ್ಯಮರೆಂದೂ, ಅಧಮರೆಂದೂ ಮೂರುಬಗೆಯವರುಂಟು. ಆದುದರಿಂದ ಈ ಮೂವರಲ್ಲಿ ಅವರವರನ್ನು ಅಂತಂತಹ ಕಾರ್ಯಗಳಿಗೇ ನಿಯೋಗಿಸಬೇಕು. ಓ ರಾಜಾ! ಯಜಮಾನನ ಕೈಕೆಳಗಿನ ಸೇವಕನೂ, ಗಂಡನ ಕೈಕೆಳಗಿನ ಹೆಂಡತಿಯೂ, ತಂದೆಯ ಕೈಕೆಳಗಿನ ಮಗನೂ, ಈ ಮೂವರೂ ಯಾವಾಗಲೂ ಸ್ವಂತ ಆಸ್ತಿಯಿಲ್ಲದವರು. ಒಂದುವೇಳೆ ಇವರಿಗೆ ಧನವು ಲಭಿಸಿದರೂ, ಆ ಧನವೆಲ್ಲ ಅವರು ಯಾರ ಕೈಕೆಳಗಿರುವರೋ ಅವರಿಗೇ ಸೇರಿದುದು. ಪರಸ್ವಾಪಹರಣ, ಪರಸ್ತ್ರೀಯರ ಸ್ಪರ್ಶ, ನಂಬಿದ ಮಿತ್ರರನ್ನು ನಿರಾಕರಿಸುವುದು, ಈ ಮೂರೂ ನಾಶಕಾರಣಗಳಾದ ದೋಷಗಳು. ಕಾಮ, ಕ್ರೋಧ, ಲೋಭಗಳೆಂಬಿವು ಮೂರೂ ನರಕದ ಬಾಗಿಲುಗಳು. ಆತ್ಮನಾಶಕ್ಕೆ ಕಾರಣಗಳಾದ ಇವು ಮೂರನ್ನೂ ತ್ಯಜಿಸಬೇಕು. ವರಪ್ರಾಪ್ತಿ, ರಾಜ್ಯಲಾಭ, ಪುತ್ರಜನನ, ಇವು ಮೂರೂ ಸಮಾನಗಳು. ಶತ್ರುವನ್ನು ಕಷ್ಟದಿಂದ ಬಿಡಿಸುವದೊಂದೇ (ಅಥವಾ ಶತ್ರುವಿನ ಕೈಯಿಂದ ತಪ್ಪಿಬರುವುದು) ಆ ಮೂರಕ್ಕೂ ಸಮಾನವು. ತನ್ನ ಮರೆಹೊಕ್ಕ ಭಕ್ತನನ್ನೂ, ತನ್ನನ್ನು ಸೇವಿಸುವವನನ್ನೂ, ನೀನೇ ಗತಿಯೆಂದು ಬಂದು ಬೇಡುವವನನ್ನೂ, ಈ ಮೂವರನ್ನೂ ತನಗೆ ಎಂತಹ ಸಂಕಟಕಾಲದಲ್ಲಿಯಾದರೂ ಕೈಬಿಡಬಾರದು.

೪

ಅಲ್ಪಜ್ಞನು, ತಾಮಸಸ್ವಭಾವದವನು, ಸೋಮಾರಿಯಾದವನು, ಮುಖಸ್ತುತಿಮಾಡುವವನು, ಈ ನಾಲ್ವರೊಡನೆ ಬಲಾಢ್ಯನಾದ ಅರಸನು ಮಂತ್ರಾಲೋಚನೆ ಮಾಡಬಾರದು. ಮಹಾರಾಜಾ! ಗೃಹಸ್ಥಧರ್ಮದಲ್ಲಿ ನೆಲೆಗೊಂಡು ಭಾಗ್ಯಸಮೃದ್ಧಿಯುಳ್ಳ ನಿನ್ನ ಗೃಹದಲ್ಲಿ, ವೃದ್ಧನಾದ ಜ್ಞಾತಿಯೂ, ಕಷ್ಟಕ್ಕೆ ಸಿಕ್ಕಿಬಿದ್ದ ಕುಲೀನನೂ, ಬಡವನಾದ ಮಿತ್ರನೂ, ಮಕ್ಕಳಿಲ್ಲದ ಸಹೋದರಿಯೂ ಇವರು ನಾಲ್ವರೂ ಯಾವಾಗಲೂ ಇರಲಿ! ಕೌರವೇಂದ್ರಾ! ಒಮ್ಮೆ ಇಂದ್ರನು ಪ್ರಶ್ನೆಮಾಡಿದುದರಮೇಲೆ ಬೃಹಸ್ಪತಿಯು ಒಡನೆಯೇ ಫಲವನ್ನು ತೋರಿಸತಕ್ಕವುಗಳು ನಾಲ್ಕೆಂದು ತಿಳಿಸಿರುವನು. ಅದನ್ನು ಹೇಳುವೆನು ಕೇಳು. ದೇವತಾಸಂಕಲ್ಪ, ಬುದ್ಧಿವಂತರ ಆಲೋಚನೆ, ವಿದ್ಯಾವಂತರ ವಿನಯ, ಪಾಪಕರ್ಮಿಗಳ ಕೆಟ್ಟ ಕೆಲಸಗಳು ಈ ನಾಲ್ಕೂ ಆಗಾಗಲೇ ಫಲವನ್ನು ತೋರಿಸತಕ್ಕವುಗಳು. ಅಗ್ನಿಹೋತ್ರ, ಮೌನ, ಅಧ್ಯಯನ, ಯಜ್ಞವೆಂಬೀ ನಾಲ್ಕು ಕರ್ಮಗಳೂ ಸರಿಯಾಗಿ ಮಾಡಿದರೆ ಭಯನಿವಾರಕಗಳು! ವಿಪರೀತವಾಗಿ ನಡೆದರೆ ಅವೇ ಮಹಾಭಯಕಾರಿಗಳು.

೫

ಮಹಾರಾಜಾ! ತಂದೆ, ತಾಯಿ, ಅಗ್ನಿ, ಆತ್ಮ, ಗುರುವೆಂಬೀ ಪಂಚಾಗ್ನಿಗಳನ್ನೂ ಮನುಷ್ಯನು ತನ್ನ ಕೈಲಾದಷ್ಟು ಶ್ರಮಪಟ್ಟು ಉಪಾಸನೆ ಮಾಡಬೇಕು. ದೇವತೆಗಳು, ಪಿತೃಗಳು, ಮನುಷ್ಯರು (ದೇಶಸಹೋದರರು) ಭಿಕ್ಷುಗಳು, ಅತಿಥಿಗಳು, ಈ ಐದುಮಂದಿಯನ್ನೂ ಪೂಜಿಸತಕ್ಕವನು ನಿರತಿಶಯವಾದ ಯಶಸ್ಸನ್ನು ಪಡೆಯುವನು. ರಾಜಾ! ನೀನು ಎಲ್ಲೆಲ್ಲಿ ಹೋದರೂ ಮಿತ್ರರೂ, ಶತ್ರುಗಳೂ, ಮಧ್ಯಸ್ಥರೂ, ಉಪಜೀವಿಗಳೂ, ನೀನು ಆಶ್ರಯಿಸಬೇಕಾದ ಹಿರಿಯರೂ, ಅಲ್ಲಲ್ಲಿ ನಿನ್ನನ್ನು ಸುತ್ತಿಕೊಂಡೇ ಇರುವರು. ಮನುಷ್ಯನ ಐದು ಇಂದ್ರಿಯಗಳಲ್ಲಿ ಒಂದು ಇಂದ್ರಿಯವು ಸಡಿಲಿ ಭಿನ್ನವಾದರೂ (ವಿಷಯಭೋಗಕ್ಕೆ ಅವಕಾಶಕೊಟ್ಟರೂ) ರಂಧ್ರಬಿದ್ದ ಚರ್ಮದ ಪಾತ್ರೆಯೊಳಗಿನ ನೀರಿನಂತೆ, ಅವನ ಪ್ರಜ್ಞೆಯು ಸೋರಿ ತಪ್ಪಿಹೋಗುವುದು.

೬

ತನಗೆ ಶ್ರೇಯಸ್ಸನ್ನು ಕೋರುವ ಮನುಷ್ಯನು, ನಿದ್ರೆ, ಸೋಮಾರಿತನ, ಭೀತಿ, ಕೋಪ, ಬೇಸರ, ತಾಮಸಸ್ವಭಾವ, (ನಿಧಾನವಾಗಿ ಕೆಲಸಮಾಡುವುದು) ಇವಾರು ದೋಷಗಳನ್ನೂ ತ್ಯಜಿಸಬೇಕು. ಬುದ್ಧಿಶಾಲಿಯಾದ ಮನುಷ್ಯನು ಸಮುದ್ರದಲ್ಲಿ ಒಡೆದುಹೋದ ನಾವೆಯನ್ನು ಹೇಗೋಹಾಗೆ, ವಾಕ್ಪಟುತ್ವವಿಲ್ಲದ ಗುರು, ವೇದಗಳನ್ನು ಕಲಿಯದ ಋತ್ವಿಕ್ಕು, ರಕ್ಷಣೆ ಮಾಡಲಾರದ ರಾಜನು, ಅಪ್ರಿಯವಾಗಿ ಮಾತಾಡತಕ್ಕ ಭಾರ್ಯೆ, ಯಾವಾಗಲೂ ಗ್ರಾಮವಾಸವನ್ನಪೇಕ್ಷಿಸತಕ್ಕ ಗೋಪಾಲನು, ಊರುಬಿಟ್ಟು ವನವಾಸವನ್ನೇ ಕೋರುವ ನಾಯಿಂದನು, ಈ ಆರು ಮಂದಿಯನ್ನೂ ತೊರೆದುಬಿಡಬೇಕು. ಮನುಷ್ಯನು, ಸತ್ಯ, ದಾನ, ಅನಾಲಸ್ಯ, ಅಸೂಯೆ, ತಾಳ್ಮೆ, ಧೈರ್ಯವೆಂಬೀ ಆರು ಗುಣಗಳನ್ನು ಯಾವಾಗಲೂ ಬಿಡಬಾರದು. ಪ್ರತಿದಿನವೂ ಧನಪ್ರಾಪ್ತಿ, ರೋಗವಿಲ್ಲದಿರುವಿಕೆ, ಪ್ರೀತಿಯುಳ್ಳ ಹೆಂಡತಿ, ಇಷ್ಟರಾದ ಬಂಧುಗಳು, ವಿಧೇಯನಾದ ಪುತ್ರನು, ಧನವನ್ನು ಕೊಡುವ ವಿದ್ಯೆ ಇವಾರೂ ಮನುಷ್ಯವರ್ಗಕ್ಕೆ ಸುಖಕಾರಿಗಳು. ಯಾವನು ಜಿತೇಂದ್ರಿಯನಾಗಿ, ಮನಸ್ಸಿನಲ್ಲಿ ನಿತ್ಯವಾಗಿ ನೆಲೆಗೊಂಡಿರುವ ಕಾಮ, ಕ್ರೋಧ, ಲೋಭ ಮೋಹ, ಮದ, ಮಾತ್ಸರ್ಯಗಳೆಂಬಿವಾರನ್ನೂ ಅಡಗಿಸಬಲ್ಲ ಶಕ್ತಿಯನ್ನು ಪಡೆಯುವನೋ, ಅವನನ್ನು ಪಾಪವೇ ಸ್ಪರ್ಶಿಸಲಾರದು. ಅವನು ಅನರ್ಥಗಳಿಗೆ ಗುರಿಯಾಗುವುದಿಲ್ಲವೆಂಬುದನ್ನು ಹೇಳಬೇಕಾದುದೇನು? ಮುಂದೆ ಹೇಳುವ ಈ ಆರು ಮಂದಿಯೂ ಆರುಮಂದಿಗಳಿಂದ ಬದುಕುತ್ತಿರುವರು. ಅದನ್ನುಬಿಟ್ಟರೆ ಅವರಿಗೆ ಏಳನೆಯದು ದೊರೆಯಲಾರದು. ಎಚ್ಚರತಪ್ಪಿ ಅಜಾಗ್ರತೆಯಾಗಿರುವವರಿಂದ ಕಳ್ಳನು, ರೋಗಿಗಳಿಂದ ವೈದ್ಯನು, ಕಾಮಿಗಳಿಂದ ಹೆಂಗಸರು, ಯಾಗಮಾಡತಕ್ಕ ಯಜಮಾನನಿಂದ ಯಾಜಕರು, ತಮ್ಮೊಳಗೆ ಜಗಳವಾಡುವವರಿಂದ ರಾಜನು, ಮೂರ್ಖರಿಂದ ಪಂಡಿತನು ಯಾವಾಗಲೂ ಬದುಕುತ್ತಿರುವರು. ಗೋರಕ್ಷಣೆ, ಸೇವಾವೃತ್ತಿ, ಕೃಷಿ, ಭಾರ್ಯೆ, ವಿದ್ಯೆ, ಶೂದ್ರರೊಡನೆ ಕೂಡುವಿಕೆ, ಇವಾರೂ ಮುಹೂರ್ತಕಾಲದವರೆಗೆ ಅಸಡ್ಡೆಯಾಗಿದ್ದರೂ ಕೆಟ್ಟುಹೋಗುವುವು. ವಿದ್ಯಾಭ್ಯಾಸವನ್ನು ಮುಗಿಸಿಕೊಂಡ ಶಿಷ್ಯರು ಆಚಾರ್ಯನನ್ನೂ, ಹೆಂಡತಿಯೊಡನೆ

ಸಂಸಾರಮಾಡುವ ಮಕ್ಕಳು ಹೆತ್ತ ತಾಯನ್ನೂ, ಕಾಮವನ್ನು ತೀರಿಸಿಕೊಂಡವರು ಹೆಂಗಸನ್ನೂ, ಸ್ವಪ್ರಯೋಜನವನ್ನು ಪಡೆದವರು ಅದರಲ್ಲಿ ತನಗೆ ಸಹಾಯಮಾಡಿದ್ದವನನ್ನೂ, ನೀರನ್ನು ದಾಟಿ ಕರೆಗೆ ಮುಟ್ಟಿದವನು ನಾವಿಕನನ್ನೂ, ರೋಗದಿಂದ ಗುಣಹೊಂದಿದವರು ವೈದ್ಯನನ್ನೂ, ಈ ಆರು ಮಂದಿಯೂ ತಮಗೆ ಉಪಕಾರಮಾಡಿದ ಆ ಆರುಮಂದಿಯನ್ನೂ ಕಾರ್ಯವಾದಮೇಲೆ ಅಸಡ್ಡೆಮಾಡಿ ಅವಮತಿಸುವರು. ರೋಗವಿಲ್ಲದಿರುವುದು, ಸಾಲವಿಲ್ಲದಿರುವುದು, ಇಷ್ಟಜನರಿಂದ ಅಗಲದಿರುವುದು, ಸಜ್ಜನರೊಡನೆ ಕೂಡಾಡುವುದು, ಸ್ವಬುದ್ಧಿನಿಶ್ಚಯದಂತೆ ವರ್ತಿಸುವುದು (ಸ್ವಬುದ್ಧಿಯಿಂದ ಜೀವಿಸುವುದು) ನಿರ್ಭಯವಾಗಿ ವಾಸಿಸುವುದು, ಇವಾರೂ ಜೀವಲೋಕಕ್ಕೆ ಸದಾ ಸುಖಕಾರಣಗಳು. ಅಸೂಯೆ, ಕನಿಕರ, ಕೋಪ, ಯಾವಾಗಲೂ ಸಂದೇಹಪ್ರಕೃತಿ, ಅತೃಪ್ತಿ, ಪರರ ಭಾಗ್ಯವನ್ನೇ ನಂಬಿ ಬದುಕುವುದು, ಈ ಸ್ವಭಾವವುಳ್ಳ ಈ ಆರುಮಂದಿಯೂ ಸದಾ ದುಃಖದಲ್ಲಿಯೇ ಇರುವರು.

೭

ಹೆಂಗಸರು, ಬೇಟೆ, ಜೂಜು, ಕುಡಿತ, ಮಾತಿನಲ್ಲಿ ಕಠಿನತೆ, ಕ್ರೂರವಾಗಿ ಶಿಕ್ಷಿಸುವುದು, ಹಣವನ್ನು ವ್ಯರ್ಥಮಾಡುವ ದುಂದುಗಾರಿಕೆ, ಇವೇಳೂ ರಾಜರಿಗೆ ಮೇಲೆಮೇಲೆ ಆಸೆಯನ್ನು ಹೆಚ್ಚಿಸತಕ್ಕ ಸಪ್ತವ್ಯಸನಗಳೆನಿಸುವುವು. ರಾಜ್ಯದಲ್ಲಿ ದೃಢವಾಗಿ ಬೇರೂರಿದ ರಾಜರನ್ನಾದರೂ ಇವು ಪ್ರಾಯಕವಾಗಿ ಕೆಡಿಸಿಬಿಡುವುದರಿಂದ, ರಾಜರು ಇವುಗಳನ್ನು ಬಿಟ್ಟುಬಿಡಬೇಕು.

೮

ಸ್ವಧರ್ಮನಿರತರಾದ ಬ್ರಾಹ್ಮಣರನ್ನು ಕಂಡರೆ ಸೇರದೆ ಮನಸ್ಸಿನಲ್ಲಿ ದ್ವೇಷಿಸುವುದು, ಆಮೇಲೆ ಕಾರ್ಯತಃ ಅವರನ್ನು ವಿರೋಧಿಸುವುದು, ಬ್ರಾಹ್ಮಣರ ಸ್ವತ್ತನ್ನು ಅಪಹರಿಸುವುದು, ಅವರನ್ನು ಕೊಲ್ಲುವುದಕ್ಕೆ ಉದ್ದೇಶಿಸುವುದು, ಅವರ ನಿಂದೆಯನ್ನು ಕೇಳಿ ಸಂತೋಷಿಸುವುದು, ಅವರ ಪ್ರಶಂಸೆಯನ್ನು ಕೇಳಿ ರೇಗುವುದು, ನಡೆಸಬೇಕಾದ ವೈದಿಕಕೃತ್ಯಗಳಲ್ಲಿ ಅವರನ್ನು ನೆನೆಸದಿರುವುದು, ಅವರು ತಾವಾಗಿ ಯಾಚಿಸುವುದಕ್ಕೆ ಬಂದರೂ ಕೋಪಗೊಳ್ಳುವುದು, ಇವೆಂಟೂ ಮುಂದೆ ಪೂರ್ಣವಾಗಿ ಕೆಟ್ಟುಹೋಗತಕ್ಕ

ಮನುಷ್ಯನಲ್ಲಿ ಕಾಣುವ ಪೂರ್ವಸೂಚನೆಗಳು. ವಿವೇಕವುಳ್ಳ ಮನುಷ್ಯನು ಈ ದೋಷಗಳನ್ನು ಚೆನ್ನಾಗಿ ನೆನಪಿಟ್ಟುಕೊಂಡು, ಅವುಗಳನ್ನು ಬಿಟ್ಟು ಬಿಡಬೇಕು.

ಮಿತ್ರರೊಡನೆ ಸೇರುವುದೂ, ಅಧಿಕವಾದ ಧನಲಾಭವೂ, ಪುತ್ರರ ಆಲಿಂಗನವೂ, ನಿಜವಾದ ಪ್ರೇಮವುಳ್ಳ ದಂಪತಿಗಳ ರತಿಭೋಗವೂ, ತಕ್ಕ ಸಮಯದಲ್ಲಿ ಪ್ರಿಯವಾದ ಸಲ್ಲಾಪವೂ, ತನ್ನ ಕಡೆಯವರಿಗೆ ಲಭಿಸಿದ ಮೇಲ್ಮೆಯೂ, ಇಷ್ಟವಸ್ತುವಿನ ಲಾಭವೂ, ಜನಗಳ ಗುಂಪಿನಲ್ಲಿ ಪೂಜ್ಯತೆಯೂ ಇವೆಂಟೂ ಆತ್ಮಸುಖಕಾರಣಗಳಾದ ಸಂತೋಷದ ಕೆನೆಗಳೆಂದು ಎಣಿಸಲ್ಪಟ್ಟಿವೆ. ಪ್ರಜ್ಞೆ, ಕುಲೋನ್ನತಿ, ಇಂದ್ರಿಯನಿಗ್ರಹ, ಶಾಸ್ತ್ರಶ್ರವಣ, ಪರಾಕ್ರಮ, ಹೆಚ್ಚಾಗಿ ಮಾತಾಡದಿರುವುದು, ಯಥಾಶಕ್ತಿ ದಾನ ಮಾಡುವುದು, ಇತರರು ತನಗೆ ಮಾಡಿದ ಉಪಕಾರವನ್ನು ಮರೆಯದಿರುವ ಕೃತಜ್ಞತೆ, ಇವೆಂಟು ಗುಣಗಳೂ ಮನುಷ್ಯನನ್ನು ಪ್ರಕಾಶಕ್ಕೆ ತರುವುವು.

೯

ಓ ಮಹಾರಾಜಾ! ಒಂಭತ್ತು ದ್ವಾರಗಳಿಂದಲೂ, (ಇಳೆ, ಪಿಂಗಳೆ, ಸುಷುಮ್ನೆಯೆಂಬ) ಮೂರು ಕಂಭಗಳಿಂದಲೂ, ಪಂಚೇಂದ್ರಿಯಗಳೆಂಬ ಐದು ಸಾಕ್ಷಿಗಳಿಂದಲೂ ಕೂಡಿ ಕ್ಷೇತ್ರಜ್ಞನೆಂದು ಕರೆಯಲ್ಪಡುವ ಜೀವನಿಗೆ ನಿವಾಸವಾದ ಈ ಶರೀರವೆಂಬ ಗೃಹವನ್ನು ಯಾವನು ತತ್ವದಿಂದ ತಿಳಿಯುವನೋ ಅವನೇ ಮೇಲಾದ ವಿದ್ವಾಂಸನೆನಿಸುವನು.

೧೦

ಓ ಧೃತರಾಷ್ಟ್ರಮಹಾರಾಜಾ! ಮತ್ತೇರಿದವನು, ಎಚ್ಚರತಪ್ಪಿದವನು, ಹುಚ್ಚುಹಿಡಿದವನು, ಬಳಲಿದವನು, ಕೋಪಗೊಂಡವನು, ಹಸಿದವನು, ಆತುರಗೊಂಡವನು, ಲೋಭಿ, ಭಯಗೊಂಡವನು, ಕಾಮಾತುರವುಳ್ಳವನು, ಈ ಹತ್ತು ಮಂದಿಯೂ ಧರ್ಮವೇನೆಂಬುದನ್ನೇ ತಿಳಿಯಲಾರರು. ಆದುದರಿಂದ ಪಂಡಿತನಾದವನು ಮೇಲೆ ಹೇಳಿದ ಮದ ಲೋಭಾದಿಗಳಲ್ಲಿ ಸಿಕ್ಕಿ ಬೀಳಬಾರದು. ಇದೇ ವಿಷಯದಲ್ಲಿ ಪೂರ್ವದ ಒಂದು ಇತಿಹಾಸವನ್ನು ಉದಾಹರಿಸುವರು. ಅಸುರಶ್ರೇಷ್ಠನಾದ ಪ್ರಹ್ಲಾದನಿಗೂ,

ಸುಧನ್ವನಿಗೂ (ಪ್ರಹ್ಲಾದಪುತ್ರನಾದ) ವಿರೋಚನನ ವಿಷಯವಾಗಿ ನಡೆದ ಸಂವಾದಗಳನ್ನೊಳಕೊಂಡ ಒಂದು ಇತಿಹಾಸವುಂಟು! ಯಾವ ರಾಜನು ಕಾಮ ಕ್ರೋಧಗಳನ್ನು ಪೂರ್ಣವಾಗಿ ಬಿಟ್ಟು, ಸತ್ಪಾತ್ರದಲ್ಲಿ ಧನವನ್ನು ವಿನಿಯೋಗಿಸುವನೋ, ಮತ್ತು ಅನೇಕ ವಿಷಯಗಳನ್ನು ತಿಳಿದು, ಶಾಸ್ತ್ರಗಳನ್ನೋದಿ, ಕಾರ್ಯಗಳನ್ನು ಕ್ಷಿಪ್ರವಾಗಿ ನಡೆಸುವನೋ, ಅಂತಹ ಅರಸನನ್ನು ಎಲ್ಲಾ ಮನುಷ್ಯರೂ ಪ್ರಮಾಣವಾಗಿ ತೆಗೆದುಕೊಳ್ಳುವರು. ಯಾವ ರಾಜನು ಪ್ರಜೆಗಳಿಗೆ ತನ್ನಲ್ಲಿ ನಂಬಿಕೆಯುಂಟಾಗುವಂತೆ ಮಾಡಬಲ್ಲನೋ, ತಪ್ಪನ್ನು ಕಂಡಾಗ ಅವರವರಿಗೆ ತಕ್ಕ ಶಿಕ್ಷೆಯನ್ನು ಕೊಡುವನೋ, ಯಾವನು ತಾನು ಕೊಡಬೇಕಾದ ಶಿಕ್ಷೆಯ ಪ್ರಮಾಣವನ್ನೂ, ಶಿಕ್ಷೆ ವಿಧಿಸುವುದರಲ್ಲಿ ಸಮಯೋಚಿತವಾಗಿ ತೋರಿಸಬೇಕಾದ ಕ್ಷಮೆಯನ್ನೂ, ಚೆನ್ನಾಗಿ ತಿಳಿದಿರುವನೋ, ಅವನನ್ನು ಭಾಗ್ಯಲಕ್ಷ್ಮಿಯು ಪೂರ್ಣವಾಗಿ ಆಶ್ರಯಿಸುವಳು. ಯಾವ ರಾಜನು ಕೇವಲ ದುರ್ಬಲನಾದ ಶತ್ರುವನ್ನಾದರೂ ಅಲಕ್ಷ್ಯಮಾಡದಿರುವನೋ, ಮತ್ತು ಶತ್ರುಗಳ ದೋಷಗಳನ್ನು ತಿಳಿದುಕೊಂಡು ಬುದ್ಧಿಪೂರ್ವಕವಾಗಿ ಆಯಾ ಶತ್ರುಗಳಲ್ಲಿ ಬಹಳ ಬುದ್ಧಿವಂತಿಕೆಯಿಂದ ಪ್ರವರ್ತಿಸುವನೋ, ಯಾವನು ತನಗಿಂತಲೂ ಬಲಾಢ್ಯರೊಡನೆ ಯುದ್ಧಕ್ಕೆ ಆಸೆಪಡದೆ, ಅನುಕೂಲಕಾಲದಲ್ಲಿ ತನ್ನ ಪರಾಕ್ರಮವನ್ನು ತೋರಿಸುವನೋ ಅಂತವನೇ ಧೀರನೆನಿಸುವನು. ಯಾವ ರಾಜನು ಕಷ್ಟದಶೆಯಲ್ಲಿಯೂ ಎದೆಗುಂದದಿರುವನೋ, ಎಚ್ಚರತಪ್ಪದೆ ಕಾರ್ಯಪ್ರಯತ್ನವನ್ನು ಮಾಡುವನೋ, ಸಮಯದಲ್ಲಿ ಎಂತಹ ದುಃಖವನ್ನಾದರೂ ಸಹಿಸಿಕೊಂಡು ಕಾರ್ಯಭಾರಕ್ಕೆ ತಲೆಯನ್ನು ಕೊಡುವನೋ, ಅಂತವನಿಗೆ ಶತ್ರುಗಳು ಜಿತರಾದಂತೆಯೇ ತಿಳಿ. ಯಾವನು ಪ್ರಯೋಜನವಿಲ್ಲದೆ ಮನೆಯನ್ನು ಬಿಟ್ಟು ದೇಶಾಂತರವಾಸವನ್ನೂ, ಪಾಪಾತ್ಮರೊಡನೆ ಸಹವಾಸವನ್ನೂ, ಪರಸ್ತ್ರೀಯರ ಸ್ಪರ್ಶವನ್ನೂ, ಡಂಭ, ಕಳವು, ಚಾಡಿ, ಮದ್ಯಪಾನವೆಂಬೀ ದುರ್ಗುಣಗಳನ್ನೂ ಬಿಟ್ಟುಬಿಡುವನೋ, ಅಂತವನು ನಿತ್ಯಸುಖಿಯೆನಿಸುವನು. ವಿವೇಕಿಯಾದವನು ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳಿಗಾಗಿ ಆತುರದಿಂದ ಕಾರ್ಯವನ್ನಾರಂಭಿಸಲಾರನು. ಕರೆದು ಕೇಳಿದವರಿಗೆ ಮಾತ್ರ ಸತ್ಯವನ್ನೇ ನುಡಿಯುವನು. ಮಿತ್ರರ ವಿಷಯದಲ್ಲಿ ವಿವಾದಕ್ಕೆ ಇಷ್ಟಪ

ಡುವುದಿಲ್ಲ. ತನಗೆ ಇತರರು ಗೌರವವನ್ನು ಕೊಡಲಿಲ್ಲವೆಂದು ಕೋಪಿಸು ವುದೂ ಇಲ್ಲ. ಯಾವನು ಮತ್ತೊಬ್ಬರ ವಿಷಯದಲ್ಲಿ ಯಾವ ಸಂದರ್ಭ ದಲ್ಲಿಯೂ ಕೋಪಿಸದೆ ಕನಿಕರವನ್ನೇ ತೋರಿಸುವನೋ, ತಾನು ದುರ್ಬಲ ನೆಂದು ತಿಳಿದಿದ್ದು ಮತ್ತೊಬ್ಬರೊಡನೆ ಕಲಹವನ್ನಾರಂಭಿಸುವುದಿಲ್ಲವೋ, ಯಾವನು ಹದ್ದು ಮೀರಿ ಮಾತಾಡದೆ ಕಲಹವು ಬಂದಾಗಲೂ ತಾಳ್ಮೆಯಿಂ ದಿರುವನೋ, ಅಂತವನು ಎಲ್ಲಾ ಕಡೆಗಳಲ್ಲಿಯೂ ಮೆಚ್ಚಿಕೆಯನ್ನೇ ಪಡೆ ಯುವನು. ಯಾವನು ಡಾಂಭಿಕವಾದ ವೇಷವನ್ನು ಯಾವಾಗಲೂ ತೋ ರಿಸುವುದಿಲ್ಲವೋ, ಯಾವನು ತನಗೆ ಪೌರುಷವಿದ್ದಾಗಲೂ ಆತ್ಮಸ್ತುತಿಯಿಂ ದ ಇತರರನ್ನು ಧಿಕ್ಕರಿಸುವುದಿಲ್ಲವೋ, ಯಾವನು ತನ್ನನ್ನು ರೇಗಿಸಿದಾಗ ಲೂ ಕಠಿನವಾಕ್ಯಗಳನ್ನಾಡುವುದಿಲ್ಲವೋ, ಅವನನ್ನು ಯಾವಾಗಲೂ ಜನರು ಪ್ರೀತಿಸುವರು. ಒಮ್ಮೆ ಶಾಂತವಾದ ಕಲಹವನ್ನು ತಿರುಗಿ ಎಬ್ಬಿಸದೆ, ಬಹಳ ಹೆಮ್ಮೆಯನ್ನಾಗಲಿ, ಬಹಳ ತಾಳ್ಮೆಯನ್ನಾಗಲಿ ವಹಿಸದೆ, ಎಷ್ಟೇ ಹೀನದಶೆಯಲ್ಲಿರುವಾಗಲೂ ಮಾಡಬಾರದ ಕಾರ್ಯವನ್ನು ಮಾಡದವ ನನ್ನು ಸತ್ಪುರುಷರು ಬಹಳ ಉತ್ತಮಶೀಲನೆಂದು ಹೇಳುವರು. ಯಾವನು ತನ್ನ ಸುಖವನ್ನಾಗಲಿ, ಇತರರ ದುಃಖವನ್ನಾಗಲಿ ನೋಡಿ ಸಂತೋಷಿಸು ವುದಿಲ್ಲವೋ, ಯಾವನು ದಾನವನ್ನು ಕೊಟ್ಟಮೇಲೆ ಅದಕ್ಕಾಗಿ ಪಶ್ಚಾತ್ತಾ ಪಪಟ್ಟು ಕೊರಗುವುದಿಲ್ಲವೋ ಅಂತವನು ಸಚ್ಚರಿತ್ರನೆನಿಸುವನು. ಯಾವ ನು ಬೇರೆಬೇರೆ ದೇಶಾಚಾರಗಳನ್ನೂ, ಬೇರೆಬೇರೆ ಸಿದ್ಧಾಂತಗಳನ್ನೂ, ವಿವಿ ಧ ಜಾತಿಧರ್ಮಗಳನ್ನೂ, ಉಚ್ಚನೀಚ ವಿಷಯಗಳನ್ನೂ ತಿಳಿಯಲು ಅಕ್ಕರೆ ಯುಳ್ಳವನಾಗಿರುವನೋ, ಅಂತವನು ಹೋದಕಡೆಗಳಲ್ಲೆಲ್ಲ ಮಹಾಜನಗಳ ಗುಂಪಿನಲ್ಲಿ ತಾನೇ ಉತ್ತಮಸ್ಥಾನವನ್ನು ಪಡೆಯುವನು. ಮಹಾರಾಜಾ! ಬುದ್ಧಿಶಾಲಿಯಾದ ಯಾವನು, ಡಂಭ, ಮೋಹ, ಮತ್ಸರ, ಪಾಪ, ರಾಜ ದ್ರೋಹ, ಕಪಟವೃತ್ತಿ, ಅನೇಕರೊಡನೆ ವೈರ, ಹೊದಲಾದ ದುರ್ಗುಣಗಳಿಗೆ ತನ್ನಲ್ಲಿ ಅವಕಾಶಕೊಡದಿರುವನೋ, ಮತ್ತು ಮದ್ಯಪಾನಮಾಡಿ ಮದಿಸಿ ದವರು, ಹುಚ್ಚುಹಿಡಿದವರು, ಇಂತವರೊಡನೆ ವಾದಕ್ಕೆ ಪ್ರವರ್ತಿಸುವುದಿಲ್ಲ ವೋ ಅಂತವನು ಸಜ್ಜನರಲ್ಲಿ ಮೇಲೆನಿಸುವನು. ಯಾವನು ಇಂದ್ರಿಯನಿ ಗ್ರಹ, ಆಚಾರಶೀಲತೆ, ಮಂಗಳಕಾರ್ಯಗಳು, ದೇವತಾಪೂಜೆಗಳು, ಲೌಕಿ

ಕಗಳಾದ ವಿವಿಧ ಪ್ರಾಯಶ್ಚಿತ್ತಗಳು, ಇವುಗಳನ್ನು ತನ್ನ ನಿತ್ಯಕಾರ್ಯಗ ಳನ್ನಾಗಿ ನಡೆಸುವನೋ ಅವನಿಗೆ ದೇವತೆಗಳು ಮೇಲ್ಮೆಯನ್ನುಂಟುಮಾ ಡುವರು. ಯಾವನು ತನಗಿಂತಲೂ ಹೀನರಾದವರಲ್ಲಿ ವಿವಾಹಸಂಬಂಧ ವನ್ನು ಬೆಳೆಸದೆ, ತನಗೆ ಸಮಾನರಲ್ಲಿಯೇ ವಿವಾಹಾದಿ ಸಂಬಂಧವನ್ನೂ, ತನಗೆ ಸಮಾನರೊಡನೆಯೇ ಸ್ನೇಹವನ್ನೂ, ನಡೆವಳಿಕೆಯನ್ನೂ, ಸಂಭಾ ಷಣಗಳನ್ನೂ ನಡೆಸುವನೋ, ಯಾವನು ಗುಣವಂತರನ್ನೇ ಪುರಸ್ಕರಿಸು ತ್ತಿರುವನೋ, ಅಂತವನ ಕಾರ್ಯಗಳೆಲ್ಲವೂ ಚೆನ್ನಾಗಿ ನಡೆದು ಫಲಕಾರಿಗ ಳಾಗುವುವು. ಯಾವನು ತನ್ನ ಆಶ್ರಿತರಿಗೆಲ್ಲ ಹಂಚಿಕೊಟ್ಟು, ತಾನು ಮಿತ ವಾಗಿ ಭೋಜನಮಾಡುವನೋ, ಯಾವನು ಹೆಚ್ಚುಕಾಲ ಕೆಲಸಮಾಡಿ ಸ್ವಲ್ಪಕಾಲ ನಿದ್ರಿಸುವನೋ, ಯಾವನು ತನ್ನಲ್ಲಿ ಯಾಚನೆಗೆ ಬಂದ ಶತ್ರು ಗಳಿಗಾದರೂ ಸಮಯದಲ್ಲಿ ಕೊಟ್ಟು ಸಹಾಯಮಾಡುವನೋ, ಅಂತವನು ಜಿತೇಂದ್ರಿಯನೆನಿಸಿಕೊಂಡು, ಅನರ್ಥಗಳಿಗೆ ಒಳಗಾಗದಂತಿರುವನು. ಯಾ ವನ ಕಾರ್ಯಾಲೋಚನೆಗಳೂ, ಪ್ರವರ್ತನೆಗಳೂ ಆ ಕಾರ್ಯಸಾಧನೆಯಾ ಗುವವರೆಗೆ ಬೇರೊಬ್ಬರಿಗೆ ಸ್ವಲ್ಪಮಾತ್ರವೂ ತಿಳಿಯದಂತಿರುವುದೋ ಅವನಿ ಗೆ ಯಾವಕಾರ್ಯವಾದರೂ ವಿಫಲವಾಗದೆ ಜಯವಾಗುವುದು. ಯಾವನು ಬೇರೆ ಯಾವ ಭೂತಗಳಿಗೂ ಉಪದ್ರವವನ್ನುಂಟುಮಾಡದಿರುವನೋ, ಯಾವನಲ್ಲಿ ಸತ್ಯ, ಮೃದುತ್ವ, ಔದಾರ್ಯ, ಮನಶ್ಶುದ್ಧಿ, ಈ ಗುಣಗಳೆಲ್ಲ ಇರುವುವೋ ಅಂತವನು ಒಳ್ಳೇ ಶುದ್ಧವಾದ ಉತ್ತಮಜಾತಿಯ ರತ್ನದಂತೆ ತನ್ನ ಸಂಗಡದವರಲ್ಲಿ ಪ್ರಕಾಶಕ್ಕೆ ಬರುವನು. ಯಾವನು ತನ್ನಲ್ಲಿರುವ ದೋಷವು ಬೇರೆಯುವರಿಗೆ ತಿಳಿಯದೆ ಇರುವಾಗಲೂ ಆ ತಪ್ಪಿತಕ್ಕಾಗಿ ತನ್ನೊಳಗೆ ತಾನೇ ನಾಚಿಕೆಪಡುವನೋ ಅವನು ಸಮಸ್ತಲೋಕಕ್ಕೂ ಪೂ ಜ್ಯನೆನಿಸುವನು. ಮತ್ತು ಯಾವನು ಒಳ್ಳೇ ಶುದ್ಧವಾದ ಹೃದಯವುಳ್ಳವ ನಾಗಿ, ಎಣೆಯಿಲ್ಲದ ತೇಜಸ್ಸುಳ್ಳವನಾಗಿ, ಯಾವಾಗಲೂ ಮನಸ್ಸಮಾಧಾನ ವುಳ್ಳವನಾಗಿರುವನೋ, ಅವನು ಲೋಕದಲ್ಲಿ ಸೂರ್ಯನಂತೆ ಬೆಳಗುವನು. ಓ ಧೃತರಾಷ್ಟ್ರಮಹಾರಾಜಾ! ಹಿಂದೆ ಪಾಂಡುವು ಋಷಿಶಾಪದಿಂದ ಬೆಂದು ಕಾಡಿನಲ್ಲಿರುವಾಗ, ಅವನಿಗೆ ದೇವತಾನುಗ್ರಹದಿಂದ ಇಂದ್ರನಿಗೆಣೆಯೆನಿಸಿದ ಐದುಮಂದಿ ಕುಮಾರರು ಹುಟ್ಟಿದರು. ಆ ಐದುಮಂದಿ ಮಕ್ಕಳೂ ನಿನ್ನಿಂ

ದಲೇ ಪೋಷಿಸಲ್ಪಟ್ಟು, ನಿನ್ನಿಂದಲೇ ಮುಂದಕ್ಕೆ ಬಂದವರು. ಅವರನ್ನು ಒಳ್ಳೇ ಸುಶಿಕ್ಷಿತರನ್ನಾಗಿ ಮಾಡಿದವನೂ ನೀನೇ! ಆ ಕೃತಜ್ಞತೆಯನ್ನು ಮರೆಯದೆ ಅವರು ಈಗಲೂ ನಿನ್ನ ಆಜ್ಞೆಗೆ ಕಟ್ಟುಬಿದ್ದು ನಡೆಯತಕ್ಕವರು. ಆದುದರಿಂದ ಅವರಿಗೆ ಸೇರಬೇಕಾದ ಅವರ ತಂದೆಯ ರಾಜ್ಯವನ್ನು ಕೊಡಿಸಿ ಬಿಟ್ಟು, ನಿನ್ನ ಮಕ್ಕಳೊಡನೆ ನೀನು ಸುಖವಾಗಿರು. ಹಾಗೆ ಮಾಡಿದರೆ ಮಾತ್ರವೇ ನೀನು ದೇವತೆಗಳ ಮತ್ತು ಮನುಷ್ಯರ ನಿಂದೆಗೆ ಗುರಿಯಾಗದಿರುವೆ'' ಎಂದನು.

ಇದು ಮೂವತ್ತುಮೂರನೆಯ ಅಧ್ಯಾಯವು.



ಧೃತರಾಷ್ಟ್ರನು ತನ್ನ ಪುತ್ರರ ಕ್ಷೇಮಕ್ಕೆ ಮಾರ್ಗವೇನೆಂಬುದನ್ನು ತಿರುಗಿ ವಿದುರನನ್ನು ಕೇಳಿದುದು.
ವಿದುರನ ನೀತಿವಾಕ್ಯಗಳು.

ಧೃತರಾಷ್ಟ್ರನು ವಿದುರನನ್ನು ಕುರಿತು "ವಿದುರಾ! ನನಗೆ ಇನ್ನೂ ನಿದ್ರೆ ಬರುವ ಹಾಗಿಲ್ಲ. ನನ್ನ ಹೃದಯವು ಚಿಂತಾಗ್ನಿಯಿಂದ ಬೇಯುತ್ತಿದೆ. ಮುಂದೆ ನಮಗೆಲ್ಲ ಶ್ರೇಯಸ್ಕರವಾದ ದಾರಿಯೇನೆಂಬುದನ್ನು ತಿಳಿಸಬೇಕು. ನೀನು ನಮ್ಮ ಕುಲದಲ್ಲಿ ಬಹಳ ಶುದ್ಧಾತ್ಮನು. ಧರ್ಮಾರ್ಥಗಳ ಮರ್ಮವನ್ನು ತಿಳಿಸುವುದರಲ್ಲಿ ನಿಪುಣನು. ಆದುದರಿಂದ ನಿನ್ನ ಬುದ್ಧಿಯಿಂದಾಲೋಚಿಸಿ, ಅಜಾತಶತ್ರುವಾದ ಆ ಧರ್ಮರಾಜನಿಗೆ ಸಮ್ಮತವಾಗಿಯೂ, ನಮ್ಮ ಕೌರವರೆಲ್ಲರಿಗೂ ಶ್ರೇಯಸ್ಕರವಾಗಿಯೂ ಇರುವ ಮಾರ್ಗವಾವುದೋ ಅದನ್ನು ನನಗೆ ತಿಳಿಸಬೇಕು. ಅಪಾಯಭಯದಿಂದ ಕೊರಗುತ್ತಿರುವ ನಾನು, ನನ್ನ ಹಿಂದಿನ ಅಕೃತ್ಯಗಳಿಗಾಗಿ ಪಶ್ಚಾತ್ತಾಪಪಟ್ಟು ನಿನ್ನನ್ನು ಕೇಳುವೆನು. ನನ್ನ ಹೃದಯವು ಬಹಳವಾಗಿ ಕಳವಳಿರುತ್ತಿರುವುದು. ಆ ಧರ್ಮರಾಜನ ಮನಸ್ಸಿನಲ್ಲಿರುವ ಅಭಿಪ್ರಾಯವೇನೆಂಬುದನ್ನು ನೀನು ನನಗೆ ತಿಳಿಸಬೇಕು'' ಎಂದನು.

ಅದಕ್ಕಾ ವಿದುರನು "ರಾಜಾ! ತನಗೆ ಅವಮಾನವಾಗಬಾರದೆಂಬ ಇಷ್ಟವುಳ್ಳವನು, ತನ್ನ ಮಾತು ಇತರರಿಗೆ ಒಳ್ಳೆಯದಾಗಿರಲಿ, ಅಥವಾ ಕೆಟ್ಟದಾಗಿರಲಿ, ಪ್ರಿಯವಾಗಿರಲಿ ಅಥವಾ ಅಪ್ರಿಯವಾಗಿರಲಿ, ತನ್ನನ್ನು ಕೇಳದಿದ್ದಾಗ ತಾನಾಗಿ ಯಾವನಿಗೂ ಹೇಳಬಾರದು. ಆದುದರಿಂದ ನೀನಾಗಿ ಈಗ ಕೇಳಿದುದರಮೇಲೆ, ಕೌರವರಿಗೆ ಹಿತವೂ, ಶ್ರೇಯಸ್ಕರವೂ, ಧರ್ಮಸಮ್ಮತವೂ ಆದ ಉಪಾಯವೇನೆಂಬುದನ್ನು ಹೇಳುವೆನು ಕೇಳು! ಸರಿಯಾದ ಧರ್ಮಮಾರ್ಗದಿಂದಲ್ಲದೆ ಕಪಟದಿಂದ ಸಿದ್ಧಿಸಬಹುದಾದ ಕಾರ್ಯಗಳು ಯಾವುದಿದ್ದರೂ ಅವುಗಳಿಗೆ ನೀನು ಬಯಸಲೇ ಬಾರದು. ಅದರಂತೆಯೇ, ಸರಿಯಾದ ದಾರಿಯಿಂದ ಬುದ್ಧಿಯನ್ನುಪಯೋಗಿಸಿ ನಡೆಸಿದರೂ ಯಾವ ಕಾರ್ಯವು ಕೈಗೂಡುವಹಾಗೆ ತೋರುವುದಿಲ್ಲವೋ ಅಂತಹ ಕಾರ್ಯಗಳಿಗಾಗಿಯೂ ಮನಸ್ಸನ್ನು ಕ್ಲೇಶಪಡಿಸಬಾರದು. ಫಲಕಾರಿಗಳಾಗಬಹುದಾದ ಕಾರ್ಯಗಳಲ್ಲಿಯೂ, ಅವುಗಳ ಪ್ರಯೋಜನಗಳನ್ನೆಲ್ಲ ಚೆನ್ನಾಗಿ ಪರ್ಯಾಲೋಚಿಸಬೇಕು. ನಿಶ್ಚಯಬುದ್ಧಿಯುಂಟಾದಮೇಲೆ ಅವುಗಳಲ್ಲಿ ಕೈಯಿಕ್ಕಬೇಕೇಹೊರತು, ಆತುರಪಟ್ಟು ಕೆಲಸಮಾಡಬಾರದು. ವಿದ್ವಾಂಸನಾದವನು ತಾನು ನಡೆಸತಕ್ಕ ಕಾರ್ಯಗಳಲ್ಲಿ ತನಗೆ ಲಭಿಸಬಹುದಾದ ಅನುಕೂಲಫಲವನ್ನೂ, ವಿಪರೀತ ಫಲವನ್ನೂ, ತನ್ನ ಪುರೋವೃದ್ಧಿಯನ್ನೂ ಚೆನ್ನಾಗಿ ಯೋಚಿಸಿಕೊಂಡು ಕಾರ್ಯವನ್ನು ನಡೆಸಬೇಕು. 'ಅಥವಾ ಬಿಟ್ಟುಬಿಡಬೇಕು. ಯಾವ ರಾಜನು ತನ್ನ ಕ್ಷಯ, ಸ್ಥಾನ, ವೃದ್ಧಿಗಳೆಂಬ (ಕ್ಷೀಣದಶೆ, ಅಭಿವೃದ್ಧಿದಶೆ, ಸಮಾನಸ್ಥಿತಿ) ತ್ರಿವರ್ಗಗಳ ಮತ್ತು ಭಂಡಾರ, ಸೈನ್ಯ, ದೇಶ ಇವುಗಳ ಪ್ರಮಾಣವನ್ನು (ಅಳತೆಯನ್ನು) ತಿಳಿಯದಿರುವನೋ, ಅವನು ರಾಜ್ಯದಲ್ಲಿ ನೆಲೆಯಾಗಲಾರನು. ಹಾಗಿಲ್ಲದೆ, ಯಾವನು ಇವುಗಳ ಹೆಚ್ಚುಕಡಿಮೆಗಳನ್ನು ತಿಳಿಯುತ್ತ, ಧರ್ಮಾರ್ಥಗಳನ್ನು ಚೆನ್ನಾಗಿ ಪರಿಶೀಲಿಸುತ್ತಿರುವನೋ, ಅವನು ರಾಜ್ಯದಲ್ಲಿ ಸ್ಥಿರವಾಗಿರುವವನು. ತನ್ನ ಕೈಗೆ ರಾಜ್ಯವು ದಕ್ಕಿತೆಂದು ರಾಜನು ಹೆಮ್ಮೆಗೊಳ್ಳಬಾರದು. ಮುಪ್ಪು ಮನುಷ್ಯನ ರೂಪವನ್ನು ಕೆಡಿಸುವಂತೆ, ಅನೀತಿಯು ರಾಜನ ಸಂಪತ್ತನ್ನು ನಾಶಮಾಡುವುದು. ಆಹಾರಲ್ಲಿ ಅಪೇಕ್ಷೆಯುಳ್ಳ ಮೀನು ಮುಂದೆಬರುವ ಪರಿಣಾಮವೇನೆಂದು ತಿಳಿಯಲಾರದೆ, ತನಗೆ ಪ್ರಿಯವಾದ ಆಹಾರದಲ್ಲಿ

ಮುಚ್ಚಿಡಲ್ಪಟ್ಟ ಕೊಕ್ಕೆಯನ್ನು ಬಾಯಿಕ್ಕಿ ನುಂಗುವುದರಿಂದ, ಮೃತ್ಯು ವಿನ ಪಾಲಾಗುವುದಲ್ಲವೇ? ಆದುದರಿಂದ ತನ್ನ ಕ್ಷೇಮವನ್ನು ಬಯಸತಕ್ಕವನು, ತನಗೆ ತಿನ್ನುವುದಕ್ಕೆ ಯೋಗ್ಯವಾಗಿ, ತಿನ್ನಲು ಸಾಧ್ಯವಾಗಿ, ತಿಂದಮೇಲೆ ಸುಖವಾಗಿ ಜೀರ್ಣಿಸತಕ್ಕುದಾಗಿ, ಜೀರ್ಣಿಸುವಾಗ ಹಿತಕರವಾಗಿಯೂ ಇರುವ ಆಹಾರವನ್ನೇ ಭುಜಿಸಬೇಕು. ಗಿಡದಲ್ಲಿ ಚೆನ್ನಾಗಿ ಮಾಗದ ಹಣ್ಣುಗಳನ್ನು ಕುಯ್ದು ಉಪಯೋಗಿಸಿದರೆ ಅವನಿಗೆ ಅದರ ರುಚಿಯು ಸಿಕ್ಕಲಾರದು. ಅದರ ಬೀಜವೂ ನಷ್ಟವಾಗುವುದು. ಹಾಗಿಲ್ಲದೆ ಸಕಾಲದಲ್ಲಿ ಪಕ್ವವಾದ ಫಲವನ್ನು ಕುಯ್ದು ತಿಂದರೆ, ಅದರ ರುಚಿಯನ್ನು ಅನುಭವಿಸಬಹುದು. ಆ ಬೀಜವು ಮುಂದಿನ ಫಲಕ್ಕೂ ಕಾರಣವಾಗುವುದು. ಜೇನುನೊಣಗಳು ಹೂಗಳನ್ನು ಸ್ವಲ್ಪವಾದರೂ ನೋಯಿಸದೆ ಅದರೊಳಗಣ ಜೇನನ್ನು ಸವಿಯುವಂತೆ, ರಾಜನು ಪ್ರಜೆಗಳಿಗೆ ಅಹಿಂಸೆಯಿಲ್ಲದೆ, ಅವರಿಂದ ಹಣವನ್ನು ಸಂಗ್ರಹಿಸಬೇಕು. ತೋಟಗಾರನು ಒಂದೊಂದು ಹೂವನ್ನೂ ಹುಡುಕಿ ಕುಯ್ಯುವನೇ ಹೊರತು, ಪುಷ್ಪವು ಸುಲಭವಾಗಿ ಸಿಕ್ಕಲಿಲ್ಲವೆಂದು ಗಿಡದ ಬುಡವನ್ನೇ ಕಡಿಯುವುದಿಲ್ಲ. ಇದರಂತೆ ಮೂಲವನ್ನು ಕೆಡಿಸಿಕೊಳ್ಳದೆ ಅದರ ಫಲವನ್ನು ಸಂಗ್ರಹಿಸಬೇಕೇ ಹೊರತು, ಇದ್ದಲನ್ನು ಅಪೇಕ್ಷಿಸುವವನು ಮರಕ್ಕೆ ಬೆಂಕಿ ಹಚ್ಚುವಂತೆ ಮೂಲಚ್ಛೇದವನ್ನು ಮಾಡಬಾರದು. ಮನುಷ್ಯನು ಒಂದೊಂದು ಕಾರ್ಯದಲ್ಲಿಯೂ “ಇದನ್ನು ಮಾಡಿದರೆ ತನಗೆ ಬರುವುದೇನು? ಮಾಡದಿದ್ದರೆ ಆಗುವುದೇನು?” ಎಂಬುದನ್ನು ಮೊದಲೇ ಚೆನ್ನಾಗಿ ಯೋಚಿಸಿ ಕಾರ್ಯವನ್ನು ನಡೆಸಬೇಕು. ಇಲ್ಲವೇ ಬಿಟ್ಟುಬಿಡಬೇಕು. ಏಕೆಂದರೆ ಯಾವ ಕಾರ್ಯಕ್ಕಾಗಿ ಪಟ್ಟ ಪ್ರಯತ್ನವು ನಿರರ್ಥಕವಾಗುವುದೋ ಅಂತಹ ಕಾರ್ಯಗಳೂ ಉಂಟು. ಆರಂಭಿಸುವುದಕ್ಕೇ ಆಗದ ಕಾರ್ಯಗಳೂ ಉಂಟು ಆರಂಭಿಸಿದಮೇಲೆ ನಿರ್ವಹಿಸಲು ಸಾಧ್ಯವಲ್ಲದ ಕಾರ್ಯಗಳೂ ಉಂಟು! ಅವನ್ನೆಲ್ಲ ಯೋಚಿಸಿಯೇ ಪ್ರಯತ್ನಮಾಡಬೇಕು. ಯಾವುದಕ್ಕಾದರೂ ಮಾಡಿದ ಪ್ರಯತ್ನವು ನಿಷ್ಫಲವಾಗಬಾರದು. ಪ್ರಯೋಜನವಿಲ್ಲದ ಕಾರ್ಯದಲ್ಲಿಯೇ ಕೈಯಿಕ್ಕುತ್ತ, ಪ್ರಯೋಜನಕರವಾದ ಕಾರ್ಯದಲ್ಲಿ ಯಾವನು ಹಿಂದಾಗುವನೋ, ಅಂತವನನ್ನು ಸ್ತ್ರೀಯರು ನಪುಂಸಕನಾದ ಪತಿ

ಯನ್ನು ಹೇಗೋ ಹಾಗೆ ಜನರು ತಮ್ಮ ಪ್ರಭುವನ್ನಾಗಿ ಕೈಕೊಳ್ಳಲಾರರು. ಇದರಂತೆಯೇ ಯಾವನ ಅನುಗ್ರಹವಾಗಲಿ, ಕೋಪವಾಗಲಿ ನಿರರ್ಥಕವೆನಿಸಿರುವುದೋ, ಅಂತವನನ್ನೂ ಜನರು, ಹೆಂಗಸರು ಷಂಡನನ್ನು ಹೇಗೋ ಹಾಗೆ ತಮಗೆ ಪಾಲಕನನ್ನಾಗಿ ಕೈಕೊಳ್ಳಲಾರರು. ಬುದ್ಧಿಶಾಲಿಯಾದ ಮನುಷ್ಯನು ಆರಂಭದಲ್ಲಿ ಸುಲಭವಾಗಿದ್ದು, ಫಲಕಾಲದಲ್ಲಿ ಅಧಿಕ ಫಲವನ್ನು ಕೊಡತಕ್ಕ ಕಾರ್ಯಗಳನ್ನು ಕ್ಷಿಪ್ರದಲ್ಲಿ ಆರಂಭಿಸುವನು. ಅಂತಹ ಕಾರ್ಯಗಳಿಗೆ ಅವನು ಎಂದಿಗೂ ವಿಳಂಬಮಾಡುವುದಿಲ್ಲ. ಯಾವನು ತನ್ನ ಕಣ್ಣಿನಿಂದಲೇ ಕುಡಿಯುವಂತೆ ಋಜುವಾಗಿ ಸೂಕ್ಷ್ಮದೃಷ್ಟಿಯಿಂದ ನೋಡುವನೋ, ಅವನು ಯಾವ ಕೆಲಸವನ್ನೂ ಮಾಡದೆ ಸುಮ್ಮನೆ ಕುಳಿತಿದ್ದರೂ ಜನರು ಅವನನ್ನು ಆದರಿಸುವರು. ಸಮೃದ್ಧಿಯಾಗಿ ಹೂಗಳನ್ನು ಬಿಟ್ಟರೂ ಫಲವನ್ನು ತೋರಿಸದಿರಬೇಕು. ಸಮೃದ್ಧಿಯಾಗಿ ಫಲವನ್ನು ಬಿಟ್ಟರೂ ಏರುವುದಕ್ಕೆ ಸಾಧ್ಯವಿಲ್ಲದಂತಿರಬೇಕು. ಹಣ್ಣುಗಳು ಮಾಗಿದಂತೆ ಕಂಡರೂ ಒಳಗೆ ಇನ್ನೂ ಮಾಗದಂತೆಯೇ ಇರಬೇಕು. ಇಂತಹ ತಂತ್ರದಿಂದ ನಡೆಯುವ ರಾಜನೇ ಎಂದಿಗೂ ತನ್ನ ಕಾರ್ಯವನ್ನು ಕೆಡಿಸಿಕೊಳ್ಳಲಾರನು. ಯಾವನು ಹೃದಯದಿಂದಲೂ, ಮಾತಿನಿಂದಲೂ, ಕಾರ್ಯಗಳಿಂದಲೂ, ನೋಟದಿಂದಲೂ ಈ ನಾಲ್ಕು ವಿಧದಿಂದಲೂ ಲೋಕಕ್ಕೆ ಪ್ರಿಯವನ್ನು ಕಾಣಿಸುವನೋ, ಅಂತವನೇ ಜನರ ಅಭಿಮಾನಕ್ಕೆ ಪಾತ್ರನಾಗುವನು. ಬೇಡನನ್ನು ಕಂಡ ಮೃಗಗಳು ಹೇಗೋ ಹಾಗೆ, ಯಾವ ರಾಜನಿಗೆ ಪ್ರಜೆಗಳು ಭಯಪಟ್ಟು ನಡುಗುತ್ತಿರುವರೋ, ಅಂತವನು ಸಮುದ್ರಾಂತವಾದ ಸಮಸ್ತ ಭೂಮಿಯನ್ನು ಆಳುತ್ತಿದ್ದರೂ ತನ್ನ ಪದವಿಯನ್ನು ಕಳೆದುಕೊಳ್ಳುವನು. ತನ್ನ ಪಿತೃಪಿತಾಮಹಪರಂಪರೆಯಾಗಿ ನೆಲೆಗೊಂಡಿದ್ದ ರಾಜ್ಯಕ್ಕೆ ಒಡೆಯನಾಗಿದ್ದರೂ, ಯಾವ ರಾಜನು ಅನೀತಿಯಲ್ಲಿ ಪ್ರವರ್ತಿಸುವನೋ ಅವನು, ಈ ತನ್ನ ದುಷ್ಕಾರ್ಯದಿಂದ ಗಾಳಿಗಿದಿರಾದ ಮೇಘದಂತೆ ನೆಲೆದಪ್ಪುವನು. ಮೊದಲಿಂದಲೂ ಸತ್ಪುರುಷರ ಮಾರ್ಗವನ್ನು ಹಿಡಿದು, ಧರ್ಮದಲ್ಲಿ ನೆಲೆಗೊಂಡ ರಾಜನಿಗೆ, ಭೂಮಿಯು ಸರ್ವಸಮೃದ್ಧವಾಗಿ ಅವನ ಐಶ್ವರ್ಯವನ್ನು ಹೆಚ್ಚಿಸುವುದು. ಹಾಗಿಲ್ಲದೆ ಧರ್ಮವನ್ನು ಬಿಟ್ಟು ಅಧರ್ಮವನ್ನೇ ಅನುಸರಿಸತಕ್ಕ ರಾಜನ ಭೂಮಿ

ಯು ಬೆಂಕಿಯಲ್ಲಿ ಬಿದ್ದ ಚರ್ಮದಂತೆ ಸುರುಗಿಹೋಗುವುದು. ರಾಜನಾದವನು ಶತ್ರುರಾಷ್ಟ್ರವನ್ನು ನಾಶಮಾಡುವುದರಲ್ಲಿ ಎಷ್ಟು ಪ್ರಯತ್ನವನ್ನು ಮಾಡುವನೋ, ತನ್ನ ರಾಷ್ಟ್ರವನ್ನು ರಕ್ಷಿಸಿಕೊಳ್ಳುವುದರಲ್ಲಿಯೂ ಅಷ್ಟೇ ಪ್ರಯತ್ನವನ್ನು ಮಾಡಬೇಕು. ರಾಜನು ಧರ್ಮದಿಂದಲೇ ರಾಜ್ಯವನ್ನು ಸಂಪಾದಿಸಬೇಕು. ಸಂಪಾದಿಸಿದ ರಾಜ್ಯವನ್ನು ಧರ್ಮದಿಂದಲೇ ಪಾಲಿಸಬೇಕು. ಧರ್ಮಮೂಲಕವಾಗಿ ಬಂದ ಸಂಪತ್ತು ಎಂದಿಗೂ ಕೈಬಿಟ್ಟು ಹೋಗದು. ಕಡಿಮೆಯೂ ಆಗಲಾರದು. ಅಸಂಬದ್ಧವಾಗಿ ಹರಟುವ ಹುಚ್ಚನ ಮಾತಾಗಿರಲಿ, ಹೇಳಿದುದನ್ನೇ ತಿರುಗಿತಿರುಗಿ ಹೇಳುತ್ತಿರುವ ಬಾಲಕರ ಮಾತಾಗಿರಲಿ, ಕಲ್ಲಿನಿಂದ ಚಿನ್ನವನ್ನು ತೆಗೆಯುವಂತೆ ಆ ಎಲ್ಲಾ ಕಡೆಯಿಂದಲೂ ಸಾರಾಂಶವನ್ನು ತೆಗೆದುಕೊಳ್ಳಬೇಕು. ಉಂಛವೃತ್ತಿಮಾಡುವವನು ಅಲ್ಲಲ್ಲಿಂದ ಸ್ವಲ್ಪಸ್ವಲ್ಪವಾಗಿ ಭಿಕ್ಷೆಯನ್ನು ಸಂಗ್ರಹಿಸುವಂತೆ, ಬುದ್ಧಿಶಾಲಿಯಾದವನು ಅಲ್ಲಲ್ಲಿ ಮಹಾತ್ಮರ ಮಾತುಗಳಿಂದಲೂ, ಅವರ ಕಾರ್ಯಗಳಿಂದಲೂ, ತನಗೆ ಬೇಕಾದುದನ್ನು ಸಂಗ್ರಹಿಸುತ್ತಿರಬೇಕು. ಪಶುಗಳು ವಾಸನೆಯಿಂದ ತಿಳಿಯುವುವು. ಬ್ರಾಹ್ಮಣರು ವೇದಗಳಿಂದ ತಿಳಿಯುವರು. ರಾಜರು ಚಾರರಿಂದ ತಿಳಿಯುವರು. ಸಾಮಾನ್ಯ ಜನರು ಕಣ್ಣುಗಳಿಂದ ತಿಳಿಯುವರು. ಓ ರಾಜಾ! ಸುಲಭವಾಗಿ ಹಾಲುಕೊಡದ ಹಸುವು ಅಧಿಕವಾಗಿ ಹಿಂಸೆಗೊಳಗಾಗುವುದು. ಯಾವ ಹಸುವನ್ನು ಸುಲಭವಾಗಿ ಕರೆಯಬಹುದೋ ಅದನ್ನು ಯಾರೂ ಹಿಂಸೆಪಡಿಸಲಾರರು. ಬೆಂಕಿಯಲ್ಲಿ ಕಾಯಿಸದೆ ಬಗ್ಗುವ ಮರವನ್ನು ವಿವೇಕಿಯು ಬೆಂಕಿಯಲ್ಲಿಡಲಾರನು. ಈ ಹೋಲಿಕೆಯಿಂದ ಬುದ್ಧಿಶಾಲಿಯಾದವನು ಬಲವಂತನಿಗೆ ತಾನಾಗಿ ಬಗ್ಗಬೇಕೆಂಬುದು ಸಿದ್ಧವು. ಓ ಮಹಾರಾಜಾ! ಪಶುಗಳಿಗೆ (ವರ್ಷದೇವತೆಯಾದ) ಪರ್ಜನ್ಯನೇ ಕಾಪಾಡತಕ್ಕ ಬಂಧು. ರಾಜರಿಗೆ ಮಂತ್ರಿಗಳೇ ಬಂಧುಗಳು. ಸ್ತ್ರೀಯರಿಗೆ ಪತಿಗಳೇ ಬಂಧುಗಳು. ಬ್ರಾಹ್ಮಣರಿಗೆ ವೇದಗಳೇ ಬಂಧುಗಳು. ಧರ್ಮವು ಸತ್ಯದಿಂದಲೂ, ವಿದ್ಯೆಯು ಅಭ್ಯಾಸದಿಂದಲೂ, ರೂಪವು ಶುಚಿತ್ವದಿಂದಲೂ, ಕುಲವು ನಡತೆಯಿಂದಲೂ ರಕ್ಷಿಸಲ್ಪಡುವುದು. ಧಾನ್ಯವನ್ನು ಅಳತೆಯಿಂದಲೂ, ಕುದುರೆಗಳನ್ನು ವ್ಯಾಯಾಮಸಾಧನೆಗಳಿಂದಲೂ, ಗೋವುಗಳ

ನ್ನು ಚೆನ್ನಾಗಿ ಗಮನಿಸಿನೋಡುವುದರಿಂದಲೂ, ಹೆಂಗಸರನ್ನು ಮಟ್ಟೆ ತರದ ಉಡಿಗೆತೊಡಿಗೆಗಳಿಂದಲೂ ರಕ್ಷಿಸಬೇಕು. ಒಳ್ಳೆಯ ನಡತೆಯಿಲ್ಲ ದವನಿಗೆ ಕುಲವೇನೂ ಪ್ರಮಾಣವಾಗಲಾರದೆಂಬುದು ನನ್ನ ಮತವು. ಕೇ ವಲ ಹೀನಕುಲದಲ್ಲಿ ಹುಟ್ಟಿದವರಿಗಾದರೂ ನಡತೆಯು ಮೇಲ್ಮೆಯನ್ನು ತರುವುದು. ಯಾವನು ಇತರರ ಧನಕ್ಕೂ, ರೂಪಕ್ಕೂ, ವೀರ್ಯಕ್ಕೂ, ವಂಶೋನ್ನತಿಗೂ, ಸುಖಸೌಭಾಗ್ಯಗಳಿಗೂ, ಮಾನಮರ್ಯಾದೆಗಳಿಗೂ ಅಸೂ ಯೆಪಡುವನೋ ಅವನ ಮನೋವ್ಯಾಧಿಯು ಎಂದಿಗೂ ತೀರದೆಂದು ತಿಳಿ. ಅಕಾರ್ಯವನ್ನು ಮಾಡುವುದಕ್ಕೂ, ಮಾಡಬೇಕಾದ ಕಾರ್ಯವನ್ನು ಬಿಡು ವುದಕ್ಕೂ, ಅಕಾಲದಲ್ಲಿ ತನ್ನ ಆಲೋಚನೆಯು ಹೊರಬಿದ್ದು ಅದರಿಂದಾ ಗುವ ಕಾರ್ಯಭಂಗಕ್ಕೂ ಅಂಜುವವನು, ಮಾದಕವಸ್ತುಗಳನ್ನು ಸೇವಿಸ ಬಾರದು. ವಿದ್ಯೆಯ ಹೆಮ್ಮೆ, ಹಣದ ಹೆಮ್ಮೆ, ಕುಲದ ಹೆಮ್ಮೆ ಇವು ಮೂ ರೂ ಗರ್ವಿಷ್ಠರಿಗೆ ಮದಕಾರಣಗಳು. ಈ ಮೂರೇ ಸತ್ಪುರುಷರಿಗೆ ವಿನಯ ಕಾರಣಗಳೆನಿಸುವುವು. ಅಸತ್ತುಗಳಾದ ಅಲ್ಪಜನರಲ್ಲಿ ಎಂದಾದರೂ, ಯಾ ವುದಾದರೂ ಒಂದು ಕಾರ್ಯಕ್ಕಾಗಿ ಸಜ್ಜನರು ಬಂದು ಕೇಳಿಕೊಂಡ ರೆ, ದುರ್ಜನರು ತಮ್ಮ ಅಲ್ಪತ್ವವನ್ನು ಯೋಚಿಸದೆ, ತಾವೇ ಮಹಾಪುರು ಷರೆಂದು ಹೆಮ್ಮೆಗೊಳ್ಳುವರು. ಸಮಸ್ತಪ್ರಾಣಿಗಳಿಗೂ ಸತ್ಪುರುಷರೇ ದಿಕ್ಕು! ಸತ್ಪುರುಷರಿಗೂ ಸತ್ಪುರುಷರೇ ದಿಕ್ಕು! ಅಸತ್ತುಗಳಿಗೂ ಸತ್ಪುರುಷರೇ ದಿಕ್ಕು! ಅಸತ್ತುಗಳುಮಾತ್ರ ಸಜ್ಜನರಿಗೆ ಎಂದೂ ದಿಕ್ಕಾಗಲಾರರು. ವಸ್ತ್ರವಿದ್ದವನು ಸಭೆಯನ್ನು ಜಯಿಸುವನು, ಗೋವುಗಳಿದ್ದವನು ಆಹಾ ರದ ಆಸೆಯನ್ನು ಜಯಿಸುವನು, ವಾಹನವಿದ್ದವನು ದಾರಿಯನ್ನು ಜಯಿ ಸುವನು, ಶೀಲವಿದ್ದವನು ಸರ್ವವನ್ನೂ ಜಯಿಸುವನು. ಮನುಷ್ಯನಿಗೆ ಶೀಲವೇ ಮುಖ್ಯವು. ಶೀಲವು ಕೆಟ್ಟುಹೋದವನಿಗೆ ಅವನ ಜೀವಿತದಿಂ ದಾಗಲಿ, ಹಣದಿಂದಾಗಲಿ, ಬಂಧುಗಳಿಂದಾಗಲಿ ಏನೂ ಪ್ರಯೋಜನವಿರ ದು. ಧನಿಕರಿಗೆ ಮಾಂಸವು ಉತ್ತಮ ಭೋಜನವು. ನಡುತರದವರಿಗೆ ಹಾಲು, ಬೆಣ್ಣೆ, ತುಪ್ಪ ಮುಂತಾದ ಗೋರಸಗಳೇ ಉತ್ತಮವಾದುವು. ಬಡವರಿಗೆ ಎಣ್ಣೆಯಿದ್ದರೆ ಅದೇ ಉತ್ತಮ ಭೋಜನವು. ಓ ಭರತಶ್ರೇ ಷ್ಠಾ! ಬಡವರು ಯಾವಾಗಲೂ ಮೃಷ್ಟಾನ್ನವನ್ನೇ ಭುಜಿಸುತ್ತಿರುವರು.

ಏಕೆಂದರೆ, ಅವರ ಹಸಿವು ಆಹಾರಕ್ಕೆ ರುಚಿಯನ್ನು ಕೊಡುವುದು. ಹಣ
ಗಾರರಿಗೆ ಅಂತಹ ಹಸಿವೇ ದುರ್ಲಭವು. ಪ್ರಾಯಕವಾಗಿ ಹಣಗಾರರಿಗೆ
ಊಟಮಾಡುವ ಶಕ್ತಿಯೂ ಇರದು. ಬಡವರಿಗಾದರೋ ಕಟ್ಟಿಗೆಗಳಾದ
ರೂ ಜೀರ್ಣವಾಗುವುದು. ಕೀಳುಜಾತಿಯವರಿಗೆ ಜೀವನದ ಭಯವು.
ಮಧ್ಯಮರಿಗೆ ಮರಣಭಯವು. ಉತ್ತಮರಿಗಾದರೋ ಯಾವಾಗಲೂ
ಅವಮಾನದಿಂದ ಅಧಿಕವಾದ ಭಯವು. ಪಾನಮದ ಮೊದಲಾದ ನಾನಾ
ತರದ ಮದಗಳಲ್ಲಿ, ಐಶ್ವರ್ಯಮದವೆಂಬುದು ಎಲ್ಲಕ್ಕಿಂತಲೂ ಬಹು ಪಾಪಿ
ಯಾದುದು. ಏಕೆಂದರೆ, ಐಶ್ವರ್ಯದಿಂದ ಮತ್ತೇರಿ ಕೆಳಗೆ ಬಿದ್ದವನು ತಿರುಗಿ
ಮೇಲೇಳುವ ಸಂಭವವೇ ಇಲ್ಲ. ಮನುಷ್ಯನು ಭೋಗದಲ್ಲಿಯೇ ಆಸಕ್ತನಾ
ಗಿ, ನಿಗ್ರಹಿಸಲಾಗದಿರುವ ತನ್ನ ಇಂದ್ರಿಯಗಳಿಂದ ಸೂರ್ಯಾದಿ ಗ್ರಹಗಳಿಂದ
ಇತರ ನಕ್ಷತ್ರಗಳಂತೆ ತಪಿಸಲ್ಪಡುವನು. ಮನಸ್ಸನ್ನು ಎಳೆಯತಕ್ಕ ಪಂ
ಚೇಂದ್ರಿಯಗಳಿಂದ ಜಯಿಸಲ್ಪಟ್ಟವನಿಗೆ, ಶುಕ್ಲಪಕ್ಷದ ಚಂದ್ರನಂತೆ ದಿನ
ದಿನಕ್ಕೆ ವಿಪತ್ತುಗಳು ಹೆಚ್ಚುತ್ತಿರುವುವು. ಯಾವ ರಾಜನು ಮೊದಲು ತನ್ನ
ನ್ನು (ಮನಸ್ಸನ್ನು) ಅಡಗಿಸಿಟ್ಟುಕೊಳ್ಳದೆ, ತನ್ನ ಮಂತ್ರಿಗಳನ್ನು ಅಡಗಿಸಲು
ಯತ್ನಿಸುವನೋ, ಮಂತ್ರಿಗಳನ್ನು ಮೊದಲು ಜಯಿಸಲಾರದೆ ಶತ್ರುಗಳ
ನ್ನು ಜಯಿಸಲು ಪ್ರಯತ್ನಿಸುವನೋ, ಅವನು ತಾನಾಗಿಯೇ ನಿಗ್ರಹಿಸಲ್ಪ
ಡುವನು. ಆದುದರಿಂದ ಮೊದಲು ತನ್ನನ್ನೇ (ಮನಸ್ಸನ್ನೇ) ತನಗೆ ಶತ್ರು
ವೆಂದು ತಿಳಿದು ಅಡಗಿಸಿಟ್ಟು, ಆಮೇಲೆ ಮಂತ್ರಿಗಳನ್ನೂ, ಆಮೇಲೆ ಶತ್ರುಗ
ಳನ್ನೂ ಜಯಿಸಲು ಪ್ರಯತ್ನಿಸಬೇಕು. ಇದಕ್ಕೆ ವಿರುದ್ಧವಾಗಿ ಜಯದಾಸೆ
ಯನ್ನಿಡಬಾರದು. ಇಂದ್ರಿಯಗಳನ್ನು ಜಯಿಸಿ, ಮಂತ್ರಿಗಳನ್ನು ವಶ
ಪಡಿಸಿ, ಶತ್ರುಗಳನ್ನು ದಂಡಿಸಿ, ಒಂದೊಂದು ಕಾರ್ಯವನ್ನೂ ಪರೀಕ್ಷಿಸಿ
ನಡೆಸುವಂತಹ ಧೀರರನ್ನು ಸಂಪತ್ತು ಯಾವಾಗಲೂ ಕೈಸೇರಿರುವುದು.
ಮಹಾರಾಜಾ! ಮನುಷ್ಯಶರೀರವೇ ರಥವು! ಬುದ್ಧಿಯೇ ಸಾರಥಿ! ಇಂದ್ರಿ
ಯಗಳೇ ಹಯಗಳು! ಆ ಕುದುರೆಗಳನ್ನು ಚೆನ್ನಾಗಿ ಪಳಗಿಸಿ, ತನ್ನ ವಶ
ಮಾಡಿಕೊಂಡು, ಎಚ್ಚರಿಕೆಯಿಂದ ಶರೀರಯಾತ್ರೆಯನ್ನು ನಡೆಸುವವನು
ಧೀರನಾದ ರಥಿಕನಂತೆ ತನ್ನ ಜೀವಯಾತ್ರೆಯಲ್ಲಿ ಸುಖದಿಂದ ಮುಂದು
ವರಿಯುವನು. ಆ ಕುದುರೆಗಳನ್ನು ಅಡಗಿಸಲಾರದಿದ್ದರೆ, ಅವು ರಥ

ದೊಡನೆಯೂ, ಸಾರಥಿಯೊಡನೆಯೂ, ಸಿಕ್ಕಿದಕಡೆಗೆ ಎಳೆದು, ಅವೆಲ್ಲವನ್ನೂ ನಾಶಮಾಡಿ ತಾವೂ ಸಾಯುವುವು. ಅವಿವೇಕಿಯಾದವನು ತನಗೆ ವಶವಲ್ಲದ ಇಂದ್ರಿಯಗಳಿಂದ ಅನರ್ಥಗಳನ್ನೇ ಸ್ವಾರ್ಥಗಳನ್ನಾಗಿಯೂ, ಅರ್ಥವನ್ನು ಅನರ್ಥಗಳನ್ನಾಗಿಯೂ ತಿಳಿಯುವುದಲ್ಲದೆ, ದೊಡ್ಡ ದುಃಖವನ್ನೇ ಸುಖವೆಂದೂ ತಿಳಿಯುವನು. ಧರ್ಮಾರ್ಥಗಳನ್ನು ತೊರೆದು ಇಂದ್ರಿಯಕ್ಕೆ ವಶನಾಗಿ ನಡೆಯುವವನು, ತನ್ನ ಐಶ್ವರ್ಯದಿಂದಲೂ, ಪ್ರಾಣದಿಂದಲೂ, ಭಾಗ್ಯದಿಂದಲೂ, ಪತ್ನಿಯಿಂದಲೂ ತೊರೆಯಲ್ಪಡುವನು. ಹಣಕ್ಕೆ ಒಡೆಯನಾಗಿದ್ದರೂ ಇಂದ್ರಿಯಗಳಿಗೆ ಒಡೆಯನಾಗದವನು ಆ ಇಂದ್ರಿಯಗಳ ದೌಷ್ಟ್ಯದಿಂದ ತನ್ನ ಐಶ್ವರ್ಯವನ್ನು ಕಳೆದುಕೊಳ್ಳುವನು. ಮನುಷ್ಯನು, ತನ್ನ ವಶಮಾಡಲ್ಪಟ್ಟ ಮನಸ್ಸು, ಬುದ್ಧಿ, ಇಂದ್ರಿಯಗಳು, ಇವುಗಳ ಮೂಲಕವಾಗಿ ತನ್ನನ್ನು ತಾನು ಕಾಪಾಡಿಕೊಳ್ಳಬೇಕು. ಏಕೆಂದರೆ, ಆತ್ಮವೇ ಆತ್ಮನಿಗೆ ಬಂಧು, ಆತ್ಮವೇ ಆತ್ಮನಿಗೆ ಶತ್ರು. ತನ್ನನ್ನು ತಾನು ಜಯಿಸಿದವನಿಗೆ ಮಾತ್ರವೇ ಆತ್ಮವು ಬಂಧುವೆನಿಸುವುದು. ರಾಜಾ! ಬಲೆಯಲ್ಲಿ ಸಿಕ್ಕಿದ ದೊಡ್ಡ ಮೀನುಗಳೆರಡು, ದುರ್ಬಲವಾದ ಕಣ್ಣುಗಳುಳ್ಳ ಬಲೆಯನ್ನು ಹರಿದುಹಾಕುವಂತೆ, ಕಾಮಕ್ರೋಧಗಳೆರಡೂ, ದುರ್ಬಲವಾದ ಮನಸ್ಸುಳ್ಳವನ ತಿಳಿವಳಿಕೆಯನ್ನು ನಾಶಮಾಡುವುವು. ಈ ಲೋಕದಲ್ಲಿ ಯಾವನು ಧರ್ಮಾರ್ಥಗಳನ್ನು ಚೆನ್ನಾಗಿ ತಿಳಿದು, ಕಾರ್ಯಸಾಧನಗಳನ್ನು ಒದಗಿಸಿಡುವನೋ, ಆ ಸಾಧನಗಳಿಂದ ಅವನು ಸುಖವಾಗಿ ವೃದ್ಧಿಗೆ ಬರುವನು. ಮನೋರೂಪಗಳಾಗಿ ತನ್ನೊಳಗೆ ಸೇರಿಕೊಂಡಿರುವ ಐದು ಹಗೆಗಳನ್ನು (ಇಂದ್ರಿಯಗಳನ್ನು) ಮೊದಲು ಜಯಿಸದೆ, ಹೊರಗಿನ ಶತ್ರುಗಳನ್ನು ಯಾವನು ಜಯಿಸಲಪೇಕ್ಷಿಸುವನೋ, ಅವನನ್ನು ಶತ್ರುಗಳು ಸುಲಭವಾಗಿ ಸೋಲಿಸುವರು. ರಾಜಾ! ಮಹಾಬಲಾಢ್ಯರೆನಿಸಿದ ರಾಜರೆಷ್ಟೋ ಮಂದಿ, ರಾಜ್ಯಭೋಗವಶರಾಗಿ ತಮ್ಮ ಇಂದ್ರಿಯಗಳನ್ನಡಗಿಸಲಾರದೆ, ತಮ್ಮ ಕೃತ್ಯಗಳಿಂದಲೇ ತಾವು ವಧಿಸಲ್ಪಟ್ಟಿರುವುದನ್ನೂ ನಾವು ನೋಡಿರುವೆವು. ದುಷ್ಟರನ್ನು (ಪಾಪಪ್ರವರ್ತಕರನ್ನು) ದೂರಮಾಡದೆ, ಅವರೊಡನೆ ಕಲೆಯುವುದರಿಂದ ಪಾಪವನ್ನೇ ಅರಿಯದ ನಿರಪರಾಧಿಗಳೂ, ದುಷ್ಟರಿಗೆ ಸಮಾನವಾದ ಶಿಕ್ಷೆಯನ್ನೇ ಅನುಭವಿಸುವರು. ಒಣಗಿದ ಕಟ್ಟಿಗೆಯೊಡನೆ

ಹಸೀಕಟ್ಟಿಗೆಯೂ ಸೇರಿಸಿ ಉರಿಸಲ್ಪಡುವುದಲ್ಲವೇ? ಆದುದರಿಂದ ಪಾಪಿಗಳ ಸಹವಾಸವನ್ನೇ ತೊರೆಯಬೇಕು. ತನ್ನೊಳಗೆ ಅಡಗಿಕೊಂಡಿದ್ದು, ಬೇರೆಬೇರೆ ಐದು ಪ್ರಯೋಜನಗಳಿಗಾಗಿ ಆತುರಪಡುತ್ತಿರುವ ಐದುಮಂದಿ ಒಳಶತ್ರುಗಳನ್ನು (ಇಂದ್ರಿಯಗಳನ್ನು) ಯಾವನು ನಿಗ್ರಹಿಸಿಡಲಾರನೋ, ಅಂತವನನ್ನು ವಿಪತ್ತುಗಳು ಬಹುಸುಲಭವಾಗಿ ನುಂಗಿಬಿಡುವುವು. ಅಸೂಯೆಯಿಲ್ಲದಿರುವುದು, ಕಪಟವಿಲ್ಲದ ಋಜುಬುದ್ಧಿ, ಶುಚಿತ್ವ, ಸಂತೋಷ, ಪ್ರಿಯವಾಕ್ಕು, ಇಂದ್ರಿಯನಿಗ್ರಹ, ಸತ್ಯ, ಮನಸ್ಸುಕಲಗದಿರುವಿಕೆ, ಇವಿಷ್ಟೂ ದುರಾತ್ಮರಾದ ಅಲ್ಪಜನರಲ್ಲಿರಲಾರವು. ಆತ್ಮಜ್ಞಾನ, ಅಚಾಂಚಲ್ಯ, ತಾಳ್ಮೆ, ಯಾವಾಗಲೂ ಧರ್ಮಾಸಕ್ತಿ, ಶಾಂತವಾದ ಮಾತು, ದಾನಬುದ್ಧಿ, ಇವಿಷ್ಟೂ ಹೀನಜನರಲ್ಲಿ ಕಾಣಿಸಲಾರವು. ದುರ್ಜನರು ವಿದ್ವಾಂಸರನ್ನು ಯಾವಾಗಲೂ ಪರುಷವಾಕ್ಯಗಳಿಂದಲೂ, ಅಪವಾದಗಳಿಂದಲೂ ಪರಾಭವಿಸುವರು. ಆದರೇನು? ಆಡಿದವನು ಪಾಪಕ್ಕೆ ಭಾಗಿಯಾಗುವನು. ಮನ್ನಿಸಿದವನು ಪಾಪದಿಂದ ಮುಕ್ತನಾಗುವನು. ದುರ್ಜನರ ವಿಷಯದಲ್ಲಿ ಹಿಂಸೆಯೇ ಬಲವು, ರಾಜರಿಗೆ ದಂಡವಿಧಿಯೇ ಬಲವು, ಸ್ತ್ರೀಯರಿಗೆ ಪರಿಚರ್ಯೆಯೇ ಬಲವು, ಗುಣವಂತರಿಗೆ ತಾಳ್ಮೆಯೇ ಬಲವು. ಓ ರಾಜೇಂದ್ರಾ! ಲೋಕದಲ್ಲಿ ಮಾತುಗಳನ್ನು ಅಡಗಿಸಿಡುವುದು ಎಲ್ಲಕ್ಕಿಂತಲೂ ಕಷ್ಟತರವಾದ ಕಾರ್ಯವು. ಬಹಳ ಹೊತ್ತಿನವರೆಗೆ ಮಾತಾಡುವವನು ಮೊದಲಿಂದ ಕೊನೆಯವರೆಗೂ ಸಾರವತ್ತಾಗಿಯೂ, ಯುಕ್ತಿಯುಕ್ತವಾಗಿಯೂ ಇರುವ ಮಾತನ್ನೇ ಆಡುವುದು ಸಾಧ್ಯವಲ್ಲ. ಚೆನ್ನಾಗಿ ಯೋಚಿಸಿ ಹೇಳಿದ ಮಾತು ಅನೇಕ ವಿಧವಾದ ಮಂಗಳವನ್ನುಂಟುಮಾಡುವುದು. ಅದೇ ಕೆಟ್ಟ ಮಾತಾದರೆ, ಅನರ್ಥಕ್ಕೆ ಕಾರಣವಾಗುವುದು. ಓ ಮಹಾರಾಜಾ! ಶಸ್ತ್ರಗಳಿಂದಾಗಲಿ, ಕೊಡಲಿಯಿಂದಾಗಲಿ, ಕಡಿಯಲ್ಪಟ್ಟ ಮರವು ಕಾಡಿನಲ್ಲಿ ತಿರುಗಿ ಚಿಗುರಿ ಬೆಳೆಯುವುದು. ದುರ್ಭಾಷೆಗಳಿಂದ ಕೆಟ್ಟುಹೋದುದು ತಿರುಗಿ ಕೈಗೂಡಿ ಬರಲಾರದು. ದೇಹದಲ್ಲಿ ನಾಟಿದ ಶಸ್ತ್ರಗಳನ್ನೂ, ಮುಳ್ಳುಗಳನ್ನೂ, ಗುಂಡುಗಳನ್ನೂ ಪ್ರಯತ್ನಪಟ್ಟು ಹೊರಗೆ ತೆಗೆಯಬಹುದು. ಹೃದಯದಲ್ಲಿ ನಾಟಿದ ವಾಕ್ಛಲ್ಯವನ್ನು (ಕೆಟ್ಟಮಾತೆಂಬ ಈಟಿಯನ್ನು) ಅಲ್ಲಿಂದ ಕಿತ್ತುಹಾಕುವುದಕ್ಕೆ ಸಾಧ್ಯವೇ ಇಲ್ಲ. ಬಾಯಿಂದ

ಪ್ರಯೋಗಿಸಲ್ಪಡುವ ದುರ್ವಾಕ್ಯಗಳೆಂಬ ಬಾಣಕ್ಕೆ ಗುರಿಯಾದವನು, ಹಗಲುರಾತ್ರಿಯೂ ಸಂಕಟಪಡುವನು. ಈ ವಾಗ್ಬಾಣಗಳು ಮರ್ಮಸ್ಥಾನಗಳಲ್ಲಿ ಹೊರತು ಬೇರೆ ಕಡೆಗಳಿಗೆ ತಗಲುವುದೇ ಇಲ್ಲ. ಆದುದರಿಂದ ಪಂಡಿತನಾದವನು ಆ ವಾಗ್ಬಾಣಗಳನ್ನು ಯಾವ ಸಂದರ್ಭದಲ್ಲಿಯೂ, ಯಾರಲ್ಲಿಯೂ ಪ್ರಯೋಗಿಸಲಾರನು. ದೈವವು ಯಾವ ಮನುಷ್ಯನಿಗೆ ಭಂಗವನ್ನುಂಟುಮಾಡಬೇಕೆಂದು ಬಯಸುವುದೋ, ಅವರ ಬುದ್ಧಿಯನ್ನು ಮೊದಲು ಎಳೆದುಬಿಡುವುದು. ಅದರಿಂದಲೇ ಅವನು ಹೀನ ವಿಷಯಗಳಲ್ಲಿ ಕಣ್ಣಿಡುವನು. ಯಾವಾಗ ಬುದ್ಧಿಯು ಮಂಕಾಗಿ ನಾಶವು ಸನ್ನಿಹಿತವಾಗುತ್ತಿದೆಯೋ, ಆಗ ಆ ಬುದ್ಧಿಗೆ ಅನ್ಯಾಯವೆಲ್ಲಾ ನ್ಯಾಯವೆಂದೇ ತೋರಿ, ಅನೀತಿಗಳೇ ಹೃದಯದಲ್ಲಿ ಸ್ಥಿರವಾಗಿ ನಾಟುವುವು.

ಓ ಧೃತರಾಷ್ಟ್ರಾ! ಈಗ ನಿನ್ನ ಮಕ್ಕಳಿಗೂ, ಪಾಂಡವರಲ್ಲಿರುವ ದ್ವೇಷದಿಂದ ಮೇಲೆ ಹೇಳಿದಂತೆ ಬುದ್ಧಿಯು ವಿಪರೀತವಾಗಿದೆ. ನೀನು ಅದನ್ನು ತಿಳಿಯಲಾರೆ. ಒಳ್ಳೇ ಗುಣಗಳಿಂದಲೂ, ರಾಜಲಕ್ಷಣಗಳಿಂದಲೂ ಕೂಡಿದ ಆ ಧರ್ಮರಾಜನು ಮೂರುಲೋಕಕ್ಕೂ ರಾಜನಾಗಿರಲು ಅರ್ಹನು. ಅವನು ನಿನ್ನ ಆಜ್ಞಾಧೀನನಾಗಿಯೂ ನಡೆಯತಕ್ಕವನು. ನಿನ್ನ ರಾಜ್ಯಕ್ಕೆ ಇನ್ನುಮೇಲಾದರೂ ಅವನೇ ಪಾಲಕನಾಗಿರಲಿ. ಓ ಮಹಾರಾಜಾ! ಆ ಧರ್ಮರಾಜನು ನಿನ್ನ ಮಕ್ಕಳಿಗಿಂತಲೂ ಮೇಲೆನಿಸಿರುವನು. ರಾಜ್ಯಲಕ್ಷ್ಮಿಯಿಂದಲೂ ಪುರಸ್ಕರಿಸಲ್ಪಡತಕ್ಕವನು. ಪರಾಕ್ರಮದಿಂದಲೂ, ಪ್ರಜ್ಞೆಯಿಂದಲೂ ಮೇಲಾದವನು. ಧರ್ಮಾರ್ಥಗಳೆರಡನ್ನೂ ಚೆನ್ನಾಗಿ ಬಲ್ಲವನು. ದಯೆಯಿಂದಲೂ, ಮೃದುಸ್ವಭಾವದಿಂದಲೂ, ನಿನ್ನಲ್ಲಿ ಗೌರವಬುದ್ಧಿಯಿಂದಲೂ, ಅವನು ನಿನ್ನಿಂದ ಇದುವರೆಗೆ ಎಷ್ಟೋ ಕಷ್ಟಗಳಿಗೆ ಗುರಿಯಾದರೂ ಅವೆಲ್ಲವನ್ನೂ ಸಹಿಸಿಕೊಂಡಿರುವನು. ಆದುದರಿಂದ ಮುಂದೆ ನಿನ್ನ ರಾಜ್ಯಕ್ಕೆ ಅವನನ್ನೇ ರಕ್ಷಕನನ್ನಾಗಿಡು" ಎಂದನು.

ಇದು ಮೂವತ್ತುನಾಲ್ಕನೆಯ ಅಧ್ಯಾಯವು.

ವಿದುರನು ಧೃತರಾಷ್ಟ್ರನಿಗೆ, ಸುಧನ್ವ ವಿರೋಚನ ಸಂವಾದ ವೆಂಬ ಇತಿಹಾಸವನ್ನು ಹೇಳಿ, ಪಾಂಡವರಲ್ಲಿ ಪುತ್ರವಾತ್ಸಲ್ಯವನ್ನಿಡಬೇಕೆಂದು ತಿಳಿಸಿದುದು.

ಆಮೇಲೆ ಧೃತರಾಷ್ಟ್ರನು ವಿದುರನನ್ನು ಕುರಿತು "ವತ್ಸ ವಿದುರಾ! ನೀನು ಮಹಾ ಧೀಮಂತನು. ನಿನ್ನ ನೀತಿವಾದಗಳನ್ನು ಎಷ್ಟೆಷ್ಟು ಕೇಳಿದರೂ ನನಗೆ ತೃಪ್ತಿಯಿಲ್ಲದಂತಿದೆ. ನೀನು ವಿಚಿತ್ರವಿಷಯಗಳನ್ನೊಳಕೊಂಡ ಮಾತುಗಳನ್ನಾಡುತ್ತಿರುವೆ. ಆದುದರಿಂದ ಧರ್ಮಾರ್ಥಯುಕ್ತವಾದ ಇನ್ನೂ ಕೆಲವು ನೀತಿಗಳನ್ನು ನನಗೆ ತಿಳಿಸು" ಎಂದನು. ಅದಕ್ಕಾ ವಿದುರನು "ರಾಜೇಂದ್ರಾ! ಕೇಳು! ಮನುಷ್ಯನು ಕಪಟವಿಲ್ಲದೆ ಯಾವಾಗಲೂ ಋಜುತ್ವದಿಂದಲೇ ನಡೆಯಬೇಕು. ಸಮಸ್ತಪುಣ್ಯತೀರ್ಥಗಳಲ್ಲಿ ಸ್ನಾನಮಾಡಿಬರುವುದೂ, ಸಮಸ್ತಪ್ರಾಣಿಗಳಲ್ಲಿಯೂ ನಿಷ್ಕಪಟವಾಗಿ ಋಜುತ್ವದಿಂದಿರುವುದೂ ಇವೆರಡೂ ಸಮಾನವೇ! ಒಂದುವೇಳೆ ತೀರ್ಥಸ್ನಾನಗಳಿಗಿಂತಲೂ ಋಜುತ್ವವೇ ಮೇಲೆಂದು ತಿಳಿ! ಆದುದರಿಂದ ಅಣ್ಣಾ! ನೀನು ನಿನ್ನ ಮಕ್ಕಳಾದ ಪಾಂಡವರಲ್ಲಿ ಯಾವಾಗಲೂ ಋಜುವಾಗಿ ವರ್ತಿಸು! ಆದರಿಂದ ನಿನಗೆ ಇಹಲೋಕದಲ್ಲಿ ಉತ್ತಮವಾದ ಕೀರ್ತಿಯುಂಟು. ಸತ್ತಮೇಲೆ ಸದ್ಗತಿಯುಂಟು. ಎಲೈ ಪುರುಷಶ್ರೇಷ್ಠನೇ! ಮನುಷ್ಯನ ಪವಿತ್ರವಾದ ಕೀರ್ತಿಯು, ಇಹಲೋಕದಲ್ಲಿ ಎಷ್ಟುಕಾಲದವರೆಗೆ ಗೌರವಿಸಲ್ಪಡುವುದೋ, ಅಷ್ಟುಕಾಲದವರೆಗೆ ಆ ಮನುಷ್ಯನು ಸ್ವರ್ಗಲೋಕದಲ್ಲಿಯೂ ಗೌರವಿಸಲ್ಪಡುವನು. ಅಣ್ಣಾ! ಇದೇ ವಿಷಯದಲ್ಲಿ ಹಿಂದೆ ಕೇಶಿನಿಯೆಂಬ ಹೆಂಗಸಿನ ವಿಷಯವಾಗಿ ಸುಧನ್ವನಿಗೂ, ವಿರೋಚನನಿಗೂ ನಡೆದ ಸಂವಾದರೂಪವಾದ ಇತಿಹಾಸವೊಂದನ್ನು ನಿದರ್ಶನವಾಗಿ ಹೇಳುವರು. ಅದನ್ನು ತಿಳಿಸುವೆನು ಕೇಳು. ಹಿಂದೆ ಕೇಶಿನಿಯೆಂಬ ಕನ್ಯೆಯೊಬ್ಬಳು, ತನಗೆ ಒಳ್ಳೇ ಉತ್ತಮನಾದ ಪತಿಯು ದೊರೆಯಬೇಕೆಂಬ ಆಸೆಯಿಂದ ಸ್ವಯಂವರಕ್ಕಾಗಿ ನಿಂತಳು. ಅವಳು ರೂಪದಲ್ಲಿ ಎಣೆಯಿಲ್ಲದವಳು. ಈ ಕನ್ಯೆಯು ಸ್ವಯಂವರಕ್ಕೆ ಸಿದ್ಧಳಾಗಿರುವುದನ್ನು ಕೇಳಿ, ಪ್ರಹ್ಲಾದನ ಮಗನಾದ ವಿರೋಚನನೆಂಬ ದೈತ್ಯನು ಅವಳಲ್ಲಿಗೆ ಬಂದು, ತನ್ನ ಉದ್ದೇಶವನ್ನು ತಿಳಿಸಿದನು.

ಆಗ ಕೇಶಿನಿಯು ಅವನನ್ನು ಕುರಿತು “ ಓ ವಿರೋಚನಾ! ಬ್ರಾಹ್ಮಣರು ಉತ್ತಮರೆ? ದೈತ್ಯರು ಉತ್ತಮರೆ? ಸುಧನ್ವನು ಯಾವಕಾರಣದಿಂದಲೋ ನಿನ್ನೊಡನೆ ಮಂಚವನ್ನೇರುವುದಿಲ್ಲ?” ಎಂದಳು. ಅದಕ್ಕಾ ವಿರೋಚನನು “ಓ ಕೇಶಿನೀ ! ನಾವು ಸಾಕ್ಷಾತ್ತಾಗಿ ಬ್ರಹ್ಮನಿಂದ ಬಂದವರು. ನಾವೇ ಎಲ್ಲರಿಗಿಂತಲೂ ಉತ್ತಮರು. ಈ ಲೋಕಗಳೆಲ್ಲವೂ ನಮ್ಮದೇ ! ನಮ್ಮ ಮುಂದೆ ದೇವತೆಗಳೂ ಇಲ್ಲ. ಬ್ರಾಹ್ಮಣರೂ ಇಲ್ಲ.” ಎಂದನು. ಅದಕ್ಕಾ ಕೇಶಿನಿಯು “ಹಾಗಿದ್ದರೆ ಇಲ್ಲಿಯೇ ನಾವು ಈ ವಿಷಯವನ್ನು ಪರೀಕ್ಷಿಸುವೆವು. ನಾಳೆ ಪ್ರಾತಃಕಾಲದಲ್ಲಿ ಸುಧನ್ವನೂ ನಿನ್ನಂತೆ ನನ್ನನ್ನಪೇಕ್ಷಿಸಿ ಇಲ್ಲಿಗೆ ಬರುವನು. ನೀವಿಬ್ಬರೂ ಒಂದಾಗಿ ಕಲೆತಿರುವಾಗಲೇ, ನೋಡುವೆವು” ಎಂದಳು. ಅದಕ್ಕೆ ವಿರೋಚನನು “ಎಲೆ ಭದ್ರೇ! ನೀನು ಹೇಳಿದಂತೆಯೇ ಆಗಲಿ. ನಾಳೆ ಬೆಳಗಾಗುವವರೆಗೆ ನಾನು ಇಲ್ಲಿಯೇ ಕಾದಿರುವೆನು. ಸುಧನ್ವನೂ, ನಾನೂ ಸೇರಿರುವಾಗಲೇ ನೀನು ನೋಡು” ಎಂದನು. ಓ ಮಹಾರಾಜಾ! ರಾತ್ರಿಯು ಕಳೆದು ಸೂರ್ಯೋದಯವಾಯಿತು. ನಿರ್ಣಯಿಸಿದ ಕಾಲಕ್ಕೆ ಸರಿಯಾಗಿ ಸುಧನ್ವನು ವಿರೋಚನನೂ, ಕೇಶಿನಿಯೂ ತನ್ನನ್ನು ನಿರೀಕ್ಷಿಸುತ್ತಿದ್ದ ಸ್ಥಳಕ್ಕೆ ಬಂದು ನಿಂತನು. ಒಡನೆಯೇ ಕೇಶಿನಿಯು ತನ್ನಲ್ಲಿಗೆ ಬಂದ ಆ ಬ್ರಾಹ್ಮಣನಿಗೆ ಇದಿರೆದ್ದು, ಆಸನವನ್ನು ಕೊಟ್ಟು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದಳು. ಆಗ ವಿರೋಚನನು ಸುಧನ್ವನನ್ನು ಕುರಿತು, “ಓ ಬ್ರಾಹ್ಮಣಾ ! ಇದೋ! ಈ ಆಸನದಲ್ಲಿ ಕುಳ್ಳಿರು” ಎಂದು ಹೇಳಿ, ತಾನು ಕುಳಿತಿದ್ದ ಸುವರ್ಣಾಸನವನ್ನು ತೋರಿಸಿದನು. ಅದಕ್ಕಾ ಸುಧನ್ವನು “ಓ ಪ್ರಹ್ಲಾದಕುಮಾರಾ! ನಾನು ಬ್ರಾಹ್ಮಣನು! ಸುವರ್ಣಮಯವಾದ ಮಂಚದಲ್ಲಿ ನೀನೇ ಕುಳ್ಳಿರು ! ನಾನು ಆ ನಿನ್ನ ಆಸನವನ್ನು ಕೈಯಿಂದಮಾತ್ರ ಸ್ಪರ್ಶಿಸುವೆನು. ಓ ದೈತ್ಯೇಂದ್ರಾ ! ಆ ಸುವರ್ಣಾಸನದಲ್ಲಿ ನಿನ್ನೊಡನೆ ಸಮಾನನಾಗಿ ನಾನು ಕುಳಿತುಕೊಳ್ಳಲು ಅರ್ಹನಲ್ಲ. ಅಂತಹ ಉತ್ತಮಾಸನವು ನನಗೆ ಬೇಕಾದುದೂ ಇಲ್ಲ” ಎಂದನು. ಅದಕ್ಕೆ ವಿರೋಚನನು (ಅವನನ್ನು ಹಾಸ್ಯಮಾಡುವಂತೆ) “ಓ ಬ್ರಾಹ್ಮಣಾ ! ನಿಜವೇ! ನಿನಗೆ ಈ ಸುವರ್ಣಪೀಠವು ಅರ್ಹವಲ್ಲ. ಒಂದು ಮರದ ಹಲಗೆಯೋ, ಮೃಗದ ಚರ್ಮವೋ, ಅಥವಾ ಹುಲ್ಲಿನ ಚಾಪೆಯೋ ಇವು



೧೫೮. ಕೇಶಿನಿಯೆಂಬವಳ ಸ್ವಯಂವರಕ್ಕಾಗಿ ವಿರೋಚನನೆಂಬ ದೈತ್ಯನೂ, ಸುಧನ್ವನೆಂಬ ಬ್ರಾಹ್ಮಣನೂ

ಮಾತ್ರ ನಿಮಗೆ ಯೋಗ್ಯವಾದ ಆಸನವು. ನನ್ನ ಅರ್ಧಾಸನದಲ್ಲಿ, ನನಗೆ ಸಮಾನವಾಗಿ ಕುಳಿತುಕೊಳ್ಳುವುದಕ್ಕೆ ನಿನಗೆ ಅರ್ಹತೆಯಿಲ್ಲದೆ?" ಎಂದನು. ಅದಕ್ಕೆ ಸುಧನ್ವನು "ಓ ದೈತ್ಯೇಂದ್ರಾ! ವಾಸ್ತವವೇ! ನಿನ್ನೊಡನೆ ಸಮಾನವಾಗಿ ಕುಳಿತುಕೊಳ್ಳುವುದು ನನಗೆ ಯೋಗ್ಯವಲ್ಲ. ತಂದೆಯೂ ಮಗನೂ ಒಂದೇ ಆಸನದಲ್ಲಿ ಒಟ್ಟಿಗೆ ಕುಳ್ಳಿರಬಹುದು. ಹಾಗೆಯೇ ಇಬ್ಬರು ಬ್ರಾಹ್ಮಣರೂ, ಇಬ್ಬರು ಕ್ಷತ್ರಿಯರೂ, ಇಬ್ಬರು ವೃದ್ಧರೂ, ಇಬ್ಬರು ವೈಶ್ಯರೂ, ಇಬ್ಬರು ಶೂದ್ರರೂ ಏಕಾಸನದಲ್ಲಿ ಕುಳ್ಳಿರಬಹುದೇಹೊರತು, ಬೇರೆಯವರು ಒಂದಾಗಿ ಸೇರಿ ಏಕಾಸದದಲ್ಲಿ ಕುಳ್ಳಿರಬಾರದು. ಅಷ್ಟೇಕೆ? ಓ ವಿರೋಚನಾ! ನಿನ್ನ ತಂದೆಯಾದ ಪ್ರಹ್ಲಾದನೂ ಕೂಡ, ನಾನು ಕುಳಿತ ಆಸನದಲ್ಲಿ ಕುಳ್ಳಿರದೆ, ಕೆಳಗೆ ನಿಂತು, ನನ್ನನ್ನು ಸೇವಿಸುವನು. ನೀನಾದರೋ ಮನೆಯಲ್ಲಿ ಸುಖವಾಗಿ ಬೆಳೆದವನು. ಇನ್ನೂ ಬಾಲನಾದುದರಿಂದ ನಿನಗೆ ಏನೂ ತಿಳಿಯದು" ಎಂದನು. ಅದಕ್ಕಾ ವಿರೋಚನನು "ಓ ಬ್ರಾಹ್ಮಣಾ! ಹಾಗಿದ್ದರೆ ನಮ್ಮಿಬ್ಬರಲ್ಲಿ ಯಾರು ಮೇಲೆಂಬುದನ್ನು ಬೇರೆ ಯಾರಾದರೂ ತಿಳಿದವರಲ್ಲಿ ಹೋಗಿ ಕೇಳುವೆವು. ಇದಕ್ಕಾಗಿ ನಾನು ಸುವರ್ಣವನ್ನೂ, ಗೋವುಗಳನ್ನೂ, ದಾನವಪ್ರಭುಗಳಾದ ನಮಗೆ ಬೇರೆ ಯಾವ ಧನವುಂಟೋ ಅವನ್ನೆಲ್ಲ ಪಂಥಕ್ಕಿಡುವೆನು ನಡೆ! ಹೋಗುವೆವು" ಎಂದನು. ಆಗ ಸುಧನ್ವನು "ವಿರೋಚನಾ! ನನಗೆ ನಿನ್ನ ಸುವರ್ಣವೂ ಬೇಡ! ಗೋವುಗಳೂ ಬೇಡ! ನಿನ್ನ ಹಣವೂ ಬೇಕಾದುದಿಲ್ಲ. ಅವೆಲ್ಲ ನಿನಗೇ ಇರಲಿ! ನಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಪ್ರಶ್ನವನ್ನು ಕೇಳುವೆವು ನಡೆ!" ಎಂದನು. ಆಗ ವಿರೋಚನನು "ಸರಿ! ನನಗೆ ಸಮ್ಮತವೇ! ಆದರೆ, ನಾವು ಈ ಪಂಥಕ್ಕಾಗಿ ನಮ್ಮ ಪ್ರಾಣಗಳನ್ನೇ ಒತ್ತೆಯಿಟ್ಟಮೇಲೆ, ಈ ಪ್ರಶ್ನೆಯನ್ನು ನಾವು ಯಾರಲ್ಲಿ ಹೋಗಿ ಕೇಳುವೆವು?" ದೇವತೆಗಳು ದೈತ್ಯರಾದ ನಮಗೆ ನಿತ್ಯವೈರಿಗಳಾದುದರಿಂದ ಅವರ ಮುಂದೆ ನಾನು ಬಂದು ನಿಲ್ಲುವವನಲ್ಲ. ಮನುಷ್ಯರು ನಮಗಿಂತಲೂ ಹೀನರಾದುದರಿಂದ ಅವರಲ್ಲಿಯೂ ನಾವು ಹೋಗಿ ಕೇಳುವುದು ಅವಮಾನಕರವು" ಎಂದನು. ಅದಕ್ಕಾ ಸುಧನ್ವನು "ವಿರೋಚನಾ! ಅಷ್ಟೇಕೆ? ನಿನ್ನ ತಂದೆಯಲ್ಲಿಯೇ ಹೋಗಿ ಕೇಳುವೆವು ಬಾ! ನಾವು ಈ ಪಂಥದಲ್ಲಿ ನಮ್ಮ ಪ್ರಾಣಗಳನ್ನೇ

ಒಡ್ಡಿದ್ದರೂ ನಿನ್ನ ತಂದೆಯು, ಮಗನಾದ ನಿನಗಾಗಿ ಸುಳ್ಳು ಹೇಳಲಾರ ನೆಂದು ನನಗೆ ನಂಬಿಕೆಯಿದೆ. ನಡೆ. ಅವನಲ್ಲಿಗೆ ಹೋಗುವೆವು" ಎಂದನು. ಅದಕ್ಕೆ ವಿರೋಚನನೂ ಸಮ್ಮತಿಸಿದನು. ಅವರಿಬ್ಬರೂ ಹಟದಿಂದ,ರೋಷ ಯುಕ್ತರಾಗಿ ಪ್ರಹ್ಲಾದನಿದ್ದಲ್ಲಿಗೆ ಬಂದರು. ಇವರಿಬ್ಬರೂ ರೋಷದಿಂದ ಹಾವಿನಂತೆ ಬುಸುಗುಟ್ಟುತ್ತ ತನ್ನಲ್ಲಿಗೆ ಬರುತ್ತಿರುವುದನ್ನು ಕಂಡಾಗಲೇ ಪ್ರಹ್ಲಾದನಿಗೆ ಮನಸ್ಸು ಕಳವಳಿಸಿತು. ಅವರನ್ನು ನೋಡಿ ಪ್ರಹ್ಲಾದನು ತನ್ನಲ್ಲಿ ತಾನು "ಏನಿದು? ಇವರಿಬ್ಬರೂ ಯಾವಾಗಲೂ ಒಂದಾಗಿ ಸೇರ ದವರು· ಈಗ ಇವರಿಬ್ಬರೂ ಒಂದೇ ಮಾರ್ಗವನ್ನು ಹಿಡಿದು, ಕೋಪ ಗೊಂಡ ಎರಡು ಸರ್ಪಗಳಂತೆ ಒಂದಾಗಿ ಸೇರಿ ಇಲ್ಲಿಗೆ ಬಂದ ಕಾರಣವೇ ನು?" ಎಂದು ಶಂಕಿಸುತ್ತ ತನ್ನ ಮಗನಾದ ವಿರೋಚನನನ್ನು ಕುರಿತು "ಪುತ್ರಾ! ಏನಿದು? ನಿನಗೆ ಈಗ ಸುಧನ್ವನೊಡನೆ ಸಖ್ಯವೇನು?" ಎಂ ದನು. ಅದಕ್ಕಾ ವಿರೋಚನನು "ಜನಕಾ! ಇವನೊಡನೆ ನನಗೆ ಸಖ್ಯ ವೆಲ್ಲಿಯದು? ಅದೇನೂ ಇಲ್ಲ! ನಾವಿಬ್ಬರೂ ಒಂದು ಪಂಥವನ್ನಿಟ್ಟುಕೊಂ ಡು ನಮ್ಮ ಪ್ರಾಣಗಳನ್ನೇ ಅದಕ್ಕೆ ಒತ್ತೆಯಾಗಿಟ್ಟಿರುವೆವು. ಜನಕಾ! ಪ್ರಹ್ಲಾದಾ! ನೀನು ನಮ್ಮ ಪ್ರಶ್ನೆಯನ್ನು ಕೇಳಿ ವಾಸ್ತವಾಂಶವನ್ನು ತಿಳಿ ಸಬೇಕು. ಸುಳ್ಳಾಡಬಾರದು" ಎಂದನು. ಪ್ರಹ್ಲಾದನು ಆ ಸುಧನ್ವನೆಂಬ ಬ್ರಾಹ್ಮಣನನ್ನು ಕಂಡೊಡನೆ ತನ್ನ ಸೇವಕರನ್ನು ಕುರಿತು "ಈ ಬ್ರಾಹ್ಮ ಣನಿಗಾಗಿ ಜಲವನ್ನೂ, ಮಧುಪರ್ಕವನ್ನೂ ತಂದಿಡಿರಿ" ಎಂದು ಆಜ್ಞೆ ಮಾಡಿದನು. ಆಮೇಲೆ ಸುಧನ್ವನನ್ನು ನೋಡಿ "ಓ ಬ್ರಾಹ್ಮಣೋತ್ತಮಾ! ಮೊದಲು ನಾನು ನಿನ್ನನ್ನು ಸತ್ಕರಿಸಬೇಕು. ಒಳ್ಳೇ ಪುಷ್ಟಿಯಾಗಿ ಬೆಳೆದ ಗೋವು ನಿನಗಾಗಿ ಸಿದ್ಧಪಡಿಸಲ್ಪಟ್ಟಿದೆ. ಬ್ರಾಹ್ಮಣನಾದ ನೀನು ಪೂಜಾ ರ್ಹನು" ಎಂದನು. ಅದಕ್ಕಾ ಸುಧನ್ವನು "ಓ ದೈತ್ಯೇಂದ್ರಾ! ನಿನ್ನ ಮಾತಿನಿಂದಲೇ ನಾನು ಸತ್ಕೃತನಾದೆನು. ನಿನ್ನ ಅರ್ಘ್ಯಪಾದ್ಯಗಳೂ, ಮಧುಪರ್ಕವೂ ನನಗೆ ಸೇರಿದಂತಾಯಿತು. ಈಗ ನಾನು ಕೇಳುವ ಪ್ರಶ್ನೆಗೆ ಸತ್ಯವಾದ ಉತ್ತರವನ್ನು ನೀನು ಹೇಳಬೇಕು. ಬ್ರಾಹ್ಮಣರು ದೊಡ್ಡವರೆ? ಈ ವಿರೋಚನನು ದೊಡ್ಡವನೆ? ನಿನ್ನ ಅಭಿಪ್ರಾಯವನ್ನು ತಿಳಿಸು" ಎಂದನು. ಈ ಪ್ರಶ್ನೆಯನ್ನು ಕೇಳಿ ಪ್ರಹ್ಲಾದನಿಗೆ ದಿಗ್ಭ್ರಮೆಹಿಡಿದಂತಾ

ಯಿತು. ತನಗೆ ತಿಳಿದ ವಾಸ್ತವಾಂಶವನ್ನು ಹೇಳಿಬಿಟ್ಟರೆ, ತಾನೇ ಮಗನ ಪ್ರಾಣಕ್ಕೆ ಮೃತ್ಯುವಾದಂತಾಗುವುದು. ಅದಕ್ಕಾಗಿ ಹೇಗಾದರೂ ತಪ್ಪಿಸಿಕೊಳ್ಳಬೇಕೆಂಬ ಉದ್ದೇಶದಿಂದ ಸುಧನ್ವನನ್ನು ಕುರಿತು "ಬ್ರಾಹ್ಮಣೋತ್ತಮಾ! ಧರ್ಮವೆಂಬುದು ಕತ್ತಿಯಲಗಿಗಿಂತಲೂ ಅತಿಸೂಕ್ಷ್ಮವಾದುದು. ಕಲ್ಮಾಷ, ಕಪಿಲ, ಕೃಷ್ಣ, ಲೋಹಿತರೇ ಮೊದಲಾದ ಮಹಾತ್ಮರಾದರೂ ಆ ಧರ್ಮ ಸೂಕ್ಷ್ಮವನ್ನು ಹೀಗೆಯೇ ಎಂದು ತೀರ್ಮಾನಿಸಿ ಹೇಳಲಾರರು. ಇನ್ನು ನಾನು ಎಷ್ಟುಮಾತ್ರದವನು? ಇದಲ್ಲದೆ ನೀನು ಬ್ರಾಹ್ಮಣನಾದುದರಿಂದ ನಮಸ್ಕಾರಾರ್ಹನು. ನೀನು ಈಗ ನನ್ನನ್ನು ಸಾಕ್ಷಿಯಾಗಿಟ್ಟು ಕೇಳುತ್ತಿರುವೆ. ನನಗಾದರೋ ಇವನೊಬ್ಬನೇ ಮಗನು. ನೀನೂ ಇಲ್ಲಿ ನನ್ನ ಮುಂದೆಯೇ ನಿಂತಿರುವೆ. ಹೀಗಿರುವಾಗ, ನಿಮ್ಮಿಬ್ಬರೊಳಗೆ ಉಂಟಾಗಿರುವ ಈ ವಿವಾದದಲ್ಲಿ ನನ್ನಂತವನು ಏನನ್ನು ತಾನೇ ಹೇಳಬಹುದು? ನೀನೇ ಹೇಳು" ಎಂದನು. ಆಗ ಪ್ರಹ್ಲಾದನಿಗೆ ಮಗನ ಮೋಹವೊಂದು ಕಡೆ! ಬ್ರಾಹ್ಮಣನ ಭಯವೊಂದು ಕಡೆ! ಇದರಿಂದ ಮಾತಾಡಲಾರದೆ ಕಳವಳಿಸುವುದನ್ನು ಕಂಡು ಸುಧನ್ವನು "ಪ್ರಹ್ಲಾದಾ! ನೀನು ತಿಳಿದ ವಿಷಯವನ್ನು ಹೇಳಲಾರದೆ ಮರೆಮಾಚಿ ಸುಮ್ಮನಿದ್ದರೂ, ಸುಳ್ಳಾಡಿದರೂ ಎರಡಕ್ಕೂ ಒಂದೇ ಶಿಕ್ಷೆ! ಎರಡೂ ಸುಳ್ಳುಸಾಕ್ಷ್ಯಗಳೇ! ಆ ಪಾಪದಿಂದ ನಿನ್ನ ತಲೆಯು ಭೇದಿಸಿಹೋಗುವುದು" ಎಂದನು. ಆಗ ಪ್ರಹ್ಲಾದನು ಭಯದಿಂದ ತತ್ತಳಿಸುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಸೂರ್ಯನೊಡನೆ ಬರುತಿದ್ದ ಒಂದು ಹಂಸವನ್ನು ಕಂಡನು. ಸಮಸ್ತವನ್ನೂ ತಿಳಿದು, ಎಲ್ಲವನ್ನೂ ಸೂಕ್ಷ್ಮವಾಗಿ ವಿವರಿಸಬಲ್ಲ ಆ ಹಂಸವನ್ನು ನೋಡಿ ಪ್ರಹ್ಲಾದನು "ಓ ಹಂಸವೇ! ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೂ, ಮತ್ತೊಬ್ಬನಿಗೂ ವಿವಾದವು ಬಂದಾಗ, ನಡುವೆ ಸಾಕ್ಷಿಯಾಗಿ ನಿಲ್ಲುವವನು ಹೇಗೆ ನಡೆದುಕೊಳ್ಳಬೇಕಾದುದು ಧರ್ಮವು?" ಎಂದನು. ಅದಕ್ಕಾ ಹಂಸವು "ಮಗನಿಗೆ ಅವನು ಇಷ್ಟಪಡುವಂತೆ ಗೋವುಗಳನ್ನೋ, ಇತರ ಧನವನ್ನೋ ಬೇಕಾದುದನ್ನೆಲ್ಲ ಕೊಡಬಹುದು. ವಿವಾದಗಳಲ್ಲಿಮಾತ್ರ ಸಾಕ್ಷಿಯಾದವನು ತನಗೆ ತಿಳಿದುದನ್ನು ನಿಜವಾಗಿ ಹೇಳತೀರಬೇಕು" ಎಂದಿತು. ತಿರುಗಿ ಪ್ರಹ್ಲಾದನು ಆ ಹಂಸವನ್ನು ನೋಡಿ "ಓ ಹಂಸವೇ! ವಾಸ್ತ

ವಾಂಶವನ್ನು ಕೇಳುವೆನು. ಒಬ್ಬನು ಸಾಕ್ಷ್ಯದಲ್ಲಿ ಸುಳ್ಳನ್ನಾಗಲಿ, ನಿಜವ ನ್ನಾಗಲಿ ಹೇಳದೆ ಸುಮ್ಮನಿದ್ದರೆ, ಅದರಿಂದ ಅವನಿಗೆ ಸಂಭವಿಸುವ ಪಾಪ ವೆಂತದು? ಆ ಪಾಪದ ಪ್ರಮಾಣವೆಷ್ಟು?" ಎಂದನು. ಅದಕ್ಕಾ ಹಂಸ ವು "ಪ್ರಹ್ಲಾದಾ! ಪ್ರಶ್ನೆಮಾಡಲ್ಪಟ್ಟವನು ಧರ್ಮಸಮ್ಮತವಾಗಿ ತನಗೆ ತಿಳಿದುದನ್ನು ಹೇಳದೆ, ದನದ ಕಿವಿಯಂತೆ ಅತ್ತಿತ್ತ ತೂಗಾಡುತ್ತಿದ್ದರೆ, ಧರ್ಮಭ್ರಷ್ಟನಾಗುವನು. ಅವನಿಗೆ ಯಾವ ಲೋಕಗಳೂ ಇರುವುದಿಲ್ಲ. ಅವನಿಗೆ ಪ್ರಜೆಗಳೂ ಇಲ್ಲ. ಧರ್ಮವನ್ನು ತಿಳಿದೂ ಹೇಳಲಾರದೆ ಯೋಚಿ ಸುತ್ತ ಯಾರು ಸುಮ್ಮನಿರುವರೋ, ಅವರನ್ನು ನದಿಗಳು ತೀರವೃಕ್ಷಗ ಳನ್ನು ಹೇಗೋಹಾಗೆ ಧರ್ಮವು, ಅಧೋಗತಿಗೆ ತಳ್ಳುವುವು. ಯಾವ ಸಭೆಯಲ್ಲಿ ನಿಂದಾರ್ಹನು ನಿಂದಿಸಲ್ಪಡುವುದಿಲ್ಲವೋ, ಅವನು ಮಾಡಿದ ಪಾಪದಲ್ಲಿ ಅರ್ಧಪಾಲು ಆ ಸಭೆಯಲ್ಲಿ ಪ್ರಮುಖನಾದವನಿಗೂ, ಕಾಲುಭಾ ಗವು ಇತರಸಭಾಸದರಿಗೂ ಸೇರುವುದು. ಉಳಿದ ಕಾಲುಭಾಗಕ್ಕೆ ಮಾತ್ರ ಆ ನಿಂದಿತಕಾರ್ಯವನ್ನು ಮಾಡಿದವನು ಪಾತ್ರನಾಗುವನು. ಯಾವ ಸಭೆಯಲ್ಲಿ ನಿಂದಾರ್ಹನು ನಿಂದಿಸಲ್ಪಡುವನೋ, ಅಲ್ಲಿ ಸಭಾಪ್ರಮುಖ ನಾಗಲಿ, ಸಭಾಸದರಾಗಲಿ ದೋಷಭಾಗಿಗಳಾಗದೆ, ಆ ನಿಂದಿತಕಾರ್ಯ ವನ್ನು ಮಾಡಿದವನಮೇಲೆಯೇ ಪಾಪವೆಲ್ಲ ಪೂರ್ಣವಾಗಿ ಬೀಳುವುದು" ಎಂದಿತು. ಆಗ ತಿರುಗಿ ಪ್ರಹ್ಲಾದನು ಹಂಸವನ್ನು ನೋಡಿ "ಎಲೈ ಹಂಸವೆ! ಕಾಮದಿಂದಲೋ, ಮೋಹದಿಂದಲೋ ಸುಳ್ಳಾಡಿದವನು ಯಾ ವ ನರಕದುಃಖಕ್ಕೊಳಗಾಗುವನು?" ಎಂದು ಕೇಳಿದನು. ಅದಕ್ಕಾ ಹಂಸವು "ಪ್ರಹ್ಲಾದಾ! ಕೇಳು! ತನ್ನ ಪತಿಯೊಡನೆ ಬೇರೊಬ್ಬ ಸವ ತಿಯು ಮಲಗಿರುವುದನ್ನು ನೋಡಿಬಂದ ಸ್ತ್ರೀಯೂ, ಜೂಜಿನಲ್ಲಿ ಹಣ ವನ್ನು ಸೋತುಬಂದವನೂ, ಬಹಳ ತೀವ್ರವಾದ ಚಿಂತಾಭಾರದಿಂದ ಕುದಿಯುವನೂ, ಆಯಾದಿನದ ರಾತ್ರಿಯಲ್ಲಿ ಎಂತಹ ಕಷ್ಟವನ್ನನುಭವಿ ಸುವರೋ, ಸುಳ್ಳಾಡಿದವರೂ ಅಂತಹ ಕಷ್ಟವನ್ನೇ ಅನುಭವಿಸುವರು. ಮತ್ತು ಊರ ಹೊರಬಾಗಿಲಲ್ಲಿ ತಡೆಯಲ್ಪಟ್ಟು, ಆಹಾರವಿಲ್ಲದೆ ಹಸಿವಿ ನಿಂದ ಸಂಕಟಪಡುತ್ತ, ಅನೇಕ ಶತ್ರುಗಳ ನಡುವೆ ಸಿಕ್ಕಿದವನು ಅನು ಭವಿಸುವ ದುಃಖವನ್ನೇ ಸುಳ್ಳಾಡಿದವನೂ ಅನುಭವಿಸುವನು. ಇತರ

ರಿಂದ ದ್ರೋಹಮಾಡಲ್ಪಟ್ಟವನೂ, ತನ್ನ ಪ್ರಿಯಮಿತ್ರನಿಂದ ಸುಳ್ಳಾಡಿ ವಂಚಿಸಲ್ಪಟ್ಟವನೂ, ತನ್ನ ಸರ್ವಸ್ವವನ್ನು ಕಳೆದುಕೊಂಡವನೂ, ಆ ರಾತ್ರಿಯಲ್ಲಿ ಎಂತಹ ವ್ಯಸನವನ್ನು ಅನುಭವಿಸುವನೋ, ಸುಳ್ಳಾಡಿದವನಿಗೂ ಅದೇ ಗತಿಯಾಗುವುದು. ಪ್ರಹ್ಲಾದಾ! ಒಂದು ಆಡಿಗಾಗಿ ಸುಳ್ಳಾಡಿದವನು ತನ್ನ ಪೂರ್ವದ ಐದುಮಂದಿ ಪಿತೃಗಳನ್ನು ಅಧೋಗತಿಗೆ ತರುವನು. ಒಂದು ಹಸುವಿಗಾಗಿ ಸುಳ್ಳಾಡಿದವನು ತನ್ನ ಹತ್ತು ಮಂದಿ ಪಿತೃಗಳನ್ನು ಅಧೋಗತಿಗಿಳಿಸುವನು. ಒಂದು ಕುದುರೆಗಾಗಿ ಸುಳ್ಳಾಡಿದವನು, ತನ್ನ ಪೂರ್ವದ ನೂರು ಪಿತೃಗಳನ್ನು ಅಧೋಗತಿಗೀಡುಮಾಡುವನು. ಒಬ್ಬ ಮನುಷ್ಯನಿಗಾಗಿ ಸುಳ್ಳಾಡಿದವನು ತನ್ನ ಹಿಂದಿನ ಸಾವಿರ ತಲೆಮೊರೆಯವರನ್ನು ಕೆಡಿಸುವನು. ಸುವರ್ಣಕ್ಕಾಗಿ ಸುಳ್ಳಾಡುವವನು ತನಗೆ ಸಂಬಂಧಿಸಿ ಹುಟ್ಟಿದವರನ್ನೂ, ಇನ್ನು ಮುಂದೆ ಹುಟ್ಟುವವರನ್ನೂ ಕೆಡಿಸುವನು. ಒಂದು ಭೂಮಿಯ ನಿಮಿತ್ತವಾಗಿ ಸುಳ್ಳಾಡಿದವನು ಸರ್ವನಾಶಕವಾಗುವನು. ಆದುದರಿಂದ ಭೂಮಿಯನಿಮಿತ್ತವಾಗಿ ಎಂದಿಗೂ ಸುಳ್ಳಾಡಲಾಗದು'' ಎಂದಿತು. ಆಗ ಪ್ರಹ್ಲಾದನು, ತನ್ನ ಮಗನಾದ ವಿರೋಚನನನ್ನು ಕುರಿತು ''ಕುಮಾರಾ! ನನಗಿಂತಲೂ ಈ ಸುಧನ್ವನ ತಂದೆಯೇ ಶ್ರೇಷ್ಠನು. ನಿನಗಿಂತಲೂ ಈ ಸುಧನ್ವನು ಶ್ರೇಷ್ಠನು. ನಿನ್ನ ತಾಯಿಗಿಂತಲೂ ಈ ಸುಧನ್ವನ ತಾಯಿಯೇ ಮೇಲು! ಆದುದರಿಂದ ಸುಧನ್ವನಿಂದ ನೀನು ಪರಾಜಿತನಾದೆ. ಈಗ ನಿನ್ನ ಪ್ರಾಣವು ಈ ಸುಧನ್ವನ ಕೈಯಲ್ಲಿರುವುದು. ಈಗ ನಿನ್ನನ್ನು ಕೊಲ್ಲುವುದಕ್ಕೂ ಬಿಡುವುದಕ್ಕೂ ಅವನೇ ಬಾಧ್ಯನು'' ಎಂದು ಹೇಳಿ, ಆ ಸುಧನ್ವನ ಕಡೆಗೆ ತಿರುಗಿ ''ಓ ಬ್ರಾಹ್ಮಣೋತ್ತಮಾ! ನೀನು ಇವನಿಗೆ ಪ್ರಾಣದಾನವನ್ನು ಮಾಡಿ, ನನ್ನ ಮಗನನ್ನು ನನಗೆ ಬದುಕಿಸಿಕೊಡಬೇಕು'' ಎಂದನು. ಆಗ ಸುಧನ್ವನು ''ಓ ಪ್ರಹ್ಲಾದಾ! ನೀನು ಪುತ್ರಮೋಹಕ್ಕೆ ಒಳಗಾಗಿ ಸುಳ್ಳನ್ನಾಡದೆ ಧರ್ಮವನ್ನೇ ಹಿಡಿದು ಮಾತಾಡಿದೆ. ನಿನ್ನ ಧರ್ಮಕ್ಕೆ ಮೆಚ್ಚಿ ನಾನು, ಇದೋ! ನಿನ್ನ ಮಗನ ಪ್ರಾಣವನ್ನು ಕೊಟ್ಟಿರುವೆನು. ಇವನನ್ನು ನೀನು ಸ್ವೀಕರಿಸು. ಆದರೆ, ಇವನು ಯೊರಮುಂದೆ ತನ್ನ ಪ್ರಾಣವನ್ನು ಪಂಥ

ಕ್ಕೊಡ್ಡಿ ನನ್ನೊಡನೆ ಸ್ಪರ್ಧೆಮಾಡಿಕೊಂಡು ಬಂದನೋ, ಆ ಕೇಶಿನಿಯ ಮುಂದೆ ಇವನು ನನ್ನ ಕಾಲುಗಳನ್ನು ತೊಳೆಯಬೇಕು* " ಎಂದನು.

ಓ ಧೃತರಾಷ್ಟ್ರಮಹಾರಾಜಾ! ಧರ್ಮವು ಹೀಗಿರುವುದರಿಂದ ನೀನೂ ನಿನ್ನ ಮಗನಲ್ಲಿ ಮೋಹಗೊಂಡು ಭೂಮಿಗಾಗಿ ಸುಳ್ಳಾಡಬಾರದು. ಆ ಪಾಪದಿಂದ ನೀನು ನಿನ್ನ ಮಕ್ಕಳೊಡನೆಯೂ, ಮಂತ್ರಿವರ್ಗಗಳೊಡನೆಯೂ ಅನ್ಯಾಯವಾಗಿ ಕೆಟ್ಟುಹೋಗಬೇಡ. ದೇವತೆಗಳು ಪಶುಪಾಲಕರಂತೆ ಕೈಯಲ್ಲಿ ಕೋಲನ್ನು ಹಿಡಿದು, ನಮ್ಮನ್ನು ರಕ್ಷಿಸತಕ್ಕವರಲ್ಲ. ದೇವತೆಗಳು ಯಾರನ್ನು ರಕ್ಷಿಸಬೇಕೆಂದು ಬಯಸುವರೋ, ಅವರಿಗೆ ಒಳ್ಳೇ ಬುದ್ಧಿಯನ್ನು ಕೊಡುವರು. ಮನುಷ್ಯನ ಬುದ್ಧಿಯು ಒಳ್ಳೇ ಮಾರ್ಗದಲ್ಲಿ ಹೇಗೆಹೇಗೆ ಪ್ರವರ್ತಿಸುವುದೋ, ಹಾಗೆಲ್ಲಾ ಅವನಿಗೆ ಕೋರಿಕೆಗಳು ಕೈಗೂಡಿಬರುವುದರಲ್ಲಿ ಸಂದೇಹವಿಲ್ಲ. ಓ ರಾಜಾ! ಕೇವಲವಂಚನೆಯಲ್ಲಿಯೇ ಬಿದ್ದು, ವಂಚನಾಸ್ವಭಾವವುಳ್ಳ ಮನುಷ್ಯನಿಗೆ, ವೇದಮಂತ್ರಗಳಿಂದ ಪ್ರಾಯಶ್ಚಿತ್ತವೇನೂ ದೊರೆಯಲಾರದು. ರೆಕ್ಕೆಬೆಳೆದ ಹಕ್ಕಿಗಳು ತಾವಿದ್ದ ಗೂಡನ್ನು ಬಿಟ್ಟು ಹೊರಗೆ ಹೋಗುವಂತೆ, ಕೊನೆಗಾಲದಲ್ಲಿ ವೇದಗಳೂ ಇವನನ್ನು ತೊರೆದುಹೋಗುವುವು. ಕುಡಿಯುವುದು, ಕಲಹವನ್ನೊಡ್ಡುವುದು, ಅನೇಕರೊಡನೆ ವೈರವನ್ನು ಬೆಳೆಸುವುದು, ದಂಪತಿಗಳನ್ನಗಲಿಸುವುದು, ಬಂಧುಗಳಲ್ಲಿ ಭೇದವನ್ನು ಹುಟ್ಟಿಸುವುದು, ರಾಜರಿಗೆ ದ್ರೋಹಮಾಡುವುದು, ಸ್ತ್ರೀಪುರುಷರಲ್ಲಿ ವೈರವನ್ನು ಹುಟ್ಟಿಸುವುದು, ಇವೆಲ್ಲವೂ ಪಾಪಕಾರ್ಯಗಳು. ಇವುಗಳನ್ನು ವಿವೇಕಿಯಾದವನು ತ್ಯಜಿಸಬೇಕು. ಓ ಮಹಾರಾಜಾ! ಸಾಮುದ್ರಿಕವನ್ನು ಹೇಳುವವನೂ, ಮೊದಲು ಚೋರನಾಗಿದ್ದು ವರ್ತಕಕ್ಕೆ ತಿರುಗಿದವನೂ, ಶಕುನ ಮುಂತಾದುವುಗಳನ್ನು ಹೇಳುವುದರಿಂದ ಇತರರನ್ನು ವಂಚಿಸಿ ಜೀವನಮಾಡತಕ್ಕವನೂ, ವೈದ್ಯಮಾಡುವವನೂ, ತನ್ನಲ್ಲಿ ವೈರವುಳ್ಳವನೂ, ತನಗೆ ಮಿತ್ರನಾದವನೂ, ಗಾಯ

* ವಿವಾಹಕಾಲದಲ್ಲಿ ವಧೂವರರನ್ನು ನಿಲ್ಲಿಸಿ, ಅರಿಸಿನದ ನೀರಿನಲ್ಲಿ ಕಾಲನ್ನು ತೊಳೆಯುವುದು ಪದ್ಧತಿ. ಅದರಂತೆ ಈಗ ವಿರೋಚನನು ನನ್ನ ಮತ್ತು ಕೇಶಿನಿಯ ವಿವಾಹಕ್ಕೆ ಸಮ್ಮತಿಸಿ, ತಾನೇ ನಮ್ಮ ಕಾಲನ್ನು ತೊಳೆಯಬೇಕೆಂಬುದು ಇಲ್ಲಿನ ಅಭಿಪ್ರಾಯವು.

ಕನೂ ಈ ಏಳುಮಂದಿಯೂ ಮಧ್ಯಸ್ಥರಾಗಿರಲು ಅರ್ಹರಲ್ಲ. ಡಂಭಕ್ಕಾಗಿ ಅಗ್ನಿಹೋತ್ರಗಳನ್ನು ನಡೆಸುವುದು, ಮೌನವನ್ನು ಹಿಡಿಯುವುದು, ಅಧ್ಯಯನವನ್ನು ಮಾಡುವುದು, ಯಜ್ಞವನ್ನು ನಡೆಸುವುದು ಇವು ನಾಲ್ಕೂ ಇತರರಿಗೆ ಭಯವನ್ನು ಹುಟ್ಟಿಸತಕ್ಕವುಗಳಲ್ಲದಿದ್ದರೂ ಅವು ಕ್ರಮವಾಗಿ ನಡೆಯದುದರಿಂದ ಬಹಳ ಅಪಾಯಕಾರಣಗಳೇ. ಮನೆಗೆ ಬೆಂಕಿಯಿಡುವವನೂ, ವಿಷಪ್ರಯೋಗಮಾಡುವವನೂ, ಪತ್ನಿಯನ್ನು ವ್ಯಭಿಚಾರಕ್ಕೆ ಬಿಟ್ಟು ಅದರಿಂದ ಜೀವಿಸತಕ್ಕವನೂ, ಸೋಮಲತೆಯನ್ನು ವಿಕ್ರಯಿಸುವವನೂ, ಆಯುಧಗಳನ್ನು ನಿರ್ಮಿಸುವವನೂ, ಚಾಡಿಕೋರನೂ (ಶಕುನಾದಿಗಳನ್ನು ಹೇಳಿ ಅದರಿಂದ ಜೀವಿಸತಕ್ಕವನು) ಮಿತ್ರದ್ರೋಹಿಯೂ, ಪರಸ್ತ್ರೀಯರಲ್ಲಿ ಪ್ರವೇಶಿಸುವವನೂ, ಗರ್ಭವನ್ನು ಕೆಡಿಸತಕ್ಕವನೂ (ಭ್ರೂಣಹತ್ಯ ಮಾಡತಕ್ಕವನೂ), ಆಚಾರ್ಯಪತ್ನಿಯನ್ನು ಬಯಸುವವನೂ, ಬ್ರಾಹ್ಮಣನಾಗಿ ಮದ್ಯಪಾನಮಾಡತಕ್ಕವನೂ, ಅತಿಕ್ರೂರವಾಗಿ ವರ್ತಿಸತಕ್ಕವನೂ, ಅಶುಚಿಯೂ, ದೇವರೇ ಇಲ್ಲವೆಂದು ಹೇಳುವ ನಾಸ್ತಿಕನೂ, ವೇದಗಳನ್ನು ನಿಂದಿಸುವವನೂ, ಲಂಚತೆಗೆಯುವವನೂ (ಗ್ರಾಮಪುರೋಹಿತನೂ) ಸಕಾಲದಲ್ಲಿ ಉಪನಯನವಿಲ್ಲದೆ ಇರುವವನೂ, ಉಳುವವನೂ (ರಹಸ್ಯವಾಗಿ ಕುರಿಗಳನ್ನು ಕೊಲ್ಲುವವನೂ) ತನಗೆ ಶಕ್ತಿಯಿದ್ದರೂ ತನ್ನಲ್ಲಿ ಮರೆಹೊಕ್ಕು ಬಂದವರನ್ನು ಹಿಂಸೆಗೆ ಗುರಿಮಾಡುವವನೂ, ಇವರೆಲ್ಲರೂ ಬ್ರಹ್ಮಹತ್ಯವನ್ನು ಮಾಡಿದವರಿಗೆ ಸಮಾನರು. ಬಂಗಾರದ ಗುಣವು ಬೆಂಕಿಯಲ್ಲಿಯೂ, ಉತ್ತಮ ಕುಲದವನೆಂಬುದು ಅವನವನ ಶೀಲದಲ್ಲಿಯೂ, ಸಾಧುತ್ವವು ಅವನವನ ನಡವಳಿಕೆಗಳಲ್ಲಿಯೂ, ಶೂರನೆಂಬುದು ಭಯಕಾಲದಲ್ಲಿಯೂ, ಧೀರನೆಂಬುದು ಹಣದ ಕಷ್ಟದಲ್ಲಿಯೂ, ಶತ್ರುಗಳು ಅಥವಾ ಮಿತ್ರರೆಂಬುದು ಆಪತ್ತುಗಳಲ್ಲಿಯೂ ಹೊರಬೀಳುವುದು. ಮುಪ್ಪು ರೂಪವನ್ನೂ, ಆಶೆಯು ಧೈರ್ಯವನ್ನೂ, ಮೃತ್ಯುವು ಪ್ರಾಣಗಳನ್ನೂ, ಅಸೂಯೆಯು ಧರ್ಮಕಾರ್ಯಗಳನ್ನೂ, ಕೋಪವು ಸಂಪತ್ತನ್ನೂ, ಕೆಟ್ಟವರಲ್ಲಿ ಸೇವೆಮಾಡುವುದು ಮನುಷ್ಯನ ಶೀಲವನ್ನೂ, ಕಾಮವು ಲಜ್ಜೆಯನ್ನೂ ಅಪಹರಿಸುವುದು. ಮದವೆಂಬುದು ಎಲ್ಲವನ್ನೂ ಕೆಡಿಸುವುದು. ಕೋಪವುಳ್ಳವನಿಗೆ ಭಾಗ್ಯವಿಲ್ಲ!

ಘಾತುಕರಿಗೆ ಸ್ನೇಹಿತರಿಲ್ಲ! ಕ್ರೂರನಿಗೆ ಹೆಂಡತಿಯಿಲ್ಲ! ಸುಖಾಸಕ್ತನಿಗೆ ವಿದ್ಯೆಯಿಲ್ಲ! ಕಾಮವುಳ್ಳವನಿಗೆ ಲಜ್ಜೆಯಿಲ್ಲ! ಸೋಮಾರಿಗೆ ಸಂಪತ್ತಿಲ್ಲ! ಮನಸ್ಸಿನಲ್ಲಿ ಸ್ಥಿಮಿತವಿಲ್ಲದ ಚಂಚಲಚಿತ್ತನಿಗೆ ಯಾವುದೂ ಇರಲಾರದು. ಲಕ್ಷ್ಮಿಯೆಂಬುದು ಸತ್ಕಾರ್ಯದಿಂದ ಲಭಿಸುವುದು, ಚಟುವಟಿಕೆಯಿಂದ ಬೆಳೆಯುವುದು, ಬುದ್ಧಿವಂತಿಕೆಯಿಂದ ಬೇರೂರುವುದು, ಆತ್ಮನಿಗ್ರಹದಿಂದ (ವಿನಯದಿಂದ) ಸ್ಥಿರವಾಗಿ ನಿಲ್ಲುವುದು. ಪ್ರಜ್ಞೆ, ಕುಲೋನ್ನತಿ, ಇಂದ್ರಿಯನಿಗ್ರಹ, ಶಾಸ್ತ್ರಾಭ್ಯಾಸ, ಪರಾಕ್ರಮ, ಮಿತವಾಗಿ ಮಾತಾಡುವುದು, ಶಕ್ತಿಗೆ ತಕ್ಕಂತೆ ದಾನಮಾಡುವುದು, ಉಪಕಾರಸ್ಮರಣೆ, ಇವೆಂಟು ಗುಣಗಳೂ ಮನುಷ್ಯನನ್ನು ಪ್ರಕಾಶಕ್ಕೆ ತರುವುವು. ಅಣ್ಣಾ! ಅತ್ಯುತ್ತಮಗಳಾದ ಈ ಎಂಟು ಗುಣಗಳನ್ನೂ ಬಲಾತ್ಕಾರದಿಂದ ತಂದು ಸೇರಿಸತಕ್ಕ ಒಂದು ಗುಣವುಂಟು. ರಾಜನಾದವನು ಒಬ್ಬ ಮನುಷ್ಯನನ್ನು ಯಾವಾಗ ಸತ್ಕರಿಸುವನೋ, ಆಗ ಆ ರಾಜಸತ್ಕಾರವೆಂಬ ಒಂದು ಗುಣವೇ ಅವನಲ್ಲಿ ಈ ಎಲ್ಲಾ ಗುಣಗಳನ್ನೂ ಚೆನ್ನಾಗಿ ಪ್ರಕಾಶಗೊಳಿಸುವುವು. ಓ ರಾಜಾ! ಈ ಕೆಳಗೆ ಕಾಣಿಸಿದ ಎಂಟು ಗುಣಗಳೂ ಈ ಲೋಕದಲ್ಲಿ ಮನುಷ್ಯನಿಗೆ ಸದ್ಗತಿಯನ್ನು ಕಾಣಿಸತಕ್ಕವುಗಳು. ಆ ಎಂಟರಲ್ಲಿ ಮೊದಲನೆಯ ನಾಲ್ಕು ಸತ್ಪುರುಷರನ್ನು ಎಡೆಬಿಡದೆ ಅಂಟಿರುವುವು. ಕೊನೆಯ ನಾಲ್ಕು ಗುಣಗಳನ್ನು ಸತ್ಪುರುಷರು ಹಿಂಬಾಲಿಸುವರು. ಹೇಗೆಂದರೆ ಯಜ್ಞ, ದಾನ, ಅಧ್ಯಯನ, ತಪಸ್ಸೆಂಬ ಈ ನಾಲ್ಕೂ ಸತ್ಪುರುಷರಲ್ಲಿ ನೆಲೆಗೊಂಡಿರುವುವು. ಇಂದ್ರಿಯನಿಗ್ರಹ, ಸತ್ಯ, ನಿಷ್ಕಪಟವಾದ ಪ್ರವರ್ತನೆ (ಋಜುತ್ವ) ಕ್ರೂರತ್ವವಿಲ್ಲದಿರುವುದು, ಇವು ನಾಲ್ಕೂ ಸತ್ಪುರುಷರಿಂದ ಎಡೆಬಿಡದೆ ಅನುವರ್ತಿಸಲ್ಪಡತಕ್ಕವುಗಳು. ಯಾಗ, ದಾನ, ಅಧ್ಯಯನ, ತಪಸ್ಸು, ಸತ್ಯ, ತಾಳ್ಮೆ, ದಯೆ, ಲೋಭವಿಲ್ಲದಿರುವುದು, ಇವೆಂಟೂ ಧರ್ಮಕ್ಕೆ ಎಂಟು ಬಗೆಯ ಹಾದಿಗಳೆನಿಸಿವೆ. ಈ ಎಂಟರಲ್ಲಿ ಮೊದಲನೆಯ ನಾಲ್ಕೂ ಕೇವಲ ಡಂಭಕ್ಕಾಗಿಯೂ ನಡೆಸಲ್ಪಡುವುದುಂಟು. ಕೊನೆಯ ನಾಲ್ಕುಗುಣಗಳೂ, ಮಹಾತ್ಮರಲ್ಲದವರಲ್ಲಿ ಕಾಣಿಸಲಾರವು. ಓ ಮಹಾರಾಜಾ! ಎಲ್ಲಿ ವೃದ್ಧರಿಲ್ಲವೋ ಅದು ಸಭೆಯೆನಿಸುವುದಿಲ್ಲ. ಧರ್ಮವನ್ನು ಹೇಳದಿರತಕ್ಕವರು ವೃದ್ಧರಲ್ಲ. ಸತ್ಯವಿಲ್ಲದುದು 'ಧರ್ಮವಲ್ಲ. ಕಪಟದಿಂದ ಕೂ

ಡಿದುದು ಸತ್ಯವೆನಿಸುವುದಿಲ್ಲ. ಸತ್ಯ, ಸೌಮ್ಯತೆ, ಶಾಸ್ತ್ರಶ್ರವಣ, ವಿದ್ಯೆ, ಕುಲೀನತೆ, ಶೀಲ, ಬಲ, ಧನ, ಶೌರ್ಯ, ಯುಕ್ತಿಯುಕ್ತವಾದ ಮಾತು, ಇವುಹತ್ತೂ ಸ್ವರ್ಗಕಾರಣಗಳು. ಪಾಪಕಾರ್ಯವನ್ನು ಮಾಡಿದವನು ಎಂದಿಗೂ ಪಾಪಿಯೆಂಬ ಹೆಸರನ್ನೇ ಪಡೆದು, ಪಾಪಫಲವನ್ನೇ ಅನುಭವಿಸುವನು. ಪುಣ್ಯಮಾಡಿದವನು ಪುಣ್ಯಕೀರ್ತಿಯೆನಿಸಿಕೊಂಡು ಪುಣ್ಯ ಫಲವನ್ನೇ ಅನುಭವಿಸುವನು. ಆದುದರಿಂದ ಮನುಷ್ಯನು ಪಾಪಕಾರ್ಯಕ್ಕೆ ಸ್ವಲ್ಪವಾದರೂ ಮನಸ್ಸಿಡಬಾರದು. ಪಾಪಕ್ಕೆ ಆಗಾಗ ಮನಸ್ಸುಕೊಡುತ್ತಿದ್ದರೆ, ಅದು ಮನುಷ್ಯನ ಪ್ರಜ್ಞೆಯನ್ನು ಕೆಡಿಸುವುದು. ಪ್ರಜ್ಞೆಕೆಟ್ಟುಹೋದ ಮನುಷ್ಯನು ಮೇಲೆಮೇಲೆ ಪಾಪವನ್ನೇ ಮಾಡುತ್ತಿರುವನು. ಪುಣ್ಯವನ್ನು ಮಾಡುತ್ತಿದ್ದಷ್ಟೂ, ಅದು ಮನುಷ್ಯನ ಪ್ರಜ್ಞೆಯನ್ನು ಹೆಚ್ಚಿಸುತ್ತಿರುವುದು. ಅಂತವನು ಪ್ರತಿದಿನವೂ ಮೇಲೆಮೇಲೆ ಪುಣ್ಯವನ್ನೇ ಮಾಡುತ್ತಿರುವನು. ಪುಣ್ಯಮಾಡಿದವನು ಪವಿತ್ರವಾದ ಯಶಸ್ಸನ್ನು ಹೊಂದಿ, ಕೊನೆಗೆ ಪುಣ್ಯಸ್ಥಾನವನ್ನೇ ಪಡೆಯುವನು. ಆದುದರಿಂದ ಮನುಷ್ಯನು ಸ್ಥಿರಮನಸ್ಸಿನಿಂದ ಪುಣ್ಯವನ್ನೇ ನಡೆಸಬೇಕು.

ಇತರರ ಮೇಲ್ಮೆಯನ್ನು ಕಂಡು ಅಸೂಯೆಪಡುವವನೂ, ಕುಹಕವಾದ ಮಾತುಗಳಿಂದ ಮತ್ತೊಬ್ಬರನ್ನು ಸಂಕಟಗೊಳಿಸುವವನೂ, ಅಪ್ರಿಯವಾದ ಮಾತುಗಳನ್ನಾಡುವವನೂ, ವೈರವನ್ನು ಸಾಧಿಸುವವನೂ, ಯಾರಿಗೂ ಬಗ್ಗದ ಶಠಸ್ವಭಾವವುಳ್ಳವನೂ, ಆಕಸ್ಮಿಕವಾದ ಪಾಪಗಳಲ್ಲಿ ಪ್ರವರ್ತಿಸಿ ಮಹತ್ತಾದ ಕಷ್ಟಕ್ಕೆ ಗುರಿಯಾಗುವನು. ಅಸೂಯೆಪಡದೆ, ವಿವೇಕಿಯಾಗಿ, ಒಳ್ಳೆಯ ಕಾರ್ಯವನ್ನೇ ನಡೆಸತಕ್ಕವನು, ಎಂದಿಗೂ ಅಧಿಕಕಷ್ಟಕ್ಕೆ ಗುರಿಯಾಗುವುದಿಲ್ಲ. ಎಲ್ಲರಿಗೂ ಅವನು ಪ್ರಿಯನಾಗುವನು. ಯಾವನು ಅಲ್ಲಲ್ಲಿ ತಿಳಿದವರಿಂದ ಒಳ್ಳೇ ಸದ್ಬುದ್ಧಿಯನ್ನು ಸಂಗ್ರಹಿಸುವನೋ ಅವನೇ ಪಂಡಿತನು. ಅಂತವನು, ಧರ್ಮಾರ್ಥಗಳನ್ನು ಸಾಧಿಸಿ, ಸುಖದಿಂದ ಅಭಿವೃದ್ಧಿಗೆ ಬರಬಲ್ಲನು. ಓ ಧೃತರಾಷ್ಟ್ರಮಹಾರಾಜಾ! ಮನುಷ್ಯನು ರಾತ್ರಿಯನ್ನು ಸುಖವಾಗಿ ಕಳೆಯುವ ಕಾರ್ಯವನ್ನೇ ಹಗಲೆಲ್ಲ ಮಾಡಬೇಕು. ಮಳೆಗಾಲದ ನಾಲ್ಕು ತಿಂಗಳಲ್ಲಿ ಸುಖವಾಗಿರುವುದಕ್ಕೆ

ಬೇಕಾದ ಕಾರ್ಯವನ್ನೇ ಉಳಿದ ಎಂಟು ತಿಂಗಳಲ್ಲಿಯೂ ನಡೆಸಬೇಕು. ಮುಪ್ಪಿನಲ್ಲಿ ಸುಖವಾಗಿರುವುದಕ್ಕೆ ಬೇಕಾದ ಸೌಕರ್ಯಗಳನ್ನೇ ಯೌವನ ಕಾಲದಲ್ಲಿ ಕಲ್ಪಿಸಿಕೊಳ್ಳಬೇಕು. ದೇಹಾವಸಾನದಲ್ಲಿ ಪರಲೋಕದಲ್ಲಿ ಸುಖವಾಗಿರುವುದಕ್ಕೆ ಬೇಕಾದ ಕಾರ್ಯಗಳನ್ನು ಜೀವಿತಕಾಲದಲ್ಲಿ ನಡೆಸುತ್ತಿರಬೇಕು. ಜೀರ್ಣವಾದ ಅನ್ನವೂ, ಯೌವನವು ಕಳೆದುಹೋದ ಭಾರ್ಯೆಯೂ, ಯುದ್ಧದಲ್ಲಿ ಜಯಿಸಿದ ಶೂರನೂ, ತತ್ವಜ್ಞಾನವನ್ನು ಪಡೆದ ತಪಸ್ವಿಯೂ ಲೋಕದಲ್ಲಿ ಪ್ರಶಂಸೆಗೆ ಪಾತ್ರರಾಗುವರು. ಓ ಮಹಾರಾಜಾ! ಅಧರ್ಮದಿಂದ ಬಂದ ಐಶ್ವರ್ಯವು ಮನುಷ್ಯನ ದೋಷಗಳಗಳನ್ನು ಮರೆಸಿಟ್ಟರೂ, ಆ ದೋಷಗಳು ಮುಂದೆ ಬೇರೆ ರಂಧ್ರಗಳ ಮಾರ್ಗವಾಗಿ ಹೇಗಿದ್ದರೂ ಹೊರಗೆ ಬಾರದಿರುವುವು. (ಒಡೆದು ದುರ್ಬಲವಾದ ಕೆರೆಯ ಕಟ್ಟೆಯಲ್ಲಿ, ಬಲಾತ್ಕಾರದಿಂದ ಒಂದು ರಂಧ್ರವನ್ನು ಮುಚ್ಚಿದರೂ, ಬೇರೆ ಅನೇಕರಂಧ್ರಗಳಾಗಿ, ನೀರು ಹೊರಗೆ ಬಂದೇ ಬರುವುವಲ್ಲವೆ?) ಇಂದ್ರಿಯವನ್ನಡಗಿಸಬಲ್ಲವರಿಗೆ ಗುರುವು ನಿಯಾಮಕನು. ದುರಾತ್ಮರಿಗೆ ರಾಜನು ನಿಯಾಮಕನು. ಮನಸ್ಸಿನಲ್ಲಿ ಪಾಪಬುದ್ಧಿಯುಳ್ಳ ಕಪಟಿಗಳಿಗೋ ಯಮನೇ ನಿಯಾಮಕನು. ಓ ಮಹಾರಾಜಾ! ಮಹರ್ಷಿಗಳು, ನದಿಗಳು, ಮಹಾತ್ಮರ ವಂಶಗಳು, ಸ್ತ್ರೀಯರ ಕೆಟ್ಟನಡತೆಗಳು, ಇವುಗಳ ಮೂಲವನ್ನು ವಿಚಾರಿಸಬಾರದು. ಯಾವನು ಬ್ರಾಹ್ಮಣರನ್ನು ಪೂಜಿಸುವನೋ, ಯಾವನು ದಾನಶೀಲನೋ, ಯಾವನು ತನ್ನ ಬಂಧುಗಳಲ್ಲಿ ನಿಷ್ಕಪಟವಾಗಿ ವರ್ತಿಸುವನೋ, ಯಾವನು ಒಳ್ಳೇ ನಡತೆಯುಳ್ಳವನೋ, ಅಂತಹ ಕ್ಷತ್ರಿಯನು ಬಹುಕಾಲದವರೆಗೆ ಪಾಲಿಸುವನು. ಶೂರನೊಬ್ಬನು, ವಿದ್ಯೆಯನ್ನು ಕಲಿತವನೊಬ್ಬನು, ಸೇವಾಧರ್ಮವನ್ನು ಬಲ್ಲವನೊಬ್ಬನು, ಈ ಮೂವರೇ ಭೂಮಿಯಿಂದ ಸುವರ್ಣದ ಬೆಳೆಯನ್ನು ಸಂಪಾದಿಸಬಲ್ಲವರು. ಧೃತರಾಷ್ಟ್ರ ಮಹಾರಾಜಾ! ಲೋಕದಲ್ಲಿ ಬುದ್ಧಿಯಿಂದ ನಡೆಸತಕ್ಕ ವೃತ್ತಿಗಳು ಉತ್ತಮಗಳು. ಭುಜಬಲದಿಂದ ನಡೆಸತಕ್ಕವು ಮಧ್ಯಮಗಳು. ಕಾಲಿನಬಲದಿಂದ ನಡೆಸತಕ್ಕ ವೃತ್ತಿಗಳು ಅಧಮಗಳು. ಹೊರೆಯನ್ನು ಹೊರುವುದರಿಂದ ನಡೆಸತಕ್ಕ ವೃತ್ತಿಗಳು ಅಧಮಾಧಮಗಳು. ಅಣ್ಣಾ! ಈಗ ನೀನು ಮದಾಂಧನಾದ ದುರ್ಯೋಧನನಲ್ಲಿಯೂ,

ಶಕುನಿಯಲ್ಲಿಯೂ, ಮೂಢನಾದ ದುಶ್ಶಾಸನನಲ್ಲಿಯೂ, ಕರ್ಣನಲ್ಲಿಯೂ, ನಿನ್ನ ಅಧಿಕಾರವನ್ನೊಪ್ಪಿಸಿ, ಹೇಗೆತಾನೇ ಸಂಪತ್ತನ್ನು ಬಯಸುವೆ? ಆ ಪಾಂಡವರಾದರೋ, ಸಮಸ್ತ ಗುಣಗಳಿಂದ ಕೂಡಿದವರು. ನಿನ್ನನ್ನು ತಂದೆಯಂತೆ ಭಾವಿಸಿ ನಡೆಯತಕ್ಕವರು. ನೀನೂ ಅವರಲ್ಲಿ ಪುತ್ರಭಾವ ದಿಂದ ವರ್ತಿಸು" ಎಂದನು.

ಇದು ಮೂವತ್ತೈದನೆಯ ಅಧ್ಯಾಯವು.

ವಿದುರನು ಧೃತರಾಷ್ಟ್ರನಿಗೆ, ಆತ್ರೇಯನು ಸಾಧ್ಯರಿಗೆ ಹೇಳಿದ ನೀತಿಗಳನ್ನು ತಿಳಿಸಿ, ಪಾಂಡವರಲ್ಲಿರುವ ಗುಣಗಳನ್ನು ನಿರೂಪಿಸಿ, ಅವರೊಡನೆ ಸಂಧಿಮಾಡಿಕೊಳ್ಳು ವಂತೆ ಹೇಳಿದುದು

ವಿದುರನು ತಿರುಗಿ ಧೃತರಾಷ್ಟ್ರನನ್ನು ಕುರಿತು "ಮಹಾರಾಜಾ! ಇದೇ ವಿಚಾರವಾಗಿ ಹಿಂದೆ ಆತ್ರೇಯಮಹರ್ಷಿಗೂ, ಸಾಧ್ಯರಿಗೂ ನಡೆದ ಸಂವಾದರೂಪವಾದ ಪುರಾತನ ಕಥೆಯೊಂದನ್ನು ಉದಾಹರಿಸುವರು. ನಾನು ಕೇಳಿರುವಂತೆ ಆ ಇತಿಹಾಸವನ್ನು ನಿನಗೆ ತಿಳಿಸುವೆನು ಕೇಳು. ಹಿಂದೆ ಆತ್ರೇಯನೆಂಬ ಮಹರ್ಷಿಯು, ದೃಢವ್ರತವನ್ನು ಹಿಡಿದು, ಹಂಸ (ಸನ್ಯಾಸ) ರೂಪದಿಂದ ಅಲ್ಲಲ್ಲಿ ಸಂಚರಿಸುತ್ತಿದ್ದಾಗ, ಸಾಧ್ಯರೆಂಬ ದೇವತೆ ಗಳು ಮಹಾಪ್ರಾಜ್ಞನೆನಿಸಿದ ಅವನನ್ನು ಹೀಗೆಂದು ಪ್ರಶ್ನೆಮಾಡುವರು. "ಓ ಮಹರ್ಷೀ! ನಾವು ಸಾಧ್ಯರೆಂದು ಕರೆಯಲ್ಪಡುವ ದೇವತೆಗಳು. ನಿನ್ನ ಲಕ್ಷಣಗಳನ್ನು ನೋಡಿ ನೀನು ಇಂತವನೆಂದು ಊಹಿಸುವುದಕ್ಕೆ ನಮಗೆ ಸಾಧ್ಯವಿಲ್ಲ. ಶಾಸ್ತ್ರಶ್ರವಣದಿಂದ ನೀನು ಧೀರನೆಂದೂ, ಧೀಮಂತ ನೆಂದೂ ನಮಗೆ ತೋರುತ್ತಿದೆ. ವಿದ್ವಾಂಸರಿಗೆ ಯೋಗ್ಯವಾಗಿಯೂ, ಉತ್ತ ಮವಾಗಿಯೂ ಇರುವ ಕೆಲವು ನೀತಿವಾಕ್ಯಗಳನ್ನು ನಮಗೆ ತಿಳಿಸಬೇಕು" ಎಂದರು. ಅದಕ್ಕಾ ಸನ್ಯಾಸಿಯು "ಎಲೈ ದೇವತೆಗಳಿರಾ! ನಾನು ನನ್ನ ಗುರುಗಳಿಂದ ಕೇಳಿ ತಿಳಿದಿರುವ ವಿಷಯಗಳನ್ನೇ ಹೇಳುವೆನು ಕೇಳಿರಿ. ಮನುಷ್ಯನು ಧೈರ್ಯವನ್ನೂ, ಮನೋನಿಗ್ರಹವನ್ನೂ, ಸತ್ಯವನ್ನೂ, ಧರ್ಮ

ವನ್ನೂ ಬಿಡದೆ ಅನುವರ್ತಿಸಬೇಕು. ಮತ್ತು ಹೃದಯದೊಳಗಿನ ಆಶಾ ಗ್ರಂಥಿಗಳನ್ನು ನೀಗಿಸಿ, ಪ್ರಿಯಾಪ್ರಿಯಗಳೆರಡನ್ನೂ ಸಮವಾಗಿ ಭಾವಿಸ ಬೇಕು. ಮತ್ತೊಬ್ಬರು ನಿಂದಿಸಿದರೂ ತಾನು ಪ್ರತಿಯಾಗಿ ನಿಂದಿಸಬಾರ ದು. ತಾಳಿದವನ ಕೋಪವೇ ನಿಂದಿಸಿದವನನ್ನು ದಹಿಸಿಬಿಡುವುದು. ನಿಂದಿ ಸಿದವನ ಪುಣ್ಯವೆಲ್ಲವೂ ತಾಳಿದವನಿಗೆ ಬಂದು ಸೇರುವುದು. ಆದುದರಿಂದ ಇತರರನ್ನು ನಿಂದಿಸಬಾರದು! ಅವಮಾನಗೊಳಿಸಲೂ ಬಾರದು! ಮಿತ್ರ ದ್ರೋಹಿಯಾಗಬಾರದು. ನೀಚರಲ್ಲಿ ಸೇವೆಮಾಡಬಾರದು. ಗರ್ವಪಡ ಬಾರದು. ಅಲ್ಪಜೀವನಗಳಿಗೆ ಕೈಯಿಕ್ಕಬಾರದು. ಕ್ರೂರವಾಗಿಯೂ, ಕೋಪಸೂಚಕವಾಗಿಯೂ ಇರುವ ಮಾತುಗಳನ್ನಾಡಬಾರದು. ಕ್ರೂರ ವಾಕ್ಯಗಳು ಮನುಷ್ಯನ ಮರ್ಮಗಳನ್ನೂ, ಅಸ್ಥಿಗಳನ್ನೂ, ಹೃದಯವ ನ್ನೂ, ಪ್ರಾಣಗಳನ್ನೂ ಮೊತ್ತಕ್ಕೆ ಸೇರಿಸಿ ದಹಿಸುವುದು. ಆದುದರಿಂದ ಧರ್ಮದಲ್ಲಿ ನೆಲೆಗೊಂಡವನು, ಕ್ರೂರವಾಕ್ಯಗಳನ್ನು ಯಾವಾಗಲೂ ನುಡಿ ಯಬಾರದು. ಇತರರಿಗೆ ಸಂಕಟವನ್ನುಂಟುಮಾಡತಕ್ಕವನೂ, ಕ್ರೂರ ನೂ, ಕಠಿನವಾಕ್ಯವುಳ್ಳವನೂ, ಮುಳ್ಳುಗಳಂತಿರುವ ಮಾತುಗಳಿಂದ ಮ ನುಷ್ಯರನ್ನು ನೋಯಿಸತಕ್ಕವನೂ ಆದ ಮನುಷ್ಯನನ್ನು, ಜನಗಳಲ್ಲಿ ಕೇವಲ ಅವಲಕ್ಷಣನೆಂದೂ, ಮುಖದಲ್ಲಿ ಮುಚ್ಚಿಡಲ್ಪಟ್ಟ ಮೃತ್ಯುದೇವತೆ ಯುಳ್ಳವನೆಂದೂ ಭಾವಿಸಬೇಕು. ಬೇರೊಬ್ಬನು ತನ್ನನ್ನು ಸೂರ್ಯಾಗ್ನಿ ಗಳಂತೆ ಉರಿಯತಕ್ಕ ತೀಕ್ಷ್ಣವಾದ ವಾಗ್ಬಾಣಗಳಿಂದ ಚುಚ್ಚುತ್ತಿದ್ದರೂ, ವಿವೇಕಿಯು ಅದಕ್ಕಾಗಿ ಕೊರಗದೆ, ಕೋಪಿಸದೆ, ಅಂತವನು ತಾನು ಗಳಿ ಸಿದ ಪುಣ್ಯಗಳನ್ನೆಲ್ಲ ತನಗೆ ಕೊಡುತ್ತಿರುವನೆಂದೇ ತಿಳಿದು ಸಂತೋಷಿಸ ಬೇಕು. ಮನುಷ್ಯನು ಒಳ್ಳೇ ಸತ್ಪುರುಷನನ್ನಾಗಲಿ, ತಪಸ್ವಿಯನ್ನಾಗಲಿ, ಕಳ್ಳನನ್ನಾಗಲಿ ಯಾವನನ್ನು ಸೇವಿಸಿದರೆ, ಅವನ ಗುಣವೇ ಇವನಿಗೂ ಬರುವುದು. ಬಟ್ಟೆಯನ್ನು ಯಾವ ಬಣ್ಣದಲ್ಲಿ ಅದ್ದಿದರೆ ಆ ಬಣ್ಣವನ್ನು ಹಿಡಿದುಕೊಳ್ಳುವಂತೆ, ಇವನಿಗೂ ಸಹವಾಸಕ್ಕೆ ತಕ್ಕ ಗುಣವೇ ಬರುವುದು. ಬೇರೆಯವರು ತನ್ನೊಡನೆ ಬಾಯಾಡಿದರೂ ತಾನು ಹೆಚ್ಚು ಮಾತುಗಳ ನ್ನಾಡಬಾರದು, ಇತರರಿಂದಲೂ ಆಡಿಸಬಾರದು. ಹೊಡೆದರೂ ಪ್ರತಿ ಯಾಗಿ ಹೊಡೆಯಬಾರದು, ಹೊಡೆಸಲೂ ಬಾರದು. ತನಗೆ ಕೇಡು

ಮಾಡಿದವನಿಗೂ ಯಾವನು ಕೇಡೆಣಿಸುವುದಿಲ್ಲವೋ ಅವನನ್ನು ದೇವತೆ ಗಳೂ ಪ್ರೀತಿಸಿ ಇದಿರುಗೊಳ್ಳುವರು. ಮಾತಾಡದೆ ಮೌನದಿಂದಿರುವುದು ಮೇಲು! ಮಾತಾಡಿದರೂ ಸತ್ಯವನ್ನೇ ಆಡುವುದು ಅದಕ್ಕೂ ಮೇಲೆ ಎರ ಡನೆಯದು. ಆ ಸತ್ಯವೂ ಪ್ರಿಯವಾಗಿದ್ದ ಪಕ್ಷದಲ್ಲಿ ಅದಕ್ಕಿಂತಲೂ ಮೇಲಾಗಿ ಇದು ಮೂರನೆಯದು. ಸತ್ಯವೂ, ಪ್ರಿಯವೂ ಆದ ಮಾತನ್ನಾಡುವಾಗ, ಅದು ಧರ್ಮಯುಕ್ತವಾಗಿದ್ದರೆ, ಅದು ಎಲ್ಲಕ್ಕಿಂತಲೂ ಮೇಲಾದ ನಾಲ್ಕ ನೆಯದು. ಮನುಷ್ಯನು ಎಂತವರೊಡನೆ ಕೂಡಾಡುವನೋ, ಎಂತವರಲ್ಲಿ ಸೇವೆಮಾಡುವನೋ, ತಾನು ಮುಂದೆ ಹೇಗಾಗಬೇಕೆಂದು ಬಯಸುವನೋ, ಅದಕ್ಕೆ ತಕ್ಕಂತೆಯೇ ಆಗುವನು. ಮನುಷ್ಯನು ಯಾವಯಾವುದನ್ನು ತೊರೆದುಬಂದರೆ ಅದರಿಂದ ಮುಕ್ತನಾಗುವನು. ಹೀಗೆ ಎಲ್ಲವನ್ನೂ ತೊರೆದುಬಂದವನಿಗೆ ಅಣುಮಾತ್ರವೂ ದುಃಖವಿರದು. ಇಂತವನು ಬೇ ರೊಬ್ಬರಿಂದ ಜಯಿಸಲ್ಪಡುವುದೂ ಇಲ್ಲ. ಇವನಿಗೆ ಬೇರೊಬ್ಬರನ್ನು ಜಯಿ ಸುವ ಆಶೆಯೂ ಹುಟ್ಟದು. ಇವನು ಮತ್ತೊಬ್ಬರನ್ನು ದ್ವೇಷಿಸುವುದಿಲ್ಲ. ಇತರರನ್ನು ಹಂಗಿಸುವುದೂ ಇಲ್ಲ. ನಿಂದಾಸ್ತುತಿಗಳೆರಡೂ ಇವನಿಗೆ ಸಮಾನವೇ! ಇಂತವನು ಇತರರು ತನ್ನನ್ನು ನಿಂದಿಸಿದಾಗ ಕೊರಗು ವುದೂ ಇಲ್ಲ. ಸ್ತುತಿಸಿದಾಗ ಹಿಗ್ಗುವುದೂ ಇಲ್ಲ. ಯಾವನು ಎಲ್ಲರಿಗೂ ಕ್ಷೇಮವನ್ನೇ ಕೋರುತ್ತ, ಮನಸ್ಸಿನಲ್ಲಿ ಯಾರಿಗೂ ಕೇಡನ್ನೆಣಿಸದಿರು ವನೋ, ಯಾವನು ಸತ್ಯವಾದಿಯಾಗಿ, ಮೃದುವಾಗಿ, ಜಿತೇಂದ್ರಿಯನಾಗಿ ರುವನೋ ಅಂತವನು ಪುರುಷರಲ್ಲಿ ಉತ್ತಮನು. ಸ್ವಪ್ರಯೋಜನವಿ ದ್ದಾಗಲೂ ಪ್ರಿಯವಾಕ್ಯವನ್ನು ನುಡಿಯುವವನೂ, ಬಾಯಿಂದಾಡಿದುದನ್ನು ಕೊಟ್ಟುಬಿಡುವವನೂ, ಇತರ ದೋಷವನ್ನು ಕಂಡುಹಿಡಿಯುವವನೂ, ಪುರುಷರಲ್ಲಿ ಮಧ್ಯಮನು. ಅಯೋಗ್ಯಕಾರ್ಯಗಳಿಗೆ ಪ್ರೇರಿಸುವುದೂ, ಇತರರ ತಿರಸ್ಕಾರಕ್ಕೂ, ನಿಂದೆಗೂ ಪಾತ್ರನಾಗುವುದೂ, ಉಪಕಾರಸ್ಮರಣೆ ಯಿಲ್ಲದಿರುವುದೂ, ಯಾರಿಗೂ ತಾನು ಮಿತ್ರನೆನಿಸದೆ, ಮನಸ್ಸಿನಲ್ಲಿ ಕೆಟ್ಟ ಯೋಚನೆಯನ್ನೇ ಮಾಡುತ್ತಿರುವುದೂ, ಇವೆಲ್ಲ ಅಧಮಪುರುಷರ ಲಕ್ಷಣ ಗಳು. ಯಾವನು ತನ್ನಲ್ಲಿ ತನಗೇ ನಂಬಿಕೆಯಿಲ್ಲದವನಾಗಿದ್ದು, ತನ್ನ ಹಿರಿಯರಿಂದಲೂ ತನಗೆ ಕ್ಷೇಮವುಂಟೆಂಬ ನಂಬಿಕೆಯನ್ನಿಡುವುದಿಲ್ಲವೋ,

ತನಗೆ ಆಪ್ತರಾದ ಮಿತ್ರರನ್ನೂ ನಿರಾಕರಿಸುವನೋ ಅಂತವನು, ಮನುಷ್ಯರಲ್ಲಿ ಅಧಮನು. ಮನುಷ್ಯನು ಉತ್ತಮರಲ್ಲಿಯೇ ಸೇವೆಮಾಡಬೇಕು. ಒಂದುವೇಳೆ ಕಷ್ಟಕಾಲವು ಬಂದಾಗ, ಮಧ್ಯಮರಲ್ಲಿ ಸೇವೆಮಾಡಬಹುದು. ತನ್ನ ಹಿತವನ್ನು ಕೋರುವವನು ಅಧಮರಲ್ಲಿ ಸೇವೆಮಾಡಲೇ ಬಾರದು. ಅಧಮನಾದವನು ಅಸತ್ತುಗಳನ್ನಾಶ್ರಯಿಸಿ, ಅವರ ಬಲದಿಂದಲೇ ಹಣವನ್ನು ಗಳಿಸುವನು. ತನ್ನ ಪ್ರಜ್ಞೆಯಿಂದಾಗಲಿ, ಪೌರುಷದಿಂದಾಗಲಿ, ಒಳ್ಳೇ ಪ್ರಶಂಸೆಯನ್ನು ಪಡೆದು ಮುಂದೆಬರುವುದಿಲ್ಲ. ಮಹಾಕುಲದಲ್ಲಿ ಹುಟ್ಟಿದವರ ನಡತೆಯೊಂದೂ ಅವನಿಗೆ ಬರಲಾರದು'' ಎಂದನು

ಆಗ ಧೃತರಾಷ್ಟ್ರನು ತಿರುಗಿ ವಿದುರನನ್ನು ಕುರಿತು, "ಓ ವಿದುರಾ! ದೇವತೆಗಳೇ ಆಗಲಿ, ಧರ್ಮಾರ್ಥಗಳಲ್ಲಿ ನಿರತರಾದ ಸತ್ಪುರುಷರಾಗಲಿ, ಶಾಸ್ತ್ರಜ್ಞರಾಗಲಿ, ಮಹಾಕುಲದವರನ್ನೇ ಪ್ರೀತಿಸುತ್ತಿರುವರು. ಈ ವಿಚಾರದಲ್ಲಿ ನಾನೊಂದು ಪ್ರಶ್ನೆಯನ್ನು ಕೇಳಬೇಕಾಗಿದೆ. ಮಹಾಕುಲಗಳೆಂದರೆ ಯಾವುವು?'' ಎಂದನು. ಅದಕ್ಕಾ ವಿದುರನು "ಮಹಾರಾಜಾ! ತಪಸ್ಸು, ಇಂದ್ರಿಯನಿಗ್ರಹ, ವೇದಾಧ್ಯಯನ, ತಾಳ್ಮೆ, ಯಾಗಾದಿ ಕರ್ಮಗಳು, ಯೋಗ್ಯವಾದ ವಿವಾಹಸಂಬಂಧ, ಯಾವಾಗಲೂ ಪ್ರಿಯವಾದ ಮಾತುಗಳು, ಅನ್ನದಾನ, ಇವೆಂಟು ಗುಣಗಳೂ ಉತ್ತಮರಲ್ಲಿ ಯಾವಾಗಲೂ ನೆಲೆಗೊಂಡಿರುವುವು. ಇಂತವರ ಕುಲಗಳೇ ಮಹಾಕುಲವೆನಿಸುವುವು. ಯಾವ ಕುಟುಂಬದಲ್ಲಿ ಜನರ ನಡತೆಯಾಗಲಿ, ವಂಶಧರ್ಮವಾಗಲಿ ತಪ್ಪಿಹೋಗುವುದಿಲ್ಲವೋ, ಯಾರು ನಿಷ್ಕಳಂಕವಾದ ಮನಸ್ಸಿನಿಂದ ಧರ್ಮವನ್ನು ನಡೆಸುವರೋ, ಯಾರು ಅಸತ್ಯದಲ್ಲಿ ಪ್ರವರ್ತಿಸುವುದಿಲ್ಲವೋ, ಅಂಥವರ ಕುಟುಂಬವು ಮಹಾಕುಲವೆನಿಸುವುವು. ಹೀಗಿಲ್ಲದೆ, ಯಾಗಾದಿ ಕರ್ಮಗಳನ್ನು ನಡೆಸದಿರುವುದು, ನೀಚರಲ್ಲಿ ವಿವಾಹಸಂಬಂಧವನ್ನು ಬೆಳೆಸುವುದು, ವೇದಗಳನ್ನು ನಿರಾಕರಿಸುವುದು, ಕರ್ಮವನ್ನು ಮೀರಿ ಹೋಗುವುದು, ಇಂತಹ ನಡತೆಗಳಿಂದ್ಕ ಉತ್ತಮಕುಲಗಳೂ ಕೂಡ ಹೀನಕುಲಗಳೆನಿಸುವುವು. ಹೀಗೆಯೇ ದೇವಬ್ರಾಹ್ಮಣರ ದ್ರವ್ಯವನ್ನು ಅಪಹರಿಸುವುದು ಅಥವಾ ನಷ್ಟಗೊಳಿಸುವುದು, 'ಬ್ರಾಹ್ಮಣರನ್ನು' ಮೀರಿ ನಡೆಯುವುದು, ಇಂ

ತಹ ಕಾರ್ಯಗಳಿಂದಲೂ ಸತ್ಕುಲಗಳು ದುಷ್ಕುಲಗಳೆನಿಸುವುವು. ಮತ್ತು ಬ್ರಾಹ್ಮಣರನ್ನು ಪರಿಭವಿಸುವುದು, ಅವರನ್ನು ನಿಂದಿಸುವುದು, ತನ್ನಲ್ಲಿ ನ್ಯಾಸವಾಗಿಟ್ಟ ಇತರರ ಹಣವನ್ನು ಅಪಹರಿಸುವುದು, ಇವೆಲ್ಲವೂ ಕುಲದ ಮೇಲ್ಮೆಯನ್ನು ಕೆಡಿಸುವುವು. ಒಂದು ಕುಟುಂಬದಲ್ಲಿ ಧನಬಲವೂ, ಪುರುಷಬಲವೂ, ಗೋಧನವೂ ವಿಶೇಷವಾಗಿದ್ದರೂ, ನಡತೆಯಲ್ಲಿ ಹೀನವಾಗಿದ್ದ ಕುಲಗಳು ಕುಲವೆಂಬ ಎಣಿಕೆಗೇ ಬರುವುದಿಲ್ಲ. ಅಲ್ಪಧನವುಳ್ಳ ಕುಲವಾದರೂ ಆ ಕುಲದವರ ನಡತೆಯು ಒಳ್ಳೆಯದಾಗಿದ್ದರೆ, ಅದು ಉತ್ತಮ ಕುಲವೆಂಬ ಗಣನೆಗೆ ಬಂದು, ಮಹತ್ತಾದ ಕೀರ್ತಿಗೂ ಪಾತ್ರವಾಗುವುದು. ಮನುಷ್ಯನು ಶೀಲವನ್ನು ಪ್ರಯತ್ನದಿಂದ ಕಾಪಾಡಬೇಕೇ ಹೊರತು, ಹಣವನ್ನು ಕಾಪಾಡುವ ಪ್ರಯತ್ನವು ಅಷ್ಟೇನೂ ಶ್ಲಾಘ್ಯವಲ್ಲ. ಐಶ್ವರ್ಯವೆಂಬುದು ಬರುತ್ತಲೂ, ಹೋಗುತ್ತಲೂ ಇರುವುವು. ಧನದಿಂದ ಕ್ಷೀಣಿಸಿದವನು ಕೆಟ್ಟುಹೋಗಲಾರನು. ಶೀಲದಿಂದ ಕೆಟ್ಟುಹೋದವನು ಎಂದೆಂದಿಗೂ ಕೆಟ್ಟುಹೋದವನೇ! ಗೋಸಮೃದ್ಧಿಯಿಂದಲೂ, ಕುದುರೆಗಳಿಂದಲೂ, ವಿದ್ಯೆಗಳಿಂದಲೂ, ಫಲವತ್ತಾದ ಕೃಷಿಯಿಂದಲೂ ಕೂಡಿದ್ದರೂ, ಶೀಲವಿಲ್ಲದ ಕುಲವು ವೃದ್ಧಿಗೆ ಬರಲಾರದು. ಆದುದರಿಂದ ಓ ಮಹಾರಾಜಾ! ನಮ್ಮ ವಂಶದಲ್ಲಿ ವೈರಬುದ್ಧಿಯುಳ್ಳವನಾಗಲಿ, ಕೆಟ್ಟವರ ಮಾತಿಗೆ ಕಿವಿಗೊಡುವನಾಗಲಿ, ಪರರ ಸ್ವತ್ತನ್ನು ಅಪಹರಿಸುವವನಾಗಲಿ, ಕಪಟಿಯಾಗಲಿ, ಮಿತ್ರದ್ರೋಹಿಯಾಗಲಿ, ಅನೃತವಾದಿಯಾಗಲಿ, ಗುರುಹಿರಿಯರಿಗೂ, ಅತಿಥಿಗಳಿಗೂ, ದೇವತೆಗಳಿಗೂ ಅರ್ಪಿಸದೆ ಮೊದಲೇ ಊಟ ಮಾಡುವವನಾಗಲಿ ಯಾವನೊಬ್ಬನೂ ಇರಬಾರದು. ಮತ್ತು ಯಾವನು ಬ್ರಾಹ್ಮಣರನ್ನು ಹಿಂಸೆಗೊಳಿಸುವನೋ, ಯಾವನು ಅವರನ್ನು ದ್ವೇಷಿಸುವನೋ, ಯಾವನು ಕೃಷಿಯನ್ನು ಕೆಡಿಸುವನೋ, ಅಂತವರೆಲ್ಲ ನಮ್ಮ ಕೂಟದಲ್ಲಿಯೇ ಇರಲು ಯೋಗ್ಯರಲ್ಲ. ರಾಜಾ! ಬೇರೇನೂ ಇಲ್ಲದಿದ್ದರೂ ಮನೆಗೆ ಬಂದ ಅತಿಥಿಗಳನ್ನು ಸಂತೋಷಗೊಳಿಸುವುದಕ್ಕಾಗಿ, ಹುಲ್ಲುಕಡ್ಡಿಗಳು, (ಹುಲ್ಲು ಚಾಪೆ) ಬರೀ ನೆಲ, ನೀರು, ನಾಲ್ಕನೆಯದು ಪ್ರಿಯವಾದ ಬಾಯಿಮಾತು, ಇವಿಷ್ಟಾದರೂ ಸಾಧುಗಳ ಹೃದಯದಲ್ಲಿ ಯಾವಾಗಲೂ ಇಲ್ಲದೆ ಹೋಗಲಾರವು. ಒಳ್ಳೇ ಶ್ರದ್ಧೆಯಿಂದ ಒಪ್ಪಿಸಲ್ಪಡುವ ಈ ಅಲ್ಪವಸ್ತು

ಗಳೇ ಧರ್ಮನಿರತವಾದ ಪುಣ್ಯಶಾಲಿಗಳ ಸತ್ಕಾರಕ್ಕಾಗಿಯೇ ಏರ್ಪಟ್ಟಿವೆ. ಸ್ಯಂದನವೃಕ್ಷವೆಂಬುದು ಸಣ್ಣನಾಗಿದ್ದರೂ ಒಳ್ಳೇ ಭಾರವನ್ನು ತಡೆಯಬಲ್ಲವುಗಳಾಗಿವೆ. (ಇದಕ್ಕಾಗಿಯೇ ಇವುಗಳನ್ನು ಬಂಡಿಗಳಿಗೆ ಉಪಯೋಗಿಸುವರು) ಬೇರೆಮರಗಳಿಗೆ ಆ ಶಕ್ತಿಯಿಲ್ಲ. ಅದರಂತೆಯೇ ಮಹಾಕುಲದಲ್ಲಿ ಹುಟ್ಟಿದವರು ಪ್ರಯತ್ನಪರರಾಗಿ ಎಂತಹ ಕಾರ್ಯಭಾರವನ್ನಾದರೂ ಹೊತ್ತು ಸಾಗಿಸಬಲ್ಲರು. ಇತರರು ಆ ಶಕ್ತಿಯುಳ್ಳವರಲ್ಲ. ಯಾವನ ಕೋಪವು ಭೀತಿಯನ್ನುಂಟುಮಾಡುವುದೋ ಅವನು ಅವನಿಗೆ ಮಿತ್ರನಿಲ್ಲ. ಭಯದಿಂದ ಉಪಚಾರಮಾಡಬೇಕಾದವನೂ ಮಿತ್ರನೆನಿಸಲಾರನು. ಯಾವ ಮಿತ್ರನಲ್ಲಿ ತಂದೆಯಲ್ಲಿರುವ ಪ್ರೀತಿಗೌರವಗಳು ಏರ್ಪಡುವುವೋ ಅವನೇ ಸರಿಯಾದ ಮಿತ್ರನು. ಉಳಿದವರೆಲ್ಲರೂ ಕೇವಲ ನಾಮಮಾತ್ರದ ಸಂಬಂಧದವರು. ಸಂಬಂಧವೇನೂ ಇಲ್ಲದವನಾಗಿದ್ದರೂ, ಯಾವನು ನಿಷ್ಕಾರಣವಾದ ಮೈತ್ರಿಯನ್ನಿಡುವನೋ ಅವನೇ ಬಂಧು! ಅವನೇ ಸ್ನೇಹಿತನು! ಅವನೇ ಗತಿ! ಅವನೇ ಮೇಲಾದ ದಿಕ್ಕೆನಿಸುವನು. ಚಂಚಲಚಿತ್ತನಿಗೂ, ಹಿರಿಯರಲ್ಲಿ ಸೇವೆಯನ್ನು ಮಾಡದವನಿಗೂ, ಚಿತ್ತಭ್ರಮವುಳ್ಳವನಿಗೂ ಸ್ನೇಹಿತರೊಡನೆ ಕೂಡಾಟವು ಸ್ಥಿರವಾಗಿರಲಾರದು. ಚಂಚಲಮನಸ್ಸುಳ್ಳವನೂ, ಬುದ್ಧಿಹೀನನೂ, ಇಂದ್ರಿಯವಶನೂ ಆದವನನ್ನು ಹಂಸಗಳು ಒಣಗಿದ ಕೊಳವನ್ನು ಹೇಗೋ ಹಾಗೆ ಸಂಪತ್ತುಗಳು ಬಿಟ್ಟುಹೋಗುವುವು. ಆಕಾಶದಲ್ಲಿ ಅಸ್ಥಿರವಾದ ಮೇಘಗಳಂತೆ ಇದ್ದಕ್ಕಿದ್ದಹಾಗೆ ಕೋಪಿಸಿ ಆರ್ಭಟಿಸುವುದೂ, ಒಡನೆಯೇ ನಿಷ್ಕಾರಣವಾಗಿ ಪ್ರಸನ್ನತೆಯನ್ನು ತೋರಿಸುವುದೂ ಅಸಾಧುಗಳ ಸ್ವಭಾವವು. ತಾವು ಇತರರಿಂದ ಸತ್ಕಾರವನ್ನೂ, ಉಪಕಾರವನ್ನೂ ಪಡೆದಿದ್ದರೂ, ಅಂತಹ ಮಿತ್ರರಿಗೆ ಯಾರು ಸಮಯಕ್ಕೆ ಒದಗುವುದಿಲ್ಲವೋ, ಅಂತಹ ಕೃತಘ್ನರು ಸತ್ತಮೇಲೆ ಕೂಡ ಮಾಂಸಾಹಾರಿಗಳು ಅವನ ಮಾಂಸವನ್ನು ತಿನ್ನಲಾರವು. ತನ್ನಲ್ಲಿ ಧನವಿದ್ದರೂ, ಇಲ್ಲದಿದ್ದರೂ ಮಿತ್ರರಲ್ಲಿ ಯಾಚಿಸಲೇಬೇಕು. ಹಾಗೆ ಯಾಚಿಸದವನು ಆ ಮಿತ್ರರ ಪ್ರೇಮದ ಬಲಾಬಲವನ್ನು ತಿಳಿಯಲಾರನು. ಮನಸ್ಸಿನಲ್ಲಿ ಕೊರಗುವುದರಿಂದ ಮನುಷ್ಯನ ರೂಪವು ಕೆಡುವುದು. ಬಲವೂ ಕೆಡುವುದು. ಅವನ ಜ್ಞಾನವೂ ಕೆಡುವುದು. ಮನಸ್ಸಂತಾಪದಿಂದ ವ್ಯಾಧಿಯೂ

ಪ್ರಾಪ್ತವಾಗುವುದು. ದುಃಖದಿಂದ ಹೊಂದಬಹುದಾದ ಲಾಭವೂ ಇಲ್ಲ. ದುರ್ಬಲವಾದ ಶರೀರವೂ ಬೆಂದುಹೋಗುವುದು. ವೈರಿಗಳೂ ಇದನ್ನು ನೋಡಿ ಸಂತೋಷಪಡುವರು. ಆದುದರಿಂದ ದುಃಖಕ್ಕೆ ಮನಸ್ಸನ್ನು ಕೊಡಬೇಡ. ಮನುಷ್ಯನು ತಿರುಗಿತಿರುಗಿ ಹುಟ್ಟುವನು, ಸಾಯುವನು. ಆಗಾಗ ಹೀನಸ್ಥಿತಿಗೆ ಬರುವನು, ಅಭಿವೃದ್ಧಿಯನ್ನೂ ಹೊಂದುವನು. ಆಗಾಗ ಮತ್ತೊಬ್ಬರನ್ನು ಯಾಚಿಸುವಂತಾಗುವನು, ಇನ್ನೊಮ್ಮೆ ತಾನೇ ಯಾಚಿಸಲ್ಪಡುವ ಸ್ಥಿತಿಗೆ ಬರುವನು. ಆಗಾಗ ಇತರರನ್ನು ದುಃಖಪಡಿಸುವನು, ಮತ್ತೊಮ್ಮೆ ಇತರರಿಂದ ತಾನು ದುಃಖಗೊಳಿಸಲ್ಪಡುವನು. ಮನುಷ್ಯನಿಗೆ, ಸುಖದುಃಖಗಳೂ, ಭಾವಾಭಾವಗಳೂ (ಇರುವಿಕೆ, ಇಲ್ಲದಿರುವಿಕೆ) ಲಾಭಾಲಾಭಗಳೂ, ಜೀವಿತ ಮರಣಗಳೂ ಇವೆಲ್ಲ ಚಕ್ರದಂತೆ ಸುತ್ತಿಸುತ್ತಿ ಬರುತ್ತಿರುವುವು. ಆದುದರಿಂದ ಧೀರನಾದವನು ಇವುಗಳಿಗಾಗಿ ಹರ್ಷಿಸಲೂ ಬಾರದು, ದುಃಖಿಸಲೂ ಬಾರದು. ಮಹಾರಾಜಾ! ಇಂದ್ರಿಯಗಳಾರೂ (ಮನಸ್ಸು ಮತ್ತು ಪಂಚೇಂದ್ರಿಯಗಳು) ಬಹಳ ಚಂಚಲಗಳು. ಈ ಇಂದ್ರಿಯಗಳನ್ನು ಬಿಗಿಹಿಡಿಯದೆ ಸಡಿಲಬಿಟ್ಟರೆ, ಅವುಗಳಲ್ಲಿ ಯಾವಯಾವದು ಯಾವಯಾವ ಕಡೆಗೆ ದಾರಿಕೊಡುವುದೋ, ಅದಕ್ಕೆ ತಕ್ಕಂತೆ ಮನುಷ್ಯನ ಬುದ್ಧಿಯೂ ರಂಧ್ರಬಿದ್ದ ಮಡಕೆಗಳಿಂದ ನೀರು ಸೋರಿಹೋಗುವಂತೆ ಆಯಾಕಡೆಗೆ ಓಡುವುದು'' ಎಂದನು.

ಆಗ ಧೃತರಾಷ್ಟ್ರನು ತಿರುಗಿ ವಿದುರನನ್ನು ಕುರಿತು ''ವತ್ಸ ವಿದುರಾ! ಆ ಧರ್ಮರಾಜನಾದರೋ ಈಗ ಅರಣಿಯೊಳಗಿನ ಬೆಂಕಿಯಂತೆ ನಮ್ಮ ದೇಹದೊಳಗೆ ಅಡಗಿದ ಅಗ್ನಿಯೆನಿಸಿರುವನು. ಅವನು ವಂಚನೆಯಿಂದಲೇ ನನ್ನಿಂದ ಉಪಚರಿಸಲ್ಪಟ್ಟವನು. ಮೂಢರಾದ ನನ್ನ ಮಕ್ಕಳನ್ನು ಅವನು ಯುದ್ಧದಲ್ಲಿ ತೀರಿಸಿಬಿಡುವುದು ನಿಶ್ಚಯವೇ! ನನಗೆ ಈ ಪ್ರಪಂಚವೆಲ್ಲವೂ ಭೀತಿಮಯವಾಗಿರುವುದು. ನನ್ನ ಮನಸ್ಸು ಯಾವಾಗಲೂ, ಭಯದಿಂದ ಕುದಿಯುತ್ತಿರುವುದು. ಆದುದರಿಂದ ಓ ಮಹಾಮತೀ! ನನಗೆ ನಿರ್ಭಯವಾದ ನೆಲೆಯಾವುದೋ ಅದನ್ನು ನೀನು ತಿಳಿಸು'' ಎಂದನು. ಅದಕ್ಕಾ ವಿದುರನು ''ಓ ಮಹಾರಾಜಾ! ಈಗ ನಿನಗೆ ಜ್ಞಾನಕ್ಕಿಂತಲೂ

ತಪಸ್ಸಿಗಿಂತಲೂ, ಇಂದ್ರಿಯನಿಗ್ರಹಕ್ಕಿಂತಲೂ, ಮನಸ್ಸಿನಲ್ಲಿ ಲೋಭವನ್ನು ಬಿಟ್ಟುಬಿಡುವುದಕ್ಕಿಂತಲೂ ಬೇರೆವಿಧದಿಂದ ಶಾಂತಿಯುಂಟಾಗುವಹಾಗೆ ನನಗೆ ತೋರಲಿಲ್ಲ. ಮನುಷ್ಯನಿಗೆ ಜ್ಞಾನದಿಂದ ಭಯವು ನೀಗುವುದು; ತಪಸ್ಸಿನಿಂದ ಮೇಲ್ಮೆಯು ಬರುವುದು; ಗುರುಶುಶ್ರೂಷೆಯಿಂದ ಜ್ಞಾನೋದಯವಾಗುವುದು; ಯೋಗದಿಂದ ಮನಶ್ಶಾಂತಿ ಹುಟ್ಟುವುದು; ದಾನದಿಂದುಂಟಾದ ಪುಣ್ಯವನ್ನೂ, ವೇದೋಕ್ತಕರ್ಮಗಳಿಂದುಂಟಾಗುವ ಪುಣ್ಯವನ್ನೂ ಗಳಿಸದಿದ್ದರೂ ರಾಗದ್ವೇಷಗಳಿಂದ ಬಿಡಲ್ಪಟ್ಟವರು ಈ ಭೂಮಿಯಲ್ಲಿ ಮುಕ್ತರಾಗಿ ಸಂಚರಿಸುತ್ತಿರುವರು. ಕ್ರಮವಾಗಿ ಅಧ್ಯಯನ ಮಾಡುವುದು, ಧರ್ಮದಿಂದ ಯುದ್ಧಮಾಡುವುದು, ಶ್ರದ್ಧೆಯಿಂದ ಕರ್ಮವನ್ನು ಲೋಪವಿಲ್ಲದೆ ನಡೆಸುವುದು, ನಿಶ್ಚಲವಾದ ತಪಸ್ಸು, ಇವುಗಳಿಂದ ಪರಿಣಾಮದಲ್ಲಿ ಮನುಷ್ಯನು ಸುಖವನ್ನು ಹೊಂದುವನು. ಓ ಮಹಾರಾಜಾ! ತನ್ನವರಲ್ಲಿಯೇ ಭೇದಬುದ್ಧಿಯನ್ನು ಹೊಂದಿದವನು ಒಳ್ಳೇ ಮೃದುವಾದ ಹಾಸಿಗೆಯನ್ನು ಹಾಕಿಕೊಂಡು ಮಲಗಿದರೂ ನಿದ್ರಿಸಲಾರನು. ಪಕ್ಕದಲ್ಲಿ ಸ್ತ್ರೀಯರಿದ್ದರೂ ಸಂತೋಷಿಸಲಾರನು. ಬೆಳಗಾದಕೂಡಲೇ ಸೂತಮಾಗಧರು ತನ್ನನ್ನು ಬೇಕಾದಹಾಗೆ ಹೊಗಳಿದರೂ ಸಂತೋಷಿಸಲಾರನು. ಮತ್ತು ತನ್ನವರಿಂದ ಹೊರಗಾದವನು ಧರ್ಮವನ್ನೂ ನಡೆಸಲಾರನು. ಅಂತವರು ಇಹಲೋಕದ ಯಾವ ಸುಖವನ್ನೂ ಅನುಭವಿಸಲಾರರು. ಅಂತವರು ಗೌರವವನ್ನೂ ಪಡೆಯಲಾರರು. ಅಂತವರು ಶಾಂತಿಯನ್ನೂ ಬಯಸಲಾರರು. ತನ್ನವರಲ್ಲಿ ಬೇಧಬುದ್ಧಿಯಿರುವವನಿಗೆ ಇತರರು ಹೇಳಿದ ಹಿತವಾದಗಳೂ ರುಚಿಸಲಾರವು. ಅವರಿಗೆ ಇಷ್ಟವಸ್ತು ಲಾಭವಾಗಲಿ, ತನ್ನಲ್ಲಿರುವ ವಸ್ತುಗಳ ರಕ್ಷಣೆಯಾಗಲಿ (ಯೋಗಕ್ಷೇಮಗಳು) ಕೈಗೂಡಲಾರವು. ಓ ಮಹಾರಾಜಾ! ತನ್ನವರಲ್ಲಿ ಭೇದಬುದ್ಧಿಯುಳ್ಳವರಿಗೆ ನಾಶವೊಂದುಹೊರತು ಬೇರೆ ಗತಿಯೇ ಇಲ್ಲವೆಂದು ತಿಳಿ. ಗೋವುಗಳಲ್ಲಿ ಕ್ಷೀರಸಮೃದ್ಧಿ, ಬ್ರಾಹ್ಮಣರಲ್ಲಿ ತಪಸ್ಸು, ಸ್ತ್ರೀಯರಲ್ಲಿ ಚಪಲತೆ, ಜ್ಞಾತಿಗಳಲ್ಲಿ ಭಯ, ಇವಿಷ್ಟೂ ಸಂಭಾವ್ಯವೇ! ಎಂದರೆ ಇದ್ದೇ ತೀರಬೇಕು. ಓ ಭರತಕುಲೋತ್ತಮಾ! ಸಣ್ಣನಾಗಿದ್ದರೂ, ಸಮವಾದ ಮತ್ತು ಉದ್ದವಾದ ಹಲವು ನೂಲೆಳೆಗಳು ಒಂದಾಗಿ ಸೇರಿದ್ದಾಗ, ಅವುಗಳ ಸಂಖ್ಯಾಬಹುತ್ವದಿಂದ ಅನೇಕ

ವರ್ಷಗಳ ಎಳೆದಾಟವನ್ನು ತಡೆಯಬಲ್ಲುವಲ್ಲವೆ? ಸಜಾತೀಯರೆಲ್ಲರೂ ಒಂದಾಗಿ ಸೇರಿರುವುದು ಕ್ಷೇಮಕರವೆಂಬುದಕ್ಕೆ ಇದೇ ಒಳ್ಳೇ ನಿದರ್ಶನವು. ಉರಿಯುವ ಕೊಳ್ಳಿಗಳನ್ನು ಪ್ರತ್ಯೇಕಿಸಿದರೆ ಹೊಗೆಯಾಡುವುದು, ಆ ಕೊಳ್ಳಿಗಳನ್ನು ಒಂದಾಗಿ ಸೇರಿಸಿದಾಗ ಚೆನ್ನಾಗಿ ಉರಿಯುವುದಲ್ಲವೆ? ಅದರಂತೆಯೇ ಜ್ಞಾತಿಗಳಾದವರು ಒಬ್ಬರಿಗೊಬ್ಬರು ಅಗಲಿದಾಗ ಅವರಲ್ಲಿ ತೇಜಸ್ಸು ಮಲಿನವಾಗುವುದು. ಒಂದಾಗಿದ್ದಾಗಲೇ ಪ್ರಕಾಶಕ್ಕೆ ಬರುವುದು. ಬ್ರಾಹ್ಮಣರಲ್ಲಿಯೂ, ಸ್ತ್ರೀಯರಲ್ಲಿಯೂ, ಗೋವುಗಳಲ್ಲಿಯೂ, ಜ್ಞಾತಿಗಳಲ್ಲಿಯೂ ಯಾರು ತಮ್ಮ ಪರಾಕ್ರಮವನ್ನು ತೋರಿಸಲು ಯತ್ನಿಸುವರೋ, ಅಂತವರು ಮಾಗಿದ ಹಣ್ಣು ತೊಟ್ಟಿನಿಂದ ಕಳಚಿ ಬಿದ್ದುಹೋಗುವಂತೆ ಅಧೋಗತಿಯನ್ನು ಹೊಂದುವರು.

ಇದಲ್ಲದೆ ಕಾಡಿನಲ್ಲಿ ದೃಢವಾಗಿ ಬೇರೂರಿ ಬೆಳೆದ ದೊಡ್ಡ ಮರವಾದರೂ, ಒಂಟಿಯಾಗಿದ್ದಾಗ ಬಿರುಗಾಳಿಯ ಪೆಟ್ಟಿಗೆ ತಡೆಯಲಾರದೆ ಮುರಿದು ಬೀಳುವುದು. ಅಂತಹ ವೃಕ್ಷಗಳೇ ಗುಂಪಾಗಿ ಬೆಳೆದಿದ್ದರೆ, ಒಂದಕ್ಕೊಂದು ಬೆಂಬಲವಾಗಿರುವುದರಿಂದ, ಎಂತಹ ಗಾಳಿ ಬಂದರೂ ಮುರಿದು ಬೀಳಲಾರವು. ಇದರಂತೆಯೇ ಒಳ್ಳೇ ಗುಣಾಢ್ಯನಾಗಿದ್ದರೂ, ಬಲಶಾಲಿಯಾಗಿದ್ದರೂ, ಮನುಷ್ಯನು ತನ್ನವರಿಂದ ಬೇರೆಯಾಗಿದ್ದಾಗ ಗಾಳಿಯು ಒಂಟಿಮರವನ್ನು ಹೇಗೋಹಾಗೆ ಶತ್ರುಗಳು ಅವನನ್ನು ನಿಗ್ರಹಿಸುವುದು ಸುಲಭವೆಂದು ಭಾವಿಸುವರು. ಆದುದರಿಂದ ಕೊಳದಲ್ಲಿ ತಾವರೆಗಳು ಹೇಗೋಹಾಗೆ, ಜ್ಞಾತಿಗಳು ಅನ್ಯೋನ್ಯ ಸಹಾಯಬಲದಿಂದಲೂ, ಆಶ್ರಯಬಲದಿಂದಲೂ ಚೆನ್ನಾಗಿ ವೃದ್ಧಿಗೆ ಬರುವರು. ಬ್ರಾಹ್ಮಣರು, ಗೋವುಗಳು, ಜ್ಞಾತಿಗಳು, ಶಿಶುಗಳು, ಸ್ತ್ರೀಯರು, ಅನ್ನಹಾಕಿದವನು, ಮರೆಹೊಕ್ಕವನು, ಇಂತವರಲ್ಲಿ ಎಷ್ಟೇ ದೊಡ್ಡ ತಪ್ಪಿದ್ದರೂ, ಅವರನ್ನು ದೂರಮಾಡುವುದೇ ಅವರಿಗೆ ದಂಡನವೇ ಹೊರತು ಅವರನ್ನು ಕೊಲ್ಲಬಾರದು. ರಾಜೇಂದ್ರಾ! ಮನುಷ್ಯನಿಗೆ ಹಣವಂತನಾಗಿರುವುದೊಂದು, ರೋಗವಿಲ್ಲದಿರುವುದೊಂದು, ಇವೆರಡಕ್ಕಿಂತಲೂ ಮೇಲಾದ ಭಾಗ್ಯವಿಲ್ಲ. ರೋಗಿಗಳು ಮೃತಪ್ರಾಯರೇ! ನಿನಗೆ ನಿತ್ಯಾರೋಗ್ಯವಿರಲಿ! ಮಹಾರಾಜಾ! ಕೋಪವೆಂಬುದು ವಿಲಕ್ಷಣ

ವಾದ ಒಂದು ಪಾನದ್ರವ್ಯವು. ಅದು ವ್ಯಾಧಿಗಾಗಿ ಹುಟ್ಟಿದುದಲ್ಲ. ತಲೆ ನೋವನ್ನು ತರತಕ್ಕುದು. ಬಹಳ ಕಟುವಾದುದು. ಪಾಪಕ್ಕೆ ಕಾರಣವಾದುದು. ಕ್ರೂರವೂ, ತೀಕ್ಷ್ಣವೂ, ಉಷ್ಣವೂ ಆದುದು. ಸತ್ಪುರುಷರಿಗೆ ಮಾತ್ರ ಅದನ್ನು ಕುಡಿದುಬಿಡುವುದಕ್ಕೆ ಸಾಧ್ಯವು. ಅಸತ್ತುಗಳು ಅದನ್ನು ಕುಡಿಯಲಾರರು. ಈಗ ನೀನು ಆ ಕೋಪವನ್ನು ಕುಡಿದುಬಿಟ್ಟು ನಿಶ್ಚಿಂತನಾಗಿರು. ಚಿಂತಾರೋಗಪೀಡಿತರು ಪುತ್ರ, ಪಶು ಮೊದಲಾದ ತಮ್ಮ ಇಷ್ಟಫಲಗಳನ್ನೂ ಆದರಿಸುವುದಿಲ್ಲ, ವಿಷಯನಿಶ್ಚಯಗಳನ್ನು ತಿಳಿಯುವುದಿಲ್ಲ, ಯಾವಾಗಲೂ ದುಃಖದಿಂದಲೇ ನರಳುತ್ತಿರುವರು. ಹಣದಿಂದುಂಟಾದ ಭೋಗಗಳನ್ನಾಗಲಿ, ಸೌಖ್ಯಗಳನ್ನಾಗಲಿ ಅವರು ಅನುಭವಿಸಲಾರರು.

ಓ ಮಹಾರಾಜಾ ! ಹಿಂದೆ ನಿನಗೆ ನಾನು ಎಷ್ಟೋ ವಿಧವಾಗಿ ಹೇಳಿದೆನು. ದ್ರೌಪದಿಯನ್ನು ದ್ಯೂತದಲ್ಲಿ ಜಯಿಸಿದಾಗಲೇ "ಈ ಆಟದಿಂದ ದುರ್ಯೋಧನನನ್ನು ನಿವಾರಿಸು" ಎಂದು ನಿನಗೆ ನಾನು ಎಷ್ಟೋವಿಧದಿಂದ ಹೇಳಿದೆನಲ್ಲವೆ? ಅದನ್ನು ನೀನು ನಡೆಸಲಿಲ್ಲ. ವಿವೇಕಿಗಳು ಇಂತಹ ಜೂಜಾಟಕ್ಕೆ ಎಂದಿಗೂ ಸಮ್ಮತಿಸಲಾರರು. ಮೃದುಸ್ವಭಾವವುಳ್ಳವನೊಡನೆ ವಿರೋಧಿಸುವುದು ಬಲವೆನಿಸುವುದಿಲ್ಲ. ಸೂಕ್ಷ್ಮಧರ್ಮಗಳನ್ನು ಎಚ್ಚರಿಕೆಯಿಂದ ತಿಳಿದು ನಡೆಸಬೇಕು. ಐಶ್ವರ್ಯವೆಂಬುದು ಕ್ರೂರನಲ್ಲಿ ಸೇರಿದರೆ, ದೊಡ್ಡ ನಾಶಕ್ಕೆ ಕಾರಣವಾಗುವುದು. ಅದೇ ವಿವೇಕಿಯಲ್ಲಿ ಸೇರಿದರೆ, ಮೇಲೆಮೇಲೆ ಅಭಿವೃದ್ಧಿಹೊಂದಿ, ಪುತ್ರ ಪೌತ್ರ ಪರಂಪರೆಯಾಗಿ ಸಾಗುವುದು. ಆದುದರಿಂದ ಅಣ್ಣಾ ! ನಿನ್ನ ಮಕ್ಕಳು ಪಾಂಡವರನ್ನು ಕರೆದು ಅವರೊಡನೆ ಸೇರಿ ಅವರನ್ನು ರಕ್ಷಿಸಲಿ. ಪಾಂಡುವಿನ ಮಕ್ಕಳು ನಿನ್ನ ಮಕ್ಕಳನ್ನು ಕಾಪಾಡಲಿ! ಕುರುಗಳೆಲ್ಲರೂ ಸಮಾನವಾದ ಶತ್ರುಮಿತ್ರರುಳ್ಳವರಾಗಿ, ಒಂದೇ ಬಗೆಯ ಕಾರ್ಯವುಳ್ಳವರಾಗಿ, ಏಕೀಭವಿಸಿ, ಸುಖದಿಂದಲೂ, ಸಮೃದ್ಧಿಯಿಂದಲೂ ಬಾಳಲಿ. ಅಣ್ಣಾ ! ಈಗ ನೀನೇ ಕೌರವರೆಲ್ಲರಿಗೂ ಪ್ರಮುಖನೆನಿಸಿಕೊಂಡಿರುವೆ. ಕುರುಕುಲವು ಮೊತ್ತಕ್ಕೆ ನಿನ್ನ ಅಧೀನವಾಗಿರುವುದು. ಅಜಮೀಢವಂಶಕ್ಕೆ ಅಲಂಕಾರಭೂತನಾದ ಓ

ಮಹಾರಾಜಾ! ಪಾಂಡವರು ಇನ್ನೂ ಬಾಲಕರು. ವನವಾಸದಿಂದ ಕಷ್ಟ ಪಟ್ಟು ಬಂದಿರುವ ಅವರನ್ನು ಪ್ರೇಮದಿಂದ ರಕ್ಷಿಸಿ, ನಿನ್ನ ಕೀರ್ತಿಯನ್ನೂ ರಕ್ಷಿಸಿಕೊಳ್ಳುವನಾಗು. ಪಾಂಡವರೊಡನೆ ಈಗಲೇ ನೀನು ಸಂಧಿಯನ್ನು ಮಾಡು! ರಂಧ್ರವನ್ನೇ ಹುಡುಕುತ್ತಿರುವ ನಿನ್ನ ಶತ್ರುಗಳಿಗೆ, ನಿಮ್ಮನಿಮ್ಮಲ್ಲಿ ವೈರದಿಂದ ಅವಕಾಶವನ್ನು ಕಲ್ಪಿಸಿಕೊಡಬೇಡ! ಆ ಪಾಂಡವರೆಲ್ಲರೂ ಸತ್ಯದಲ್ಲಿಯೇ ನೆಲೆಗೊಂಡವರು. ದುರ್ಯೋಧನನು ಅತಿಕ್ರಮಿಸಿ ಹೋಗದಂತೆ ಅವನನ್ನು ನೀನು ಅಡಗಿಸಿಡು'' ಎಂದನು.

ಇದು ಮೂವತ್ತಾರನೆಯ ಅಧ್ಯಾಯವು.



ವಿದುರನು ಧೃತರಾಷ್ಟ್ರನಿಗೆ ಇನ್ನೂ ಕೆಲವು ನೀತಿಗಳನ್ನೂ, ಆಯುಃಕ್ಷಯಕ್ಕೆ ಕಾರಣಗಳನ್ನೂ ತಿಳಿಸಿ ಕೌರವ ಪಾಂಡವರಲ್ಲಿ ಸಮಾಧಾನವನ್ನುಂಟುಮಾಡ ಬೇಕೆಂದು ಹೇಳಿದುದು.

ಓ ರಾಜೇಂದ್ರಾ! ಬ್ರಹ್ಮಪುತ್ರನಾದ ಮನುವು ಮುಂದೆ ಹೇಳುವ ಹದಿನೇಳು ಮಂದಿ ಪುರುಷರನ್ನೂ, ಕೈಗೆ ಸಿಕ್ಕದ ಆಕಾಶವನ್ನು ಮುಷ್ಟಿಗಳಿಂದ ಗುದ್ದುವುದಕ್ಕೂ, ಕಾಮನ ಬಿಲ್ಲನ್ನು ಹಿಡಿದು ಬಗ್ಗಿಸುವುದಕ್ಕೂ, ಹಿಡಿಯುವುದಕ್ಕಾಗದ ಸೂರ್ಯಕಿರಣಗಳನ್ನು ಕೈಯಿಂದ ಹಿಡಿಯುವುದಕ್ಕೂ ಹೋಗುವ ಮೂರ್ಖಜನರಿಗೆ ಸಮಾನರೆಂದು ಹೇಳಿರುವನು. ಅಂತವರು ಯಾರೆಂದರೆ, ಕಲಿಸಲಾರದವನಿಗೆ ಕಲಿಸುವುದಕ್ಕೆ ಹೋಗುವವನು, ಅಲ್ಪಲಾಭದಿಂದ ಸಂತೋಷಿಸುವವನು, ಶತ್ರುವಿನಲ್ಲಿ ಸೇರಿ ಬಹಳ ಸಲಿಗೆಯಿಂದ ಕೂಡಾಡುವವನು, ಸ್ತ್ರೀಯರನ್ನು ಪೋಷಿಸಿ ಅದರಿಂದ ಕ್ಷೇಮವನ್ನು ಕೋರುವವನು, ಯಾಚಿಸಬಾರದವರಲ್ಲಿ ಯಾಚಿಸುವವನು, ಯಾವಾಗಲೂ ಆತ್ಮಸ್ತುತಿ ಮಾಡಿಕೊಳ್ಳುವವನು, ಒಳ್ಳೆಯ ಕುಲದಲ್ಲಿ ಹುಟ್ಟಿ ಮಾಡಬಾರದ ಕಾರ್ಯವನ್ನು ಮಾಡುವವನು, ತನಗೆ ಬಲವಿಲ್ಲದಿರುವಾಗಲೂ ಬಲಶಾಲಿಗಳನ್ನು ದ್ವೇಷಿಸುವವನು, ಶ್ರದ್ಧೆಯಿಂದ ಕೇಳದವನೊಡನೆ ಮಾತಾಡುವವನು, ಆಶೆಪಡಬಾರದುದಕ್ಕೆ ಆಶೆಪಡುವವನು, ತನ್ನ ಸೊಸೆಯೊಡನೆ ಸಲಿಗೆ

ಯಿಂದ ಪರಿಹಾಸ್ಯಮಾಡುವವನು, ತನ್ನ ಸೊಸೆಯ ಕಡೆಯವರಿಂದ ಪ್ರಯೋಜನವನ್ನು ಪಡೆಯುತ್ತ ಗೌರವವನ್ನುಹೇಳಿಕೊಳ್ಳುವವನು, ಪರರ ಹೆಂಡತಿಯಲ್ಲಿ ಪ್ರವೇಶಿಸುವವನು, ಹೆಂಡತಿಯನ್ನು ಬಹಳವಾಗಿ ನಿಂದಿಸುವವನು, ಇತರರಿಂದ ತಾನು ಪಡೆದುದನ್ನು ತನಗೆ ನೆನಪಿಲ್ಲವೆಂದು ಹೇಳುವವನು, ದಾನಮಾಡಿ ತನ್ನನ್ನು ತಾನು ಹೊಗಳಿಕೊಳ್ಳುವವನು, ಕೆಟ್ಟವರಿಗೆ ಹಿತವಾದಗಳನ್ನು ಹೇಳುವವನು, ಈ ಹದಿನೇಳು ಮಂದಿಯೂ ಪರಮ ಮೂರ್ಖರೆಂದೂ, ಇಂತವರನ್ನು ಪಾಶಹಸ್ತರಾದ ಯಮಭಟರು ನರಕಕ್ಕೆ ಳೆದುಕೊಂಡು ಹೋಗುವರೆಂದೂ, ಮನುವಾಕ್ಯವು. ಯಾವ ಮನುಷ್ಯನು ಯಾರಲ್ಲಿ ಹೇಗಿರುವನೋ, ಆ ಮನುಷ್ಯನೂ ಇವನಲ್ಲಿ ಹಾಗೆಯೇ ಇರಬೇಕಾದುದು ಧರ್ಮವು. ಕಪಟವಾಗಿ ನಡೆಯತಕ್ಕವನಲ್ಲಿ ಕಪಟದಿಂದಲೇ ವರ್ತಿಸಬೇಕು. ಒಳ್ಳೆಯ ನಡತೆಯುಳ್ಳವರಲ್ಲಿ ಸಾಧುತ್ವದಿಂದಲೇ ನಡೆದುಕೊಳ್ಳಬೇಕು. ಓ ಮಹಾರಾಜಾ! ಮುಪ್ಪು ಮನುಷ್ಯನ ರೂಪವನ್ನೂ, ಆಶೆಯು ಧೈರ್ಯವನ್ನೂ, ಮೃತ್ಯುವು ಪ್ರಾಣಗಳನ್ನೂ, ಅಸೂಯೆಯು ಧರ್ಮಕಾರ್ಯವನ್ನೂ, ಕಾಮವು ಮನುಷ್ಯನ ಲಜ್ಜೆಯನ್ನೂ, ಕೆಟ್ಟವರಲ್ಲಿ ಸೇವೆಯು ಮನುಷ್ಯನ ಶೀಲವನ್ನೂ, ಕೋಪವು ಸಂಪತ್ತನ್ನೂ ಅಪಹರಿಸುವುದು. ಅಹಂಕಾರವಾದರೋ ಸರ್ವವನ್ನೂ ಅಪಹರಿಸುವುದು'' ಎಂದನು.

ತಿರುಗಿ ಧೃತರಾಷ್ಟ್ರನು ವಿದುರನನ್ನು ಕುರಿತು “ವಿದುರಾ! “ಶತಾಯುಃ ಪುರುಷಃ” ಎಂಬುದಾಗಿ ಮನುಷ್ಯನಿಗೆ ನೂರುವರ್ಷಗಳ ಆಯುಃಪರಿಮಿತಿಯೆಂದು ಎಲ್ಲಾ ವೇದಗಳಲ್ಲಿಯೂ ಹೇಳಲ್ಪಟ್ಟಿವೆ. ಆದರೆ ಈ ಲೋಕದಲ್ಲಿ ಅಷ್ಟುಕಾಲದವರೆಗೆ ಬದುಕಿರುವವರು ಬಹಳ ಅಪೂರ್ವವು. ಹೀಗೆ ಮನುಷ್ಯನು ತನ್ನ ಪೂರ್ಣಾಯುಷ್ಯವನ್ನು ಅನುಭವಿಸದಿರಲು ಕಾರಣವೇನು?'' ಎಂದನು. ಅದಕ್ಕಾ ವಿದುರನು “ರಾಜೇಂದ್ರಾ! ಆಯುಸ್ಸನ್ನು ತಗ್ಗಿಸುವುದಕ್ಕೆ ಅನೇಕ ಕಾರಣಗಳುಂಟು. ಬಹಳ ಅಹಂಕಾರಪಡುವುದು, ಹೆಚ್ಚು ಮಾತಾಡುವುದು, ಅಧಿಕವಾದ ಅಪರಾಧಗಳನ್ನು ಮಾಡುವುದು, ಬಹಳವಾಗಿ ಕ್ರೋಪಿಸುವುದು, ತಾನೇ ಬದುಕಬೇಕೆಂಬ ಆಶೆ, ಮಿತ್ರದ್ರೋಹ, ಇವಾರೂ ಮನುಷ್ಯನ ಆಯುಸ್ಸನ್ನು ಕತ್ತರಿಸಿ ತುಂಡುಮಾ

ಡುವ ಹರಿತವಾದ ಕತ್ತಿಗಳು. ರಾಜೇಂದ್ರಾ! ಪ್ರಾಣಿಗಳನ್ನು ಮೃತ್ಯುವು ಕೊಲ್ಲುವುದೆಂದೆಣಿಸಬೇಡ. ಅವರ ಅಕಾರ್ಯಗಳೇ ಅವರನ್ನು ಅಕಾಲದಲ್ಲಿ ಕೊಲ್ಲುವುವು. ಮಹಾರಾಜಾ! ನಿನಗೆ ಕ್ಷೇಮವುಂಟಾಗಲಿ! ನಂಬಿದವನ ಪತ್ನಿಯಲ್ಲಿ ಪ್ರವೇಶಿಸುವವನೂ, ಆಚಾರ್ಯಪತ್ನಿಯನ್ನು ಕಾಮಿಸುವವನೂ, ತಾನು ದ್ವಿಜನಾಗಿದ್ದು ಶೂದ್ರಸ್ತ್ರೀಯನ್ನು ವರಿಸಿದವನೂ, ಮದ್ಯಪಾನಮಾಡುವವನೂ, ತಾನು ಪ್ರಭುವಾಗಿದ್ದುಕೊಂಡು ತನ್ನ ಕೈಕೆಳಗಿರುವವರ ಜೀವನವನ್ನು ಕೆಡಿಸುವವನೂ, ವೇದವಿತ್ತುಗಳಾದ ಬ್ರಾಹ್ಮಣರನ್ನು ಕೆಲಸಕ್ಕೆ ನಿಯಮಿಸುವವನೂ, ಮರೆಹೊಕ್ಕವರನ್ನು ಕೆಡಿಸುವವನೂ ಇವರೆಲ್ಲರೂ ಬ್ರಹ್ಮಹತ್ಯೆಯನ್ನು ಮಾಡಿದವರಿಗೆ ಸಮಾನರು. ಇಂತವರೊಡನೆ ಕೂಡಾಡಿದವರಿಗೆ ಕೂಡ ಪ್ರಾಯಶ್ಚಿತ್ತವನ್ನು ಮಾಡಬೇಕೆಂಬುದು ಶಾಸ್ತ್ರವಿಧಿ. ಇತರರು ಹೇಳಿದ ಹಿತವಾಕ್ಯವನ್ನು ಕೇಳುವವನೂ, ನ್ಯಾಯಗಳನ್ನು ಬಲ್ಲವನೂ, ಉದಾರನೂ, ದೇವತೆಗಳಿಗೆ ನಿವೇದಿಸಿ ಮಿಕ್ಕ ಶೇಷಾನ್ನವನ್ನೇ ಭುಜಿಸುವವನೂ, ಇತರರನ್ನು ಹಿಂಸೆಮಾಡದವನೂ, ಅಪ್ರಯೋಜಕವಾದ ಕಾರ್ಯಕ್ಕಾಗಿ ಕಳವಳಿಸದವನೂ, ಕೃತಜ್ಞನೂ, ಸತ್ಯವನ್ನೇ ನುಡಿಯತಕ್ಕವನೂ, ಮೃದುಸ್ವಭಾವವುಳ್ಳವನೂ ಆದ ವಿದ್ವಾಂಸನು ಉತ್ತಮವಾದ ಸ್ವರ್ಗವನ್ನು ಪಡೆಯುವನು. ರಾಜಾ! ಲೋಕದಲ್ಲಿ ಯಾವಾಗಲೂ ಪ್ರಿಯವನ್ನೇ ನುಡಿಯತಕ್ಕವರು ಸುಲಭವಾಗಿ ಸಿಕ್ಕುವರು. ಅಪ್ರಿಯವಾಗಿಯೂ ಪಥ್ಯ (ಹಿತ) ವಾಗಿಯೂ ಇರುವ ಮಾತನ್ನು ಹೇಳತಕ್ಕವನೂ, ಅದನ್ನು ಆದರಿಸಿ ಕೇಳತಕ್ಕವನೂ ಸಿಕ್ಕುವುದೇ ಕಷ್ಟವು. ತನ್ನ ಯಜಮಾನನಿಗೆ ಪ್ರಿಯವೇ, ಅಪ್ರಿಯವೇ ಎಂಬುದನ್ನು ನೋಡದೆ, ಯಾವನು ಧರ್ಮವನ್ನೇ ಹಿಡಿದು, ಅಪ್ರಿಯವಾಗಿದ್ದರೂ ಕ್ಷೇಮಕರವಾದ ಆಲೋಚನೆಯನ್ನು ಹೇಳುವನೋ, ಅವನೇ ತನಗೆ ಸಹಾಯಕನಾದ ಮಿತ್ರನೆಂದು ರಾಜನು ತಿಳಿಯಬೇಕು. ಒಂದು ಕುಲ (ಗೌರವ) ವನ್ನು ರಕ್ಷಿಸುವುದಕ್ಕಾಗಿ ಒಬ್ಬ ಮನುಷ್ಯನನ್ನು ತೊರೆಯಬೇಕು. ಒಂದು ಗ್ರಾಮವನ್ನು ರಕ್ಷಿಸುವ ಸಂದರ್ಭದಲ್ಲಿ ಒಂದು ಕುಲವನ್ನೇ ಬಿಡಬೇಕು. ಒಂದು ದೇಶವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಒಂದು ಗ್ರಾಮವನ್ನೇ ಬಿಟ್ಟುಬಿಡಬಹುದು. ತನ್ನ ರಕ್ಷಣೆಗಾಗಿ ಸಮಸ್ತರಾಜ್ಯವನ್ನೇ ಬಿಟ್ಟುಬಿಡಬಹುದು. ಆಪತ್ತಿಗಾಗಿ ಧನವನ್ನು

ಕಾಪಾಡಿಡಬೇಕು. ಆ ಧನಗಳಿಂದ ಪತ್ನಿಯರನ್ನು ರಕ್ಷಿಸಬೇಕು. ಆ ಧನದಿಂದಲೂ, ಪತ್ನಿಯರಿಂದಲೂ ತನ್ನನ್ನು ಯಾವಾಗಲೂ ಚೆನ್ನಾಗಿ ಕಾಪಾಡಿಕೊಳ್ಳಬೇಕು. ಓ ಮಹಾರಾಜಾ! ದ್ಯೂತವೆಂಬುದು ಹಿಂದಿನ ಕಲ್ಪದಲ್ಲಿ ಕೂಡ ಮನುಷ್ಯರಲ್ಲಿ ವೈರಕಾರಣವೆಂದು ತಿಳಿದುಬಂದಿದೆ. ಆದುದರಿಂದ ಕೇವಲ ಹಾಸ್ಯಕ್ಕಾದರೂ ಬುದ್ಧಿವಂತನಾದವನು ದ್ಯೂತಕ್ಕೆ ಪ್ರವರ್ತಿಸಬಾರದು. ಇದಕ್ಕಾಗಿಯೇ ಹಿಂದೆ ನಾನು ಆ ದ್ಯೂತಕಾಲದಲ್ಲಿಯೇ ಈ ಆಟವು ಯುಕ್ತವಲ್ಲವೆಂದು, ಸಾರಿಸಾರಿ ಹೇಳಿದೆನು. ಪ್ರತೀಪಕುಲದಲ್ಲಿ ಹುಟ್ಟಿದ ಓ ಮಹಾರಾಜಾ ! ರೋಗಿಗೆ ಪಥ್ಯವಾದ ಔಷಧಿಯು ಹೇಗೆ ರುಚಿಸುವುದಿಲ್ಲವೋ, ಹಾಗೆ ನನ್ನ ಮಾತು ನಿನಗೆ ಆಗ ರುಚಿಸದೆ ಹೋಯಿತು. ಒಳ್ಳೇ ವಿಚಿತ್ರವಾದ ಗರಿಗಳುಳ್ಳ ನವಿಲುಗಳನ್ನು ಕಾಗೆಗಳ ಮೂಲಕವಾಗಿ ಹೆದರಿಸಿ ಓಡಿಸುವಂತೆ, ನೀನು ಕೌರವರ ಮೂಲಕವಾಗಿ ಆ ಪಾಂಡವರನ್ನು ಪರಾಭವಿಸಿದೆ. ಸಿಂಹಗಳನ್ನು ಬಿಟ್ಟು, ನರಿಗಳನ್ನು ಪೋಷಿಸುವಂತೆ ಪಾಂಡವರನ್ನು ತೊರೆದು ಕೌರವರನ್ನು ಪೋಷಿಸುತ್ತಿರುವೆ. ಕಾಲವು ಬಂದಾಗ, ನೀನು ಇದಕ್ಕಾಗಿ ದುಃಖಿಸದೆ ಇರಲಾರೆ. ಯಾವ ರಾಜನು ತನಗೆ ಯಾವಾಗಲೂ ಹಿತೈಷಿಯಾಗಿಯೂ, ತನ್ನಲ್ಲಿ ಭಕ್ತಿಯುಳ್ಳವನಾಗಿಯೂ ಇರುವ ಭೃತ್ಯನ ವಿಷಯದಲ್ಲಿ ಕೋಪಿಸುವುದಿಲ್ಲವೋ, ಅಂತಹ ಪ್ರಭುವಿನಲ್ಲಿಯೇ ಭೃತ್ಯರೂ ವಿಶ್ವಾಸವುಳ್ಳವರಾಗಿ, ಎಂತಹ ವಿಪತ್ತಿನಲ್ಲಿಯೂ ಕೈಬಿಡದೆ ಕಾಪಾಡುವರು. ರಾಜನಾದವನು, ತನ್ನ ರಾಜ್ಯವನ್ನೂ, ಧನವನ್ನೂ ಹೆಚ್ಚಿಸಬೇಕೆಂದು ತನ್ನ ಸೇವಕರ ಜೀವನಕ್ಕೆ ಎಂದಿಗೂ ಲೋಪವನ್ನುಂಟುಮಾಡಬಾರದು. ತನ್ನಲ್ಲಿ ಅತ್ಯಂತ ವಿಶ್ವಾಸವುಳ್ಳ ಮಂತ್ರಿಗಳಾದರೂ ರಾಜನಿಂದ ವಂಚಿಸಲ್ಪಟ್ಟು ತಮ್ಮ ಸೌಖ್ಯವನ್ನು ಕಳೆದುಕೊಂಡರೆ, ಆ ರಾಜನಿಗೇ ವಿರೋಧಿಗಳಾಗಿ ನಿಲ್ಲುವರು. ವಿವೇಕಿಯಾದವನು ಮೊದಲೇ ಕಾರ್ಯಗಳನ್ನೂ, ಆದಾಯವ್ಯಯಗಳನ್ನೂ, ಅದಕ್ಕೆ ತಕ್ಕ ವೃತ್ತಿಯನ್ನೂ, ಲೆಕ್ಕಮಾಡಿ ನಿರ್ಣಯಿಸಿಕೊಂಡು, ಅದಕ್ಕೆ ತಕ್ಕ ಸಹಾಯಸಂಪತ್ತುಗಳನ್ನೆಲ್ಲ ಸಂಗ್ರಹಿಸಿಡಬೇಕು. ಅಸಾಧ್ಯ ಕಾರ್ಯಗಳುಕೂಡ ಸಹಾಯಬಲದಿಂದ ಸಾಧ್ಯವಾಗುವುವು. ಯಾವ ಸೇವಕನು, ತನ್ನ ಯಜಮಾನನ ಮನಸ್ಸನ್ನು ತಿಳಿದುಕೊಂಡು, ಸೋಮಾರಿತನವಿಲ್ಲದೆ ಕಾರ್ಯಗಳನ್ನು ನಡೆ

ಸುತ್ತ ಬರುವನೋ, ಸಮಯದಲ್ಲಿ ತನ್ನ ಯಜಮಾನನಿಗೆ ಹಿತವನ್ನು ಹೇ
ಳುತ್ತ, ಭಕ್ತಿಯುಳ್ಳವನಾಗಿ ಒಳ್ಳೇ ನಡತೆಯಿಂದಿರುವನೋ, ತನ್ನ ಶಕ್ತಿ
ಯನ್ನು ತಿಳಿದು ತಾನು ಕೆಲಸಮಾಡುವನೋ, ಅಂತವನನ್ನು ಯಜಮಾ
ನನು, ತನ್ನ ಆತ್ಮದಂತೆ ಭಾವಿಸಿ ಅಕ್ಕರೆಯಿಂದ ಪೋಷಿಸಬೇಕು. ಹೀಗಿ
ಲ್ಲದೆ ಯಾವ ಸೇವಕನು, ಹೇಳಿದ ಮಾತನ್ನು ಆದರಿಸುವುದಿಲ್ಲವೋ, ಮಾತಿ
ಗೆ ಮಾತನ್ನು ಬದಲು ಹೇಳುವನೋ, ತಾನೇ ಎಲ್ಲವನ್ನೂ ತಿಳಿದವನೆಂಬ
ಗರ್ವದಿಂದ ಯಜಮಾನನಿಗೆ ಪ್ರತಿಕೂಲವಾಗಿ ಮಾತನಾಡುವನೋ ಅಂ
ತಹ ಭೃತ್ಯನನ್ನು ಒಡನೆಯೇ ತೊರೆದುಬಿಡಬೇಕು. ಮಂದಸ್ವಭಾವವಿಲ್ಲ
ದವನು, ಪೌರುಷವುಳ್ಳವನು, ಕಾರ್ಯಗಳನ್ನು ತ್ವರೆಯಾಗಿ ಮಾಡತಕ್ಕ
ವನು, ಕನಿಕರವುಳ್ಳವನು, ಮೃದುಸ್ವಭಾವವುಳ್ಳವನು, ಇತರರಿಂದ ಕದಲಿ
ಸುವುದಕ್ಕಾಗದವನು, ರೋಗಸಂಬಂಧವಿಲ್ಲದವನು, ಉದಾರವಾಕ್ಯವುಳ್ಳ
ವನು, ಈ ಎಂಟು ಗುಣವುಳ್ಳವನೇ ದೂತನಾಗಿರತಕ್ಕವನೆಂದು ವಿದ್ವಾಂ
ಸರು ಹೇಳುವರು. ಬುದ್ಧಿಶಾಲಿಯಾದವನು ತನ್ನಲ್ಲಿ ವಿಶ್ವಾಸವಿಲ್ಲದವನಲ್ಲಿ
ನಂಬಿಕೆಯಿಟ್ಟು ಅವನ ಮನೆಗೆ ಅಕಾಲದಲ್ಲಿ ಹೋಗಬಾರದು. ರಾತ್ರಿಯ
ಹೊತ್ತಿನಲ್ಲಿ ಚೌಕಗಳಲ್ಲಿ ಮರೆಯಾಗಿ ನಿಲ್ಲಬಾರದು. ರಾಜನು ಕಾಮಿಸುವ
ಸ್ತ್ರೀಯಮೇಲೆ ಕಣ್ಣಿಡಬಾರದು. ಅನೇಕರೊಡನೆ ತನ್ನ ರಹಸ್ಯವನ್ನು ಹೇ
ಳಿಕೊಳ್ಳುತ್ತ ಕೆಟ್ಟವರೊಡನೆ ಸೇರಿ, ಕಾರ್ಯಗಳನ್ನಾಲೋಚಿಸುವ ಮೂರ್ಖ
ರ ಕಾರ್ಯಾಲೋಚನೆಯಲ್ಲಿ ತಾನು ತಲೆಯಿಕ್ಕಬಾರದು. ಮತ್ತು ಅಂತಹ
ಕಾರ್ಯಾಲೋಚನೆಯನ್ನು ಮಾಡುವವನೊಡನೆ “ನಿನ್ನಲ್ಲಿ ನನಗೆ ನಂಬಿಕೆ
ಯಿಲ್ಲ”ವೆಂದು ಬಾಯಿಂದ ಹೇಳಿ ನಿರಾಕರಿಸಲೂ ಬಾರದು. ಏನಾದರೂ
ಒಂದು ಸರಿಯಾದ ನೆಪವನ್ನು ತೋರಿಸಿ ದೂರವಾಗಿರಬೇಕು. ಬಹಳ ದ
ಯಾಳುವಾದ ರಾಜನು, ವ್ಯಭಿಚಾರದಲ್ಲಿ ಬಿದ್ದ ಹೆಂಗಸು, ರಾಜನಲ್ಲಿ ಕೆಲಸ
ಮಾಡುವ ಭೃತ್ಯನು, ಹೊಟ್ಟೆಯಲ್ಲಿ ಹುಟ್ಟಿದ ಮಗನು, ಒಡಹುಟ್ಟಿದ ಸ
ಹೋದರನು, ಬಾಲಪುತ್ರವತಿಯಾದ ವಿಧವೆ, ಸೇನೆಯಲ್ಲಿ ಸೇರಿ ಜೀವಿಸುವ
ವನು, ಹಣವನ್ನೆಲ್ಲಾ ಕಳೆದುಕೊಂಡು ನಷ್ಟಪಟ್ಟವನು, ಇಂತವರನ್ನು ಹಣ
ದ ವ್ಯವಹಾರಗಳಲ್ಲಿ ಸೇರಿಸಬಾರದು. ವಿದ್ಯೆ, ಕುಲೋನ್ನತಿ, ಶಾಸ್ತ್ರಶ್ರವ
ಣ, ಇಂದ್ರಿಯನಿಗ್ರಹ, ಪರಾಕ್ರಮ, ಬಹಳವಾಗಿ ಮಾತಾಡದಿರುವುದು,

ತನ್ನ ಶಕ್ತಿಯನ್ನನುಸರಿಸಿ ದಾನಮಾಡುವುದು, ಕೃತಜ್ಞತೆ, ಇವೆಂಟು ಗುಣಗಳೂ ಮನುಷ್ಯನನ್ನು ಪ್ರಕಾಶಕ್ಕೆ ತರುವುವು. ಅಣ್ಣಾ ! ಆದರೆ ಮಹಾಮಹಿಮೆಯುಳ್ಳ ಈ ಎಲ್ಲಾ ಗುಣಗಳನ್ನೂ ಒಳಕೊಂಡಿರುವ ಒಂದೇ ಒಂದು ಗುಣವುಂಟು. ಅದಾವುದು? ರಾಜವಾಲ್ಲಭ್ಯವೆಂಬುದು. ಒಬ್ಬ ಮನುಷ್ಯನನ್ನು ರಾಜನು ಯಾವಾಗ ಆದರಿಸುವನೋ, ಆದರಿಂದ ಆ ಮನುಷ್ಯನು ಪಡೆಯತಕ್ಕ ರಾಜಸತ್ಕಾರವೆಂಬ ಗುಣವು, ಬೇರೆ ಎಲ್ಲಾ ಗುಣಗಳನ್ನೂ ಎಳೆದು ತಂದಿಟ್ಟುಕೊಳ್ಳುವುದು. *ಆಗಾಗ ಸ್ನಾನಮಾಡಿ ಶುಚಿಯಾಗಿರುವವನನ್ನು, ಬಲ, ರೂಪ, (ಮಾತಿನಲ್ಲಿ) ಸ್ವರಶುದ್ಧಿ, ವರ್ಣಶುದ್ಧಿ, ಸುಖಸ್ಪರ್ಶ, ಸುಗಂಧ, ಶುದ್ಧತೆ, ಕಾಂತಿ, ಸೌಕುಮಾರ್ಯ, ಉತ್ತಮ ಸ್ತ್ರೀಯರು, ಇವು ಹತ್ತೂ ತಾವಾಗಿ ಬಂದು ಸೇರುವುವು. ಮಿತವಾಗಿ ಊಟಮಾಡುವವನು, ಆರೋಗ್ಯ, ಆಯುಸ್ಸು, ಬಲ, ಸೌಖ್ಯ, ರೋಗವಿಲ್ಲದ ಸಂತತಿ, ಹೊಟ್ಟೆಹೊರಕನೆಂದು ಜನಗಳ ತಿರಸ್ಕಾರಕ್ಕೆ ಈಡಾಗದಿರುವುದು, ಈ ಆರು ಗುಣಗಳಿಗೆ ಪಾತ್ರನಾಗುವನು. ಕೆಲಸಮಾಡುವ ಸ್ವಭಾವವಿಲ್ಲದವನು, ಹೆಚ್ಚಾಗಿ ತಿನ್ನುವವನು, ಜನರಿಗೆ ಸೇರದವನು, ಅನೇಕ ವಂಚನೋಪಾಗಳನ್ನು ತಿಳಿದವನು, ಕ್ರೂರಸ್ವಭಾವವುಳ್ಳವನು, ದೇಶಕಾಲಗಳನ್ನು ತಿಳಿಯದವನು, ಅಸಭ್ಯವಾದ ಉಡುಪುಗಳುಳ್ಳವನು, ಇಂತವರನ್ನು ಬುದ್ಧಿಶಾಲಿಯಾದವನು ಮನೆಯಲ್ಲಿಟ್ಟುಕೊಳ್ಳಬಾರದು. ಔದಾರ್ಯವಿಲ್ಲದವನ್ನು, ಯಾವಾಗಲೂ ಇತರರನ್ನು ನಿಂದಿಸುವ ಸ್ವಭಾವವುಳ್ಳವನನ್ನು, ಅಶಾಸ್ತ್ರಜ್ಞನನ್ನು, ವನದಲ್ಲಿದ್ದು ಜೀವಿಸುವವನನ್ನು, ವಂಚಕನನ್ನು, ಗೌರವಾರ್ಹರನ್ನು ಗೌರವಿಸದಿರುವವನನ್ನು, ಕ್ರೂರನನ್ನು, ದ್ವೇಷಸ್ವಭಾವವುಳ್ಳವನನ್ನು, ಉಪಕಾರಸ್ಮರಣೆಯಿಲ್ಲದ ಕೃತಘ್ನನನ್ನು, ಎಂತಹ ಕಷ್ಟಕಾಲದಲ್ಲಿದ್ದಾಗಲೂ ಯಾಚಿಸಬಾರದು. ವೈರಬುದ್ಧಿಯಿಂದ ಕೊಲೆಗೆಲಸಗಳನ್ನು ಮಾಡತಕ್ಕವನು, ಅಜಾಗ್ರತೆಯಿಂದ ನಡೆಯತಕ್ಕವನು, ಯಾವಾಗಲೂ ಸುಳ್ಳಾಡುವವನು, ದೃಢವಾದ ಪ್ರೇಮವಿಲ್ಲದವನು, ತನ್ನನ್ನು ಮೊದಲು ಪ್ರೀತಿಸು

---

* ರಾಜನಲ್ಲಿ ಪ್ರಜಾವಾತ್ಸಲ್ಯವೆಂಬ ಒಂದು ಗುಣವಿದ್ದರೆ, ಈ ಎಲ್ಲಾ ಗುಣಗಳಿಗಿಂತಲೂ ಅದೊಂದೇ ಎಲ್ಲಾ ಗುಣಗಳನ್ನೂ ಒಳಕೊಳ್ಳುವುದೆಂದೂ ಕೆಲವರ ಅರ್ಥವು.

ತ್ತಿದ್ದು ಆಮೇಲೆ ಬಿಟ್ಟವನು, ತಾನೇ ಸರ್ವಸಮರ್ಥನೆಂಬ ಹೆಮ್ಮೆಯುಳ್ಳ ವನು, ಆ ಆರುಮಂದಿ ನರಾಧಮರನ್ನು ಯಾವಾಗಲೂ ಆಶ್ರಯಿಸಬಾರ ದು. ಮನುಷ್ಯನಿಗೆ ಸಾಧನ (ಸಹಾಯ) ಬಲದಿಂದ ಅರ್ಥಸಿದ್ಧಿಯಾಗು ವುದು. ಅರ್ಥಸಿದ್ಧಿಯು ಸಹಾಯಗಳನ್ನೊದಗಿಸುವುವು. ಹೀಗೆ ಒಂದಕ್ಕೊಂ ದಕ್ಕೆ ಅನ್ಯೋನ್ಯಾಶ್ರಯವಿರುವುದರಿಂದ, ಇವೆರಡರಲ್ಲಿ ಒಂದಿಲ್ಲದಿದ್ದರೆ ಮತ್ತೊಂದು ಸಿದ್ಧಿಸಲಾರದು. ಮನುಷ್ಯನು ಪುತ್ರಸಂತಾನವನ್ನು ಪಡೆದು, ಅವರಮೇಲೆ ಸಾಲವನ್ನಿಡದೆ, ಅವರಿಗೆ ಯಾವುದಾದರೂ ಸರಿಯಾದ ಒಂ ದು ವೃತ್ತಿಯನ್ನು ಕಲ್ಪಿಸಿ, ಹೆಣ್ಣುಮಕ್ಕಳನ್ನು ಸರಿಯಾದ ಸ್ಥಳಗಳಿಗೆ ವಿವಾಹಮಾಡಿಕೊಟ್ಟು, ಆಮೇಲೆ ಈ ಲೌಕಿಕ ಸಂಬಂಧವನ್ನೇ ತೊರೆದು, ಕಾಡಿನಲ್ಲಿ ಋಷಿಯಂತೆ ಕಾಲವನ್ನು ಕಳೆಯಬೇಕು. ಶಕ್ತಿಯಿದ್ದವನು ಈ ಲೋಕದಲ್ಲಿ ಎಲ್ಲಾ ಪ್ರಾಣಿಗಳಿಗೂ ಹಿತವಾಗಿಯೂ, ತನಗೂ ಕ್ಷೇಮ ಕರವಾಗಿಯೂ ಇರುವ ಕಾರ್ಯಗಳನ್ನೇ ಮಾಡಬೇಕು. ಇದೇ ಎಲ್ಲಾ ಅರ್ಥಸಿದ್ಧಿಗೂ ಮೂಲಾಧಾರವು. ಬುದ್ಧಿಶಕ್ತಿ, ಕಾರ್ಯಸಾಮರ್ಥ್ಯ, ಪರಾ ಕ್ರಮ, ದೇಹಬಲ, ಮುಂದೆ ಬರಬೇಂಬ ಆಶೆ, ದೃಢಪ್ರಯತ್ನ, ಈ ಗುಣ ಗಳುಳ್ಳವನಿಗೆ ತನಗೆ ಬದುಕಿಲ್ಲವೆಂಬ ಭೀತಿಗೇನೂ ಕಾರಣವಿಲ್ಲ.

ಓ ಮಹಾರಾಜಾ! ಪ್ರಕೃತಸ್ಥಿತಿಯಲ್ಲಿ ಯಾರಿಗೆ ಇಂದ್ರಾದಿದೇವತೆ ಗಳೂ ಭಯಪಡುವರೋ, ಅಂತಹ ಪಾಂಡವರೊಡನೆ ಯುದ್ಧಕ್ಕೆ ನಿಲ್ಲುವುದ ರಲ್ಲಿ ಎಷ್ಟು ದೋಷಗಳಿವೆಯೋ ನೀನೇ ನೋಡು! ಸ್ವಂತ ಮಕ್ಕಳೊಡನೆ ವೈರವೊಂದು, ನೀನು ಯಾವಾಗಲೂ ಮನಸ್ಸಿನಲ್ಲಿ ಭೀತಿಯಿಂದ ಕೊರಗು ತ್ತಿರುವುದು ಎರಡನೆಯದು, ಲೋಕದಲ್ಲಿ ಕುರುವಂಶಕ್ಕೆ ಅಪಪ್ರಥೆಯೆಂ ಬುದು ಮೂರನೆಯದು, ನಮ್ಮ ಸ್ಥಿತಿಯನ್ನು ನೋಡಿ ನಮಗಾಗದವರೆಲ್ಲ ರೂ ಸಂತೋಷಪಡುವುದು ನಾಲ್ಕನೆಯದು; ಹೀಗೆ ನಾನಾ ದುಃಖಗಳಿಗೆ ನೀನು ಭಾಗಿಯಾಗುವೆ. ಇದಲ್ಲದೆ, ಎಲೈ ಇಂದ್ರಸಮಾನನೆ! ಮಹಾತ್ಮ ನಾದ ಆ ಭೀಷ್ಮನ, ನಿನ್ನ, ದ್ರೋಣನ ಮತ್ತು ರಾಜನಾದ ಯುಧಿಷ್ಠಿರನ ಕೋಪವೆಂಬುದು ಪ್ರಬಲವಾದರೆ, ಆಕಾಶದಲ್ಲಿ ಅಡ್ಡಲಾಗಿ ಬಿದ್ದ ಧೂಮ ಕೇತುವಿನಂತೆ ಈ ಲೋಕವನ್ನೇ ನಾಶಮಾಡುವುದು. ಓ ಮಹಾರಾಜಾ!

ನಿನ್ನ ನೂರುಮಂದಿ ಮಕ್ಕಳೂ, ಮಹಾಶೂರನಾದ ಆ ಕರ್ಣನೂ, ಐದು ಮಂದಿ ಪಾಂಡವರೂ ಒಂದಾಗಿ ಸೇರಿದ್ದರೆ, ಸಮುದ್ರಮೇಖಲೆಯಾದ ಸಮಸ್ತ ಭೂಮಿಯನ್ನೂ ಕೈಯಲ್ಲಿಟ್ಟುಕೊಂಡು ಆಳಬಲ್ಲರು. ರಾಜಾ! ನಿನ್ನ ಮಕ್ಕಳಾದ ಕೌರವರನ್ನು ಮಹಾರಣ್ಯವೆಂದೂ, ಪಾಂಡವರನ್ನು ಅದರೊಳಗಿನ ಹುಲಿಗಳೆಂದೂ ಭಾವಿಸು. ಹುಲಿಗಳಿಗೆ ಆಶ್ರಯವಾದ ಕಾಡನ್ನೂ ಕೆಡಿಸಬಾರದು. ಕಾಡಿಗೆ ಬೆಂಬಲವಾದ ಹುಲಿಗಳನ್ನೂ ಓಡಿಸಬಾರದು. ಹುಲಿಗಳಿಲ್ಲದುದು ಕಾಡೆನಿಸುವುದಿಲ್ಲ. ಕಾಡಿಲ್ಲದೆ ಹುಲಿಗಳಿರಲಾರವು. ಹುಲಿಗಳಿಂದ ವನವೂ, ವನದಿಂದ ಹುಲಿಗಳೂ ರಕ್ಷಿಸಲ್ಪಡುವುವು. ದುರ್ಬುದ್ಧಿಯುಳ್ಳವರು ಇತರರಲ್ಲಿ ದೋಷಗಳನ್ನು ಎಷ್ಟು ಅಕ್ಕರೆಯಿಂದ ಹುಡುಕುವರೋ ಹಾಗೆ, ಅವರ ಗುಣಗಳನ್ನೂ ಹಾಗೆ ಕಂಡುಕೊಳ್ಳಲು ಇಷ್ಟಪಡುವುದಿಲ್ಲ. ಅರ್ಥಸಿದ್ಧಿಯನ್ನು ಬಯಸುವವನು ಮೊದಲಿಂದಲೂ ಧರ್ಮವನ್ನು ಬಿಟ್ಟುಹೋಗಬಾರದು. ಸ್ವರ್ಗದಿಂದ ಅಮೃತವು ಅಗಲದಂತೆ ಧರ್ಮವನ್ನು ಬಿಟ್ಟು ಅರ್ಥವು ಅಗಲಿರಲಾರದು. ಯಾವನ ಮನಸ್ಸು ಪಾಪದಿಂದ ನಿವೃತ್ತವಾಗಿ, ಒಳ್ಳೆಯ ಆಲೋಚನೆಯಲ್ಲಿಯೇ ಇಡಲ್ಪಡುವುದೋ, ಅವನಿಗೆ ಪ್ರಕೃತಿ ವಿಕೃತಿ ರೂಪವಾದ (ಕಾರ್ಯಕಾರಣರೂಪವಾದ) ಸಮಸ್ತವೂ ತಿಳಿದಂತೆಯೇ. ಯಾವನು ಧರ್ಮಾರ್ಥಕಾಮಗಳನ್ನು ಆಯಾ ಕಾಲಕ್ಕೆ ಅನುಗುಣವಾಗಿ ಸೇವಿಸುವನೋ, ಅವನು ಇಹಲೋಕ ಪರಲೋಕಗಳೆರಡರಲ್ಲಿಯೂ ಆ ಮೂರು ಪುರುಷಾರ್ಥಗಳ ಫಲವನ್ನು ಪೂರ್ಣವಾಗಿ ಪಡೆಯುವನು. ಯಾವನು ಮಿತಿಮೀರಿ ಬರುವ ಕೋಪಹರ್ಷಗಳ ವೇಗವನ್ನು ಅಡಗಿಸಬಲ್ಲನೋ, ಮಹಾವಿಪತ್ತುಗಳಲ್ಲಿಯೂ ಎದೆಗುಂದದೆ ಯಾವನು ಧೈರ್ಯದಿಂದಿರುವನೋ, ಅಂತವನೇ ಈ ಲೋಕದಲ್ಲಿ ಸಂಪತ್ತಿಗೆ ಪಾತ್ರನಾಗುವನು. ಮಹಾರಾಜಾ! ಮನುಷ್ಯನಿಗೆ ಐದು ಬಗೆಯ ಬಲಗಳುಂಟು. ಅವುಗಳ ತಾರತಮ್ಯವನ್ನು ತಿಳಿಸುವೆನು ಕೇಳು! ಬಾಹುಬಲವೆಂಬುದು ಮೊದಲನೆಯದು. ಮಂತ್ರಬಲವೆಂಬುದು ಎರಡನೆಯದು. ಹಣದ ಬಲವು ಮೂರನೆಯದು. ಸ್ವಪ್ರಯತ್ನವಿಲ್ಲದೆ ಪಿತೃಪಿತಾಮಹರ ಕಡೆಯಿಂದ ತನಗೆ ತಾನಾಗಿ ಬಂದ ಕುಲದಬಲವೆಂಬುದು ನಾಲ್ಕನೆಯದು. ಓ ಭರತಶ್ರೇಷ್ಠಾ! ಈ ಮೇಲೆ ಹೇಳಿದ ಎಲ್ಲಾ ಬಲಗಳನ್ನೂ ತನ್ನೊಳಗೆ ಅಡಗಿಸಿಕೊಂಡು,

ಎಲ್ಲಾ ಬಲಗಳಿಗಿಂತಲೂ ಉತ್ತಮಬಲವೆನಿಸಿಕೊಂಡ ಐದನೆಯ ಬಲ ವೊಂದುಂಟು. ಅದೇ ಪ್ರಜ್ಞಾಬಲವೆನಿಸುವುದು. ಲೋಕದಲ್ಲಿ ಇತರರಿಗೆ ಉಪಕಾರವಮಾಡತಕ್ಕ ಸ್ವಭಾವವುಳ್ಳ ಸಾಧುವೊಡನೆ ವೈರವನ್ನು ಮಾಡಿ ಕೊಂಡು, ತಾನು ದೂರದಲ್ಲಿರುವೆನೆಂದು ಧೈರ್ಯಗೊಂಡಿರಬಾರದು. ಬುದ್ಧಿ ಶಾಲಿಯಾದವನು ಸ್ತ್ರೀಯರಲ್ಲಿಯೂ, ರಾಜರಲ್ಲಿಯೂ, ಸರ್ಪಗಳಲ್ಲಿಯೂ, ತಾನಾಗಿ ಕಲಿತ ವಿದ್ಯೆಗಳಲ್ಲಿಯೂ, ಪ್ರಭುಗಳಲ್ಲಿಯೂ, ಶತ್ರುಗಳಲ್ಲಿಯೂ, ತಾನು ಅನುಭವಿಸುವ ಭೋಗಗಳಲ್ಲಿಯೂ, ತನ್ನ ಆಯುಸ್ಸಿನಲ್ಲಿಯೂ, ಎಂದಿಗೂ ನಂಬಿಕೆಯನ್ನಿಡಬಾರದು. ಬುದ್ಧಿಯೆಂಬ ಬಾಣದಿಂದ ಹೊಡೆ ಯಲ್ಪಟ್ಟವನಿಗೆ ಚಿಕಿತ್ಸಕರಿಲ್ಲ! ಔಷಧಗಳೂ ಇಲ್ಲ! ಹೋಮಗಳಾಗಲಿ, ಮಂತ್ರಗಳಾಗಲಿ, ಮಂಗಳಕಾರ್ಯಗಳಾಗಲಿ, ಯಾವುದೂ ಇಲ್ಲ! ಅಥ ರ್ವವೇದದಲ್ಲಿ ಹೇಳಲ್ಪಟ್ಟ ಮಂತ್ರಗಳಾದರೂ ಅದಕ್ಕಿಲ್ಲ! ಸಿದ್ಧಿಕರಗಳಾದ ರಸಗುಳಿಗೆಗಳೂ ಅದಕ್ಕೆ ಪ್ರಯೋಜನಕರಗಳಲ್ಲ!

ಓ ಮಹಾರಾಜಾ! ಹಾವು, ಬೆಂಕಿ, ಸಿಂಹ, ಸತ್ಕುಲದಲ್ಲಿ ಹುಟ್ಟಿದ ಮಗನು, ಇಂತವರನ್ನು ಮನುಷ್ಯನು ತಿರಸ್ಕರಿಸಬಾರದು. ಇವೆಲ್ಲವೂ ಮಹಾ ತೀವ್ರತೇಜಸ್ಸುಳ್ಳವುಗಳು. ಅಗ್ನಿಯೆಂಬ ತೀವ್ರವಾದ ತೇಜಸ್ಸು ಮರದಲ್ಲಿ ಗೂಢವಾಗಿ ಅಡಗಿರುವುದು. ಅದನ್ನು ಇತರರು ಪ್ರಯತ್ನಪಟ್ಟು ಪ್ರೇರಿಸಿದಹೊರತು ತನ್ನಲ್ಲಿರುವ ಶಕ್ತಿಯನ್ನು ಆ ಮರವು ಉಪಯೋಗಿಸು ವುದಿಲ್ಲ. ಆ ಮರವನ್ನು ಕಡೆದು (ಮಥಿಸಿ), ಒಳಗಿನ ಬೆಂಕಿಯು ಹೊರಗೆ ಬರುವಂತೆ ಮಾಡಿದರೆಮಾತ್ರ, ಆ ಬೆಂಕಿಯು ಆ ಮರವನ್ನೂ, ಆ ಮರವು ಬೆಳೆದ ಕಾಡನ್ನೂ, ಅದರ ಸಮೀಪದಲ್ಲಿರುವ ಬೇರೆ ಎಲ್ಲಾ ವಸ್ತುಗಳನ್ನೂ, ನಿಮಿಷಮಾತ್ರದಲ್ಲಿ ತನ್ನ ತೇಜಸ್ಸಿನಿಂದ ದಹಿಸಿಬಿಡುವುದಲ್ಲವೆ? ಹೀಗೆ ಯೇ ಒಳ್ಳೆಯ ಕುಲದಲ್ಲಿ ಹುಟ್ಟಿದವರು ಅಗ್ನಿಗೆ ಸಮಾನವಾದ ತೇಜಸ್ಸು ಳ್ಳವರು. ಆದರೆ ಆ ತೇಜಸ್ಸನ್ನು ಹೊರಕ್ಕೆ ಕಾಣಿಸದೆ, ಕಾಷ್ಠದೊಳಗಿನ ಬೆಂಕಿಯಂತೆ ತಮ್ಮಲ್ಲಿಯೇ ಅಡಗಿಸಿಟ್ಟುಕೊಂಡು, ತಮ್ಮ ಆಕಾರಗಳಿಂದ ಲೂ ಹೊರಕ್ಕೆ ಕಾಣಿಸದೆ, ತಾಳ್ಮೆಯಿಂದ ಸುಮ್ಮನಿರುವರು. ಓ ಮಹಾ ರಾಜಾ! ಪುತ್ರರೊಡಗೂಡಿದ ನೀನು ಒಂದು ಲತೆ! ನಿನಗೆ ಆ ಪಾಂಡು

ಪುತ್ರರು ಆಶ್ರಯವೃಕ್ಷಗಳಂತಿರುವರು. ದೊಡ್ಡ ಮರದ ಆಶ್ರಯವಿಲ್ಲದಿದ್ದ ರೆ ಲತೆಗಳು ಹಬ್ಬಿ ಬೆಳೆಯಲಾರವು. ಆದುದರಿಂದ ನೀನು ಪಾಂಡವರೊ ಡನೆ ಸೇರಿಯೇ ಮುಂದಿನ ಅಭಿವೃದ್ಧಿಯನ್ನು ಬಯಸಬೇಕು. ಮತ್ತು ರಾಜೇಂದ್ರಾ! ನಿನ್ನ ಮಗನನ್ನು ಒಂದು ವನವೆಂದೂ, ಪಾಂಡವರನ್ನು ಅದರೊಳಗಿನ ಸಿಂಹಗಳೆಂದೂ ನೀನು ತಿಳಿ. ಸಿಂಹಗಳಿಲ್ಲದ ವನವಾಗಲಿ, ವನಾಶ್ರಯವಿಲ್ಲದ ಸಿಂಹಗಳಾಗಲಿ ಕ್ಷೇಮದಿಂದಿರಲಾರವು.

ಇದು ಮೂವತ್ತೇಳನೆಯ ಅಧ್ಯಾಯವು.



ಪಾಂಡವರಿಗೆ ಸ್ವಲ್ಪರಾಜ್ಯವನ್ನೂ ಕೊಡದಿದ್ದ ಪಕ್ಷದಲ್ಲಿ, ದು ರ್ಯೋಧನನಿಗೆ ರಾಜ್ಯಭ್ರಂಶವಾಗುವುದು ನಿಶ್ಚಯ ವೆಂದು ವಿದುರನು ಧೃತರಾಷ್ಟ್ರನಿಗೆ ಹೇಳಿದುದು.

ಮಹಾರಾಜಾ! ಕೇಳು! ವೃದ್ಧರಾದವರು ತನ್ನಲ್ಲಿಗೆ ಬಂದಾಗ, ಚಿ ಕ್ಕವರಿಗೆ (ಭಯಭಕ್ತಿಗಳಿಂದ) ಪ್ರಾಣಗಳೇ ಉತ್ಕ್ರಮಿಸಿಹೋಗುವಂತಾ ಗುವುವು. ಅವರಿಗೆ ಇದಿರೆದ್ದು ನಮಸ್ಕಾರಮಾಡಿದಮೇಲೆ ತಿರುಗಿ ಆ ಪ್ರಾಣಗಳು ಕೂಡಿಬರುವುವು. ಸಾಧುವಾದ ಅತಿಥಿಯು ಮನೆಗೆ ಬಂದೊ ಡನೆ ಪೀಠವನ್ನು ಕೊಟ್ಟು, ನೀರನ್ನು ತಂದು, ಅವನ ಪಾದಗಳನ್ನು ತೊಳೆ ದು, ಸುಖಪ್ರಶ್ನವನ್ನು ಕೇಳಿ, ಆಮೇಲೆ ತನ್ನ ಸ್ಥಿತಿಯನ್ನು ಅವನಿಗೆ ತಿಳಿ ಸಬೇಕು. ಆಮೇಲೆ ಅವನಿಗೆ ಊಟಕ್ಕಾಗಿ ಅನ್ನವನ್ನಿಡಬೇಕು. ಮಂತ್ರ ವಿತ್ತಾದ ಬ್ರಾಹ್ಮಣನು ಯಾವನ ಮನೆಗೆ ಬಂದು, ಆ ಗೃಹಸ್ಥನ ಲೋಭ ದಿಂದಲೋ, ಭಯದಿಂದಲೋ, ಉದಾರಬುದ್ಧಿಯಿಲ್ಲದ ಕಾರಣದಿಂದಲೋ, ಆ ಗೃಹಸ್ಥನಿಂದ ಜಲವನ್ನೂ, ಮಧುಪರ್ಕವನ್ನೂ, ಗೋವನ್ನೂ ಪ್ರತಿ ಗ್ರಹಿಸುವುದಿಲ್ಲವೋ ಅಂತವನ ಬದುಕೇ ನಿರರ್ಥಕವೆಂದು ದೊಡ್ಡವರು ಹೇಳಿರುವರು. ವೈದ್ಯಮಾಡುವವನು, ಬಾಣಗಾರನು, ವ್ರತಭ್ರಷ್ಟನಾದ ವನು, ಕಳ್ಳತನಮಾಡಿದವನು, ಕ್ರೂರನು, ಮದ್ಯಪಾನಮಾಡುವವನು, ಭ್ರೂಣಹತ್ಯೆಮಾಡಿದವನು (ಗರ್ಭವನ್ನು ಕೆಡಿಸುವುದು, ಶಿಶುಹತ್ಯೆ ಮುಂ

ತಾದುವನ್ನು ಮಾಡಿದವನು), ಸೇನೆಯಲ್ಲಿ ಸೇರಿ ಜೀವಿಸುವವನು, ವೇದ ವನ್ನು ವಿಕ್ರಯಿಸುವವನು, ಇಂತವನು ಅತಿಥಿಯಾಗಿ ಬಂದರೆ, ಅವನು, ಎಷ್ಟೇ ಇಷ್ಟನಾಗಿದ್ದರೂ, ನೀರನ್ನುಕೂಡ ಕೊಟ್ಟು ಸತ್ಕರಿಸುವುದಕ್ಕೆ ಯೋಗ್ಯನಲ್ಲ. ಉಪ್ಪು, ಪಕ್ವಾನ್ನ, ಮೊಸರು, ಹಾಲು, ಜೇನು, ಎಣ್ಣೆ, ತುಪ್ಪ, ಎಳ್ಳು, ಮಾಂಸ, ಹಣ್ಣುಗಡ್ಡೆಗಳು, ಶಾಕಪದಾರ್ಥಗಳು, ಕೆಂಪು ಬಟ್ಟೆ, ವಾಸನಾದ್ರವ್ಯಗಳು, ಬೆಲ್ಲ ಇವುಗಳನ್ನು ಆಚಾರನಿಷ್ಠರು ವಿಕ್ರಯಿಸ ಬಾರದು.

ರಾಜಾ! ಅತಿಥಿಯು ಎಂತವನಾಗಿದ್ದರೂ ಅತಿಥಿಯೆಂಬ ಮಾತ್ರಕ್ಕೇ ಪೂಜ್ಯನು. ಗುಣಸಂಪನ್ನನಾಗಿದ್ದರೆ ಹೇಳುವುದೇನು? ಕೋಪ ಸ್ವಭಾವವಿಲ್ಲದೆ, ಕಲ್ಲು, ಮಣ್ಣು, ಭಂಗಾರ ಇವುಗಳಲ್ಲೆಲ್ಲ ಸಮಬುದ್ಧಿಯುಳ್ಳವನಾಗಿ, ಶೋಕಕ್ಕೆ ಮನಸ್ಸು ಕೊಡದೆ, ಸ್ನೇಹದ್ವೇಷಗಳೆರಡನ್ನೂ ತೊರೆದು, ನಿಂದಾಸ್ತುತಿಗಳನ್ನೂ, ಪ್ರಿಯಾಪ್ರಿಯಗಳನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ, ಎಲ್ಲರಲ್ಲಿಯೂ ಉದಾಸೀನನಂತೆ ಇರುವವನೇ ಭಿಕ್ಷು (ಸನ್ಯಾಸಿ) ವೆನಿಸುವನು. ಕಾಡಿನಲ್ಲಿದ್ದುಕೊಂಡು, ಕಣದಲ್ಲಿ ಉದಿರಿದ ಧಾನ್ಯಗಳನ್ನೂ, ಗಡ್ಡೆಗೆಣಸುಗಳನ್ನೂ, ಇಂಗಳದ ಕಾಯನ್ನೂ, ಸೊಪ್ಪುಜಾತಿಗಳನ್ನೂ ತಿಂದು ಬದುಕುವವನೂ, ಮನಸ್ಸನ್ನು ಚೆನ್ನಾಗಿ ನಿಗ್ರಹಿಸಿದವನೂ, ಅಗ್ನಿ ಕಾರ್ಯಗಳಲ್ಲಿ ಆಸಕ್ತನೂ, ಅತಿಥಿಗಳನ್ನು ಬಹಳ ಎಚ್ಚರದಿಂದ ಆದರಿಸತಕ್ಕವನೂ, ತನ್ನ ಸ್ವಧರ್ಮದ ಭಾರವನ್ನು ವಹಿಸಿದವನೂ ದೊಡ್ಡ ತಪಸ್ವಿ! ಇಂತಹ ಅತಿಥಿಯು ಬಂದರೆ ಅವನನ್ನು ಪೂಜಿಸುವುದಕ್ಕಿಂತಲೂ ಭಾಗ್ಯವಿಲ್ಲ. ಓ ಮಹಾರಾಜಾ! ಬುದ್ಧಿಶಾಲಿಯಾದವನಿಗೆ ಅಪಕಾರವನ್ನು ಮಾಡಿದವನು, ಅವನನ್ನು ಬಿಟ್ಟು ತಾನು ದೂರದಲ್ಲಿದ್ದರೂ, ಅದರಿಂದ ತಾನು ನಿರಪಾಯನಾಗಿರುವೆನೆಂದು ನಂಬಬಾರದು. ಬುದ್ಧಿವಂತನ (ಬುದ್ಧಿಯೆಂಬ) ತೋಳುಗಳು ಬಹಳ ಉದ್ದವಾದುವು. ಆದ ರಿಂದ ತನ್ನನ್ನು ಹಿಂಸೆಮಾಡಿದವನು, ಎಷ್ಟು ದೂರದಲ್ಲಿದ್ದರೂ ಹಿಡಿದು ಹಿಂಸೆಮಾಡಬಲ್ಲನು. ಮನುಷ್ಯನು ತನ್ನಲ್ಲಿ ನಂಬಿಕೆಯಿಲ್ಲದವನನ್ನು ನಂಬ ಬಾರದು. ನಂಬಿಕೆಯಿದ್ದವನನ್ನೂ ಬಹಳವಾಗಿ ನಂಬಿರಬಾರದು. ಒಬ್ಬ

ನನ್ನು ಬಹಳವಾಗಿ ನಂಬುವುದರಿಂದ ಉಂಟಾಗುವ ಭಯವು ಸಮಯದಲ್ಲಿ ಬುಡವನ್ನೇ ಕತ್ತರಿಸಿಬಿಡುವುದು. ಸ್ತ್ರೀಯರವಿಷಯದಲ್ಲಿ ಪುರುಷನು ಅಸೂಯೆಯಿಲ್ಲದವನಾಗಿ, ಅವರನ್ನು ಚೆನ್ನಾಗಿ ಪೋಷಿಸುತ್ತ, ತನ್ನ ಆದಾಯವನ್ನು ವಿಭಾಗಿಸಿಕೊಡುತ್ತ, ಪ್ರಿಯವಾದ ಮಾತುಗಳನ್ನೇ ಆಡುತ್ತ, ಮೃದುಸ್ವಭಾವವುಳ್ಳವನಾಗಿ, ಒಳ್ಳೆಯ ಮಾತಿನಿಂದಲೇ ಅವರನ್ನು ಉತ್ಸಾಹಗೊಳಿಸುತ್ತಿರಬೇಕು. ಆದರೆ ಅವರಿಗೆ ವಶನಾಗಬಾರದು. ಪೂಜಿಸುವುದಕ್ಕೆ ಯೋಗ್ಯರೂ, ಮಹಾಭಾಗ್ಯಲಕ್ಷಣವುಳ್ಳವರೂ, ಶುದ್ಧಾತ್ಮರೂ, ಮನೆಗೆ ಅಲಂಕಾರದಂತಿರುವವರೂ ಆದ ಉತ್ತಮಸ್ತ್ರೀಯರು ಗೃಹಕ್ಕೆ ಶ್ರೇಯಃಕಾರಣಭೂತರಾಗಿರುವರು. ಆದುದರಿಂದ ಅಂತವರನ್ನು ಚೆನ್ನಾಗಿ ಪೋಷಿಸಬೇಕು. ಮನುಷ್ಯನು ತನ್ನ ಅಂತಃಪುರದ ಮೇಲ್ವಿಚಾರಣೆಯನ್ನು ತಂದೆಗೆ ಒಪ್ಪಿಸಬೇಕು. ಪಾಕಶಾಲೆಯ ವಿಚಾರವನ್ನು ತಾಯಿಗೆ ಒಪ್ಪಿಸಬೇಕು. ತನಗೆ ಸಮಾನನಾದವನನ್ನೇ ಪಶುಗಳ ರಕ್ಷಣೆಗೆ ನಿಯಮಿಸಬೇಕು. ಕೃಷಿಯನ್ನು ಮಾತ್ರ ತಾನೇ ಸ್ವಂತವಾಗಿ ನೋಡಬೇಕು. ವ್ಯಾಪಾರಕ್ಕೆ ಸಂಬಂಧಪಟ್ಟ ಕಾರ್ಯಗಳನ್ನು ಸೇವಕರಿಗೆ ಒಪ್ಪಿಸಬೇಕು. ಬ್ರಾಹ್ಮಣರ ಸೇವೆಯನ್ನು ಪುತ್ರರಿಂದ ನಡೆಸಬೇಕು.

ಓ ಮಹಾರಾಜಾ! ಜಲದಿಂದ ಅಗ್ನಿಯೂ, ಬ್ರಾಹ್ಮಣಕುಲದಿಂದ ಕ್ಷತ್ರಜಾತಿಯೂ, ಕಲ್ಲಿನಿಂದ ಲೋಹವೂ ಉಂಟಾಗುವುವು. ಮೇಲಿನ ಮೂರು ವಸ್ತುಗಳ ಶಕ್ತಿಯು ಬೇರೆಕಡೆಯಲ್ಲಿ ಸಾಗಿದರೂ, ತಮತಮಗೆ ಉತ್ಪತ್ತಿಸ್ಥಾನವಾದ ಕಾರಣವಸ್ತುಗಳಲ್ಲಿ ಅವುಗಳ ಶಕ್ತಿಯು ಸಾಗದು. ಸತ್ಕುಲದಲ್ಲಿ ಹುಟ್ಟಿದ ಸತ್ಪುರುಷರು ಅಗ್ನಿಗೆ ಸಮಾನವಾದ ತೇಜಸ್ಸುಳ್ಳವರು. ಆದರೆ, ತಾಳ್ಮೆಯ ಸ್ವಭಾವವುಳ್ಳವರಾಗಿ ತಮ್ಮ ಪ್ರಭಾವವನ್ನು ಆಕಾರಗಳಿಂದ ತೋರಿಸದೆ, ಕಾಷ್ಠದಲ್ಲಿರುವ ಬೆಂಕಿಯಂತೆ ತಮ್ಮ ತೇಜಸ್ಸನ್ನು ಅಡಗಿಸಿಟ್ಟುಕೊಂಡಿರುವರು. ಯಾವನ ಮಂತ್ರಾಲೋಚನೆಯನ್ನು ಅವನ ಅಂತರಂಗದವರಾಗಲಿ, ಹೊರಗಿನವರಾಗಲಿ ತಿಳಿಯಲಾರರೋ, ಅಂತಹ ರಾಜನು ನಾನಾಕಡೆಗೆ ಕಣ್ಣುಳ್ಳವನಾಗಿ, ಬಹುಕಾಲದವರೆಗೆ ಐಶ್ವರ್ಯವನ್ನು ಅನುಭವಿಸುವನು. ಕಾರ್ಯವನ್ನು ಮಾಡತಕ್ಕವನು ಬಾಯಿಂದಾ

ಡಬಾರದು. ಆ ಕಾರ್ಯಗಳನ್ನು ಮಾಡಿಯೇ ತೋರಿಸಬೇಕು. ಧರ್ಮ ಕಾಮಾರ್ಥಗಳನ್ನು ಸಾಧಿಸುವುದಕ್ಕೆ ಬೇಕಾದ ಇಂತಹ ಕಾರ್ಯಗಳಲ್ಲಿ ತನ್ನ ಆಲೋಚನೆಯು ಹೊರಗೆ ಬೀಳದಹಾಗೆಯೇ ನಡೆಸಬೇಕು. ಬೆಟ್ಟದ ತುದಿಯನ್ನೇರಿಯೋ, ಉಪ್ಪರಿಗೆಯ ಕೊನೆಯಲ್ಲಿ ಕುಳಿತೋ, ಗಿಡಬಳ್ಳಿಗಳಿಲ್ಲದ ಕಾಡಿನಲ್ಲಿದ್ದೋ ಮಂತ್ರಾಲೋಚನೆಯನ್ನು ನಡೆಸಬೇಕು. ಓ ಭರತಶ್ರೇಷ್ಠಾ! ತನಗೆ ಮಿತ್ರನಲ್ಲದವನು, ಮಿತ್ರನಾಗಿದ್ದರೂ ವಿವೇಕವಿಲ್ಲದವನು, ಪಂಡಿತನಾಗಿದ್ದರೂ ದೃಢಮನಸ್ಸಿಲ್ಲವನು, ಈ ಮೂವರೊಡನೆ ಮಂತ್ರಾಲೋಚನೆಗಳನ್ನು ನಡೆಸಬಾರದು. ಓ ಮಹಾರಾಜಾ! ಅರಸನು ಮೊದಲು ಪರೀಕ್ಷಿಸದೆ ಯಾವನನ್ನೂ ಮಂತ್ರಿತ್ವಕ್ಕೆ ಇರಿಸಿಕೊಳ್ಳಬಾರದು. ಏಕೆಂದರೆ, ತನ್ನ ಧನಲಾಭವೂ, ಉತ್ತಮವಾದ ಮಂತ್ರಾಲೋಚನವೂ ಆ ಮಂತ್ರಿಯ ಅಧೀನವಾಗಿರುವುದು. ಯಾವ ರಾಜನು ಧರ್ಮಾರ್ಥ ಕಾಮ ಸಂಬಂಧವಾಗಿ ತೊಡಗಿದ ಕಾರ್ಯಗಳು ಮುಗಿದಮೇಲೆಯೇ ಅವನ ಕಡೆಯವರಿಗೆ ತಿಳಿಯುಂತಾಗುವುದೋ ಅಂತವನೇ ರಾಜಶ್ರೇಷ್ಠನು. ಹೀಗೆ ಗೂಢವಾದ ಮಂತ್ರಾಲೋಚನೆಯುಳ್ಳ ರಾಜನಿಗೆ ಕಾರ್ಯಸಿದ್ಧಿಯು ನಿಸ್ಸಂದೇಹವು. ಯಾವನು ಪ್ರಶಸ್ತವಲ್ಲದ ಕಾರ್ಯಗಳನ್ನು ನಡೆಸುವುದಕ್ಕಾಗಿ ಬುದ್ಧಿಮೋಹದಿಂದ ಪ್ರವರ್ತಿಸುವನೋ, ಅವನ ಕಾರ್ಯವು ಕೆಡುವುದಲ್ಲದೆ, ಅವನ ಜೀವಿತವೂ ಅದರಿಂದ ಕೆಡುವ ಸಂಭವವುಂಟು. ಆದುದರಿಂದ ಪ್ರಶಸ್ತವಾದ ಕಾರ್ಯಗಳಿಗೆ ಕೈಯಿಕ್ಕುವುದೇ ಯಾವಾಗಲೂ ಸೌಖ್ಯಕಾರಣವು. ಅಂತಹ ಕಾರ್ಯಗಳನ್ನು ನಡೆಸದಿರುವುದು ಮುಂದೆ ಪಶ್ಚಾತ್ತಾಪಕ್ಕೂ ಕಾರಣವಾಗುವುದು. ವೇದಗಳನ್ನೋದದ ಬ್ರಾಹ್ಮಣನು ಹೇಗೆ ಶ್ರಾದ್ಧಾರ್ಹನಲ್ಲವೋ, ಹಾಗೆಯೇ, ಸಂಧಿ, ವಿಗ್ರಹ, ಮೊದಲಾದ ಷಡ್ಗುಣಗಳನ್ನು ತಿಳಿಯದವನು ಮಂತ್ರಿತ್ವಕ್ಕೆ ಅರ್ಹನಲ್ಲ. ಓ ಮಹಾರಾಜಾ! ಮೇಲೆ ಹೇಳಿದ ಸಂಧಿವಿಗ್ರಹಾದಿ ಷಡ್ಗುಣಗಳಲ್ಲಿ ಹೆಸರುಗೊಂಡು, ಕ್ಷಯ ಸ್ಥಾನ ವೃದ್ಧಿಗಳೆಂಬ ತ್ರಿವರ್ಗಗಳನ್ನು ತಿಳಿದು, ಯಾರಿಂದಲೂ ನಿಂದಿಸಲ್ಪಡದ ನಡತೆಯುಳ್ಳವನು ಯಾವನೋ ಅವನಿಗೆ ಭೂಮಿಯು ಕೈವಶವಾಗಿರುವುದು. ಯಾವನ ಕೋಪವಾಗಲಿ, ಹರ್ಷವಾಗಲಿ, ವ್ಯರ್ಥವಾಗಿ ಹೋಗುವುದಿಲ್ಲವೋ, ಯಾವನು ತಾನೇ ಕೆಲಸವನ್ನು ಮಾಡಿ, ಅದನ್ನು ತಾನೇ

ತಿರುಗಿ ವಿಮರ್ಶಿಸಿನೋಡುವನೋ, ಮತ್ತು ತನ್ನ ಭಂಡಾರವನ್ನು ತಾನೇ ನೋಡುತ್ತ ಅದರಲ್ಲಿ ನಂಬಿಕೆಯುಳ್ಳವನಾಗಿರುವನೋ, ಅಂತಹ ರಾಜನಿಗೆ ಭೂಮಿಯು ಯಾವಾಗಲೂ ಸಂಪತ್ತನ್ನು ಕರೆಯುತ್ತಲೇ ಇರುವುದು. ರಾಜನಾದವನು ತನಗೆ ರಾಜನೆಂಬ ಬಿರುದೂ, ಶ್ವೇತಚ್ಛತ್ರವೂ ಇರುವುದಕ್ಕೆ ಮಾತ್ರ ತೃಪ್ತನಾಗಿ ಸಂತೋಷಿಸಬೇಕು. ಐಶ್ವರ್ಯಕ್ಕೆಲ್ಲ ತಾನೊಬ್ಬನೇ ಭಾಗಿಯೆಂದೆಣಿಸದೆ, ಭೃತ್ಯರಿಗೆಲ್ಲ ಅದನ್ನು ಧಾರಾಳವಾಗಿ ಹಂಚಿಕೊಟ್ಟು, ಭೋಗದಲ್ಲಿ ತಾನೂ ಅವರಿಗೆ ಸಮಾನನೆಂದು ಭಾವಿಸಬೇಕು. ಎಲ್ಲವನ್ನೂ ತಾನೇ ಅಪಹರಿಸಬಾರದು. ಬ್ರಾಹ್ಮಣನ ಮರ್ಮವನ್ನು ಬ್ರಾಹ್ಮಣನೇ ತಿಳಿಯಬಲ್ಲನು. ಗಂಡನು ಹೆಂಡತಿಯನ್ನು ತಿಳಿಯಬಲ್ಲನು. ರಾಜನು ಮಂತ್ರಿಯನ್ನು ತಿಳಿಯಬಲ್ಲನು. ರಾಜನ ಮರ್ಮವನ್ನು ರಾಜನೇ ತಿಳಿಯಬಲ್ಲನು. ದುರ್ಬಲವಾಗಿದ್ದ ರಾಜನು ಶತ್ರುಗಳ ಕೈಗೆ ಸಿಕ್ಕಿಬಿದ್ದಾಗ, ಆ ಶತ್ರುವು ವಧಾರ್ಹನಾಗಿದ್ದರೂ, ಅವನಲ್ಲಿ ಆದಷ್ಟು ತಗ್ಗಿ ನಡೆಯುತಿದ್ದು, ತನಗೆ ಬಲವು ಸಿಕ್ಕಿದಾಗ ಅವನನ್ನು ಕೊಲ್ಲಬೇಕು. ಹಾಗೆ ಕೊಲ್ಲದೆ ಬಿಟ್ಟಪಕ್ಷದಲ್ಲಿ, ಬಹುಶೀಘ್ರದಲ್ಲಿಯೇ ತನಗೆ ಅವನಿಂದ ಅಪಾಯವು ಸಿದ್ಧವು. ದೇವತೆಗಳು, ರಾಜರು, ಬ್ರಾಹ್ಮಣರು, ಮುದುಕರು, ಬಾಲರು, ರೋಗಿಗಳು, ಇವರಮೇಲೆ ತನಗೇನಾದರೂ ಕೋಪವುಂಟಾದರೂ ಆ ಕೋಪವನ್ನು ಬಹಳ ಪ್ರಯತ್ನಪೂರ್ವಕವಾಗಿ ತಡೆದಿಡಬೇಕು. ಪ್ರಾಜ್ಞನಾದವನು ಮೂಢರಂತೆ ನಿರರ್ಥಕವಾದ ಜಗಳದಲ್ಲಿ ತಲೆಯಿಕ್ಕಬಾರದು. ಇದರಿಂದ ಅವನು ಈ ಲೋಕದಲ್ಲಿ ಕೀರ್ತಿಯನ್ನು ಪಡೆಯುವನು. ಅನರ್ಥಕ್ಕೂ ಈಡಾಗಲಾರನು. ಯಾವನ ಕೋಪವಾಗಲಿ, ಅನುಗ್ರಹವಾಗಲಿ, ನಿಷ್ಫಲವೆಂದು ಕಂಡುಬರುವುದೋ ಅಂತವನನ್ನು ಭೃತ್ಯರು, ಸ್ತ್ರೀಯರು ಷಂಡನನ್ನು ಹೇಗೋ ಹಾಗೆ ತಮಗೆ ಪ್ರಭುವನ್ನಾಗಿ ಭಾವಿಸಲಾರರು. ಧನಸಂಪಾದನೆಗೆ ಬುದ್ಧಿಯೂ, ಬಡತನಕ್ಕೆ ಸೋಮಾರಿತನವೂ ಕಾರಣಗಳಲ್ಲ. ಲೋಕದಲ್ಲಿ ಈ ವಿಧವಾದ ಸ್ಥಿತಿಗತಿಗಳ ಬದಲಾವಣೆಯ ಕಾರಣವೇನೆಂಬುದನ್ನು ಬುದ್ಧಿಶಾಲಿಯಾದವನೇ ತಿಳಿಯಬಲ್ಲನೇಹೊರತು, ಬೇರೆಯವರು ಅದನ್ನು ತಿಳಿಯಲಾರರು. ವಿದ್ಯೆ, ಶೀಲ, ವಯಸ್ಸು, ಬುದ್ಧಿ, ಐಶ್ವರ್ಯ, ಕುಲ, ಇವುಗಳಿಂದ ದೊಡ್ಡವರೆನಿಸಿಕೊಂಡವರನ್ನು ಕಂಡರೆ ಸೇರದೆ, ಮೂಢ

ನಾದವನು ಅವರನ್ನು ಯಾವಾಗಲೂ ಹೇಳನಮಾಡುವನು. ಕೆಟ್ಟನಡತೆ ಯುಳ್ಳವನು, ತಿಳುವಳಿಕೆಯಿಲ್ಲದವನು, ಅಸೂಯಾಸ್ವಭಾವವುಳ್ಳವನು, ಅಧಾರ್ಮಿಕನು, ಕೆಟ್ಟಮಾತಾಡುವವನು, ಕೋಪಸ್ವಭಾವವುಳ್ಳವನು, ಇಂತವರನ್ನು ಬಹುಬೇಗನೆ ಆಪತ್ತುಗಳು ಬಂದು ಹಿಡಿಯುವುವು. ನಿಷ್ಕಪಟವಾಗಿ ವರ್ತಿಸುವುದು, ಉದಾರಬುದ್ಧಿ, ವಿಹಿತಕಾಲವನ್ನು ಮೀರದಿರುವುದು, ಚೆನ್ನಾಗಿ ಯೋಚಿಸಿ ಸಮಯೋಚಿತವಾಗಿ ಮಾತುಗಳನ್ನಾಡುವುದು, ಇವೆಲ್ಲ ಪ್ರಾಣಿಗಳನ್ನು ವಶೀಕರಿಸತಕ್ಕ ಗುಣಗಳು. ನಿಷ್ಕಪಟಿಯೂ, ಸಮರ್ಥನೂ, ಕೃತಜ್ಞನೂ, ಬುದ್ಧಿಶಾಲಿಯೂ, ಋಜುಸ್ವಭಾವವುಳ್ಳವನೂ ಆದ ಮನುಷ್ಯನು, ತನ್ನ ಧನವನ್ನೆಲ್ಲ ಕಳೆದುಕೊಂಡು ಬಡತನಕ್ಕೆ ಬಂದಿದ್ದರೂ, ಅವನಿಗೆ ಇತರರಿಂದ ಬೇಕಾದ ಸಹಾಯಗಳು ಒದಗಿ ಬರುವುವು. ಧೈರ್ಯ, ಇಂದ್ರಿಯನಿಗ್ರಹ, ಮನೋನಿಗ್ರಹ, ಶುಚಿತ್ವ, ಕನಿಕರ, ಮೃದುವಾದ ಮಾತು, ಮಿತ್ರರಲ್ಲಿ ದ್ರೋಹಬುದ್ಧಿಯಿಲ್ಲದಿರುವುದು, ಇವೇಳುಗುಣಗಳೂ, ಸಂಪತ್ತನ್ನು ಉದ್ದೀಪನಗೊಳಿಸತಕ್ಕ ಸಮಿತ್ತುಗಳೆಂದು ತಿಳಿ. ಓ ಮಹಾರಾಜಾ! ಯಾವನು ತನ್ನ ಭೃತ್ಯರಿಗೆ ತಕ್ಕಷ್ಟು ಧನವನ್ನು ಹಂಚಿಕೊಡುವುದಿಲ್ಲವೋ, ಯಾವನು ಕೆಟ್ಟ ಮನಸ್ಸುಳ್ಳವನೂ, ಕೃತಘ್ನನೂ, ಲಜ್ಜಾಹೀನನೂ ಆಗಿರುವನೋ ಅಂತಹ ರಾಜನನ್ನು ಪ್ರಜೆಗಳು ಬಿಟ್ಟು ತೊಲಗಬೇಕು. ದುಷ್ಟಸ್ವಭಾವವುಳ್ಳ ಯಾವನು ತನ್ನಲ್ಲಿರುವ ನಿರಪರಾಧಿಗಳಾದ ಬೇರೆಯವರನ್ನು ನಿಷ್ಕಾರಣವಾಗಿ ರೇಗಿಸುವನೋ, ಅವನು ಸರ್ಪವಿದ್ದಮನೆಯಲ್ಲಿ ಮಲಗಿದವನಂತೆ ರಾತ್ರಿಯಲ್ಲಿ ನೆಮ್ಮದಿಯಾಗಿ ನಿದ್ರಿಸಲಾರನು. ಯಾರು ಕೋಪಗೊಂಡರೆ ತನ್ನ ಕ್ಷೇಮಕ್ಕೆ ಹಾನಿಯುಂಟಾಗುವುದೋ, ಅಂತವರನ್ನು ದೇವತೆಗಳನ್ನು ಹೇಗೋ ಹಾಗೆ ಪೂಜಿಸಿ, ಅವರ ಪ್ರಸಾದವನ್ನು ಪಡೆಯಬೇಕು. ಸ್ತ್ರೀಯರು, ಅಜಾಗರೂಕರು, ಜಾತಿಭ್ರಷ್ಟರು, ಅಸತ್ತುಗಳು, ಇಂತವರಿಗೆ ಅಧಿಕಾರವನ್ನೊಪ್ಪಿಸಿ ಯಾವುದಕ್ಕೂ ಸ್ವಾತಂತ್ರ್ಯವನ್ನು ಕೊಡಬಾರದು. ಅವರ ಕೈಗೆ ಹೋದವಸ್ತುಗಳು ಹಿಂತಿರುಗಿ ಬರುವುದು ಯಾವಾಗಲೂ ಸಂಶಯಾಸ್ಪದವೇ. ಒಂದು ಕಾರ್ಯಕ್ಕೆ ಹೆಂಗಸನ್ನಾಗಲಿ, (ಜೂಜುಗಾರನನ್ನಾಗಲಿ) ವಂಚಕನನ್ನಾಗಲಿ, ಹುಡುಗನನ್ನಾಗಲಿ ಮುಂದಿಟ್ಟುಕೊಂಡು ಹೋಗತಕ್ಕವನು, ಕಲ್ಲು

ದೋಣಿಯನ್ನು ನಂಬಿ ನದಿಯನ್ನು ದಾಟಲು ಹೋಗುವವನಂತೆ, ನಡುವೆ ಮುಳುಗಿಹೋಗುವುದೇ ನಿಶ್ಚಯವು. ಓ ಮಹಾರಾಜಾ! ಯಾರು ವಿಶೇಷ ಸಂಗತಿಗಳಿಗೆ ಆಶೆಪಡದೆ, ತಮ್ಮ ಪ್ರಕೃತಪ್ರಯೋಜನದಲ್ಲಿ ಮಾತ್ರ ದೃಷ್ಟಿಯುಳ್ಳವರೋ, ಅವರೇ ಬುದ್ಧಿವಂತರೆಂದು ನನ್ನ ಮತವು. ಹೆಚ್ಚುಸಂಗತಿಗೆ ತಲೆಯಿಕ್ಕಿದಷ್ಟೂ ತೊಡಕುಗಳು (ಕಲಹಪ್ರಸಂಗಗಳು) ಬಂದುಸೇರುವುವು. ಯಾವನನ್ನು ವಂಚಕರು (ಜೂಜುಗಾರರು) ಹೊಗಳುವರೋ, ಯಾವನನ್ನು ವಿಟರು ಹೊಗಳುವರೋ, ಯಾವನನ್ನು ಜಾರೆಯರುಹೊಗಳುವರೋ, ಅಂತವನು ಬಹುಕಾಲದವರೆಗೆ ಜೀವಿಸಿರಲಾರನು. ಓ ಮಹಾರಾಜಾ! ಮಹಾಧನುರ್ಧಾರಿಗಳಾಗಿ, ಎಣೆಯಿಲ್ಲದ ಪರಾಕ್ರಮವುಳ್ಳ ಆ ಪಾಂಡವರನ್ನೆಲ್ಲ ತೊರೆದು ನೀನು, ಭರತಕುಲದ ಅಮಿತೈಶ್ವರ್ಯವನ್ನೆಲ್ಲ ದುರ್ಯೋಧನನ ಕೈಗೆ ಕೊಟ್ಟಿರುವೆ. ಶೀಘ್ರದಲ್ಲಿ ಆ ಐಶ್ವರ್ಯವು ಕೈತಪ್ಪಿಹೋಗುವುದನ್ನು ನೀನೇ ನೋಡುವೆ. ಐಶ್ವರ್ಯಮದಾಂಧನಾದ ಬಲಿಯು ತ್ರೈಲೋಕಾಧಿಪತ್ಯವನ್ನು ಕಳೆದುಕೊಂಡುದನ್ನು ತಿಳಿಯೆಯಾ?" ಎಂದನು.

ಇದು ಮೂವತ್ತೆಂಟನೆಯ ಅಧ್ಯಾಯವು.

---

ವಿದುರನು ಧೃತರಾಷ್ಟ್ರನನ್ನು ಕುರಿತು ಜ್ಞಾತಿಗಳೊಡನೆ ಒಂದಾಗಿ ಸೇರಿರುವುದರಿಂದುಂಟಾದ ಗುಣಗಳನ್ನು ತಿಳಿಸಿ, ಪಾಂಡವರೊಡನೆ, ಸಮಾಧಾನದಿಂದಿರಬೇಕೆಂದು ಹೇಳಿದುದು.

ಆಗ ಧೃತರಾಷ್ಟ್ರನು ವಿದುರನನ್ನು ಕುರಿತು "ವಿದುರಾ! ಲೋಕದಲ್ಲಿ ಮನುಷ್ಯನು ತನ್ನ ಜನನ ಮರಣಾದ್ಯವಸ್ಥೆಗಳೊಳಗೆಲ್ಲಾ ದಾರದಿಂದ ಪೋಣಿಸಲ್ಪಟ್ಟ ಹೆಣ್ಣುಬೊಂಬೆಯಂತೆ, ಸರ್ವೇಶ್ವರನಿಗೆ ಅಧೀನನಾಗಿ ನಡೆಯುವನು. ಇವನಿಗೆ ಯಾವ ವಿಷಯದಲ್ಲಿಯೂ ಸ್ವಾತಂತ್ರ್ಯವಿರುವುದಿಲ್ಲ. ಬ್ರಹ್ಮನು ಇವನನ್ನು ಅದೃಷ್ಟಕ್ಕೆ ಅಧೀನನನ್ನಾಗಿ ಮಾಡಿರುವನು. ಹೀಗಿರುವಾಗ ನಾವೇನು ಮಾಡಬಲ್ಲೆವು? ನನ್ನನ್ನು ನಿಂದಿಸಿ ಫಲವೇನು? ಇದರ ತತ್ವವೇನೆಂಬುದನ್ನು ನೀನು ನನಗೆ ಚೆನ್ನಾಗಿ ವಿವರಿಸಿ ತಿಳಿಸು. ಅದ

ನ್ನು ಕೇಳಬೇಕೆಂದು ನನಗೆ ಬಹಳ ಆದರವಿದೆ'' ಎಂದನು. ಅದಕ್ಕಾ ವಿದುರನು "ಓ ಮಹಾರಾಜಾ! ಸಮಯಾಸಮಯಗಳನ್ನು ನೋಡದೆ, ಅಸಂಬದ್ಧವಾಗಿ ಮಾತಾಡುವವನು ಬೃಹಸ್ಪತಿಯಾಗಿದ್ದರೂ ಬುದ್ಧಿಹೀನ ನೆನಿಸಿಕೊಂಡು ಅವಮಾನಕ್ಕೀಡಾಗುವನು. ಒಬ್ಬನು ದಾನದಿಂದ ಪ್ರಿಯ ನಾಗುವನು! ಇನ್ನೊಬ್ಬನು ಬರೀಪ್ರಿಯವಾಕ್ಯಗಳಿಂದಲೇ ಪ್ರಿಯನಾಗುವನು, ಮತ್ತೊಬ್ಬನು ಒಳ್ಳೇ ಮಂತ್ರಾಲೋಚನೆಯ ಬಲದಿಂದ ಪ್ರಿಯನಾಗುವ ನು, ಯಾವ ಕಾರಣವೂ ಇಲ್ಲದೆ ಯಾವನು ಸಹಜವಾಗಿ ಪ್ರೀತಿಸುವನೋ ಅವನೇ ಯಾವಾಗಲೂ ನಿಜವಾದ ಪ್ರಿಯನು. ಒಬ್ಬನಿಗೆ ವೈರಿಯಾದವನು ಎಂದಿಗೂ ಅವನ ಭಾಗಕ್ಕೆ ಸಾಧುವೆನಿಸುವುದಿಲ್ಲ. ಅವನು ಒಳ್ಳೇ ಮೇ ಧಾವಿಯಾಗಿದ್ದರೂ, ಪಂಡಿತನಾಗಿದ್ದರೂ, ಮೇಧಾವಿಯೂ, ಪಂಡಿತನೂ ಎನಿಸುವುದಿಲ್ಲ. ತನಗೆ ಇಷ್ಟನಾದವನು ಮಾಡಿದ ಕಾರ್ಯಗಳು ಹೇಗಿ ದ್ದರೂ ಅವು ಒಳ್ಳೆಯವೆಂದೇ ಕಾಣಿಸುವುವು. ತನಗೆ ಆಗದವನು ಮಾಡಿದ ಕಾರ್ಯಗಳೆಲ್ಲವೂ ಪಾಪಕಾರ್ಯಗಳಾಗಿಯೇ ತೋರುವುವು. ಓ ರಾಜಾ! ನಿನ್ನ ಮಗನಾದ ಆ ದುರ್ಯೋಧನನು ಹುಟ್ಟಿದೊಡನೆಯೇ ಅವನೊಬ್ಬ ನನ್ನು ತೊರೆದುಬಿಡೆಂದು ನಾನು ಆಗಲೇ ಹೇಳಿದೆನು. ಅವನೊಬ್ಬನನ್ನು ತೊರೆಯುವುದರಿಂದ, ನಿನ್ನ ಬೇರೆ ನೂರುಮಂದಿ ಮಕ್ಕಳಿಗೂ ಕ್ಷೇಮ ವುಂಟೆಂದೂ, ಅವನೊಬ್ಬನನ್ನು ಬಿಡದಿದ್ದರೆ, ನೂರುಮಂದಿಗೂ ಅವ ನಿಂದ ನಾಶವೆಂದೂ ತಿಳಿಸಿದೆನು. ಓ ಮಹಾರಾಜಾ! ಈಗ ನಿನ್ನ ಮಹಾ ಭಾಗ್ಯಕ್ಕಾಗಿ ನೀನು ಸಂತೋಷಪಡುವ ಕಾರಣವಿಲ್ಲ. ಯಾವ ಮೇಲ್ಮೆ ಯು ಮುಂದೆ ನಾಶಕ್ಕೆ ಕಾರಣವೆಂದು ತೋರುವುದೋ, ಅಂತಹ ಅಭಿ ವೃದ್ಧಿಯು ಆದರಿಸತಕ್ಕುದಲ್ಲ. ಕ್ಷೀಣಗತಿಯಾದರೂ, ಮುಂದೆ ಅಭಿ ವೃದ್ಧಿಗೆ ಕಾರಣವಾಗಿದ್ದರೆ, ಅದು ವಿಶೇಷವಾಗಿ ಆದರಿಸತಕ್ಕುದಾಗಿದೆ. ಮುಂದೆ ವೃದ್ಧಿಗೆ ಕಾರಣವಾದ ಕ್ಷಯವು ಕ್ಷಯವೆನಿಸಲಾರದು. ಯಾವ ವೃದ್ಧಿಯನ್ನು ಪಡೆದು ಮುಂದೆ ಅದರಿಂದ ಹೆಚ್ಚು ನಷ್ಟವಾಗುವುದೋ, ಅಂತಹ ವೃದ್ಧಿಯನ್ನು ಕ್ಷಯವೆಂದೇ ಭಾವಿಸಬೇಕು. ಗುಣದಿಂದ ಮೇ ಲೆನಿಸಿದವರು ಕೆಲವರು, ಹಣದಿಂದ ಮೇಲೆನಿಸಿಕೊಂಡವರು ಬೇರೆ ಕೆಲ ವರು, ಧನವಂತರಾಗಿದ್ದರೂ ಗುಣಹೀನರಾಗಿರುವವರನ್ನು ನೀನು ತೊರೆ

ದುಬಿಡಬೇಕು" ಎಂದನು. ಧೃತರಾಷ್ಟ್ರನು ತಿರುಗಿ ವಿದುರನನ್ನು ಕುರಿತು "ವಿದುರಾ! ನೀನೇನೋ ಮುಂದೆ ನನಗೆ ಶ್ರೇಯಃಕಾರಣವಾದ ಮಾತನ್ನೇ ಆಡುತ್ತಿರುವೆ! ನೀನು ಆಡುತ್ತಿರುವ ಮಾತುಗಳೆಲ್ಲವೂ ಪ್ರಾಜ್ಞರಿಗೆ ಸಮ್ಮತವಾದುವೇ. ಆದರೆ ನಾನೇನು ಮಾಡಲಿ. ನನ್ನ ಮಗನನ್ನು ನಾನು ಬಿಡಲಾರೆನು. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಾಗಲಿ" ಎಂದನು. ಅದಕ್ಕಾ ವಿದುರನು "ಅಣ್ಣಾ! ವಿಶೇಷಗುಣಸಂಪನ್ನನೂ, ವಿನಯವುಳ್ಳವನೂ ಆದ ಸಜ್ಜನನು, ಇತರ ಪ್ರಾಣಿಗಳಿಗೆ ಅತಿ ಸ್ವಲ್ಪವಾದ ಹಿಂಸೆಯನ್ನಾದರೂ ನೋಡಿ ಸುಮ್ಮನಿರಲಾರನು. ಯಾವಾಗಲೂ ಪರರನ್ನು ನಿಂದಿಸುವುದರಲ್ಲಿಯೂ, ಇತರರನ್ನು ದುಃಖಪಡಿಸುವುದರಲ್ಲಿಯೂ, ಒಬ್ಬರಿಗೊಬ್ಬರಿಗೆ ವೈರವನ್ನು ತಂದಿಡುವುದರಲ್ಲಿಯೂ, ಯಾರು ಪ್ರಯತ್ನಿಸುತ್ತಿರುವರೋ, ಯಾರ ದರ್ಶನವು ದೋಷಾಸ್ಪದವೋ, ಯಾರ ಸಹವಾಸವು ಮಹತ್ತಾದ ಭಯಕ್ಕೆ ಕಾರಣವೋ, ಯಾರಿಗೆ ಹಣವನ್ನು ಕೊಡುವುದಾಗಲಿ, ಅವರಿಂದ ತೆಗೆದುಕೊಳ್ಳುವುದಾಗಲಿ, ದೋಷಕ್ಕೂ, ಭಯಕ್ಕೂ ಆಸ್ಪದವೋ, ಭೇದೋಪಾಯವನ್ನು ತಂದೊಡ್ಡುವುದೇ ಯಾರ ಸ್ವಭಾವವೋ, ಯಾರು ಕೇವಲ ಆಶಾಪರರಾಗಿ ಲಜ್ಜೆಯಿಲ್ಲದೆ ಮೂರ್ಖರೆನಿಸಿರುವರೋ, ಯಾರು ಪಾಪಿಗಳೆಂದು ಪ್ರಸಿದ್ಧರಾಗಿ ಸಹವಾಸಕ್ಕೂ ಯೋಗ್ಯವಲ್ಲದೆ, ಇನ್ನೂ ಅನೇಕ ಮಹಾದೋಷಗಳಿಂದ ಕೂಡಿರುವರೋ, ಅಂತಹ ಮನುಷ್ಯರನ್ನು ಅವರು ಎಷ್ಟೇ ಪ್ರಿಯರಾಗಿದ್ದರೂ ತೊರೆದುಬಿಡಬೇಕು. ನೀಚನಾದವನಲ್ಲಿ ಸ್ವಲ್ಪಮಾತ್ರ ಸ್ನೇಹವು ಸಡಿಲಿದರೂ, ಅವನ ಪ್ರೀತಿಯು ನಷ್ಟವಾಗುವುದು. ಆ ಪ್ರೀತಿಯಿಂದಾಗುವ ಫಲವೂ ಕೆಡುವುದು. ಸ್ನೇಹದಿಂದುಂಟಾಗುವ ಸೌಖ್ಯವೂ ಲಭಿಸದು. ಅಂತಹ ನೀಚನು ಅಪವಾದವನ್ನು ಹೊರಿಸುವುದಕ್ಕೆ ಯತ್ನಿಸಿ, ಪೂರ್ಣವಾಗಿ ಕೆಡಿಸುವುದಕ್ಕೂ ಪ್ರಯತ್ನಪಡುವನು. ಅಂತವನಲ್ಲಿ ಅಜ್ಞಾನದಿಂದ ಸ್ವಲ್ಪಮಟ್ಟಿಗೆ ತಪ್ಪಿ ನಡೆದರೂ, ಅವನು ಎಂದಿಗೂ ಶಾಂತಿಯನ್ನು ಹೊಂದದ ಸ್ಥಿರವಾದ ಕೋಪವನ್ನಿಡುವನು. ಅಂತಹ ಘಾತುಕರೂ, ಅಲ್ಪಬುದ್ಧಿಯುಳ್ಳವರೂ ಆದ ನೀಚರೊಡನೆ ಸಹವಾಸವನ್ನು ಮಾಡುವ ಮೊದಲು ವಿದ್ವಾಂಸನು, ಚೆನ್ನಾಗಿ ಯೋಚಿಸಿ, ದೂರದಲ್ಲಿಯೇ ಅಂತವರನ್ನು ತೊರೆದುಬಿಡಬೇಕು. ಓ ಮಹಾರಾಜಾ!

ಯಾವನು ತನ್ನ ಜ್ಞಾತಿಯನ್ನೂ, ದರಿದ್ರನನ್ನೂ, ಕೈಲಾಗದವನನ್ನೂ, ದುಃಖಿತರನ್ನೂ, ರೋಗಿಯನ್ನೂ, ದಯೆಯಿಂದ ಆದರಿಸುವನೋ ಅವನು ಪುತ್ರಸಂತಾನದಿಂದಲೂ, ಪಶುಸಮೃದ್ಧಿಯಿಂದಲೂ, ಕೂಡಿ ಅಪಾರವಾದ ಶ್ರೇಯಸ್ಸನ್ನು ಹೊಂದುವನು. ತನ್ನ ಕ್ಷೇಮವನ್ನೂ, ವಂಶಾಭಿವೃದ್ಧಿಯನ್ನೂ ಕೋರುವವನು ಜ್ಞಾತಿಗಳನ್ನು ವೃದ್ಧಿಗೆ ತರಬೇಕು. ಆದರಿಂದ ನೀನೂ ಅಂತಹ ಸಾಧುಮಾರ್ಗವನ್ನೇ ಅವಲಂಬಿಸು. ನಿನ್ನ ಜ್ಞಾತಿಗಳನ್ನು ಸತ್ಕರಿಸುವುದರಿಂದ ನಿನಗೆ ಸರ್ವವಿಧದಲ್ಲಿಯೂ ಕ್ಷೇಮವುಂಟು. ಜ್ಞಾತಿಗಳು ಗುಣಹೀನರಾಗಿದ್ದರೂ, ಅವರನ್ನು ಕಾಪಾಡಬೇಕಾದುದು ಧರ್ಮವು. ಹೀಗಿರುವಾಗ ಒಳ್ಳೇ ಗುಣವಂತರಾಗಿ, ನಿನ್ನ ಅನುಗ್ರಹಕ್ಕಾಗಿಯೇ ಕಾದಿರುವ ಆ ಪಾಂಡವರ ವಿಷಯದಲ್ಲಿ ನೀನು ಅಭಿಮಾನದಿಂದ ನಡೆಯಬೇಕೆಂಬುದನ್ನು ಹೇಳಬೇಕಾದುದೇನು? ಓ ಕ್ಷತ್ರಿಯೋತ್ತಮಾ! ವೀರರಾದ ಆ ಪಾಂಡವರಲ್ಲಿ ಅನುಗ್ರಹವನ್ನು ತೋರಿಸು. ಅವರೈವರ ಜೀವನಕ್ಕಾಗಿಯಾದರೂ ಕೆಲವು ಗ್ರಾಮಗಳನ್ನು ಬಿಟ್ಟುಕೊಡು. ಇದರಿಂದ ನಿನಗೆ ಲೋಕದಲ್ಲಿ ಒಳ್ಳೇ ಕೀರ್ತಿಯುಂಟು. ನಮ್ಮ ವಂಶಕ್ಕೆಲ್ಲಾ ನೀನು ವೃದ್ಧನಾದುದರಿಂದ, ನಿನ್ನ ಮಕ್ಕಳೆಲ್ಲರನ್ನೂ ನಿನ್ನ ಕೈಯಲ್ಲಿ ಅಡಗಿಸಿಟ್ಟುಕೊಳ್ಳಬೇಕಾದುದು ನಿನ್ನ ಕರ್ತವ್ಯವು. ನಿನಗೆ ಯಾವಾಗಲೂ ಹಿತೈಷಿಯಾದ ನಾನು ಮುಂದೆ ನಿನ್ನ ಹಿತಕ್ಕಾಗಿಯೇ ಹೇಳುವೆನೆಂದು ತಿಳಿ. ತನ್ನ ಕ್ಷೇಮವನ್ನು ಕೋರುವವನು ಜ್ಞಾತಿಗಳೊಡನೆ ಎಂದಿಗೂ ಕಲಹವನ್ನಿಟ್ಟುಕೊಳ್ಳಬಾರದು. ಒಳ್ಳೇ ಭೋಜನಗಳನ್ನೂ, ಜೇಪೆ ಎಲ್ಲಾ ಸುಖಗಳನ್ನೂ, ಸುಖಸಲ್ಲಾಪಗಳನ್ನೂ, ಜ್ಞಾತಿಗಳೊಡನೆ ಅನ್ಯೋನ್ಯಪ್ರೀತಿಯಿಂದ ಸೇರಿಯೇ ನಡೆಸಬೇಕು. ಮನುಷ್ಯನನ್ನು ಉದ್ಧರಿಸುವವರೂ ಜ್ಞಾತಿಗಳೇ! ಮುಳುಗಿಸುವವರೂ ಜ್ಞಾತಿಗಳೇ! ಒಳ್ಳೆಯವರಾದರೆ ಉದ್ಧರಿಸುವರು. ಕೆಟ್ಟವರಾದರೆ ಮುಳುಗಿಸುವರು. ಆದುದರಿಂದ ಓ ರಾಜೇಂದ್ರಾ! ಪಾಂಡವರಲ್ಲಿ ನೀನು ನಲ್ಮೆಯನ್ನೇ ತೋರಿಸು. ಅವರೊಡನೆ ಸೇರಿದ್ದರೆ ನಿನ್ನನ್ನು ಎಂತಹ ಶತ್ರುಗಳೂ ಕದಲಿಸಲಾರರು. ಶ್ರೀಮಂತನಾದ ಜ್ಞಾತಿಯನ್ನಿಟ್ಟುಕೊಂಡು ಯಾವನು ಕಷ್ಟಪಡುವನೋ, ಅವನ ಪಾಪಕ್ಕೆಲ್ಲ ಆ ಶ್ರೀಮಂತನೇ ಭಾಗಿಯಾಗುವನು. ಆ ಶ್ರೀಮಂತನ ಐಶ್ವರ್ಯವು ಕಾಡಿನಲ್ಲಿ ಜಿಂಕೆಯ

ಮುಂದೆ ಬೇಡನು ಹಿಡಿದಿರುವ ವಿಷದಿಗ್ಧವಾದ ಬಾಣಕ್ಕೆ ಸಮಾನವಾದುದು. ಅಣ್ಣಾ! ನೀನು ಈಗ ಪಾಂಡವರೊಡನೆ ವೈರವನ್ನು ಬೆಳೆಸಿ, ಯುದ್ಧಕ್ಕೆ ಅವಕಾಶವನ್ನು ಕೊಡುವುದಾದರೆ, ಮುಂದೆ ಆ ಪಾಂಡವರೋ, ಅಥವಾ ನಿನ್ನ ಮಕ್ಕಳೋ ಹತರಾಗುವುದನ್ನು ಕೇಳಿ ನೀನೇ ಪಶ್ಚಾತ್ತಾಪಪಡಬೇಕಾಗುವುದು. ಅದನ್ನು ಯೋಚಿಸಿ ನೋಡು. ಜೀವವು ಸ್ಥಿರವಲ್ಲದುದುದರಿಂದ, ಕಾರ್ಯವು ಕೊನೆಮುಟ್ಟಿದಮೇಲೆ ಯಾವುದು ಪಶ್ಚಾತ್ತಾಪಕ್ಕೆ ಕಾರಣವೋ, ಆ ಕಾರ್ಯವನ್ನು ಮೊದಲೇ ತೊಡಗಬಾರದು. ನೀತಿಶಾಸ್ತ್ರ ಕರ್ತನಾದ ಆ ಶುಕ್ರಾಚಾರ್ಯನೊಬ್ಬನು ಹೊರತು ಆ ನೀತಿ ಮಾರ್ಗವನ್ನು ತಪ್ಪಿಹೋಗದವನು ಬೇರೊಬ್ಬನಿಲ್ಲವಾದರೂ, ಅನೀತಿಯು ನಡೆದುಹೋದಮೇಲಾದರೂ, ಸಮಯೋಚಿತವಾಗಿ ಅದನ್ನು ತಿದ್ದಿಕೊಳ್ಳುವುದು ಬುದ್ಧಿವಂತರ ಲಕ್ಷಣವು. ಹಾಗೆಯೇ ಈಗಲೂ ನಿನ್ನ ಮಗನಾದ ದುರ್ಯೋಧನನು ಮೊದಲು ತಪ್ಪನ್ನು ಮಾಡಿಬಿಟ್ಟರೂ, ಕುಲವೃದ್ಧನಾದ ನೀನು ಈಗ ಅದನ್ನು ಕ್ರಮಪಡಿಸಿ ತಿದ್ದಬಹುದು. ಆದುದರಿಂದ, ಈಗ ನೀನು ಪಾಂಡವರನ್ನು ಅವರವರ ಪದವಿಯಲ್ಲಿರಿಸಿದರೆ, ಲೋಕದಲ್ಲಿ ನಿನ್ನ ಮೇಲಿನ ಅಪವಾದವು ತಪ್ಪುವುದು. ವಿದ್ವಾಂಸರ ನಡುವೆ ನೀನು ಪೂಜ್ಯನೂ ಆಗುವೆ. ತಿಳಿದವರ ಬುದ್ಧಿವಾದಗಳಿಂದಾಗುವ ಫಲವನ್ನು ಯೋಚಿಸಿ, ಯಾವನು ಕಾರ್ಯಗಳಲ್ಲಿ ಪ್ರಯತ್ನಿಸುವನೋ, ಅವನು ಬಹುಕಾಲದವರೆಗೆ ಯಶಸ್ವಿಯಾಗಿರುವನು. ಬಹಳ ಸಮರ್ಥನಾಗಿದ್ದರೂ, ಯಾವನು ತಿಳಿಯಬೇಕಾದುದನ್ನು ತಿಳಿದುಕೊಳ್ಳದೆ, ತಿಳಿದ ಸಂಗತಿಯನ್ನೂ ಕಾರ್ಯತಃ ಅನುಷ್ಠಿಸದೆ ಇರುವನೋ, ಅವನ ತಿಳುವಳಿಕೆಯೆಲ್ಲ ನಿರರ್ಥಕವೆನಿಸುವುದು. ಪಾಪದಲ್ಲಿ ಪರಿಣಮಿಸಬಹುದಾದ ಕಾರ್ಯಗಳನ್ನು ಆರಂಭಿಸದ ವಿದ್ವಾಂಸನೇ ವೃದ್ಧಿಗೆ ಬರತಕ್ಕವನು. ಮೊದಲು ಒಂದು ಕೆಟ್ಟಕಾರ್ಯವನ್ನು ಮಾಡಿಬಿಟ್ಟರೂ, ಆ ತಪ್ಪನ್ನು ಪರ್ಯಾಲೋಚಿಸದೆ, ಅದನ್ನೇ ತಿರುಗಿ ಹಿಂಬಾಲಿಸುವ ಮೂಢಾತ್ಮನು ಅಗಾಧವಾದ ಮತ್ತು ತಿರುಗಿ ತಲೆಯೆತ್ತುವುದಕ್ಕೇ ಅವಕಾಶವಿಲ್ಲದ ಕೆಸರಿನ ಹಳ್ಳದಲ್ಲಿ ಮುಳುಗಿಸಲ್ಪಡುವನು. ಐಶ್ವರ್ಯವನ್ನು ವೃದ್ಧಿಗೊಳಿಸುವ ಉದ್ದೇಶವುಳ್ಳವನು ಯಾವಾಗಲೂ ಮಂತ್ರಭೇದಕ್ಕೆ ಅವಕಾಶಕೊಡದೆ ಎಚ್ಚರಿಕೆಯಿಂದಿರಬೇಕು. ಆಲೋಚನೆಗಳು ಹೊರ

ಬೀಳುವುದಕ್ಕೆ ಆರು ಮಾರ್ಗಗಳುಂಟು. ಮದ್ಯಪಾನದಿಂದ ಮತ್ತೇರಿರು ವುದು, ಕನಸಿನಲ್ಲಿ ಕನವರಿಸುವುದು, ಅಜ್ಞಾತೆ, ದೇಹದಲ್ಲಿ ತಾನಾಗಿ ಕಾಣುವ ವಿಕಾರಗಳು, ದುರ್ಮಂತ್ರಿಗಳಲ್ಲಿ ನಂಬಿಕೆ, ಅಸಮರ್ಥನಾದ ದೂತನು, ಮಂತ್ರಭೇದಕ್ಕಾಗಿ ಏರ್ಪಟ್ಟ ಈ ಆರು ದ್ವಾರಗಳನ್ನೂ ದೃಢವಾಗಿ ಮುಚ್ಚಿ ಟ್ಟು, ಧರ್ಮಾರ್ಥಕಾಮಗಳ ಸಾಧನೆಯಲ್ಲಿ ಪ್ರವರ್ತಿಸತಕ್ಕವನು ಶತ್ರುಗ ಳನ್ನು ಮೆಟ್ಟಿ ನಿಲ್ಲುವನು. ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನಾದವ ನಿಗೂ ಶಾಸ್ತ್ರಗಳನ್ನೋದದೆ, ವೃದ್ಧರನ್ನೂ ಸೇವಿಸದೆ, ಧರ್ಮಾರ್ಥಗಳ ತತ್ತ್ವ ವನ್ನು ತಿಳಿಯುವುದು ಸಾಧ್ಯವಲ್ಲ. ಸಮುದ್ರದಲ್ಲಿ ಬಿದ್ದ ಮಳೆ, ಕಿವಿಗೊ ಟ್ಟು ಕೇಳದವನಿಗೆ ಹೇಳಿದ ಮಾತು, ವಿವೇಕವಿಲ್ಲದವನಿಗೆ ಕಲಿಸಿದ ವಿದ್ಯೆ, ಬೂದಿಯಲ್ಲಿ ಮಾಡಿದ ಹೋಮ; ಇವಿಷ್ಟೂ ಸಮಾನವು.

ಬುದ್ಧಿಶಾಲಿಯಾದವನು ಸ್ವಬುದ್ಧಿಯಿಂದ ಪರೀಕ್ಷಿಸಿ, ಮನಸ್ಸಿನಿಂದ ಬಾರಿಬಾರಿಗೂ ನಿಶ್ಚಯಿಸಿ, ತಿಳಿದವರಿಂದ ಕೇಳಿ, ತಾನೂ ಕಣ್ಣಿನಿಂದ ಪ್ರತ್ಯಕ್ಷವಾಗಿ ನೋಡಿ ಚೆನ್ನಾಗಿ ನಿರ್ಧರಿಸಿಕೊಂಡಮೇಲೆಯೇ ಪ್ರಾಜ್ಞರೆಂದು ತೋರಿದವರೊಡನೆ ಸ್ನೇಹವನ್ನು ಮಾಡಬೇಕು. ವಿನಯವು ಅಪಕೀರ್ತಿ ಯನ್ನು ನೀಗಿಸುವುದು. ಪರಾಕ್ರಮವು ಅನರ್ಥವನ್ನು ತಪ್ಪಿಸುವುದು. ತಾಳ್ಮೆಯು ಕೋಪವನ್ನು ನಿಗ್ರಹಿಸುವುದು. ಆಚಾರವು (ಜಾತಿಸಂಬಂಧ ವಾದ ಅವಲಕ್ಷಣವನ್ನೂ) ಅಮಂಗಳವನ್ನು ನೀಗಿಸುವುದು. ಮನುಷ್ಯನು ಅನುಭವಿಸುವ ಸಾಮಗ್ರಿಗಳು, ಉತ್ಪತ್ತಿ ಕ್ಷೇತ್ರ, ವಾಸಿಸುವ ಮನೆ, ನಡ ತೆ, ಭೋಜನವಸ್ತುಗಳು, ವಸ್ತ್ರಗಳು ಇವುಗಳಿಂದ ಅವನ ಕುಲವನ್ನು ತಿಳಿ ಯಬಹುದು. ದೇಹಾಭಿಮಾನವನ್ನೇ ಬಿಟ್ಟವರಿಗೆ ಕೂಡ ಕಾಮವನ್ನು ತಡೆಯುವುದು ಕೆಲವು ವೇಳೆ ಅಸಾಧ್ಯವಾಗುವುದು. ಹೀಗಿರುವಾಗ ಕಾ ಮಾಸಕ್ತರಿಗೆ ಹೇಳಬೇಕಾದುದೇನು? ಪ್ರಾಜ್ಞರಲ್ಲಿ ಸೇವೆಮಾಡಿದವನೂ, ವಿದ್ವಾಂಸನೂ, ಧಾರ್ಮಿಕನೂ, ನೋಟಕ್ಕೆ ಅಂದವಾದ ಲಕ್ಷಣಗಳುಳ್ಳವ ನೂ, ಅನೇಕ ಸ್ನೇಹಿತರುಗಳುಳ್ಳವನೂ, ಒಳ್ಳೆಯ ಮಾತನ್ನಾಡತಕ್ಕವನೂ, ಆದವನನ್ನೇ ತನಗೆ ಆಪ್ತನನ್ನಾಗಿ ತಿಳಿದು, ಅವನನ್ನು ಆದರಿಸಿ ಪೋಷಿಸ ಬೇಕು. ಒಳ್ಳೇ ಕುಲದವನಾಗಿರಲಿ, ಕುಲಹೀನನಾಗಿರಲಿ, ಯಾವನು

ತನ್ನ ಮರ್ಯಾದೆಯನ್ನು ಮೀರದೆ, ಬುದ್ಧಿವಂತನಾಗಿ, ಮೃದುಸ್ವಭಾವವುಳ್ಳವನಾಗಿ, ಲಜ್ಜೆಯುಳ್ಳವನಾಗಿರುವನೋ ಅಂತವನು ಒಳ್ಳೇ ಕುಲದಲ್ಲಿ ಹುಟ್ಟಿದ ನೂರು ಮಂದಿ ಸಾಮಾನ್ಯ ಜನಕ್ಕಿಂತಲೂ ಎಷ್ಟೋ ಮೇಲೆನಿಸುವನು. ಯಾವ ಇಬ್ಬರಲ್ಲಿ ಅನ್ಯೋನ್ಯವಾಗಿ, ಮನಸ್ಸಿನೊಡನೆ ಮನಸ್ಸೂ, ರಹಸ್ಯದೊಡನೆ ರಹಸ್ಯವೂ, ತಿಳುವಳಿಕೆಯೊಡನೆ ತಿಳಿವಳಿಕೆಯೂ ಕಲೆತುಹೋಗುವುದೋ, ಅವರ ಸ್ನೇಹವು ಬೇಗನೆ ಸಡಿಲುವುದಿಲ್ಲ. ಬುದ್ಧಿಶಾಲಿಯಾದವನು, ಕೆಟ್ಟಹೃದಯವುಳ್ಳ ಮತ್ತು ವಿದ್ಯಾಹೀನರಾದ ಸ್ನೇಹಿತರನ್ನು ಹುಲ್ಲುಮುಚ್ಚಿದ ಹಳೇ ಬಾವಿಯಂತೆ ಭಾವಿಸಿ ಬಿಟ್ಟುಬಿಡಬೇಕು. ಅವನ ಸ್ನೇಹವು ಕೆಟ್ಟುಹೋಗುವುದು. ಗರ್ವಿಷ್ಠರು, ಮೂರ್ಖರು, ಭಯಂಕರವಾದ ಸಾಹಸದಲ್ಲಿ ಪ್ರವರ್ತಿಸತಕ್ಕವರು, ಧರ್ಮರಹಿತರು, ಇಂತವರಲ್ಲಿ ವಿದ್ವಾಂಸನು ಸ್ನೇಹವನ್ನು ಬೆಳಿಸಲಾರನು. ಉಪಕಾರಸ್ಮರಣೆಯುಳ್ಳವನು, ಧರ್ಮಶೀಲನು, ಸತ್ಯವಾದಿ, ಅಲ್ಪಬುದ್ಧಿಯಿಲ್ಲದವನು, ದೃಢವಾದ ಭಕ್ತಿಯುಳ್ಳವನು, ಜಿತೇಂದ್ರಿಯನು, ತಾನಿರಬೇಕಾದ ನೆಲೆಯಲ್ಲಿರುವವನು, ಅಂತಹ ಮನುಷ್ಯರಲ್ಲಿಯೇ ವಿದ್ವಾಂಸರು ಸ್ನೇಹವನ್ನು ಬೆಳಿಸುವರು. ಇಂದ್ರಿಯಗಳನ್ನು ಆಸೆಗೊಳಗಾಗಿಸದಂತೆ ಅಡಗಿಸಿಡುವುದೇನೋ ಮರಣಕ್ಕಿಂತಲೂ ಅಧಿಕ ಶ್ರಮಕಾರಿಯು. ಈ ಇಂದ್ರಿಯಗಳಿಗೆ ಯಥೇಷ್ಟ ಪ್ರವರ್ತನೆಯನ್ನು ಕೊಡುವುದರಿಂದ ದೇವತೆಗಳಾದರೂ ಕೆಟ್ಟುಹೋಗುವುದು ನಿಶ್ಚಯವು. ಎಲ್ಲಾ ಪ್ರಾಣಿಗಳ ವಿಷಯದಲ್ಲಿಯೂ ಮೃದುವಾದ ಪ್ರವರ್ತನೆ, ಅಸೂಯೆಯಿಲ್ಲದಿರುವುದು, ತಾಳ್ಮೆ, ಧೈರ್ಯ, ಮಿತ್ರರನ್ನು ಅವಮಾನಗೊಳಿಸದಿರುವುದು, ಇವೆಲ್ಲಾ ಆಯುಸ್ಸಿನ ವೃದ್ಧಿಗೆ ಕಾರಣಗಳೆಂದು ಹಿರಿಯರು ಹೇಳುವರು. ಒಂದುವೇಳೆ ಮೊದಲು ಅನೀತಿಯಿಂದ ಕಾರ್ಯವು ಕೆಟ್ಟುಹೋದರೂ, ಆಮೇಲೆಯಾದರೂ ನೀತಿಯನ್ನು ಹಿಡಿದು, ದೃಢಮನಸ್ಸಿನಿಂದ ಆ ಕಾರ್ಯವನ್ನು ಹಿಂತಿರುಗಿ ಸಾಧಿಸಲು ಯತ್ನಿಸುವುದು ಉತ್ತಮ ಪುರುಷರ ಲಕ್ಷಣಗಳು. ಮುಂದೆ ಬರುವ ಕಷ್ಟಕ್ಕೆ ಪ್ರತೀಕಾರವನ್ನು ತಿಳಿದು, ಪ್ರಕೃತಕಾರ್ಯದಲ್ಲಿ ದೃಢನಿಶ್ಚಯರಾಗಿ, ಒಂದುವೇಳೆ ಕಾರ್ಯವು ಕೆಟ್ಟುಹೋದರೂ, ಮುಂದೆ ನಡೆಯಬೇಕಾದ ಕಾರ್ಯಶೇಷವನ್ನು ತಿಳಿದವನು ಎಂದಿಗೂ ತನ್ನ ಪ್ರಯೋಜನಗಳನ್ನು ಕೆಡಿಸಿಕೊಳ್ಳ

ಲಾರನು. ಮನಸ್ಸಿನಿಂದಲೂ, ಮಾತಿನಿಂದಲೂ, ಕೆಲಸದಿಂದಲೂ, ಯಾವುದನ್ನು ಮನುಷ್ಯನು ಅಡಿಗಡಿಗೆ ಸೇವಿಸುತ್ತಿರುವನೋ ಅದೇ ಅವನನ್ನು ಆಕರ್ಷಿಸಿಬಿಡುವುದು. ಆದುದರಿಂದ ಒಳ್ಳೆಯ ವಿಷಯದಲ್ಲಿಯೇ ಸದಾ ಪ್ರವರ್ತಿಸುತ್ತಿರಬೇಕು. ಮಂಗಳದ್ರವ್ಯಗಳನ್ನು ಅವಲಂಬಿಸುವುದು, ಸಹಾಯಸಂಪತ್ತಿ, ಶಾಸ್ತ್ರಜ್ಞಾನ, ಸ್ವಪ್ರಯತ್ನ, ಋಜುತ್ವ, ಸಜ್ಜನರನ್ನು ಅಡಿಗಡಿಗೆ ನೋಡಿಬರುವುದು, ಇವೆಲ್ಲವೂ ಮನುಷ್ಯನ ಐಶ್ವರ್ಯಕ್ಕೆ ಕಾರಣಗಳು. ಕಾರ್ಯದಲ್ಲಿ ಎದೆಗುಂದದೆ ದೃಢಪ್ರಯತ್ನವನ್ನು ಮಾಡುವುದು ಐಶ್ವರ್ಯಕ್ಕೂ, ಲಾಭಕ್ಕೂ, ಶುಭಕ್ಕೂ, ಮೂಲಕಾರಣವು. ಹಾಗಿದ್ದವನು ಮೇಲ್ಮೆಯನ್ನು ಹೊಂದುವುದಲ್ಲದೆ ಅಪಾರವಾದ ಸುಖವನ್ನೂ ಪಡೆಯುವನು. ಸಮರ್ಥನಾದವನಿಗೆ ಸರ್ವವಿಧದಲ್ಲಿಯೂ, ಸರ್ವಕಾಲದಲ್ಲಿಯೂ, ತಾಳ್ಮೆಗಿಂತ ಉತ್ತಮವಾದ ಶ್ರೇಯಃಕಾರಣವಾದುದೂ, ಹಿತವಾದುದೂ ಬೇರೊಂದಿಲ್ಲ. ಅಶಕ್ತನಾದವನು ತನ್ನ ಅಶಕ್ತಿಗಾಗಿ ತಾಳ್ಮೆಯನ್ನು ವಹಿಸಬೇಕು. ಶಕ್ತಿಯುಳ್ಳವನು ಧರ್ಮಕ್ಕಾಗಿ ತಾಳ್ಮೆಯನ್ನು ವಹಿಸಬೇಕು. ಯಾವನಿಗೆ ಅರ್ಥಾನರ್ಥಗಳೆರಡೂ ಸಮಾನಗಳೋ ಅವನಿಗೆ ಯಾವಾಗಲೂ ಸಹನವೇ ಹಿತಕಾರಿಯು. ಯಾವ ಸುಖವನ್ನು ಅನುಭವಿಸುತ್ತಿದ್ದರೂ, ಧರ್ಮಾರ್ಥಗಳಿಗೆ ಲೋಪವಿಲ್ಲವೋ ಅಂತದನ್ನು ಯಥೇಷ್ಟವಾಗಿ ಅನುಭವಿಸಬಹುದು. ಮೂಢವ್ರತವನ್ನು ಮಾತ್ರ (ಆಹಾರಾದಿಗಳಲ್ಲಿ ಅತಿ ನಿರ್ಬಂಧವನ್ನು ಮಾತ್ರ) ನಡೆಸಬಾರದು. ದುಃಖಿತರು, ಮತ್ತೇರಿದವರು, ನಾಸ್ತಿಕರು, ಸೋಮಾರಿಗಳು, ಇಂದ್ರಿಯಗಳನ್ನು ಅಡಗಿಸಲಾರದವರು, ಉತ್ಸಾಹಹೀನರು, ಇಂತವರಲ್ಲಿ ಸಂಪತ್ತು ನಿಲ್ಲಲಾರದು. ಋಜುಬುದ್ಧಿಯುಳ್ಳವನನ್ನೂ, ಆ ಋಜುಬುದ್ಧಿಯಿಂದ ಅಕಾರ್ಯಗಳಿಗೆ ನಾಚುವವನನ್ನೂ, ದುರ್ಬುದ್ಧಿಯುಳ್ಳವರು ಅಶಕ್ತನೆಂದು ಭಾವಿಸಿ ತಿರಸ್ಕರಿಸುವುದುಂಟು. ಆದಕ್ಕಾಗಿ ಅವನು ಎದೆಗುಂದಬಾರದು. ಬಹಳ ಸುಸ್ವಭಾವವುಳ್ಳವನನ್ನೂ, ಬಹಳ ಉದಾರಿಯನ್ನೂ, ಅತಿ ಶೂರನನ್ನೂ, ಬಹಳ ವ್ರತನಿಷ್ಠನನ್ನೂ, ತನ್ನ ವಿದ್ಯೆಗಾಗಿ ತಾನು ಗರ್ವಪಡುವವನನ್ನೂ, ಲಕ್ಷ್ಮಿಯು ಸೇರಲು ಭಯಪಟ್ಟು ಹಿಂಜರಿಯುವಳು. ಲಕ್ಷ್ಮಿಯು ಅತ್ಯಂತ ಗುಣವಂತರಲ್ಲಿಯಾಗಲಿ, ಕೇವಲ ಗುಣಹೀನರಲ್ಲಿಯಾಗಲಿ ನೆಲೆಗೊಂಡಿರ

ಲಾರಳು. ಇವಳು ಅಧಿಕವಾದ ಗುಣಗಳಿಗೂ ಮೆಚ್ಚುವವಳಲ್ಲ. ಗುಣ ಹೀನತೆಯನ್ನೂ ಆದರಿಸುವುದಿಲ್ಲ. ಹುಚ್ಚುಹಿಡಿದಂತಿರುವ ಆ ಲಕ್ಷ್ಮಿಯು ಕುರುಡು ಹಸುವಿನಂತೆ, ಎಲ್ಲಿಯೋ ತನಗೆ ಇಷ್ಟಬಂದ ಕಡೆಯಲ್ಲಿ ನಿಲ್ಲು ವಳು. ವೇದಾಭ್ಯಾಸಕ್ಕೆ ಅಗ್ನಿಹೋತ್ರಗಳೇ ಫಲವು. ವಿದ್ಯೆಗೆ ಒಳ್ಳೇ ನಡತೆಯೇ ಫಲವು. ಹೆಂಗಸಿಗೆ ರತಿಸಂತಾನಗಳೇ ಫಲಗಳು. ಸಂಪಾದಿ ಸಿದ ಹಣಕ್ಕೆ ದಾನ ಭೋಗಗಳೇ ಫಲಗಳು. ಅಧರ್ಮದಿಂದ ಗಳಿಸಿದ ಹಣದಿಂದ ನಡೆಸಿದ ಪಾರಲೌಕಿಕ ಕ್ರಿಯೆಗಳಾದರೂ ಫಲವನ್ನು ಕೊಡ ಲಾರವು. ಸತ್ವಗುಣವುಳ್ಳವರಿಗೆ (ಧೀರರಿಗೆ) ಮಹಾರಣ್ಯದಲ್ಲಿಯಾಗಲಿ, ವನದುರ್ಗಗಳಲ್ಲಿಯಾಗಲಿ, ಕಠಿನವಾದ ಆಪತ್ತುಗಳಲ್ಲಿಯಾಗಲಿ, ಆತುರ ಕಾರ್ಯಗಳಲ್ಲಿಯಾಗಲಿ, ತನ್ನಮೇಲೆ ಎತ್ತಿದ ಶಸ್ತ್ರಗಳಲ್ಲಿಯಾಗಲಿ, ಭಯ ವಿರಲಾರದು. ಮನುಷ್ಯನಿಗೆ ಪ್ರಯತ್ನ, ಇಂದ್ರಿಯನಿಗ್ರಹ, ಸಾಮರ್ಥ್ಯ, ಎಚ್ಚರಿಕೆ, ಧೈರ್ಯ, ಜ್ಞಾಪಕಶಕ್ತಿ, ಚೆನ್ನಾಗಿ ಆಲೋಚಿಸಿ ಕಾರ್ಯಗಳ ನ್ನಾರಂಭಿಸುವುದು, ಇವೆಲ್ಲ ಐಶ್ವರ್ಯ ಕಾರಣಗಳು. ತಪಸ್ವಿಗಳಿಗೆ ತಪ ಸ್ಸೇ ಬಲವು. ಬ್ರಹ್ಮಜ್ಞಾನಿಗಳಿಗೆ ಬ್ರಹ್ಮವೇ ಬಲವು. ಅಸತ್ತುಗಳಿಗೆ ಹಿಂಸೆಯೇ ಬಲವು. ಗುಣವಂತರಿಗೆ ತಾಳ್ಮೆಯೇ ಬಲವು. ನೀರು, ಗೆಡ್ಡೆ ಗೆಣಸುಗಳು, ಹಾಲು, ಹಣ್ಣು, ಹವಿಸ್ಸು, ಬ್ರಾಹ್ಮಣಾನುಜ್ಞೆ, ಗುರ್ವಾಜ್ಞೆ, ಔಷಧಿ, ಇವೆಂಟೂ ವ್ರತಗಳನ್ನು ಕೆಡಿಸದಿರುವ ಸಾಧನೆಗಳು. ಯಾವು ದು ತನಗೆ ಪ್ರತಿಕೂಲವೋ ಅದನ್ನು ಇತರರ ವಿಷಯದಲ್ಲಿ ಮಾಡಬಾ ರದು. ಒಳ್ಳೇ ಕಾರ್ಯವಾದರೂ ಇತರರಿಗೆ ಅನಿಷ್ಟವಾದುದನ್ನು ನಡೆಸು ವುದರಿಂದ ಅಧರ್ಮವು ಬರುವುವು. ತಾಳ್ಮೆಯಿಂದ ಕೋಪವನ್ನೂ, ಸಾಧುತ್ವದಿಂದ ಅಸಾಧುಗಳನ್ನೂ, ದಾನದಿಂದ ಲೋಭಿಗಳನ್ನೂ, ಸತ್ಯ ದಿಂದ ಸುಳ್ಳನ್ನೂ ಜಯಿಸಬೇಕು. ಸ್ತ್ರೀಯರು, ವಂಚಕರು, ಸೋಮಾ ರಿಗಳು, ಭೀರುಗಳು, ಕ್ರೂರರು, ಪೌರುಷದ ಹೆಮ್ಮೆಯುಳ್ಳವರು, ಚೋ ರರು, ಕೃತಘ್ನರು, ನಾಸ್ತಿಕರು, ಇವರಲ್ಲಿ ಯಾವಾಗಲೂ ನಂಬಿಕೆಯ ನ್ನಿಡಬಾರದು. ದೊಡ್ಡವರನ್ನು ಕಂಡರೆ ನಮಸ್ಕಾರ ಮಾಡುವ, ಮತ್ತು ಯಾವಾಗಲೂ ಹಿರಿಯರನ್ನು ಸೇವಿಸುವ ಸ್ವಭಾವವುಳ್ಳವರಿಗೆ ಆಯುಸ್ಸು, ಬಲ, ಕೀರ್ತಿ (ದಾನಧರ್ಮಾದಿಗಳಿಂದ ಬರುವ ಖ್ಯಾತಿ), ಮತ್ತು ಯಶಸ್ಸು

(ಪರಾಕ್ರಮದಿಂದುಂಟಾದ ಖ್ಯಾತಿ), ಇವು ನಾಲ್ಕೂ ಮೇಲೆಮೇಲೆ ಹೆಚ್ಚು ವುವು. ಬಹಳ ಕಷ್ಟದಿಂದಾಗಲಿ, ಧರ್ಮಾತಿಕ್ರಮದಿಂದಾಗಲಿ, ಶತ್ರುವಿನಲ್ಲಿ ದೈನ್ಯದಿಂದಾಗಲಿ, ಆಗಬೇಕಾದ ಕಾರ್ಯಗಳಿಗೆ ಎಂದಿಗೂ ಮನಸ್ಸಿಡ ಬಾರದು. ವಿದ್ಯೆಯಿಲ್ಲದ ಪುರುಷನೂ, ಸಂತತಿಯಿಲ್ಲದ ಹೆಂಗಸೂ, ಆಹಾರ ವಿಲ್ಲದ ಪ್ರಾಣಿಗಳೂ, ರಾಜನಿಲ್ಲದ ರಾಜ್ಯವೂ, ದುಃಖವನ್ನುಂಟುಮಾಡ ತಕ್ಕುವು. ಪ್ರಾಣಿಗಳಿಗೆ ಪ್ರಯಾಣವೇ ಮುಪ್ಪು! ಪರ್ವತಗಳಿಗೆ ಜಲವೇ ಮುಪ್ಪು, ಸ್ತ್ರೀಯರಿಗೆ ಸಂಭೋಗವಿಲ್ಲದಿರುವುದೇ ಮುಪ್ಪು, ಮನಸ್ಸಿಗೆ ಕ್ರೂರವಾಕ್ಯವೇ ಮುಪ್ಪು. ಅಭ್ಯಾಸವಿಲ್ಲದಿರುವುದೇ ವೇದಗಳಿಗೆ ಕಳಂಕ ವು. ಭೂಮಿಗೆ ಬಾಹ್ಲೀಕ ದೇಶವು (ಪಂಚನದಿಗಳ ಮತ್ತು ಸಿಂಧು ನದಿಯ ಸಂಗಮಸ್ಥಾನಗಳಲ್ಲಿರುವ ದೇಶ) ಕಳಂಕವು. ಮನುಷ್ಯನಿಗೆ ಸುಳ್ಳೇ ಕಳಂಕವು. ಪತಿವ್ರತೆಯಾದ ಹೆಂಗಸಿಗೆ ಸಲ್ಲದ ಆಶೆಯೇ ಕಳಂಕವು. ಸ್ತ್ರೀಯರಿಗೆ ಪ್ರವಾಸವೇ ಕಳಂಕವು. ಸುವರ್ಣಕ್ಕೆ ಬೆಳ್ಳಿಯೇ ಕಳಂಕವು. ಬೆಳ್ಳಿಗೆ ಸೀಸವು ಕಳಂಕವು. ಸೀಸಕ್ಕೆ ಕರಿಯ ಸೀಸವೇ ಕಳಂಕವು. ಕರಿ ಯ ಸೀಸಕ್ಕೆ ಇತರ ಕಶ್ಮಲವು ಕಳಂಕವು. ನಿದ್ರೆಯಿಂದ ನಿದ್ರೆಯನ್ನೂ, ಕಾಮದಿಂದ ಸ್ತ್ರೀಯನ್ನೂ, ಸೌದೆಯಿಂದ ಬೆಂಕಿಯನ್ನೂ, ಪಾನದಿಂದ ಪಾನಾಭಿಲಾಷೆಯನ್ನೂ ಎಂದಿಗೂ ಜಯಿಸಲು (ತೃಪ್ತಿಗೊಳಿಸಲು) ಸಾಧ್ಯ ವಿಲ್ಲ. ಯಾವನಿಗೆ ಸ್ನೇಹಿತನು ದಾನದಿಂದಲೂ, ಶತ್ರುಗಳು ಯುದ್ಧದಿಂದ ಲೂ, ಪತ್ನಿಯರು ಅನ್ನಪಾನಾದಿಗಳಿಂದಲೂ ಜಯಿಸಲ್ಪಟ್ಟು ವಶವಾಗಿ ರುವರೋ, ಅಂತವನ ಜೀವಿತವೇ ಸಫಲವು.

ಓ ಧೃತರಾಷ್ಟ್ರಮಹಾರಾಜಾ! ಸಾವಿರವಿದ್ದವನೂ ಬದುಕುವನು! ನೂರಿದ್ದವನೂ ಬದುಕುವನು! ಭೂಮಿಯಲ್ಲಿ ಹೇಗಾದರೂ ಜೀವಿಸದೆ ಯಾರೂ ಇರುವುದಿಲ್ಲ. ಆದುದರಿಂದ ನೀನು ಅತ್ಯಾಶೆಯನ್ನು ಬಿಟ್ಟು ಬಿಡು. ಓ ಮಹಾರಾಜಾ! ಭೂಮಿಯಲ್ಲಿ ಬೆಳೆಯುವ ಎಲ್ಲಾ ಧಾನ್ಯಗಳೂ ಕಾಳುಗಳೂ, ಪಶುಗಳೂ, ಸುವರ್ಣವೂ, ಸ್ತ್ರೀಯರೂ, ಒಬ್ಬನ ಕೈಗೆ ಸಿಕ್ಕಿ ದರೂ, ಆಗಲೂ ಅವನಿಗೆ ಸಾಲದು. ವಿವೇಕಿಯಾದವನು ಇದನ್ನು ನೋಡಿ ಮೋಹಗೊಳ್ಳಲಾರನು. ಓ ರಾಜಾ! ತಿರುಗಿ ಮತ್ತೊಮ್ಮೆ ನಿನಗೆ ಹೇಳು

ವೆನು. ನಿನ್ನ ಸ್ವಂತ ಮಕ್ಕಳನ್ನೂ, ಪಾಂಡುಪುತ್ರರನ್ನೂ ನೀನು ಸಮವಾಗಿ ಭಾವಿಸುವುದು ನಿಜವಾದರೆ, ಕಾರ್ಯದಲ್ಲಿಯೂ ಅವರಿಬ್ಬರ ವಿಷಯದಲ್ಲಿ ಸಮಾನವಾಗಿಯೇ ವರ್ತಿಸು.

ಇದು ಮೂವತ್ತೊಂಭತ್ತನೆಯ ಅಧ್ಯಾಯವು.



ವಿದುರನು ಅವರವರಿಗೆ ತಮ್ಮ ತಮ್ಮ ವರ್ಣಧರ್ಮಗಳು ಅವಶ್ಯಾನುಷ್ಠೇಯವೆಂದು ತಿಳಿಸಿ, ಧರ್ಮರಾಜನಿಗೆ ರಾಜ್ಯವನ್ನು ಕೊಟ್ಟು ಅವನನ್ನು ಕ್ಷತ್ರಿಯಧರ್ಮದಲ್ಲಿರಿಸಬೇಕೆಂದು ಹೇಳಿದುದು.

ವಿದುರನು ತಿರುಗಿ ಧೃತರಾಷ್ಟ್ರನನ್ನು ಕುರಿತು “ಅಣ್ಣಾ! ಸಜ್ಜನರು ಬಂದು ಕೇಳಿದಾಗ ಯಾವನು ಸ್ವಪ್ರಯೋಜನದಲ್ಲಿ ಆಶೆಯನ್ನಿಟ್ಟುಕೊಳ್ಳದೆ, ತನ್ನ ಶಕ್ತಿಗೆ ಮೀರದಂತೆ, ಅವರ ಕಾರ್ಯವನ್ನು ನಡೆಸಿಕೊಡುವನೋ, ಅವನು ಶೀಘ್ರದಲ್ಲಿಯೇ ಮಹತ್ತಾದ ಯಶಸ್ಸಿಗೂ, ನಲ್ಮೆಗೂ ಪಾತ್ರನಾಗುವನು. ಸಾಧುಗಳು ಪ್ರಸನ್ನರಾದರೆ ಸುಖವನ್ನುಂಟುಮಾಡಲು ಸಮರ್ಥರು. ಮತ್ತೊಬ್ಬರು ಬಂದು ಬಲಾತ್ಕಾರದಿಂದ ಕಿತ್ತುಕೊಳ್ಳದಿದ್ದರೂ, ಅಧರ್ಮಪ್ರಾಪ್ತವಾದ ತನ್ನ ಹಣವು ಎಷ್ಟೇ ಮಹತ್ತಾಗಿದ್ದರೂ,ಅದನ್ನು ಯಾವನು ತೊರೆದುಬಿಡುವನೋ, ಅಂತವನು ಜೀರ್ಣವಾದ ಚರ್ಮವನ್ನು ಕಳೆದುಹಾಕಿದ ಸರ್ಪದಂತೆ, ದುಃಖಗಳನ್ನೆಲ್ಲ ಬಿಟ್ಟು ಸುಖದಿಂದ ಮಲಗುವನು. ಸುಳ್ಳಾಡಿ ಸಂಪಾದಿಸಿದ ಮೇಲ್ಮೆಯೂ, ರಾಜನಲ್ಲಿ ಚಾಡಿಯೂ, ಗುರುವಿನಲ್ಲಿ ವಂಚನೆಯೂ ಬ್ರಹ್ಮಹತ್ಯೆಗೆ ಸಮಾನಗಳು. ಅಸೂಯೆಯೆಂಬುದು ಸರ್ವವಿಧದಿಂದಲೂ ಮೃತ್ಯುವೇ. ಬಹಳವಾಗಿ ಹರಟುವುದು ಸಂಪತ್ತಿಗೆ ಕೊಲೆಯೆನಿಸುವುದು. ಗುರೂಪಾಸನೆಯಿಲ್ಲದಿರುವುದೊಂದು, ಆತುರಪ್ಡೊಂದು, ಇತರರು ಮಾಡುವ ಮುಖಸ್ತುತಿಯೊಂದು, ಇವು ಮೂರೂ ವಿದ್ಯಾರ್ಜನೆಗೆ ಶತ್ರುಗಳು. ಸೋಮಾರಿತನ, ಮದ, ಮೋಹ, ಚಪಲತೆ, ವ್ಯರ್ಥಕಾಲಹರಣಕ್ಕಾಗಿ ಕೂಡಾಡುವುದು, ಗರ್ವ, ಒರಟು

ನ, ಲೋಭಿತ್ವ, ಇವೇಳೂ ವಿದ್ಯಾರ್ಥಿಗಳನ್ನು ಕೆಡಿಸತಕ್ಕ ದೋಷಗಳು.
ಖವನ್ನು ಕೋರತಕ್ಕವನಿಗೆ ವಿದ್ಯೆಯಿಲ್ಲ. ವಿದ್ಯೆಯನ್ನು ಕೋರತಕ್ಕವ
ಗೆ ಸುಖವಿಲ್ಲ. ಆದುದರಿಂದ ಸುಖವನ್ನು ಬಯಸುವವನು ವಿದ್ಯೆಯನ್ನು
ಡಬೇಕು. ವಿದ್ಯೆಯನ್ನು ಬಯಸುವವನು ಸುಖವನ್ನು ಬಿಡಬೇಕು. ಅ
ಗೆ ಕಟ್ಟಿಗೆಗಳಿಂದ ತೃಪ್ತಿಯಿಲ್ಲ. ಸಮುದ್ರಕ್ಕೆ ನದಿಗಳಿಂದ ತೃಪ್ತಿಯಿಲ್ಲ.
ಶೆಯು ಧೈರ್ಯವನ್ನು ಕೆಡಿಸುವುದು. ಯಮನು ಬಂಧುಬಳಗದ ಸಮೃ
ಯನ್ನು ಕೆಡಿಸುವನು. ಹಾಗೆಯೇ ರೋಗವು ಐಶ್ವರ್ಯವನ್ನೂ, ಕೃಪ
ತ್ವವು ಕೀರ್ತಿಯನ್ನೂ, ಅನಾದರಣೆಯು ಪಶುಗಳನ್ನೂ ಕೆಡಿಸುವುದು.
ೀಪಗೊಂಡ ಬ್ರಾಹ್ಮಣನು ರಾಷ್ಟ್ರವನ್ನೇ ಕೆಡಿಸಬಲ್ಲನು. ಓ ಮಹಾ
ಜಾ! ಆಡುಗಳು, ಕಂಚು, ಬೆಳ್ಳಿ, ಜೇನು, ಆಹಾರದಲ್ಲಿ ವಿಷವನ್ನೆಳೆಯು
ಕ್ಕ ಚಕೋರಪಕ್ಷಿ, ಶ್ರೋತ್ರಿಯನಾದ ಬ್ರಾಹ್ಮಣನು, ವೃದ್ಧನಾದ ಬಂಧು,
ಷ್ಟಕ್ಕೆ ಸಿಕ್ಕಿ ಬಂದ ಕುಲೀನನು, ಇವಿಷ್ಟೂ ನಿನ್ನ ಮನೆಯಲ್ಲಿ ಯಾವಾಗ
ಇರುತ್ತಿರಲಿ. ಆಡು, ಎತ್ತು, ಚಂದನ, ವೀಣೆ, ಕನ್ನಡಿ, ಜೇನುತುಪ್ಪ,
ಷ, ಎಂದರೆ(ಲೋಹ) ತಾಮ್ರಪಾತ್ರ, ಶಂಖ, ಸಾಲಿಗ್ರಾಮ, ಗೋರೋ
ನ ಇವಿಷ್ಟನ್ನೂ ಮನೆಯಲ್ಲಿಟ್ಟಿರಬೇಕು. ಇವೆಲ್ಲ ಮಂಗಳಕರಗಳೆಂದು
ನುವು ಹೇಳಿರುವನು. ಇವೆಲ್ಲ ದೇವತೆಗಳ, ಬ್ರಾಹ್ಮಣರ, ಮತ್ತು ಅತಿ
ಗಳ ಪೂಜೆಗೆ ಒದಗತಕ್ಕವುಗಳು.

ಓ ರಾಜಾ! ಎಲ್ಲಕ್ಕಿಂತಲೂ ಮೇಲಾದ, ಪವಿತ್ರವಾದ, ಮತ್ತು ಮಂ
ಕರವಾದ ಒಂದು ವಿಷಯವನ್ನು ನಾನು ನಿನಗೆ ಬಾರಿಬಾರಿಗೂ ಹೇಳು
ು. ಕಾಮದಿಂದಾಗಲಿ, ಭಯದಿಂದಾಗಲಿ, ಲೋಭದಿಂದಾಗಲಿ, ತನ್ನ
ಣವನ್ನೇ ಉಳಿಸಿಕೊಳ್ಳಬೇಕಾದ ಸಂದರ್ಭದಲ್ಲಿಯಾದರೂ, ಧರ್ಮವ
ಮಾತ್ರ ಬಿಡಬಾರದು. ಧರ್ಮವು ನಿತ್ಯವಾದುದು. ಸುಖದುಃಖಗಳು
ತ್ಯಗಳು. ಜೀವನು ನಿತ್ಯವು. ಶರೀರವು ಅನಿತ್ಯವು. ಆದುದರಿಂದ ಅನಿ
ವಾದುದನ್ನು ಬಿಟ್ಟು ನಿತ್ಯವಾದುದರಲ್ಲಿ ನೆಲೆಗೊಂಡಿರು. ಸಂತೋಷ
ನ್ನು ಹೊಂದು. ಸಜ್ಜನರು ಯಾವಾಗಲೂ ಸಂತೋಷದಲ್ಲಿ ನೆಲೆಗೊಂಡ
. ಓ ಮಹಾರಾಜಾ! ಮಹಾಮಹಿಮೆಯುಳ್ಳವರೂ, ಮಹಾಬಲಾ

ಧ್ಯರೂ ಆದ ಎಷ್ಟೋ ರಾಜರು ಧನಧಾನ್ಯಗಳಿಂದ ಪೂರ್ಣವಾದ ಭೂಮಿಯನ್ನು ಪಾಲಿಸುತಿದ್ದರೂ, ತಮ್ಮ ರಾಜ್ಯಗಳನ್ನೂ, ಭೋಗಗಳನ್ನೂ ಅಗಲಿ ಕೊನೆಗೆ ಯಮನ ಪಾಲಾದರಲ್ಲವೇ. ಅವೆಲ್ಲವನ್ನೂ ನೀನು ಚೆನ್ನಾಗಿ ಯೋಚಿಸು. ಎಷ್ಟೋ ಕಷ್ಟದಿಂದ ಬೆಳೆಸಿದ ಮಗನಾಗಿದ್ದರೂ ಅವನು ಮೃತನಾದಮೇಲೆ ತಾಯಿತಂದೆಗಳು ಒಡನೆಯೇ ಮನೆಯಿಂದ ಹೊರಗೆ ಸಾಗಿಸುವರು. ತಲೆಯನ್ನು ಬಿಚ್ಚಿಕೊಂಡು ಅವನಿಗಾಗಿ ದೈನ್ಯದಿಂದ ರೋದಿಸುವರು. ಕಟ್ಟಿಗೆಯನ್ನು ಹೇಗೋ ಹಾಗೆ ಚಿತೆಯ ಮಧ್ಯದಲ್ಲಿಡುವರು. ಓ ಮಹಾರಾಜಾ! ಮೃತನಾದವನ ಧನವನ್ನು ಬೇರೆ ಯಾರೋ ಅನುಭವಿಸುವರು. ಅವನ ಶರೀರಭಾಗಗಳನ್ನೆಲ್ಲ ಪಕ್ಷಿಗಳೂ, ಅಗ್ನಿಯೂ ತಿಂದುಬಿಡುವುವು. ಪುಣ್ಯಪಾಪಗಳೆರಡನ್ನು ಮಾತ್ರ ಅವನು ತನ್ನೊಡನೆ ಕಟ್ಟಿಕೊಂಡು ಹೋಗುವನು. ಮನುಷ್ಯನು ಮೃತನಾದಮೇಲೆ ಫಲಪುಷ್ಪಗಳೊಂದೂ ಇಲ್ಲದ ಮರವನ್ನು ಪಕ್ಷಿಗಳು ಹೇಗೋ ಹಾಗೆ ಅವನನ್ನು ಜ್ಞಾತಿಗಳೂ, ಮಕ್ಕಳೂ, ಮಿತ್ರರೂ, ತೊರೆದುಬಿಡುವರು. ಮನುಷ್ಯನನ್ನು ಚಿತೆಯಲ್ಲಿ ಹಾಕಿ, ಬೆಂಕಿಯಲ್ಲಿ ಉರಿಸಿದರೂ ಕೂಡ, ಅವನು ಮಾಡಿದ ಕರ್ಮವು ಅವನನ್ನು ಹಿಂಬಾಲಿಸುವುದು. ಆದುದರಿಂದ ಮನುಷ್ಯನು ಬದುಕಿರುವಾಗಲೇ ಧರ್ಮವನ್ನು ಗಳಿಸಿಡಬೇಕು. ಓ ರಾಜಾ! ಈ ಪ್ರಪಂಚಕ್ಕೆ ಮೇಲೆಯೂ, ಈ ಲೋಕಕ್ಕೆ ಕೆಳಗೂ, ಮಹತ್ತಾದ ಅಂಧಕಾರವು ತುಂಬಿಕೊಂಡಿರುವುದು. ಅದನ್ನೇ ನರಕವೆನ್ನುವರು. ಅದು ಇಂದ್ರಿಯಗಳನ್ನು ಮಯಕಗೊಳಿಸುವುದು. ಆ ಅಂಧಕಾರದಲ್ಲಿ ನೀನು ಬುದ್ಧಿಪೂರ್ವಕವಾಗಿ ಹೋಗಿ ಬೀಳಬೇಡ. ಇದೊಂದು ಮಾತನ್ನು ನಾನು ಹೇಳುವೆನು. ಇದನ್ನು ಕೇಳಿ ನೀನು ಯಥಾವತ್ತಾಗಿ ಅದನ್ನು ನಡೆಸಿದರೆ, ನಿನಗೆ ಈ ಲೋಕದಲ್ಲಿ ಒಳ್ಳೆಯ ಯಶಸ್ಸುಂಟು. ಆಗ ನಿನಗೆ ಇಹಪರಗಳೆರಡರಲ್ಲಿಯೂ ಯಾವ ಭಯವೂ ಇರುವುದಿಲ್ಲ. ಓ ಭರತಶ್ರೇಷ್ಠಾ! ಜೀವಾತ್ಮವೇ ಒಂದು ನದಿ. ಪುಣ್ಯಕರ್ಮಗಳೇ ಅದರೊಳಗಿನ ಪುಣ್ಯತೀರ್ಥವು. ಸತ್ಯರೂಪವಾದ ಬ್ರಹ್ಮದಲ್ಲಿಯೇ ಅದರ ಪ್ರವಾಹವು. ಧೈರ್ಯವೇ ಅದರ ದಡವು. ದಯೆಯೇ ಅದರ ಅಲೆಗಳು. ಆ ನದಿಯಲ್ಲಿ ಸ್ನಾನಮಾಡಿದವನು ಪುಣ್ಯಶಾಲಿಯೂ, ಪವಿತ್ರನೂ ಆಗುವನು. 'ಆತ್ಮನಿಗೆ ಲೋಭವಿಲ್ಲದಿರುವಿಕೆಯೇ (ವೈರಾಗ್ಯ

ವೇ) ಪುಣ್ಯವು. ಕಾಮಕ್ರೋಧಗಳೆಂಬ ಮೊಸಳೆಗಳಿಂದಲೂ, ಪಂಚೇಂದ್ರಿಯಗಳೆಂಬ ಜಲಪ್ರವಾಹದಿಂದಲೂ ಕೂಡಿದ ಈ ದೇಹಯಾತ್ರೆಯೆಂಬ ನದಿಯನ್ನು ಮನುಷ್ಯನು ಧೈರ್ಯವೆಂಬ ನಾವೆಯನ್ನೇರಿ, ಜನ್ಮಗಳೆಂಬ ಅದರೊಳಗಿನ ಜಲದುರ್ಗಗಳನ್ನು (ಮಡುಗಳನ್ನು) ದಾಟಬೇಕು. ಯಾವನು ಜ್ಞಾನವೃದ್ಧನೂ, ವಯೋವೃದ್ಧನೂ, ಧರ್ಮವೃದ್ಧನೂ, ವಿದ್ಯಾವೃದ್ಧನೂ ಆದ ಸ್ವಬಂಧುವಿನಲ್ಲಿ ಕಾರ್ಯಾಕಾರ್ಯಗಳನ್ನು ವಿಚಾರಿಸಿ ತಿಳಿಯುವನೋ, ಅವನು ಯಾವಾಗಲೂ ಮೋಹಕ್ಕೆ ಒಳಗಾಗಲಾರನು. ಮನುಷ್ಯನು ಮನೋಜಯದಿಂದ ಶಿಶ್ನೋದರಗಳನ್ನು ರಕ್ಷಿಸಬೇಕು. ಕಣ್ಣಿನಿಂದ ಕೈಕಾಲುಗಳನ್ನು ರಕ್ಷಿಸಬೇಕು. ಮನಸ್ಸಿನಿಂದ ಕಣ್ಣು ಕಿವಿಗಳನ್ನು ರಕ್ಷಿಸಬೇಕು. ಮನೋವಾಕ್ಕುಗಳೆರಡನ್ನೂ ಕರ್ಮದಿಂದ ರಕ್ಷಿಸಬೇಕು.

ನಿತ್ಯವೂ ಸಕಾಲಕ್ಕೆ ಸ್ನಾನಯಜ್ಞಾದಿಗಳನ್ನು ಮಾಡುವುದು, ಅಧ್ಯಯನ ಮಾಡುವುದು, ಪತಿತಾನ್ನಗಳನ್ನು ವರ್ಜಿಸುವುದು, ಯಾವಾಗಲೂ ಸತ್ಯವನ್ನೇ ಹೇಳುವುದು, ಗುರುಶುಶ್ರೂಷೆ ಮಾಡುವುದು, ಇಂತಹ ನಿಯಮದಲ್ಲಿರುವ ಬ್ರಾಹ್ಮಣನು ಬ್ರಹ್ಮಲೋಕದಿಂದ ಎಂದಿಗೂ ಜಾರುವವನಲ್ಲ. ವೇದಗಳನ್ನೋದಿ, ಅಗ್ನಿಗೆ ದರ್ಭೆಗಳಿಂದ ಪರಿಸ್ತರಣವನ್ನಿಟ್ಟು, ಯಾಗಗಳಿಂದ ದೇವತೆಗಳನ್ನು ಪೂಜಿಸಿ ಪ್ರಜೆಗಳನ್ನು ರಕ್ಷಿಸಿ, ಗೋಬ್ರಾಹ್ಮಣರ ಕ್ಷೇಮದಲ್ಲಿ ನಿರತನಾಗಿ ಕೊನೆಗೆ ಯುದ್ಧದಲ್ಲಿ ಕೊಲ್ಲಲ್ಪಟ್ಟು ಶಸ್ತ್ರಗಳಿಂದ ಪರಿಶುದ್ಧವಾದ ಆತ್ಮವುಳ್ಳವನಾವನೋ ಅಂತಹ ಕ್ಷತ್ರಿಯನು ಸ್ವರ್ಗವನ್ನು ಸೇರುವನು. ವೈಶ್ಯನು ವೇದಾಧ್ಯಯನವನ್ನು ಮಾಡಿ ಸಮಯದಲ್ಲಿ ಬ್ರಾಹ್ಮಣರನ್ನೂ, ಕ್ಷತ್ರಿಯರನ್ನೂ, ಆಶ್ರಿತರನ್ನೂ ತಾನು ಗಳಿಸಿದ ಹಣದಿಂದ ಕಾಪಾಡುತ್ತ, (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ) ಮೂರು ಅಗ್ನಿಗಳಿಂದ ಹೊರಟ ಪವಿತ್ರವಾದ ಹೊಗೆಯನ್ನಾಘ್ರಾಣಿಸಿದರೆ, ಕೊನೆಗೆ ದೇಹಾವಸಾನದಲ್ಲಿ ಸ್ವರ್ಗವನ್ನು ಸೇರಿ ಅಲ್ಲಿ ದಿವ್ಯಸುಖಗಳನ್ನು ಅನುಭವಿಸುವನು. ಶೂದ್ರನಾದವನು ಮೇಲೆ ಹೇಳಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ತ್ರೈವರ್ಣಿಕರನ್ನೂ ಕ್ರಮವಾಗಿ ಸೇವಿಸಿ ಪೂಜಿಸುತ್ತಿರಬೇಕು. ಅವರನ್ನು ಸಂತೋಷಗೊಳಿಸುವುದರಿಂದ ಅವನು ತನ್ನ ಕಷ್ಟಗಳನ್ನೂ, ಪಾಪಗಳ

ನ್ನೂ ನೀಗಿ, ಕೊನೆಗೆ ಸ್ವರ್ಗದಲ್ಲಿ ಅವರೊಡನೆ ಸಮಾನಭೋಗಗಳನ್ನು ಅನುಭವಿಸುವನು.

ಮಹಾರಾಜಾ! ಇವೇ ನಾಲ್ಕು ವರ್ಣದವರ ಧರ್ಮಗಳು. ಈಗ ನಾನು ಇದನ್ನು ಇಲ್ಲಿ ಹೇಳುವುದಕ್ಕೆ ಕಾರಣವೇನೆಂಬುದನ್ನು ತಿಳಿಸುವೆನು ಕೇಳು. ಈಗ ನೀನು ಪಾಂಡುಪುತ್ರರಿಗೆ ರಾಜ್ಯವನ್ನು ಕೊಡದೆ ನಿರಾಕರಿಸುವುದರಿಂದ ಅವರನ್ನು ಕ್ಷತ್ರಿಯಧರ್ಮದಿಂದ ಭ್ರಷ್ಟರನ್ನಾಗಿ ಮಾಡಿದಂತಾಗುವುದು. ಅಲ್ಲದೆ ನೀನೂ ನಿನ್ನ ಮಗನನ್ನು ನಂಬಿ ಸ್ವಧರ್ಮಚ್ಯುತನಾಗುವೆ! ಆದುದರಿಂದ ನೀನು ಅವನನ್ನು ರಾಜಧರ್ಮದಲ್ಲಿ ನೆಲೆಗೊಳಿಸಬೇಕು.'' ಎಂದನು.

ಆಗ ಧೃತರಾಷ್ಟ್ರನು '' ವಿದುರಾ! ನೀನು ಹೇಳುತ್ತಿರುವುದೆಲ್ಲ ಸತ್ಯವೇ! ನನ್ನ ಮನಸ್ಸಿಗೂ ಅದೆಲ್ಲ ತೋರುತ್ತಲೇ ಇದೆ. ನಿನ್ನ ಮಾತಿಗನುಸಾರವಾಗಿಯೇ ನನ್ನ ಬುದ್ಧಿಯೂ ಪ್ರವರ್ತಿಸುತ್ತಿದೆ. ಪಾಂಡವರ ವಿಷಯದಲ್ಲಿ ಯಾವಾಗಲೂ ನನ್ನ ಅಭಿಪ್ರಾಯವು ಅದೇವಿಧವಾಗಿದ್ದರೂ, ದುರ್ಯೋಧನನನ್ನು ಕಂಡೊಡನೆ ಅದು ತಿರುಗಿ ಬದಲಾಯಿಸಿಹೋಗುವುದು. ನಾನೇನು ಮಾಡಲಿ! ದೈವವನ್ನು ಮೀರಿಹೋಗುವುದಕ್ಕೆ ಯಾವ ಪ್ರಾಣಿಗೂ ಸಾಧ್ಯವಲ್ಲ. ದೈವಬಲವೇ ದೃಢವಾದುದೇ ಹೊರತು, ಪೌರುಷವು ನಿರರ್ಥಕವೆಂದೇ ನನಗೆ ತೋರುವುದು'' ಎಂದನು.

ಇದು ನಾಲ್ವತ್ತನೆಯ ಅಧ್ಯಾಯವು.

**ಇಲ್ಲಿಗೆ ಪ್ರಜಾಗರಪರ್ವವು ಮುಗಿದುದು.**

# ಸನತ್ಸುಜಾತಪರ್ವವು.

ಧೃತರಾಷ್ಟ್ರನು ಇನ್ನೂ ಕೆಲವು ಧರ್ಮರಹಸ್ಯಗಳನ್ನು ತಿಳಿಸಬೇಕೆಂದು ಕೇಳಿದಾಗ, ವಿದುರನು ಸನತ್ಸುಜಾತಮುನಿಯಿಂದ ಅದನ್ನು ತಿಳಿಯಬೇಕೇ ಹೊರತು ತನಗೆ ಹೇಳಲು ಅಧಿಕಾರವಿಲ್ಲವೆಂದು ಹೇಳಿದುದು. ಸ್ಮರಣಮಾತ್ರದಿಂದ ಆ ಮಹರ್ಷಿಯು ಅಲ್ಲಿಗೆ ಬಂದುದು.

ತಿರುಗಿ ಧೃತರಾಷ್ಟ್ರನು ವಿದುರನನ್ನು ಕುರಿತು "ಓ ವಿದುರಾ! ಇನ್ನೂ ನನಗೆ ನಿನ್ನಿಂದ ಅನೇಕಧರ್ಮಗಳನ್ನು ಕೇಳಬೇಕೆಂಬ ಆಶೆಯಿದೆ. ನೀನು ಹೇಳದೆ ಬಿಟ್ಟಿರುವ ಧರ್ಮರಹಸ್ಯಗಳೇನಾದರೂ ಇದ್ದರೆ ತಿಳಿಸು. ನೀನು ಹೇಳುವ ವಿಷಯಗಳೆಲ್ಲ ಆಶ್ಚರ್ಯಕರಗಳಾಗಿವೆ" ಎಂದನು. ಅದಕ್ಕಾ ವಿದುರನು "ನಾನು ಹೇಳದೇ ಇರುವ ಸಂಗತಿಗಳೂ ಕೆಲವುಂಟು. ಪುರಾತನಮಹರ್ಷಿಯೂ, ಯಾವಾಗಲೂ ಕುಮಾರವಯಸ್ಸುಳ್ಳವನೂ, (ನಿತ್ಯಬ್ರಹ್ಮಚಾರಿಯೂ) ಆದ ಸನತ್ಸುಜಾತನೆಂಬವನು ಹಿಂದೆ "ಮರಣವೆಂಬುದೇ ಇಲ್ಲ"ವೆಂದು ಹೇಳಿದುದನ್ನು ನಾನು ಕೇಳಿರುವೆನು. ಆತನು ಪ್ರಜ್ಞಾವಂತರೊಳಗೆಲ್ಲ ಮೇಲೆನಿಸಿದವನು. ಅವನನ್ನು ಕೇಳಿದರೆ, ನಿನ್ನ ಮನಸ್ಸಿನಲ್ಲಿರುವ ಸಂದೇಹಗಳೆಲ್ಲವೂ ಪರಿಹಾರವಾಗುವಂತೆ ರಹಸ್ಯವೂ, ರಹಸ್ಯವಲ್ಲದೆಯೂ ಇರುವ ಎಲ್ಲಾ ಧರ್ಮಗಳನ್ನೂ ಹೇಳುವನು" ಎಂದನು. ಆಗ ಧೃತರಾಷ್ಟ್ರನು "ವಿದುರಾ! ಆ ಪುರಾತನಮಹರ್ಷಿಯು ಹೇಳತಕ್ಕ ವಿಷಯವು ನಿನಗೆ ತಿಳಿಯದೇನು? ನೀನೇ ಅದನ್ನೇಕೆ ನನಗೆ ಹೇಳಬಾರದು? ನಿನಗೆ ತಿಳಿದ ಸಂಗತಿಯಾಗಿದ್ದರೆ, ಈಗ ನೀನೇ ಅದನ್ನು ನನಗೆ ಹೇಳಬಾರದೇಕೆ?" ಎಂದನು. ಆಗ ವಿದುರನು "ಅಣ್ಣಾ! ನಾನು ಶೂದ್ರಯೋನಿಯಲ್ಲಿ ಹುಟ್ಟಿದವನು. ಆಧ್ಯಾತ್ಮಿಕ ಸಂಗತಿಗಳೊಂದನ್ನೂ ಹೇಳುವುದಕ್ಕೆ ನಾನು ಅರ್ಹನಲ್ಲ. ಆ ಮಹರ್ಷಿಯ ಪ್ರಜ್ಞೆಯು ಅದ್ಭುತವಾದುದೆಂದು ನಾನು ಬಲ್ಲೆನು.* ಆತನು ಬ್ರಾಹ್ಮಣಜಾತಿಯಲ್ಲಿ ಹುಟ್ಟಿ

ರುವುದರಿಂದ, ಎಂತಹ ರಹಸ್ಯವಿಷಯಗಳನ್ನಾದರೂ ಹೇಳುವುದಕ್ಕೆ ಅಧಿಕಾರವುಳ್ಳವನು. ಅವನು ಆ ವಿಷಯವನ್ನು ಹೇಳಿದರೂ (ನನ್ನಂತೆ) ದೇವತೆಗಳ ನಿಗ್ರಹಕ್ಕೆ ಪಾತ್ರನಾಗಲಾರನು. ಆದುದರಿಂದ ನಾನು ಆ ಸಂಗತಿಯನ್ನು ನಿನಗೆ ಹೇಳದೆ, ಅವನಿಂದಲೇ ತಿಳಿಯಬೇಕೆಂದು ಹೇಳಿದೆನು" ಎಂದನು. ಆಗ ಧೃತರಾಷ್ಟ್ರನು "ಓ ವಿದುರಾ! ಆ ಪುರಾತನಮಹರ್ಷಿಯನ್ನು ನಾನು ಕಾಣುವುದು ಹೇಗೆ? ಈ ಮರ್ತ್ಯದೇಹದಿಂದ ದೇವಋಷಿಯಾದ ಆತನೊಡನೆ ನನಗೆ ಹೇಗೆತಾನೇ ಸಮಾಗಮವುಂಟಾಗುವುದು? ಇಲ್ಲಿಯೇ ಅವನನ್ನು ನೋಡುವುದಕ್ಕೆ ಉಪಾಯವೇನಾದರೂ ಇದ್ದರೆ ತಿಳಿಸು" ಎಂದನು.

ಓ ಜನಮೇಜಯರಾಜಾ! ಧೃತರಾಷ್ಟ್ರನು ಈ ಮಾತನ್ನು ಹೇಳಿದೊಡನೆ, ವಿದುರನು ದೃಢವ್ರತವುಳ್ಳ ಆ ಮಹರ್ಷಿಯನ್ನು ಮನಸ್ಸಿನಲ್ಲಿ ನೆನೆಸಿಕೊಂಡನು. ಒಡನೆಯೇ ಸನತ್ಸುಜಾತಮುನಿಯು ಅಲ್ಲಿಯೇ ಬಂದು ಅವನಿಗೆ ಕಾಣಿಸಿಕೊಂಡನು. ಆಗ ವಿದುರನು ಅವನನ್ನು ಶಾಸ್ತ್ರೋಕ್ತವಾದ ಸತ್ಕಾರದಿಂದ ಬರಮಾಡಿಕೊಂಡು, ಆಸನವನ್ನು ಕೊಟ್ಟು ಕುಳ್ಳಿರಿಸಿದನು. ಆ ಮಹರ್ಷಿಯು ಸುಖಾಸೀನನಾಗಿ ವಿಶ್ರಾಂತಿಯನ್ನು ಹೊಂದಿದಮೇಲೆ, ವಿದುರನು ಅವನನ್ನು ಕುರಿತು "ಭಗವನ್! ಧೃತರಾಷ್ಟ್ರನ ಮನಸ್ಸಿನಲ್ಲಿ ಕೆಲವು ಸಂಶಯಗಳುಂಟು. ಆ ಸಂದೇಹವನ್ನು ತೀರಿಸಲು ನನಗೆ ಅರ್ಹತೆಯಿಲ್ಲ. ನೀನೇ ಅದನ್ನು ಅವನಿಗೆ ತಿಳಿಸಬೇಕು. ನಿನ್ನ ಉಪದೇಶವನ್ನು ಕೇಳಿಯಾದರೂ ಅವನು ದುಃಖನಿವೃತ್ತನಾಗಲಿ! ಎಲೈ ಪೂಜ್ಯನೇ! ಲಾಭಾಲಾಭಗಳು, ಇಷ್ಟಾನಿಷ್ಟಗಳು, ಜರಾಮರಣಗಳು, ಭಯಾಸೂಯೆಗಳು, ಹಸಿವುಬಾಯಾರಿಕೆಗಳು, ಕಾಮಕ್ರೋಧಗಳು, ಹಾನಿವೃದ್ಧಿಗಳು, ಮದ, ಅರತಿ, ಆಲಸ್ಯ ಮುಂತಾದುವೆಲ್ಲವೂ ಅವನ ಮನಸ್ಸಿನಿಂದ ನೀಗಿ, ಅವನ ಮನಸ್ಸು ಶಾಂತಿಯಲ್ಲಿರುವಂತೆ ನೀನು ಅವನಿಗೆ ಹೇಳಬೇಕಾದ ತತ್ವಗಳನ್ನು ತಿಳಿಸಬೇಕು" ಎಂದನು.

ಇದು ನಾಲ್ವತ್ತೊಂದನೆಯ ಅಧ್ಯಾಯವು.

## ಧೃತರಾಷ್ಟ್ರನಿಗೆ ಸನತ್ಸುಜಾತನ ತತ್ವೋಪದೇಶಗಳು.

### — ಮನುಷ್ಯನಿಗೆ ಮೃತ್ಯುವೆಂಬುದು ಅಜ್ಞಾನವೇ. —

ಜನಮೆಜಯರಾಜಾ! ಕೇಳು! ಆಗ ಧೃತರಾಷ್ಟ್ರಮಹಾರಾಜನು ವಿದುರನ ಮಾತಿಗೆ ಬಹಳ ಸಂತೋಷಗೊಂಡು, ತನ್ನ ಮುಂದೆ ಗೋಚರಿಸಿದ ಸನತ್ಸುಜಾತಮಹರ್ಷಿಯಿಂದ, ರಹಸ್ಯವಾದ ಆತ್ಮಜ್ಞಾನವನ್ನು ಪಡೆಯಬೇಕೆಂದುದ್ದೇಶಿಸಿ, ಹೀಗೆಂದು ಪ್ರಶ್ನೆಮಾಡುವನು. "ಓ ಮಹರ್ಷೀ! 'ಪ್ರಾಣಿಗಳಿಗೆ ಮರಣವೇ ಇಲ್ಲ'ವೆಂದು ನೀನು ಹೇಳಿದುದಾಗಿ ಕೇಳಿದೆನು. ದೇವಾಸುರರಾದರೋ ತಮಗೆ ಮೃತ್ಯುವಿಲ್ಲದಂತೆ ತಪ್ಪಿಸಿಕೊಳ್ಳುವುದಕ್ಕಾಗಿ ಗುರುಕುಲವಾಸವನ್ನು ಮಾಡಿ, ಅನೇಕ ವ್ರತಗಳನ್ನು ನಡೆಸಿದುದಾಗಿ ಕೇಳುವೆನು. ನೀನು ಹೇಳಿದಂತೆ ಮರಣವಿಲ್ಲದಿದ್ದರೆ, ಅವರು ಅದಕ್ಕಾಗಿ ಕರ್ಮವನ್ನು ನಡೆಸಿ ಶ್ರಮಪಡಬೇಕಾದ ಕಾರಣವೇ ಇರಲಿಲ್ಲ. ಈ ಭಿನ್ನಾಭಿಪ್ರಾಯಗಳಲ್ಲಿ ಯಾವುದು ನಿಜವೆಂಬುದನ್ನು ನನಗೆ ತಿಳಿಸಬೇಕು" ಎಂದನು. ಆಗ ಸನತ್ಸುಜಾತಮುನಿಯು ಧೃತರಾಷ್ಟ್ರನನ್ನು ಕುರಿತು "ರಾಜೇಂದ್ರಾ! ನೀನು ಹೇಳಿದುದು ನಿಜವೇ! ಕೆಲವರು ಮೃತ್ಯುವುಂಟೆಂದೂ, ಕರ್ಮದಿಂದ ಮೃತ್ಯು ನಿವೃತ್ತಿಯೆಂದೂ ಹೇಳುವರು. ಮೃತ್ಯುವೇ ಇಲ್ಲವೆಂಬುದು ಬೇರೆಯವರ ಅಭಿಪ್ರಾಯವು. ಇದರಲ್ಲಿ ನಿನ್ನ ಸಂದೇಹವು ಪರಿಹಾರವಾಗುವಂತೆ ಅಂತರ್ಯವಾದ ಮರ್ಮವನ್ನು ತಿಳಿಸುವೆನು ಕೇಳು. ಮೃತ್ಯುವುಂಟೆಂದೂ, ಇಲ್ಲವೆಂದೂ ಹೇಳುವ ಈ ಅಭಿಪ್ರಾಯಗಳೆರಡೂ ನಿಜವೇ. ಕೆಲವರು (ಕಾರ್ಮಿಕರು) ಮೋಹರೂಪವಾದ (ಎಂದರೆ, ಆತ್ಮವಲ್ಲದುದನ್ನು ಆತ್ಮವೆಂದು ತಿಳಿಯುವ) ಅಜ್ಞಾನದಿಂದ ಮೃತ್ಯುವುಂಟೆಂದೂ, ಅದು ಕರ್ಮದಿಂದುಂಟಾದ ಜ್ಞಾನೋದಯದಿಂದ ಬಿಟ್ಟುಹೋಗುವುದೆಂದೂ ಹೇಳುವರು. ಜ್ಞಾನಿಗಳು ಮೃತ್ಯುವೇ ಇಲ್ಲವೆನ್ನುವರು. ಕರ್ಮದಶೆಯಲ್ಲಿ ಮೃತ್ಯುವುಂಟೆಂದು ತಿಳಿದವನೇ, ಜ್ಞಾನದಶೆಯಲ್ಲಿ ಅದು ಬಿಟ್ಟುಹೋಯಿತೆಂದು ತಿಳಿಯುವನು. ಆತ್ಮಸ್ವರೂಪವನ್ನು ಮರೆಯದಿರುವುದೇ ಅಮೃತತ್ವವು. (ಸಾಯದಿರುವಿಕೆಯು ಅಥವಾ ಮೋಕ್ಷವು). ಆತ್ಮಜ್ಞಾನದಿಂದ ತಪ್ಪಿಹೋದುದರಿಂದಲೇ ಅಸುರರು ಅವಮಾನಿತರಾದರು.

ಅದನ್ನು ತಪ್ಪದಿದ್ದುದರಿಂದಲೇ ದೇವತೆಗಳು ಬ್ರಹ್ಮತ್ವವನ್ನು ಹೊಂದಿ ಅಮರರಾದರು. ಮೃತ್ಯುವೆಂಬುದು ಹುಲಿಯಂತೆ ಪ್ರತ್ಯಕ್ಷವಾಗಿ ಬಂದು ಮೇಲೆ ಬಿದ್ದು ಪ್ರಾಣಿಗಳನ್ನು ಹಿಡಿದು ತಿನ್ನುವುದಿಲ್ಲ. ಅದರ ರೂಪವೂ ಇಂತದೆಂದು ತೋರತಕ್ಕುದಲ್ಲ.

ಇನ್ನೂ ಬೇರೆ ಕೆಲವರು ಇದನ್ನೆಲ್ಲ ಬಿಟ್ಟು ಯಮನೆಂಬ ದೇವತೆಯೊಬ್ಬನನ್ನು ಮೃತ್ಯುವೆಂದು ಹೇಳುವರು. ಸರಿಯಾದ ಆತ್ಮಜ್ಞಾನವಿಲ್ಲದ ಮೋಹವೇ ಈ ಹೇಳಿಕೆಗಳಿಗೆಲ್ಲ ಕಾರಣವು. ಪಿತೃಲೋಕಾಧಿಪತಿಯೆನಿಸಿದ ಯಾವ ಯಮನನ್ನು ಅವರು ಮೃತ್ಯುವೆಂದು ಭಾವಿಸಿರುವರೋ, ಆ ದೇವನು ಅವರವರ ಆತ್ಮದಲ್ಲಿಯೇ ಅಡಗಿರುವನು. ಒಳ್ಳೆಯವರಿಗೆ ಒಳ್ಳೆಯವನಾಗಿಯೂ, ಕೆಟ್ಟವರಿಗೆ ಕೆಟ್ಟವನಾಗಿಯೂ, ಅವರವರ ಕರ್ಮಾನುಗುಣವಾದ ಸುಖದುಃಖಗಳನ್ನು ಕೊಡುವವನೂ ಅವನೇ! ಇವನ ದೆಸೆಯಿಂದಲೇ ಜನರನ್ನು ಕ್ರೋಧ, ಲೋಭ ಮತ್ತು ಅಜ್ಞಾನದರೂಪವಾಗಿ ಮೃತ್ಯುವು ಬಂದು ಆವರಿಸುವುದು. ಪರಮಾತ್ಮಾನುಸಂಧಾನದಿಂದ, ಆ ಮೃತ್ಯುವನ್ನು ನಿಗ್ರಹಿಸಬಹುದು. ಮುಖ್ಯವಾಗಿ ಅವರವರ ಆತ್ಮಸಂಬಂಧವಾದ ಮೋಹವೇ ಅವರವರಿಗೆ ಮೃತ್ಯುವೇಹೊರತು, ಬೇರೊಬ್ಬ ಯಮನಿರುವನೆಂಬುದು ಕಲ್ಪಿತವು. ಅಜ್ಞತೆಯಿಂದಾದ ಅಹಂಕಾರದಿಂದಲೇ ಮನುಷ್ಯರು ದಾರಿತಪ್ಪಿ ಅನೀತಿಯಲ್ಲಿ ಪ್ರವರ್ತಿಸುವರು. ಅಂತಹ ಅಹಂಕಾರ (ನಾನೆಂಬ ಭ್ರಾಂತಿ) ವುಳ್ಳವನು ನಿಜವಾದ ಆತ್ಮಸ್ವರೂಪವನ್ನು ಅರಿಯಲಾರನು. ಅಂತವರ ಜ್ಞಾನವು ಶುದ್ಧವಲ್ಲ. ಅವರು ಬೇಗನೆ ಮೋಹಕ್ಕೊಳಗಾಗುವರು. ಸತ್ತಮೇಲೆ ಪರಲೋಕಕ್ಕೆ ಹೋದರೂ, ಅವರು ತಿರುಗಿತಿರುಗಿ ನರಕಕ್ಕೆ ಹೋಗಿ ಈ ಲೋಕಕ್ಕೆ ಬರುತ್ತಲೇ ಇರುವರು. ಅಂತವರನ್ನು ಇಂದ್ರಿಯಗಳು ನಾನಾಕಡೆಗೆ ಎಳೆದಾಡುತ್ತಿರುವುವು. ಹೀಗೆ ಅಜ್ಞಾನಜನ್ಯವಾದ ಕರ್ಮಸಂಬಂಧದಿಂದುಂಟಾಗುವ ಪುನರಾವೃತ್ತಿಯೇ, ಜನನಮರಣಗಳೆಂಬ ಹೆಸರಿನಿಂದ ಕರೆಯಲ್ಪಡುವುದು. ಮೋಹವೇ ಮೃತ್ಯುವೆಂದು ಹೇಳುವವರ ಅಭಿಪ್ರಾಯವು ಇದೇ! ಫಲೋದ್ದೇಶದಿಂದ ಕರ್ಮಗಳನ್ನು ನಡೆಸಿದವರು ಆ ಕರ್ಮಫಲವನ್ನು ಅನುಭವಿಸಿಯೇ ತೀರಬೇಕಾದುದರಿಂದ,

ಆ ಫಲಾನುಭವಕಾಲವು ಬಂದೊಡನೆ, ಈ ಶರೀರವನ್ನು ಬಿಟ್ಟು ಲೋಕಾಂತರಕ್ಕೆ ಹೋಗಬೇಕಾಗುವುದು. ಇದರಿಂದ ಅವರು ಮರಣವನ್ನು ತಪ್ಪಿಸಿಕೊಳ್ಳಲಾರರು. ಶರೀರಪತನ ಮಾತ್ರವು ಮರಣವೂ ಅಲ್ಲ. ಮುಕ್ತಿಯೂ ಅಲ್ಲ. ದೇಹಿಯು ಬ್ರಹ್ಮಪ್ರಾಪ್ತಿಗೆ ಕಾರಣವಾದ ಯೋಗವನ್ನು ತಿಳಿಯಲಾರದುದರಿಂದ ಭೋಗದಲ್ಲಿ ಪ್ರವರ್ತಿಸುವನು. ಆ ಭೋಗಪ್ರವೃತ್ತಿಯು ಬಹಳವಾಗಿ ಇಂದ್ರಿಯಗಳನ್ನು ಕಲಗಿಸಿ ಮೋಹಗೊಳಿಸುವುದು. ಮೋಹಾಕುಲಗಳಾದ ಆ ಇಂದ್ರಿಯಗಳು, ಯಾವಾಗಲೂ ಚಂಚಲವಿಷಯಗಳಿಗಾಗಿಯೇ ಮನಸ್ಸನ್ನು ಎಳೆದುಕೊಂಡುಹೋಗುವುವು. ಹೀಗೆ ಆಕರ್ಷಿಸಲ್ಪಟ್ಟ ಮನಸ್ಸುಳ್ಳವನು, ಯಾವಾಗಲೂ ಎಲ್ಲೆಲ್ಲಿಯೂ ವಿಷಯಗಳನ್ನೇ ಮನಸ್ಸಿನಲ್ಲಿ ನೆನೆಸುತ್ತ ಅವುಗಳ ಭೋಗದಲ್ಲಿ ಬೀಳುವನು. ಈ ವಿಷಯಚಿಂತೆಯೇ ಮೊದಲು ಲೋಕವನ್ನು ಕೆಡಿಸುವುದು. ಕಾಮ ಕ್ರೋಧಗಳು ಅದರ ಹಿಂದೆಯೇ ಬಂದು ಹಿಡಿಯುವುವು. ಇವೆರಡೂ ಮೂಢರಾದವರನ್ನು ಬಹುಬೇಗನೆ ಮೃತ್ಯುವಿನ ಕೈಗೆ ಒಪ್ಪಿಸುವುವು. ಧೀರರಾದರೋ ತಮ್ಮ ಧೈರ್ಯಗುಣದಿಂದ ಆ ಮೃತ್ಯುವನ್ನು ಜಯಿಸುವರು. ಧೀರನಾದವನು ಈ ವಿಷಯದೋಷಗಳನ್ನು ಯಾವಾಗಲೂ ಮನಸ್ಸಿನಲ್ಲಿ ಚೆನ್ನಾಗಿ ನೆನಪಿಟ್ಟುಕೊಂಡು, ಆ ದೋಷಗಳಿಂದ ತಾನು ಉದ್ಧೃತನಾಗುವ ಮಾರ್ಗದಲ್ಲಿಯೇ ದೃಷ್ಟಿಯಿಟ್ಟು, ಭೋಗವಿಷಯಗಳನ್ನು ಮನಸ್ಸಿನಲ್ಲಿಯೂ ನೆನೆಸದೆ ತೊರೆದುಬಿಡಬೇಕು. ಈ ವಿಧವಾಗಿ ಯಾವ ಪ್ರಾಜ್ಞನು ಕಾಮಗಳನ್ನು ಕೊಲ್ಲುವನೋ, ಅಂತವನನ್ನು ಅಜ್ಞಾನರೂಪವಾದ ಮೃತ್ಯುವು ಮೃತ್ಯುವಿನಂತೆ ಹಿಡಿದು ತಿನ್ನಲಾರದು. ಕಾಮಗಳನ್ನು ಅನುವರ್ತಿಸಿದವನು ಆ ಕಾಮಗಳೊಳಗೇ ನಶಿಸುವನು. ಕಾಮಗಳನ್ನು ಬಿಟ್ಟವನಾದರೋ, ತನ್ನಲ್ಲಿರುವ ಅಲ್ಪಸ್ವಲ್ಪ ಕರ್ಮದೋಷಗಳನ್ನೂ ನೀಗುವನು. ಪ್ರಾಣಿಗಳಿಗೆ ಅಜ್ಞಾನರೂಪವಾದ ಕತ್ತಲೆಯೇ ನರಕವಾಗಿ ಕಾಣುವುದು. ಮೋಹಕ್ಕೊಳಗಾಗಿ ಮೇಲೆಮೇಲೆ ಭೋಗಗಳನ್ನು ಹುಡುಕುವವನು, ಮೇಲೆ ಆಕಾಶವನ್ನೇ ನೋಡುತ್ತ ಹೋಗುವವನು ಹಳ್ಳಕ್ಕೆ ಬೀಳುವಂತೆ, ಅಧೋಗತಿಗೆ ಬರುವನು. ಮೋಹಕ್ಕೊಳಗಾಗದವನಿಗೆ ಮೃತ್ಯುವು ಹುಲ್ಲಿನಿಂದ ಮಾಡಿಟ್ಟ ಹುಲಿಯಂತೆ, ಬರೀ ಬಿಭೀಷಿಕೆಯೇ ಸರಿ! ಅದು ಏನೂ ಮಾಡಲಾರದು. ವಿಷಯಚಿಂತೆಯಿಲ್ಲದವನಿಗೆ

ಬೇರೆ ಯಾವ ಚಿಂತೆಯೂ ಇಲ್ಲ. ಅಂತವನಿಗೂ ಮೃತ್ಯುವು ತೃಣದಿಂದ ಮಾಡಿದ ಸರ್ಪದಂತೆಯೇ! ಅದು ಅವನನ್ನು ಏನೂ ಮಾಡಲಾರದು. ಓ ರಾಜೇಂದ್ರಾ! ಕ್ರೋಧ ಲೋಭಗಳಿಂದುಂಟಾದ ಮೋಹದಿಂದಲೂ, ಭಯದಿಂದಲೂ ಕೂಡಿದ ಆತ್ಮವೇ ಮೃತ್ಯುವೆಂದು ತಿಳಿ. ಈಗ ನಿನ್ನ ಶರೀರದಲ್ಲಿರುವುದು ಆ ಮೃತ್ಯುವೇ. ಮೃತ್ಯುವಿನ ಸ್ವರೂಪವು ಇಂತದೆಂದು ತಿಳಿದುಕೊಂಡು ಜ್ಞಾನಮಾರ್ಗದಲ್ಲಿದ್ದವನಿಗೆ ಮೃತ್ಯುಭಯವೆಲ್ಲಿಯದು? ಅವನ ವಿಷಯದಲ್ಲಿ ಮೃತ್ಯುವೇ ಮೃತ್ಯುವಿಗೀಡಾದ ಮನುಷ್ಯನಂತೆ ಭಯಪಟ್ಟು ನಶಿಸುವುದು" ಎಂದನು.

— ಕರ್ಮಕ್ಕಿಂತಲೂ ನೆಟ್ಟಗೆ ಮೋಕ್ಷಸಾಧಕವಾದ ಜ್ಞಾನವೇ ಮೇಲು. —

ಧೃತರಾಷ್ಟ್ರನು ತಿರುಗಿ ಆ ಮಹರ್ಷಿಯನ್ನು ಕುರಿತು "ಓ ಮಹರ್ಷೀ! ದ್ವಿಜರಿಗೆ ಯಜ್ಞಾದಿ ಕರ್ಮಗಳಿಂದ ಬಹಳ ಪರಿಶುದ್ಧವಾಗಿಯೂ, ಸನಾತನಗಳಾಗಿಯೂ ಇರುವ ಎಷ್ಟೋ ಉತ್ತಮ ಲೋಕಗಳುಂಟೆಂದು ಹೇಳುವರು. ವೇದಗಳೂ ಆ ಲೋಕಗಳನ್ನು ಮೋಕ್ಷಕ್ಕೆ ದಾರಿಗಳೆಂದು ಹೇಳುವುವು. ಅಂತಹ ಕರ್ಮವನ್ನು ಪಂಡಿತನಾದವನು ಹಿಡಿಯಬಾರದೆಂಬುದೇಕೆ?" ಎಂದನು. ಅದಕ್ಕಾ ಸನತ್ಸುಜಾತನು "ಓ ಮಹಾರಾಜಾ! ವಾಸ್ತವವೇ! ಕರ್ಮಮಾರ್ಗವನ್ನು ಹಿಡಿಯತಕ್ಕವರನ್ನು ಅಷ್ಟು ಬುದ್ಧಿಶಾಲಿಗಳೆಂದು ಹೇಳುವುದಕ್ಕಿಲ್ಲ. ವೇದಗಳೇನೋ ಅಲ್ಲಲ್ಲಿ ಕರ್ಮಫಲಗಳನ್ನೇ ಹೇಳುತ್ತಿರುವುವು. ಆ ಕರ್ಮಮಾರ್ಗವನ್ನನುಸರಿಸಿದವನು ತಿರುಗಿ ಆಯಾ ಫಲವನ್ನನುಭವಿಸಿದಮೇಲೆ ಹಿಂದೆ ಬರಬೇಕು. ಅಥವಾ ಆ ಪುಣ್ಯಲೋಕಗಳ ಮೂಲಕವಾಗಿ ಮೋಕ್ಷಕ್ಕೆ ದಾರಿಯನ್ನು ಹುಡುಕಬೇಕಾಗುವುದು. ಆದುದರಿಂದಲೇ ವಿದ್ವಾಂಸನು, ಬೇರೆ ಮಾರ್ಗಗಳನ್ನೆಲ್ಲ ಬಿಟ್ಟು, ಜ್ಞಾನಮಾರ್ಗದಿಂದ ನೆಟ್ಟಗೆ ಮೋಕ್ಷವನ್ನೇ ಹೊಂದುವುದಕ್ಕೆ ಯತ್ನಿಸುವನು" ಎಂದನು.

ತಿರುಗಿ ಧೃತರಾಷ್ಟ್ರನು "ಓ ಮುನೀಂದ್ರಾ! ಅನಾದಿಯಾಗಿ ಜನನವಿಲ್ಲದಿರುವ ಆತ್ಮನನ್ನು ಅಂತಹ ಸಂಸಾರದಲ್ಲಿ ಸಿಕ್ಕಿಸುವನಾರು? ಈ ಪ್ರಪಂಚವೆಲ್ಲ ಪರಮಾತ್ಮಸ್ವರೂಪವೇ ಆಗಿದ್ದಪಕ್ಷದಲ್ಲಿ, ಅಂಥವನಿಗೆ ಈ

ವ್ಯಾಪಾರದಿಂದಾಗಬೇಕಾದುದೇನು? ನಿರಪೇಕ್ಷನಾದ ಅವನಿಗೆ ಇದರಿಂದ ಸುಖವೇನು? ಇದನ್ನೆಲ್ಲ ನನಗೆ ಯಥಾವತ್ತಾಗಿ ತಿಳಿಸಬೇಕು" ಎಂದನು. ಅದಕ್ಕಾ ಸನತ್ಸುಜಾತನು "ರಾಜೇಂದ್ರಾ! ಈ ಆತ್ಮಕ್ಕೆ ಪ್ರಪಂಚರೂಪ ವನ್ನು ಹೇಳುವುದರಲ್ಲಿ ದೋಷವು ಏರ್ಪಡುವುದು. ಏಕೆಂದರೆ, ಆತ್ಮವೊಂದೇ ಎಂಬ ವಿಧಿಗೆ ಅದು ವಿರುದ್ಧವು. ಅನಾದಿಯಾದ ಅವಿದ್ಯೆಯ (ಮಾಯೆಯ) ಸಂಬಂಧದಿಂದ ಈ ನಿತ್ಯವಾದ ಆತ್ಮಗಳಿಗೆ ಭೇದವು ಏರ್ಪಡುವುದು. ಆ ಸಂಬಂಧವೇರ್ಪಟ್ಟರೂ, ಪರಮಾತ್ಮನ ಆಧಿಕ್ಯವೇನೂ ಸ್ವಲ್ಪವೂ ಕಡಿಮೆಯಾಗುವುದಿಲ್ಲ. ಮನುಷ್ಯದೇಹಗಳೆಲ್ಲ ಅನಾದಿ ಮಾಯಾಸಂಬಂಧದಿಂದಲೇ ಉಂಟಾದುವು. ಅನಾದಿಯೂ, ನಿತ್ಯವೂ ಆದ ಭಗವಂತನು ತನ್ನ ಮಾಯೆಯ ವ್ಯಾಪಾರದಿಂದಲೇ ಈ ಪ್ರಪಂಚವನ್ನುಂಟುಮಾಡುವನು. ಅದು ಅವನ ಅಸಾಧಾರಣಶಕ್ತಿಯೆಂದು ಗ್ರಹಿಸಲ್ಪಟ್ಟಿದೆ. ವೇದಗಳೂ ಈ ಅರ್ಥವನ್ನೇ ಉಪಪಾದಿಸುವುವು. ಈಶ್ವರನ ಆ ಶಕ್ತಿಗೂ, ಈಶ್ವರನ ಸ್ವರೂಪಕ್ಕೂ ವೇದಗಳೇ ಪ್ರಮಾಣಗಳು" ಎಂದನು.

ಆಗ ಧೃತರಾಷ್ಟ್ರನು "ಓ ಮುನೀಂದ್ರಾ! ಈ ಪ್ರಪಂಚದಲ್ಲಿ ಕೆಲವರು ಕರ್ಮಗಳನ್ನು ನಡೆಸುವರು. ಬೇರೆ ಕೆಲವರು ಸನ್ಯಾಸಯೋಗವನ್ನು ಹಿಡಿದು ಕರ್ಮಗಳನ್ನು ನಿರಾಕರಿಸುವರು. ಅದು ಹಾಗಿರಲಿ! ಕರ್ಮಮಾಡುವವರಲ್ಲಿಯೂ ಕೆಲವರು ಪುಣ್ಯವನ್ನೂ, ಕೆಲವರು ಪಾಪವನ್ನೂ ಮಾಡುವುದೇಕೆ? ಅಂತವರಲ್ಲಿ ಪುಣ್ಯವು ಪಾಪವನ್ನು ಅಡಗಿಸಬಲ್ಲುದೋ, ಪಾಪವು ಪುಣ್ಯವನ್ನಡಗಿಸಬಲ್ಲುದೋ ಎಂದು ನನಗೆ ಸಂದೇಹವಿದೆ. ಅದನ್ನು ನೀಗಿಸಬೇಕು" ಎಂದನು. ಅದಕ್ಕಾ ಮುನಿಯು "ರಾಜಾ! ಮೋಕ್ಷವಿಚಾರದಲ್ಲಿ ಸತ್ಕರ್ಮಗಳೂ, ಕರ್ಮತ್ಯಾಗರೂಪವಾದ ಸನ್ಯಾಸವೂ ಎರಡೂ ಸಹಕಾರಿಗಳಾಗಿದ್ದರೂ, ವಿದ್ವಾಂಸನಾದವನು ಜ್ಞಾನದಿಂದಲೇ ಉತ್ತಮಪುರುಷಾರ್ಥವನ್ನು ಪಡೆಯುವನು. ಹಾಗಿಲ್ಲದೆ ಕರ್ಮನಿಷ್ಠನಾದರೋ, ಕರ್ಮಗಳಿಂದ ಜ್ಞಾನಪರಿಪಾಕವನ್ನು ಹೊಂದಿ, ಅದರಮೇಲೆ ಆ ಜ್ಞಾನಪರಿಪಾಕದಿಂದ ಮುಕ್ತನಾಗುವನು. ಆದರೆ, ಈ ಕರ್ಮಮಾರ್ಗದಲ್ಲಿ ಹೋಗುವವನು ನಡುವೆ ಪಾಪಕಾರ್ಯಕ್ಕೂ ಬೀಳುವ ಸಂಭವವುಂಟು. ಶುಭಾಶುಭ

ಕರ್ಮಗಳಿಗೆಲ್ಲ ಆಯಾ ಕ್ಲೃಪ್ತಕಾಲದವರೆಗೆ ಫಲಾನುಭವವು ತಪ್ಪಿದುದ
ವಿದ್ವಾಂಸನಾದವನು ಕರ್ಮಮಾರ್ಗದಲ್ಲಿದ್ದರೂ ತನ್ನ ಪುಣ್ಯಕರ್ಮಗಳಿಂ
ರಾಗದ್ವೇಷಾದಿಗಳನ್ನು ನಿಗ್ರಹಿಸಿ, ಆ ಮೂಲಕವಾಗಿ ಮೋಕ್ಷಸಾಧನೆ ಪ
ಡಬಲ್ಲನು. ಆದುದರಿಂದ ದುಷ್ಕರ್ಮಕ್ಕಿಂತಲೂ ಸತ್ಕರ್ಮವೇ ಪ್ರ
ವಾದುದೆಂದು ತಿಳಿ" ಎಂದನು.

— ಕರ್ಮಾನುಗುಣಗಳಾದ ಲೋಪಗಳು. —

ಆಗ ಧೃತರಾಷ್ಟ್ರನು "ಎಲೈ ವಿದ್ವಾಂಸನೇ! ಅವರವರ ಕರ್ಮ
ಗಳಿಗೆ ಅನುಗುಣವಾಗಿ, ಬೇರೆಬೇರೆ ಲೋಕಗಳುಂಟೆಂದು ಹೇಳುವರಲ್ಲ
ಸ್ವಧರ್ಮವನ್ನನುಸರಿಸಿ, ನಿಷ್ಕಾಮ ಕರ್ಮಗಳನ್ನು ನಡೆಸಿದವರಿಗೆ ಉಂ
ಗತಕ್ಕ ಉತ್ತಮ ಗತಿಗಳಾವುವೆಂಬುದನ್ನು ತಿಳಿಸಬೇಕು. ಕಾಮ್ಯಕವ
ಗಳ ವಿಚಾರವನ್ನು ಕೇಳುವುದರಲ್ಲಿ ಈಗ ನನಗೇನೂ ಅಕ್ಕರೆಯಿಲ್ಲ
ಎಂದನು. ಅದಕ್ಕಾ ಮುನಿಯು "ಮಹಾರಾಜಾ! ಬಲಶಾಲಿಗಳು
ದಲ್ಲಿ ಹೇಗೋ ಹಾಗೆ, ಯೋಗಗಳಲ್ಲಿಯೂ ಯಾವನು ತಾನೇ ಮೇಲೆ
ಸ್ಪರ್ಧೆಯುಳ್ಳವನಾಗಿ ಅದನ್ನು ನಡೆಸುವನೋ ಅಂತವನು ಸತ್ಯಲೋ
ದಲ್ಲಿ ಬೆಳಗುವನು. ವೇದೋಕ್ತವಾದ ಯಜ್ಞಾದಿ ಕರ್ಮವನ್ನು ಸ್ವಧ
ಳುವಾಗಿ ನಡೆಸುವವನು, ಆ ಕರ್ಮಜನ್ಯವಾದ ಜ್ಞಾನದ ಬಲದಿಂದ
ಲೋಕವನ್ನು ಬಿಟ್ಟಮೇಲೆ, ದೇವತೆಗಳ ಸ್ಥಾನಕ್ಕೆಮಾತ್ರ ಸೇರುವ
ವೇದಜ್ಞರು ಯಜ್ಞಯಾಗಾದಿ ಕರ್ಮಗಳು ಅವಶ್ಯಕರ್ತವ್ಯಗಳೆಂದ
ಮುಕ್ತಿಸಾಧಕಗಳೆಂದೂ, ಅದನ್ನು ಮಾಡದವರು ಪಾಪಕ್ಕೊಳಗಾಗುವ
ದೂ ಹೇಳುವರು. ಇವರೂ ಆತ್ಮೋದ್ಧರಣವನ್ನೇ ಬಯಸುವವರಾದರ
ಈ ಬಾಹ್ಯಕರ್ಮಗಳಲ್ಲಿ ಶ್ರದ್ಧಾಳುಗಳಾದ. ಇವರನ್ನು ಅಷ್ಟು ಮೇಲೆಂ
ತಿಳಿಯಬಾರದು.

— ಯೋಗನಿಷ್ಠನು ಅನುಸರಿಸಬೇಕಾದ ಧರ್ಮಗಳು. —

ಯೋಗವನ್ನು ಹಿಡಿಯುವ ಬ್ರಾಹ್ಮಣನು, ವರ್ಷಾಕಾಲದಲ್ಲಿ ತ
ಜಲಸಮೃದ್ಧವಾದ ಸ್ಥಳದಂತೆ, ತನಗೆ ಎಲ್ಲಿ ಪವಿತ್ರವಾದ ಅನ್ನಪಾನ

ಸುಲಭವಾಗಿ ಸಿಕ್ಕುವುವೋ, ಅಂತಹ ಸ್ಥಳವನ್ನೇ ಆಶ್ರಯಿಸಬೇಕು. ಅದನ್ನು ಬಿಟ್ಟು ಇತರರಿಗೆ ಕಷ್ಟವನ್ನು ಕೊಡತಕ್ಕ ಸ್ಥಳದಲ್ಲಿ ಜೀವಿಸಬಾರದು. ಮತ್ತು ಹಸಿವುಬಾಯಾರಿಕೆಗಳಿಗಾಗಿ ಕಷ್ಟಪಡಲೂ ಬಾರದು. ತನ್ನ ಮಹಿಮೆಯನ್ನು ತಾನು ತೋರ್ಪಡಿಸಿಕೊಳ್ಳದಿರುವುದರೊಡನೆ, ಎಲ್ಲಿ ತನ್ನನ್ನು ಇತರಜನರು ಬಹಳವಾಗಿ ಗೌರವಿಸದಿರುವರೋ, ಮತ್ತು ತನಗೆ ಯಾರು ವಿಶೇಷವಾಗಿ ಭಯಕ್ಕೆ ಕಾರಣಭೂತರಾಗಿರುವರೋ ಅಂತವರೇ ತನಗೆ ಕ್ಷೇಮಕಾರಿಗಳೆಂದು ತಿಳಿಯಬೇಕು. ಹಾಗಿಲ್ಲದೆ ತನ್ನನ್ನು ಮುಖಸ್ತುತಿ ಮಾಡುವವರು ತನಗೆ ಕ್ಷೇಮಕಾರಿಗಳಲ್ಲ. ತನ್ನ ಮಹಿಮೆಯನ್ನು ಹೇಳಿಕೊಂಡರೂ ಯಾವನು ಅದಕ್ಕಾಗಿ ಕೊರಗುವುದಿಲ್ಲವೋ, ಯಾವನು ಬ್ರಾಹ್ಮಣರ ಸ್ವತ್ತನ್ನು ಅಪಹರಿಸಿ ಅನುಭವಿಸುವುದಿಲ್ಲವೋ, ಅಂತವರ ಅನ್ನವೇ ಯೋಗ್ಯವಾದುದು. ದರ್ಭೆ, ನಾರುಬಟ್ಟೆ, ವಸ್ತ್ರ ಮುಂತಾದ ವಸ್ತುಗಳೇ ಯೋಗಿಯಾದವನ ಸ್ವತ್ತುಗಳು. ನಾಯಿಯು ತಾನು ಕಕ್ಕಿದ ಪದಾರ್ಥವನ್ನೇ ತಿನ್ನುವಂತೆ, ತನ್ನ ಮಹಿಮೆಯನ್ನು ಹೊರಪಡಿಸಿ ಅದರಿಂದ ಜೀವನವನ್ನು ಪಡೆಯಬೇಕೆಂಬ ಯೋಗಿಯು ನಾಯಿಗೆ ಸಮಾನನು.

ಬ್ರಹ್ಮಜ್ಞನಾದವನು ತನ್ನ ಕಾರ್ಯವು ತನ್ನ ಬಂಧುಗಳಿಗಾದರೂ ತಿಳಿಯಬೇಕೆಂದು ಬಯಸಬಾರದು. ಹೀಗೆಯೇ ತನ್ನವರ ನಡುವೆ ಇದ್ದಾಗಲೂ ನಿರಪೇಕ್ಷನಾಗಿರಬೇಕು. ಹಾಗಿಲ್ಲದ ಯಾವಬ್ರಾಹ್ಮಣನು ತಾನೇ ಲಿಂಗಶರೀರವಿಲ್ಲದೆ, ಅಚಲನೂ, ಶುದ್ಧನೂ, ದ್ವಂದ್ವಾತೀತನೂ ಆದ ಅಂತರಾತ್ಮನನ್ನು ಹೇಗೆತಾನೇ ತಿಳಿಯಬಲ್ಲನು? ತಾನೊಂದು ವಿಧವಾಗಿದ್ದುಕೊಂಡು, ತನ್ನನ್ನು ಬೇರೆವಿಧವಾಗಿ ತಿಳಿಯತಕ್ಕವನು ಆತ್ಮಾಪಹಾರಿಯಾದ ಚೋರನು. ಇಂತವನು ಮಾಡದ ಪಾಪವಾವುದುಂಟು? ಬ್ರಾಹ್ಮಣನಾದವನು ಅಲಸನಾಗಿರಬಾರದು. ಇತರರಿಂದ ಸಂಗ್ರಹಿಸುವುದಕ್ಕೆ ಆಶಿಪಡಬಾರದು. ಸಾಧುಸಮ್ಮತನಾಗಿರಬೇಕು. ಮನಸ್ಸು ಕಲಗದೆ ಶಾಂತನಾಗಿರಬೇಕು. ಬ್ರಹ್ಮವಿತ್ತಾಗಿ, ವಿದ್ವಾಂಸನಾಗಿ, ತಾನು ಶಿಷ್ಟನಾಗಿದ್ದರೂ ಅಶಿಷ್ಟನಂತೆಯೇ ಕಾಣಿಸಿಕೊಳ್ಳಬೇಕು. ಅಂತವನೇ ಬ್ರಹ್ಮಜ್ಞಾನವನ್ನು ಪಡೆದ ಬ್ರಾಹ್ಮಣನೆನಿಸುವನು. ಯಾರು ಮಾನವಭಾಗ್ಯದಲ್ಲಿ

ಮೇಲೆನಿಸದೆ ಯಜ್ಞಯಾಗಾದಿ ಸತ್ಕರ್ಮಗಳಲ್ಲಿ ಮೇಲೆನಿಸಿಕೊಳ್ಳುವರೋ, ಅಂತವರೇ ಲೋಕದಲ್ಲಿ ದುರ್ಜಯರು. ಅವರನ್ನೇ ಬ್ರಹ್ಮಸ್ವರೂಪವೆಂದು ತಿಳಿಯಬೇಕು. ಇಷ್ಟವರವನ್ನು ಕೊಡತಕ್ಕ ಎಲ್ಲಾ ದೇವತೆಗಳ ಅನುಗ್ರಹ ವನ್ನು ಪಡೆದವನಾದರೂ ಬಹ್ಮಜ್ಞಾನಿಗೆ ಸಮಾನನಲ್ಲ. ಆ ಉಪಾಸ್ಯ ದೇವ ತೆಗಳೂ ಬ್ರಹ್ಮವಿತ್ತಿಗೆ ಸಮಾನರಲ್ಲ. ತಾನಾಗಿ ಪ್ರಯತ್ನಪಡದಿದ್ದಾಗಲೂ, ಸಾಧುಗಳು ತನ್ನನ್ನು ಪೂಜಿಸಿದರೆ, ಅದರಿಂದ ತಾನು ಪೂಜಿತನೆಂದು ಬ್ರಹ್ಮಜ್ಞಾನಿಯು ತಿಳಿಯಬಾರದು. ಅವರು ತನ್ನನ್ನು ಅವಮತಿಸಿದಾಗ ಅದಕ್ಕಾಗಿ ಕೊರಗಲೂ ಬಾರದು. ಇತರರಿಂದ ಸನ್ಮಾನಿಸಲ್ಪಟ್ಟಾಗ ನಿಮೇಷೋನ್ಮೇಷಗಳಂತೆ (ಎವೆಯಾಟದಂತೆ) ಮಾನಾಪಮಾನಗಳು ಲೋ ಕದಲ್ಲಿ ಸ್ವಭಾವಸಿದ್ಧವಾದುದೆಂದು ತಿಳಿದು ನಿಶ್ಚಲನಾಗಿರಬೇಕು. ತನಗೆ ಗೌರವವು ದೊರೆಯದಿದ್ದಾಗ "ಲೋಕದಲ್ಲಿ ಅಧಾರ್ಮಿಕರೂ, ಮೂಢ ರೂ, ವಂಚಕರೂ ಪೂಜ್ಯರನ್ನು ಪೂಜಿಸದೆ ಬಿಡುವುದು ಸಹಜವೇ" ಎಂ ದು ಸಮಾಧಾನವನ್ನು ತಂದುಕೊಳ್ಳಬೇಕು. ಮಾನವೂ, ಮೌನವೂ ಯಾ ವಾಗಲೂ ಒಂದು ಕಡೆಯಲ್ಲಿ ಕಲೆತಿರುವುದಿಲ್ಲ. ಆದುದರಿಂದ ವಿದ್ವಾಂಸರು, ಮಾನಕ್ಕೆ ಈ ಲೋಕವೂ, ಮೌನಕ್ಕೆ ಪರಲೋಕವೂ ಏರ್ಪಟ್ಟಿದೆಂದು ನಿಶ್ಚಯಿಸಬೇಕು. ಐಶ್ವರ್ಯವೆಂಬುದು ಮಾನಕ್ಕಾಗಿ ಏರ್ಪಟ್ಟಿದು. ಆ ಮಾನವು ಮೋಕ್ಷಕ್ಕೆ ವಿರೋಧಿ. ಮೋಕ್ಷಕಾರಣವಾದ ಬ್ರಾಹ್ಮೈಶ್ವರ್ಯ ವೆಂಬುದು ಪ್ರಜ್ಞಾಹೀನರಿಗೆ ದುರ್ಲಭವು. ಓ ರಾಜಾ! ಆ ಮೋಕ್ಷೈಶ್ವರ್ಯ ಕ್ಕೆ, ಸತ್ಯ, ಋಜುತ್ವ, ಲಜ್ಜೆ, ಇಂದ್ರಿಯನಿಗ್ರಹ, ಶುಚಿತ್ವ, ವಿದ್ಯೆ ಎಂಬೀ ಆರು ಮಾರ್ಗಗಳುಂಟೆಂದು ಸತ್ಪುರುಷರು ಹೇಳುವರು. ಮಾನಮೋಹ ಗಳನ್ನು ನೀಗಿಸತಕ್ಕ ಇವು ಹಲವು ವಿಧವಾಗಿರುವುದರಿಂದ, ಇವುಗಳನ್ನು ಕಾಪಾಡಿಡುವುದೂ ಕಷ್ಟಕಾರ್ಯವೇ!

ಇದು ನಾಲ್ವತ್ತೆರಡನೆಯ ಅಧ್ಯಾಯವು.

## ಧೃತರಾಷ್ಟ್ರನಿಗೆ ಸನತ್ಸುಜಾತನ ತತ್ತ್ವೋಪದೇಶಗಳು.

### — ವೇದಗಳ ಪ್ರಯೋಜನವು. —

ತಿರುಗಿ ಧೃತರಾಷ್ಟ್ರನು ಸನತ್ಸುಜಾತನನ್ನು ಕುರಿತು "ಮೌನೀಂದ್ರಾ! ನೀನು ಹೇಳಿದ ಮೌನ (ಮುನಿಧರ್ಮ) ವೆಂಬುದಕ್ಕೆ ಅಧಿಕಾರಿಗಳಾರು? ಆ ಮೌನದ ಸ್ವರೂಪವೆಂತಹದು? ಮೌನದ ತತ್ವವನ್ನು ನನಗೆ ತಿಳಿಸಬೇಕು. ವಿದ್ವಾಂಸನು ಮೌನದಿಂದ ಬ್ರಹ್ಮಜ್ಞಾನವನ್ನು ಹೊಂದಬಲ್ಲನೆ? ಆ ಮೌನವನ್ನು ಹೇಗೆ ಆಚರಿಸುವರು?" ಎಂದನು. ಅದಕ್ಕಾ ಮುನಿಯು "ವಾಗ್ರೂಪಗಳಾದ ವೇದಗಳೂ, ಜ್ಞಾನರೂಪವಾದ ಮನಸ್ಸೂ, ಆ ಬ್ರಹ್ಮನನ್ನು ಪ್ರವೇಶಿಸಲಾರದ ಕಾರಣದಿಂದಲೇ ಅದು ಮೌನವೆನಿಸುವುದು. ಎಲ್ಲಿಂದ ವೇದಶಬ್ದಗಳುಂಟಾಗಿದೆಯೋ, ಯಾವನು ವೇದಶಬ್ದದಿಂದಲೇ ಪ್ರತಿಪಾದ್ಯನೋ, ಪ್ರಣವಸ್ವರೂಪನಾಗಿ ಪ್ರಕಾಶಿಸುವ ಪರಬ್ರಹ್ಮಸ್ವರೂಪವೇ ಮೌನವು" ಎಂದನು.

ತಿರುಗಿ ಧೃತರಾಷ್ಟ್ರನು "ಮಹರ್ಷೀ! ಋಕ್ಕು, ಯಜುಸ್ಸು, ಸಾಮವೆಂಬೀ ವೇದಗಳನ್ನು ಚೆನ್ನಾಗಿ ತಿಳಿದ ಬ್ರಾಹ್ಮಣನೊಬ್ಬನು ಪಾಪಗಳನ್ನು ಮಾಡಿದರೆ, ಅವನು ಆ ಪಾಪಗಳಿಂದ ಸಂಬಂಧಿಸಲ್ಪಡುವನೇ? ಅಥವಾ ಇಲ್ಲವೆ? ಈ ನನ್ನ ಸಂದೇಹವನ್ನು ಪರಿಹರಿಸಬೇಕು" ಎನಲು, ಸನತ್ಸುಜಾತನು "ರಾಜಾ! ಮನೋವಾಕ್ಕಾಯಗಳನ್ನು ಅಡಗಿಸಲು ಸಾಮರ್ಥ್ಯವಿಲ್ಲದೆ, ಪಾಪಕರ್ಮವನ್ನು ಮಾಡಿದ ಬ್ರಾಹ್ಮಣನನ್ನು ಅವನ ವೇದಾಧ್ಯಯನಗಳೊಂದೂ ಆ ಪಾಪದಿಂದ ತಪ್ಪಿಸಲಾರವು. ನಾನು ಸುಳ್ಳಾಡುವೆನೆಂದು ತಿಳಿಯಬೇಡ! ವಂಚನಾಸ್ವಭಾವವುಳ್ಳ ಕಪಟಿಯನ್ನು ವೇದಗಳಾವುವೂ ಉದ್ಧರಿಸಲಾರವು. ರೆಕ್ಕೆಬೆಳೆದ ಪಕ್ಷಿಗಳು ಒಡನೆಯೇ ಗೂಡನ್ನು ಬಿಟ್ಟುಬಿಡುವಂತೆ, ಅವನ ಅವಸಾನಕಾಲದಲ್ಲಿ ವೇದಗಳೂ ಬಿಟ್ಟೋಡುವುವು" ಎಂದನು.

ತಿರುಗಿ ಧೃತರಾಷ್ಟ್ರನು "ಓ ಮಹಾತ್ಮಾ! ವೇದಗಳಿಗೆ ತನ್ನನ್ನು ಉಪಾಸನೆಮಾಡಿದವರನ್ನು ಪಾಪದಿಂದ ಕಾಯುವುದಕ್ಕೆ ಶಕ್ತಿಯಿಲ್ಲದಿದ್ದ

ಪಕ್ಷದಲ್ಲಿ, ಬ್ರಾಹ್ಮಣರು ಆ ವೇದಗಳ ಪುನಶ್ಚರಣೆಗಾಗಿ ಕಂಠಶೋಷಣೆ ಮಾಡುವುದೇಕೆ? ಬ್ರಾಹ್ಮಣರು ವೇದಗಳನ್ನು ಅಷ್ಟು ಹೊಗಳುವು ದೇಕೆ? ಎನಲು, ಸನತ್ಸುಜಾತನು “ ರಾಜಾ! ಆ ಪರಮಾತ್ಮನ ನಾಮ ರೂಪ ಗುಣಾದಿಗಳನ್ನು ವರ್ಣಿಸಿ, ಈ ಪ್ರಪಂಚವೆಲ್ಲ ಅವನ ಸ್ವರೂಪ ದಿಂದಲೇ ಬೆಳಗುತ್ತಿದೆಯೆಂಬುದನ್ನು ನಿರೂಪಿಸುವುದಕ್ಕಾಗಿ ವೇದಗಳೇ ಹೊರತು, ತಮ್ಮನ್ನು ಬಾಯಿಪಾಠಮಾಡಿದ ಬ್ರಾಹ್ಮಣನ ಪಾಪವನ್ನು ನೀಗಿಸುವುದು ಅವುಗಳ ಪ್ರಧಾನಕಾರ್ಯವಲ್ಲ. ಮಹರ್ಷಿಗಳು ಕೂಡ ಈ ಪ್ರಪಂಚವೆಲ್ಲ ಅವನಿಂದ ಭಿನ್ನವಾಗಿ, ಅವನಿಂದ ವ್ಯಾಪ್ತವಾದುದೆಂದು ಹೇಳುವರು. ಆ ಬ್ರಹ್ಮಪ್ರಾಪ್ತಿಗಾಗಿಯೇ ವೇದಗಳಲ್ಲಿ, ತಪಸ್ಸು, ಯಾಗ ಮೊದಲಾದುವೆಲ್ಲ ಪ್ರತಿಪಾದಿಸಲ್ಪಟ್ಟಿವೆ. ವಿವೇಕಿಯಾದವನು ವೇದೋ ಕ್ತಗಳಾದ ಆ ತಪಸ್ಸು ಮತ್ತು ಯಜ್ಞಾದಿಕರ್ಮಗಳು ಇವೆರಡನ್ನೂ ನಡೆ ಸಿಯೇ ಪುಣ್ಯಭಾಗಿಯಾಗುವನು. ಆ ಪುಣ್ಯದಿಂದ ಪಾಪವನ್ನು ನಿಗ್ರಹಿಸಿ, ಆಮೇಲೆ ಆತ್ಮವಿಷಯವಾದ ಜ್ಞಾನಪ್ರಕಾಶವನ್ನು ಹೊಂದುವನು. ಹೀಗಿ ಲ್ಲದೆ ಬೇರೆ (ಪ್ರವೃತ್ತಿ) ಮಾರ್ಗಕ್ಕೆ ಬಿದ್ದವನು, ಕರ್ಮಫಲಗಳಿಂದ ಧರ್ಮ ಕಾಮಾರ್ಥಗಳೆಂಬ ತ್ರಿವರ್ಗದಲ್ಲಿ ಸಿಕ್ಕಿಬೀಳುವನು. ದೇಹಿಯು ಇಲ್ಲಿ ಮಾ ಡಿದ ಕರ್ಮಗಳ ಫಲವನ್ನೆಲ್ಲ ಬುತ್ತಿಕಟ್ಟಿಕೊಂಡು ಹೋಗಿ ಪರಲೋಕ ದಲ್ಲಿ ಅನುಭವಿಸಿ, ಆ ಬುತ್ತಿಯನ್ನು ತಿಂದು ತೀರಿಸಿದಮೇಲೆ, ತಿರುಗಿ ಇದೇ ದಾರಿಯನ್ನು ಹಿಡಿದು ಹಿಂತಿರುಗಿ ಕರ್ಮಲೋಕಕ್ಕೆ ಬರುವನು. ಕರ್ಮ ಗಳನ್ನು ಮಾಡಬೇಕಾದುದು ಇಲ್ಲಿ! ಅದಕ್ಕೆ ಫಲಾನುಭವವು ಪರಲೋಕ ದಲ್ಲಿ! ಬ್ರಹ್ಮವಿತ್ತುಗಳಿಗಾದರೋ, ಈ ಲೋಕವೇ ಅವರ ತಪಸ್ಸನ್ನು ಅಭಿ ವೃದ್ಧಿಗೊಳಿಸುವುದಕ್ಕಾಗಿ ಏರ್ಪಟ್ಟಿವೆ. ಬ್ರಹ್ಮವಿತ್ತುಗಳಿಗೆ ಅವರು ಮಾಡಿದ ತಪಸ್ಸು ತಾನಾಗಿಯೇ ಮೇಲೆಮೇಲೆ ಅಭಿವೃದ್ಧಿಹೊಂದುವುದು. ಬ್ರಹ್ಮ ಜ್ಞಾನವಿಲ್ಲದ ಇತರರಿಗಾದರೋ ಆ ತಪಸ್ಸು ಮಾಡಿದಷ್ಟರಲ್ಲಿಯೇ ನಿಲ್ಲು ವುದು. ಫಲಾಪೇಕ್ಷೆಯಿಲ್ಲದೆ ಮಾಡತಕ್ಕ ಕೇವಲವಾದ ತಪಸ್ಸೇ ಮೇಲೆ ಮೇಲೆ ಅತ್ಯಧಿಕವಾಗಿ ಬೆಳೆಯುತ್ತಲೇ ಹೋಗುವುದು. ಇದೇ ಸಮೃದ್ಧ ವಾದ ಪೂರ್ಣತಪಸ್ಸೆನಿಸುವುದು ” ಎಂದನು.

— ವಿವಿಧ ತಪಸ್ಸುಗಳು. —

ಧೃತರಾಷ್ಟ್ರನು ತಿರುಗಿ "ಓ ಮುನೀಂದ್ರಾ! ಸಮೃದ್ಧವಾದ ತಪಸ್ಸೆಂಬುದು ಯಾವುದು? ಕೇವಲ ತಪಸ್ಸೆಂದರೇನು? ಕೆಲವರಿಗೆ ತಪಸ್ಸು ಉತ್ತಮಪುರುಷಾರ್ಥವನ್ನು ಕೊಡುವುದಕ್ಕೂ, ಬೇರೆ ಕೆಲವರಿಗೆ ಆ ತಪಸ್ಸು ಅಷ್ಟು ಉತ್ತಮಫಲಕಾರಿಯಾಗದಿರುವುದಕ್ಕೂ ಕಾರಣವೇನೆಂಬುದನ್ನು ನನಗೆ ತಿಳಿಯುವಂತೆ ಹೇಳಬೇಕು" ಎಂದನು. ಅದಕ್ಕಾ ಮಹರ್ಷಿಯು "ಧೃತರಾಷ್ಟ್ರಾ! ಕೇವಲವೆಂದೂ, ಖುದ್ಧವೆಂದೂ, ಸಮೃದ್ಧವೆಂದೂ ತಪಸ್ಸಿನಲ್ಲಿ ಮೂರು ಬಗೆ. ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಕೂಡಿದ ಶುದ್ಧವಾದ ನಿಷ್ಕಾಮವಾದ ತಪಸ್ಸು ಯಾವುದೋ, ಅದೇ ಕೇವಲತಪಸ್ಸು. ಇದು ಕೈವಲ್ಯಸಾಧಕವಾದುದರಿಂದ ಕೇವಲವೆನಿಸುವುದು. ಇದೇ ಸಕಾಮವಾದರೆ ಸಮೃದ್ಧವೆನಿಸುವುದು. ಕೇವಲ ಡಂಭಾರ್ಥವಾದುದು ಖುದ್ಧವು. ಕೇವಲತಪಸ್ಸಿನಿಂದಲೇ ವೇದವಿತ್ತುಗಳು ಅಮೃತವೆನಿಸಿದ ಪರಮಾತ್ಮನನ್ನು ಪಡೆಯುವರು. ಅಂತವರೇ ಮರಣವನ್ನು ಜಯಿಸುವರು. ತಪಸ್ಸೇ ಪ್ರಪಂಚವನ್ನು ಅಭಿವೃದ್ಧಿಗೊಳಿಸುವುದು. ಇವುಗಳೊಳಗೆಲ್ಲ ನಿಷ್ಕಾಮತಪಸ್ಸೇ ಉತ್ತಮವು" ಎಂದನು.

— ತಪಸ್ಸಿನಲ್ಲಿ ಗುಣದೋಷಗಳು. —

ತಿರುಗಿ ಧೃತರಾಷ್ಟ್ರನು "ಓ ಮಹರ್ಷೀ! ಬ್ರಹ್ಮಸಾಕ್ಷಾತ್ಕಾರಕಾರಣವಾದ ತಪಸ್ಸೇ ಕಶ್ಮಲವಿಲ್ಲದ ಕೇವಲ ತಪಸ್ಸೆಂದು ಹೇಳಿದೆಯಲ್ಲವೆ? ತಪಸ್ಸಿನ ಕಶ್ಮಲಗಳೆಂದರೆ ಯಾವುವು?" ಎನಲು, ಅದಕ್ಕಾ ಸನತ್ಸುಜಾತನು "ದ್ವಿಜನು ಆಚರಿಸತಕ್ಕ ತಪಸ್ಸಿಗೆ ಕೋಪವೇ ಮೊದಲಾದ ಹನ್ನೆರಡು ದೋಷಗಳೂ, ಬೇರೆ ಹದಿಮೂರು ಕ್ರೂರತರದೋಷಗಳೂ ಉಂಟು. ಕೇವಲ ತಪಸ್ಸಿಗಾದರೋ ಧರ್ಮವೇ ಮೊದಲಾದ ಹನ್ನೆರಡು ಗುಣಗಳು ಪೋಷಕಗಳಾಗಿವೆಯೆಂದು ಮನು ಮೊದಲಾದ ವಂಶಕರ್ತರ ಶಾಸ್ತ್ರದಿಂದ ತಿಳಿದುಬರುತ್ತವೆ. ಮನುಷ್ಯನು ಕ್ರೋಧ, ಕಾಮ, ಲೋಭ, ಮೋಹ, ಎಷ್ಟು ಬಂದರೂ ತೃಪ್ತಿಯಿಲ್ಲದಿರುವುದು, ದಯೆಯಿಲ್ಲದಿರುವಿಕೆ, ಅಸೂಯೆ, ಗರ್ವ, ದುಃಖ, ಆಶೆ, ಈರ್ಷ್ಯೆ, ಜುಗುಪ್ಸೆ, ಇವುಗಳನ್ನು ವರ್ಜಿಸಬೇಕು. ಅಷ್ಟೇಕೆ?

ಇವುಗಳಲ್ಲಿ ಒಂದೊಂದು ಮಾತ್ರವಾದರೂ ಬೇಡನು ಮೃಗವನ್ನು ಹೊಂಚು ಹಾಕಿ ಹಿಡಿಯುವಂತೆ ಮನುಷ್ಯನ ದುರ್ಬಲತೆಯನ್ನೇ ನೋಡಿಕೊಂಡು ಫಕ್ಕನೆ ಬಂದುಹಿಡಿಯುವುವು. ತನ್ನ ಮೇಲ್ಮೆಯನ್ನು ತಾನೇ ಹೊಗಳಿಕೊಳ್ಳುವುದು, ಅತ್ಯಾಶೆಪಡುವುದು, ಭೋಗಾಸಕ್ತಿ, ಆಶೆ, ಗರ್ವದಿಂದ ಇತರರನ್ನು ಅಲಕ್ಷ್ಯಮಾಡುವುದು, ಸ್ಥಿರವಾದ ಕೋಪವನ್ನಿಡುವುದು, ಚಪಲತೆ, ನಿಷ್ಕಾರಣಕ್ರೋಧ, ಈ ಆರು ಬಗೆಯ ದುರ್ಗುಣವುಳ್ಳವರು ಇಹಪರಗಳೆರಡಕ್ಕೂ ಹಾನಿಯನ್ನು ತಂದುಕೊಳ್ಳುವ ಆ ಪಾಪಗಳಲ್ಲಿಯೇ ಯಾವಾಗಲೂ ಮುಳುಗಿರುವರು. ಭೋಗವನ್ನೇ ತನ್ನ ಜೀವನದ ಮುಖ್ಯಪ್ರಯೋಜನವನ್ನಾಗಿ ಎಣಿಸುವವನೂ, ಅತ್ಯಂತ ಸ್ವಾಭಿಮಾನವುಳ್ಳವನೂ, ಇತರರಿಗೆ ಕೊಟ್ಟು ಆಮೇಲೆ ಪಶ್ಚಾತ್ತಾಪಪಡುವವನೂ, ಪ್ರಾಣವೇ ಹೋಗುವ ಸಂಭವವಿದ್ದರೂ ಹಣವನ್ನು ಕೈಬಿಡಲಾರದ ಪರಮ ಲೋಭಿಯೂ, ಪ್ರಜೆಗಳಿಂದ ಅನ್ಯಾಯವಾಗಿ ಹೆಚ್ಚು ಹಣವನ್ನು ತೆಗೆಯತಕ್ಕವನೂ, ಇತರರಿಗೆ ಉಂಟಾದ ಭಂಗವನ್ನು ನೋಡಿ ಸಂತೋಷಿಸುವವನೂ, ಶಾಸ್ತ್ರೋಕ್ತವಾಗಿ ಕೈಹಿಡಿದ ಹೆಂಡತಿಯನ್ನು ದ್ವೇಷಿಸುವವನೂ, ಈ ಏಳುಮಂದಿಯೂ ಕ್ರೂರಿಗಳೆಂದು ಕರೆಯಲ್ಪಡುವರು. ಹೀಗೆ ಮೇಲ್ಕಂಡ ಹದಿಮೂರು ಬಗೆಯ ದುಸ್ವಭಾವಗಳೂ ತಪಸ್ಸಿನ ಕ್ರೂರದೋಷಗಳೆನಿಸುವುವು. ಧರ್ಮ, ಸತ್ಯ, ಇಂದ್ರಿಯನಿಗ್ರಹ, ದೃಢತಪಸ್ಸು, ಇತರರ ಮೇಲ್ಮೆಗೆ ಸಂತೋಷಿಸುವುದು, ಲಜ್ಜೆ, ತಾಳ್ಮೆ, ಇತರರನ್ನು ದ್ವೇಷಿಸದೆ ಪ್ರೀತಿಸುವುದು, ಯಜ್ಞ, ದಾನ, ಧೈರ್ಯ, ಶಾಸ್ತ್ರಶ್ರವಣ, ಇವು ಹನ್ನೆರಡೂ ಬ್ರಹ್ಮವಿತ್ತಾದ ಬ್ರಾಹ್ಮಣನಿಗೆ ಏರ್ಪಟ್ಟ ತಪೋವ್ರತಗಳು. ಯಾವನು ಈ ಹನ್ನೆರಡು ಗುಣಗಳನ್ನು ಸಾಧಿಸಬಲ್ಲನೋ, ಅವನು ಈ ಸಮಸ್ತಭೂಮಿಯನ್ನೂ ಅಡಗಿಸಿ ಆಳಬಲ್ಲನು. ಈ ಗುಣಗಳಲ್ಲಿ ಮೂರನ್ನಾಗಲಿ, ಎರಡನ್ನಾಗಲಿ, ಕೊನೆಗೆ ಒಂದನ್ನಾಗಲಿ, ಕ್ರಮವಾಗಿ ಹೊಂದಿದ್ದರೂ, ಅವನನ್ನು ಭಾಗ್ಯಶಾಲಿಯೆಂದೇ ತಿಳಿಯಬೇಕು. ಕರ್ಮೇಂದ್ರಿಯಗಳನ್ನಡಗಿಸಿಡುವುದು, ಕರ್ಮಫಲತ್ಯಾಗ, ಎಚ್ಚರ ತಪ್ಪದಿರುವುದು, (ದಮ, ತ್ಯಾಗ, ಅಪ್ರಮಾದ) ಇವುಗಳಲ್ಲಿಯೇ ಮೋಕ್ಷವು ನೆಲೆಗೊಂಡಿರುವುದು. ವಿದ್ವಾಂಸರು ಇವುಗಳನ್ನೇ ಸತ್ಯಪ್ರಧಾನಗಳೆಂದು ಹೇಳುವರು.

ದಮವು ಹದಿನೆಂಟು ದೋಷಗಳಿಂದ ಕೆಟ್ಟುಹೋಗತಕ್ಕುದಾಗಿದೆ. ಅವುಗಳಲ್ಲಿ ಒಂದು ದೋಷಕ್ಕೆ ಅವಕಾಶಕೊಟ್ಟರೂ ಆ ದಮವು ತಪ್ಪಿ ಹೋಗುವುದು. ಹೇಗೆಂದರೆ, ಸ್ವಧರ್ಮಗಳನ್ನು ಬಿಡುವುದು, ಅಸೂಯೆ, ಅರ್ಥಕಾಮುಗಳು, ಆಶೆ, ಕೋಪ, ದುಃಖ, ಭೋಗ, ತೃಷ್ಣೆ, ಚಾಡಿ, ಮತ್ಸರ, ಪ್ರಾಣಿಹಿಂಸೆ, ಚಿಂತೆ, ಜಿಹಾಸೆ, ಮರವೆ (ವಿಸ್ಮೃತಿ), ಅನವಶ್ಯಕವಾದ ಹೆಚ್ಚುಮಾತುಗಳನ್ನಾಡುವುದು, ತನ್ನನ್ನೇ ಬಹಳ ಮೇಲೆಂದು ತಿಳಿಯುವುದು, ಈ ಹದಿನೆಂಟು ದೋಷಗಳನ್ನು ಜಯಿಸಿದವನೇ ಇಂದ್ರಿಯವನ್ನು ನಿಗ್ರಹಿಸಿದವನೆಂದು ವಿದ್ವಾಂಸರಿಂದ ಕರೆಯಲ್ಪಡುವನು. ಮದವೆಂಬುದೂ ಈ ಹದಿನೆಂಟು ದೋಷಗಳನ್ನೊಳಕೊಂಡುದೇ! ತ್ಯಾಗದಲ್ಲಿ ಆರು ವಿಧಗಳುಂಟು. ಆ ತ್ಯಾಗಕ್ಕೆ ವಿರುದ್ಧವಾದುವೂ ಕೂಡ ಮದದೋಷಗಳೆನಿಸುವುವು. (ಆದುದರಿಂದ ಮದದೋಷಗಳು ಇಪ್ಪತ್ತುನಾಲ್ಕು.) ಆರು ಬಗೆಯ ತ್ಯಾಗಗಳು ಬಹಳ ಮೇಲೆನಿಸಿದುವೆ. ಆದರೆ ಅವುಗಳಲ್ಲಿ ಮೂರನೆಯದು ಮಾತ್ರ, ದುಷ್ಕರವಾಗಿ ಕಾಣುವುದು. ಆ ಮೂರನೆಯ ತ್ಯಾಗವನ್ನು ಸಾಧಿಸಿದವನು ಆಧ್ಯಾತ್ಮಿಕವೇ ಮೊದಲಾದ ಮೂರುಬಗೆಯ ದುಃಖವನ್ನೂ (ತಾಪತ್ರಯಗಳನ್ನು) ದಾಟಿದವನು, ಮತ್ತು ಎಲ್ಲವನ್ನೂ ಜಯಿಸಿದವನೆಂದು ತಿಳಿ! ಆ ಆರುಬಗೆಯ ತ್ಯಾಗಗಳಾವುವೆಂದರೆ, ಐಶ್ವರ್ಯಾದಿಗಳಿದ್ದಾಗಲೂ ಗರ್ವವನ್ನು ಬಿಡುವುದು ಮೊದಲನೆಯದು, ವೈರಾಗ್ಯ ಅಥವಾ ಯಜ್ಞಯಾಗಾದಿಗಳಿಗೂ, ತಟಾಕಾದಿನಿರ್ಮಾಣಗಳಿಗೂ ಧನತ್ಯಾಗವು ಎರಡನೆಯದು, ಕಾಮತ್ಯಾಗವು ಮೂರನೆಯದು, ಈ ಕಾಮತ್ಯಾಗವೆಂಬ ಮೂರನೆಯ ಗುಣವನ್ನೇ ಅನಿರ್ವಾಚ್ಯವಾದ ಉತ್ತಮ ಗುಣವೆಂದು ಹೇಳುವರು. ತಾನು ಚೆನ್ನಾಗಿ ಅನುಭವಿಸಿದಮೇಲೆ ಜಿಹಾಸೆಯಿಂದ ಬಿಟ್ಟುದಾಗಲಿ, ಅನುಭವಿಸುವುದಕ್ಕೆ ಶಕ್ತಿಯಿಲ್ಲದೆ ಅಶಕ್ತತೆಯಿಂದ ಬಿಟ್ಟುದಾಗಲಿ, ತ್ಯಾಗವೆನಿಸುವುದಿಲ್ಲ. ತಾನು ಒಳ್ಳೇಭಾಗ್ಯವಂತನಾಗಿದ್ದು, ಅನುಭವಿಸುವುದಕ್ಕೂ ಶಕ್ತಿಯಿದ್ದು, ತ್ಯಾಗಮಾಡಿದ ಮೇಲೆಯೂ ವ್ಯಸನಪಡದೆ ಇರುವ ಸರ್ವಭೋಗತ್ಯಾಗವೇ ಸರಿಯಾದ ತ್ಯಾಗವೆನಿಸುವುದು. ದುಃಖತ್ಯಾಗವು ನಾಲ್ಕನೆಯದು. ಕಾರ್ಯಭಂಗಕ್ಕಾಗಲಿ, ಇಷ್ಟವಿಯೋಗಕ್ಕಾಗಲಿ, ಧನನಾಶಕ್ಕಾಗಲಿ, ಬೇರೆ ಯಾವ ಅಪ್ರಿ

ಯುವುಂಟಾದರಾಗಲಿ ವ್ಯಥೆಪಡಬಾರದು. ಹೆಂಡಿರು, ಮಕ್ಕಳು ಮುಂತಾದ ಇಷ್ಟಜನರಲ್ಲಿ ಮೋಹತ್ಯಾಗವು ಐದನೆಯದು. ತನ್ನಲ್ಲಿ ಬಂದು ಯಾಚಿಸಿದವರಿಗೆ ಕೈಹಿಡಿಯದೆ ಧಾರಾಳವಾಗಿ ಪಾತ್ರವರಿತು ತನ್ನಲ್ಲಿದ್ದುದನ್ನು ಕೊಡುವ ಅರ್ಥತ್ಯಾಗವೆಂಬುದು ಆರನೆಯದು.

ಅಪ್ರಮಾದವೆಂಬುದು ಎಂಟು ಗುಣಗಳನ್ನೊಳಕೊಂಡಿದೆ. ಸತ್ಯ, ಧ್ಯಾನ, ನಿಶ್ಚಲತೆ, ಆತ್ಮಸ್ವರೂಪವಿಮರ್ಶೆ, ವಿರಕ್ತಿ, ಪರಸ್ವವನ್ನು ಗ್ರಹಿಸದಿರುವುದು, ಬ್ರಹ್ಮಚರ್ಯೆ, ಅಪ್ರತಿಗ್ರಹ, (ದಾನಗಳನ್ನು ಪ್ರತಿಗ್ರಹಿಸದಿರುವುದು) ಇವೆಂಟೂ ಅಪ್ರಮಾದಕ್ಕೆ ಸಂಬಂಧಪಟ್ಟ ಗುಣಗಳು. ದಮಕ್ಕೆ ವಿರುದ್ಧವಾದ ಮದದಲ್ಲಿ ಮೇಲೆ ಹೇಳಿದ ಹದಿನೆಂಟು ದೋಷಗಳುಂಟು. ಅವನ್ನು ತ್ಯಜಿಸಬೇಕು. ಮನಸ್ಸಿನೊಡಗೂಡಿದ ಆರು ಇಂದ್ರಿಯಗಳಿಂದಲೂ, ಕಳೆದು ಹೋದುದು, ಮತ್ತು ಮುಂದೆ ಬರುವುದು ಇವೆರಡರಿಂದಲೂ ಉಂಟಾಗುವ ಆ ಎಂಟುಬಗೆಯ ಪ್ರಮಾದಗಳನ್ನೂ ನೀಗಿಸಿದವನೇ ಸುಖಿಯೆನಿಸುವನು. ಓ ರಾಜೇಂದ್ರಾ! ಸತ್ಯದಲ್ಲಿಯೇ ಮನಸ್ಸಿಡುವವನಾಗು! ಸತ್ಯದಲ್ಲಿಯೇ ಲೋಕಗಳು ನೆಲೆಗೊಂಡಿವೆ. ಲೋಕಗಳೆಲ್ಲವೂ ಸತ್ಯವನ್ನೇ ಮುಂದಿಟ್ಟುಕೊಂಡಿರುವುದಾಗಿ ಹೇಳುವರು. ಸತ್ಯದಲ್ಲಿಯೇ ಮೋಕ್ಷವು. ಈ ಲೋಕದಲ್ಲಿ ದೋಷವನ್ನು ನೀಗಿಯೇ ಆಮೇಲೆ ತಪಸ್ಸೆಂಬ ವ್ರತವನ್ನು ಹಿಡಿಯಬೇಕು. ಇದೇ ಬ್ರಹ್ಮಕೃತವಾದ ವಿಧಿ. ಸತ್ಪುರುಷರಿಗೆ ಸತ್ಯವೇ ಮುಖ್ಯವ್ರತವು. ಹಿಂದೆ ಹೇಳಿದ ದೋಷಗಳಿಂದ ಮುಕ್ತನಾಗಿ, ಆ ಗುಣಗಳಿಂದ ಕೂಡಿದವನೇ ತಪಸ್ವಿ! ಅದೇ ಸಮೃದ್ಧವಾದ ಕೇವಲ ತಪಸ್ಸಿನ ನೆಲೆಯೆನಿಸುವುದು. ರಾಜೇಂದ್ರಾ! ಸಂಗ್ರಹಿಸಿ ಹೇಳುವೆನು ಕೇಳು! ಈ ನೆಲೆಯೇ ಮನುಷ್ಯನ ಸಮಸ್ತ ಪಾಪಗಳನ್ನೂ ನೀಗಿಸಿ, ಅವನನ್ನು ಪವಿತ್ರನನ್ನಾಗಿಸಿ, ಹುಟ್ಟು, ಮುಪ್ಪು, ಸಾವು ಎಂಬೀ ಸಂಸಾರ ಕಷ್ಟಗಳನ್ನೆಲ್ಲ ನೀಗಿಸತಕ್ಕುದು" ಎಂದನು.

ತಿರುಗಿ ಧೃತರಾಷ್ಟ್ರನು "ಓ ಮಹರ್ಷೀ! ಇತಿಹಾಸಗಳೊಡನೆ ಸೇರಿ ಐದು ವೇದಗಳಿಂದ ಬ್ರಹ್ಮನು ಪ್ರತಿಪಾದ್ಯನೆಂದು ಕೆಲವರು ಹೇಳುವರು. ಬೇರೆ ಕೆಲವರು (ಚತುರ್ವೇದಿಗಳು) ನಾಲ್ಕು ಬಗೆಯಾಗಿ ಹೇಳುವರು.

ಹಾಗೆಯೇ ತ್ರಿ*ವೇದಿಗಳೂ, ದ್ವಿವೇದಿಗಳೂ, ಏಕವೇದಿಗಳೂ, ಅನೃಚರೂ ಬೇರೆಬೇರೆ ವಿಧವಾಗಿ ಹೇಳುವರು. ಈ ಆರುಪಕ್ಷದಲ್ಲಿ ಯಾವುದು ಪ್ರಮಾಣವು? ಇವರಲ್ಲಿ ನಿಜವಾದ ಬ್ರಹ್ಮಜ್ಞಾನವನ್ನು ಪಡೆದವರು ಯಾರೆಂದು ನಾವು ತಿಳಿಯಬಹುದು ?" ಎನಲು, ಸನತ್ಸುಜಾತನು "ಓ ರಾಜಾ ! ಆ ಬ್ರಹ್ಮನೊಬ್ಬನೇ ಎಂಬುದು ಸತ್ಯವಾದ ಜ್ಞಾನವು. ಆ ವೇದಶಬ್ದಾರ್ಥವಾದ ಬ್ರಹ್ಮವು ತಿಳಿಯದುದರಿಂದ, ಆ ಬ್ರಹ್ಮವನ್ನು ತಿಳಿಯುವುದಕ್ಕಾಗಿ ವೇದಗಳು ಹಲವಾಗಿ ವಿಭಾಗಿಸಲ್ಪಟ್ಟುವು. ಆ ಪರಮಾತ್ಮನ ಸತ್ಯವನ್ನು ತಿಳಿಯದವನು ಅಸತ್ಯದಲ್ಲಿ (ಕರ್ಮಗಳಲ್ಲಿ) ನೆಲೆಗೊಂಡಿರುವನು. ಸತ್ಯವನ್ನು ತಿಳಿಯದವನು ತಾನೇ ಪ್ರಾಜ್ಞನೆಂದೂ ನೆನೆಸಿಕೊಳ್ಳುವನು. ದಾನ, ಅಧ್ಯಯನ, ಯಜ್ಞ ಇವುಗಳನ್ನು ಲೋಭದಿಂದ ಎಂದರೆ, ಫಲಾಪೇಕ್ಷೆಯಿಂದ ನಡೆಸುವನು. ಸತ್ಯಚ್ಯುತರಾದ ಅವರ ಸಂಕಲ್ಪವು ಫಲಕಾರಿಯಾಗದು. ಸತ್ಯವನ್ನು (ಬ್ರಹ್ಮವನ್ನು) ತಿಳಿಯದೆ ಇರುವುದರಿಂದಲೇ ವೇದಗಳಲ್ಲಿ ಹೇಳುವ ವಿಷಯಗಳನ್ನು ನಂಬಿ ಫಲೋದ್ದೇಶದಿಂದ ಯಜ್ಞಗಳನ್ನು ಮಾಡುವರು. ಕೆಲವರು ಮನಸ್ಸಿನಿಂದ ಧ್ಯಾನರೂಪವಾದ ಯಜ್ಞಗಳನ್ನು ನಡೆಸುವರು. ಕೆಲವರು ವಾಕ್ಕಿನಿಂದ ಮಂತ್ರಜಪರೂಪವಾದ ಯಜ್ಞಗಳನ್ನು ಮಾಡುವರು. ಬೇರೆ ಕೆಲವರು ಜ್ಯೋತಿಷ್ಟೋಮಾದಿಯಾಗಗಳ ರೂಪವಾಗಿಯೇ ಮಾಡುವರು. ಆಯಾ ಸಂಕಲ್ಪದಲ್ಲಿ ಸಿದ್ಧಿಯನ್ನು ಪಡೆದವರು ತಮ್ಮ ತಮ್ಮ ಸಂಕಲ್ಪಿತಲೋಕಗಳನ್ನು ಸೇರುವರು. ಸತ್ಯದಿಂದ ಹುಡುಕುವವನು ಸತ್ಯವನ್ನೇ (ಬ್ರಹ್ಮವನ್ನು) ಪಡೆಯುವನು. ಆತ್ಮಜ್ಞಾನವಿಲ್ಲದವನ ಸಂಕಲ್ಪಗಳಿಗೆ ಒಂದು ನೆಲೆಯಿಲ್ಲದಿರುವುದರಿಂದ, ಸತ್ಯಸಂಕಲ್ಪವುಳ್ಳವರು ದೀಕ್ಷಾವ್ರತವನ್ನು ಹಿಡಿಯಬೇಕು. ದೀಕ್ಷಿತವೆಂಬ ಶಬ್ದವು "ದೀಕ್ಷ್" ಎಂಬೀ ಧಾತುವಿನಿಂದ ವ್ರತವೆಂಬ ಅರ್ಥವನ್ನೇ ತಿಳಿಸುವುದು. ಸತ್ಪುರುಷರಿಗೆ ಸತ್ಯವೇ ಪ್ರಧಾನವ್ರತವೆನಿಸಿದೆ. ಜ್ಞಾನವೆಂಬುದು (ಜ್ಞಾನಫಲವು) ಪ್ರತ್ಯಕ್ಷವು. ತಪಸ್ಸು (ತಪಃಫಲವು) ಪರೋಕ್ಷವಾದುದು. ಬಹಳವಾಗಿ ವೇದ

---

ವೇದವೆಂದರೆ ತಿಳಿಯಬೇಕಾದ ತತ್ವವು (ಬ್ರಹ್ಮವು). * ಸಾಂಖ್ಯರು, ಮೀಮಾಂಸಕರು, ಪಾತಂಜಲರು, ಅದ್ವೈತಿಗಳು ಮುಂತಾಗಿ ಬೇರೆಬೇರೆ ಮತದವರು ತತ್ವಸಂಖ್ಯೆಯನ್ನು ಬೇರೆಬೇರೆ ವಿಧವಾಗಿ ಹೇಳುವರು.

ಗಳನ್ನೋದುವ ಬ್ರಾಹ್ಮಣನನ್ನು 'ಬಹುಪಾಠಿ'ಯೆಂದುಮಾತ್ರ ತಿಳಿಯಬೇಕು. ಆದುದರಿಂದ ಓ ಕ್ಷತ್ರಿಯಶ್ರೇಷ್ಠಾ! ಬಹಳವಾಗಿ ಓದಿದಮಾತ್ರದಿಂದಲೇ ಅವನನ್ನು ಬ್ರಾಹ್ಮಣನೆಂದು (ಬ್ರಹ್ಮವಿತ್ತೆಂದು) ತಿಳಿಯಬೇಡ! ಯಾವನು (ಸತ್ಯದಿಂದ) ವೇದದಿಂದ ತಿಳಿಯಬೇಕಾದ ಬ್ರಹ್ಮಸ್ವರೂಪವನ್ನು ತಿಳಿಯಬಲ್ಲನೋ, ಅವನೇ ಬ್ರಾಹ್ಮಣನು, (ಬ್ರಹ್ಮವಿದನು) ಎಂದು ತಿಳಿ! ಹಿಂದೆ ಅಥರ್ವಮುನಿ ಮೊದಲಾದ ಮಹರ್ಷಿಸಂಘದ ಗೀತೆಗಳೇ (ಉಪನಿಷತ್ತುಗಳೇ) ನಿಜವಾದ ವೇದಗಳು. ಆ ವೇದಗಳಿಂದ ವೇದ್ಯನಾದ ಪರಮಾತ್ಮನ ಸ್ವರೂಪವನ್ನು ತಿಳಿಯಲಾರದೆ, ಬರೀ ವೇದಗಳನ್ನೋದಿದವರುವೇದವಿತ್ತುಗಳಲ್ಲ. ವೇದಗಳು ಬ್ರಹ್ಮನಲ್ಲಿ ಏಕಾಂತಸಂಬಂಧವುಳ್ಳವು. ಆದುದರಿಂದ ವೇದವಿತ್ತುಗಳಾದ ಆರ್ಯರು, ವೇದವನ್ನು ಅಧ್ಯಯನಮಾಡಿದಮೇಲೆ, ಗುರುಮುಖವಾಗಿ ಆ ವೇದಪ್ರತಿಪಾದ್ಯವಾದ ಬ್ರಹ್ಮವನ್ನು ತಿಳಿಯದಿರಲಾರರು.

ಲೋಕದಲ್ಲಿ ವೇದಗಳ ನಿಜವಾದ ತತ್ವವನ್ನರಿತವನೊಬ್ಬನೂ ಇರನು. ಕೆಲವರು ಆ ತತ್ವವನ್ನು ಆಪಾತವಾಗಿ ಗ್ರಹಿಸಿದ್ದರೂ ಇರಬಹುದು. ಸುಮ್ಮನೆ ವೇದಗಳನ್ನೋದಿದವನು ಆ ವೇದದಿಂದ ತಿಳಿಯಬೇಕಾದುದನ್ನು ತಿಳಿಯಲಾರನು. ಯಾವನು ಸತ್ಯದಲ್ಲಿ (ವೇದವೇದ್ಯವಾದ ಸತ್ಯವಸ್ತುವಿನಲ್ಲಿ, ಬ್ರಹ್ಮನಲ್ಲಿ) ನೆಲೆಗೊಳ್ಳುವನೋ, ಅವನೇ ವೇದವಿತ್ತೆನಿಸುವನು. ವೇದಗಳಲ್ಲಿಯಾದರೂ ಆ ಬ್ರಹ್ಮವನ್ನು ಪೂರ್ಣವಾಗಿ ತಿಳಿದುದು ಯಾವುದೂ ಇಲ್ಲ. ವೇದ್ಯವಾದ ಸತ್ಯವು ತಿಳಿದುಹೋದಮೇಲೆ ವೇದಗಳಾಗಲಿ, ವೇದದಿಂದ ತಿಳಿಯಬೇಕಾದ ಇತರ ಪ್ರಪಂಚವಾಗಲಿ ತಿಳಿಯುದೇ ಇಲ್ಲ. ಸತ್ಯವನ್ನು ತಿಳಿದವನು ಪ್ರಪಂಚವನ್ನು ತಿಳಿಯಬಲ್ಲನು. ಪ್ರಪಂಚವನ್ನು ತಿಳಿದವನು ಸತ್ಯವನ್ನು ತಿಳಿಯಲಾರನು. ವೇದಗಳನ್ನು (ಪ್ರಮಾಣಗಳನ್ನು) ತಿಳಿದವನು, ಅದರಿಂದ ವೇದ್ಯನಾದ ಪ್ರಪಂಚವನ್ನು, (ಪ್ರಮೇಯಗಳನ್ನು) ತಿಳಿಯಬಹುದು. ಆ ಪರಮಾತ್ಮನನ್ನಾದರೋ ವೇದವಿತ್ತುಗಳಾಗಲಿ, ವೇದಗಳಾಗಲಿ ತಿಳಿಯಲಾರವು. ಹಾಗಿದ್ದರೂ ವೇದದ ನಿಜವಾದ ತತ್ವವನ್ನು ಬಲ್ಲ ಬ್ರಾಹ್ಮಣರು, ವೇದವೇದ್ಯವಾದ ಆ ಪರಮಾತ್ಮನನ್ನು (ಸ್ವಲ್ಪಮಟ್ಟಿಗೆ)

ತಿಳಿದುಕೊಳ್ಳಬಹುದು. ಒಂದು ಮರದ ಕೊಂಬೆಯನ್ನುದ್ದೇಶಿಸಿ ಆ ಮೂಲಕವಾಗಿ ಚಂದ್ರಕಳೆಯನ್ನು ಹೇಗೋ ಹಾಗೆಯೇ ವೇದಗಳೂ ಕೂಡ ಪರಮಾತ್ಮನ ಸತ್ತೆಯನ್ನು ಸ್ವಲ್ಪವಾಗಿ ತೋರಿಸಬಲ್ಲುವು. ಪರಮಾತ್ಮನನ್ನು ವಿವರಿಸಿ ತಿಳಿಸುವವನನ್ನೇ ನಾನು ಬ್ರಾಹ್ಮಣನೆಂದು ಭಾವಿಸುವೆನು. ತಾನು ಸಂದೇಹಗಳನ್ನೆಲ್ಲ ಪರಿಹರಿಸಿಕೊಂಡವನೇ ಇತರರಿಗೂ ಸಂದೇಹಗಳನ್ನೆಲ್ಲ ವಿವರಿಸಿ ತಿಳಿಸಬಲ್ಲನು. ರಾಜಾ ! ಆತ್ಮಸ್ವರೂಪವನ್ನು ಕಂಡುಹಿಡಿಯಬೇಕೆಂದು ಒಬ್ಬನು ನೆಟ್ಟಗೆ ಪೂರ್ವದಿಕ್ಕಿಗೆ ಹೋದರೂ ಅದು ಸಿಕ್ಕುವುದಿಲ್ಲ. ದಕ್ಷಿಣ, ಪಶ್ಚಿಮ, ಉತ್ತರ, ಅಥವಾ ಬೇರೆ ಮೂಲೆಗಳಿಗೆ ನೆಟ್ಟಗೆ ಹೋದರೂ ಅದು ಸಿಕ್ಕುವುದಿಲ್ಲ. ಹೀಗಿರುವಾಗ ಇನ್ನು ವಕ್ರವಾದ ಅಡ್ಡದಾರಿಯಲ್ಲಿ ಹೋದರೆ ಸಿಕ್ಕಲಾರದೆಂಬುದನ್ನು ಹೇಳಬೇಕಾದುದೇನು ? ಆ ಆತ್ಮವನ್ನು ನಮ್ಮ ವೈರಿಗಳ (ದೇಹ, ಇಂದ್ರಿಯಗಳು, ವಿಷಯುಗಳು ಎಂಬ ಒಳಶತ್ರುಗಳ) ಮಧ್ಯದಲ್ಲಿಯೇ ಪ್ರಯತ್ನಪಟ್ಟು ಕಂಡುಹಿಡಿಯಬೇಕು. ಯೋಗಿಯಾದವನು ವೇದಗಳಲ್ಲಿ ಅವನನ್ನು ಹುಡುಕದೆ ತಪಸ್ಸಿನ ಮೂಲಕವಾಗಿ ನೋಡಬಲ್ಲನು. ಯೋಗಿಯು ಇದ್ದಕಡೆಯಿಂದ ಕದಲದೆ, ಬಾಯಿಂದ ಮಾತಾಡದೆ, ಮಾನಸಿಕಚೇಷ್ಟೆಯೂ ಇಲ್ಲದೆ, ತಾನಿದ್ದೆಡೆಯಲ್ಲಿಯೇ ಅವನನ್ನು ಕಾಣಬಲ್ಲನು. ಮಹಾರಾಜಾ ! ಪ್ರಸಿದ್ಧವಾದ ಆ ಬ್ರಹ್ಮವನ್ನು ನೀನು ನಿನ್ನೊಳಗೇ ಉಪಾಸಿಸು ! ಬರೀ ಮೌನದಿಂದಾಗಲಿ, ಕೇವಲ ವನವಾಸದಿಂದಾಗಲಿ ಒಬ್ಬನು ಮುನಿಯಾಗುವುದಿಲ್ಲ. ತನ್ನೊಳಗೆ ಇರುವ ಆ ಪರಮಾತ್ಮನನ್ನು ಯಾವನು ತಿಳಿಯಬಲ್ಲನೋ ಅವನೇ ಶ್ರೇಷ್ಠನಾದ ಮುನಿಯೆನಿಸುವನು. ಈ ಎಲ್ಲಾ ಅರ್ಥಗಳನ್ನೂ ವಿವರಿಸಬಲ್ಲವನೇ 'ವೈಯಾಕರಣ'ನೆಂದು ಕರೆಯಲ್ಪಡುವನು. ಏಕೆಂದರೆ, ಆ ಬ್ರಹ್ಮವನ್ನು ಮೂಲವಾಗಿ ಉಳ್ಳ ಪ್ರಪಂಚತತ್ವವನ್ನು ವಿವರಿಸುವ ಶಾಸ್ತ್ರವೇ ವ್ಯಾಕರಣವೆನಿಸುವುದು. ಅಂತಹ ವೈಯಾಕರಣನೇ ಲೋಕಗಳನ್ನೆಲ್ಲ ಸಾಕ್ಷಾತ್ಕರಿಸಿಕೊಂಡು ಎಲ್ಲವನ್ನೂ ನೋಡಬಲ್ಲವನಾಗುವನು. ಸತ್ಯದಲ್ಲಿ (ಬ್ರಹ್ಮದಲ್ಲಿ) ನೆಲೆಗೊಂಡವನೇ ಸರ್ವಜ್ಞನೆನಿಸುವನು. ಓ ಕ್ಷತ್ರಿಯೋತ್ತಮಾ ! ಧರ್ಮಾದಿಗಳಲ್ಲಿ ನೆಲೆಗೊಂಡ ಕ್ಷತ್ರಿಯನು ಆ ಬ್ರಹ್ಮವನ್ನು ಕಾಣಬಲ್ಲನು. ವೇದಗಳಲ್ಲಿ ಹೇಳಿರುವಂತೆ ಕ್ರಮಕ್ರಮವಾಗಿ ಈ ವಿಧವಾದ ಯೋಗಬಲವನ್ನು

ಪಡೆದವನು ಆ ಉತ್ತಮ ಪುರುಷಾರ್ಥವನ್ನು ಹೊಂದುವನು. ಇದನ್ನೆಲ್ಲ ನಾನು ನನ್ನ ಬುದ್ಧಿನಿಶ್ಚಯದಿಂದ ಅನುಭವಿಸಿ ತಿಳಿದೇ ಹೇಳಿರುವೆನು" ಎಂದನು.

ಇದು ನಾಲ್ವವತ್ತುಮೂರನೆಯ ಅಧ್ಯಾಯವು.

## ಧೃತರಾಷ್ಟ್ರನಿಗೆ ಸನತ್ಸುಜಾತನ ತತ್ತ್ವೋಪದೇಶಗಳು.

ತಿರುಗಿ ಧೃತರಾಷ್ಟ್ರನು "ಓ ಮಹಾತ್ಮಾ! ನೀನು ಬ್ರಹ್ಮವಿಷಯ ವಾಗಿಯೂ, ಪ್ರಪಂಚವಿಷಯಕವಾಗಿಯೂ ಹೇಳಿದ ಈ ತತ್ವಗಳು ಅತ್ಯಂತ ಶ್ಲಾಘ್ಯವಾಗಿವೆ. ಇನ್ನೂ ಹೀಗೆಯೇ ಅಪೂರ್ವವಾಗಿ ಈ ಪ್ರಪಂಚವಿಷಯಗಳನ್ನು ಬಿಟ್ಟು ಆತ್ಮತತ್ವವಿಚಾರವಾದ ಮತ್ತು ಎಲ್ಲರಿಗೂ ದುರ್ಲಭವಾದ ತತ್ವವಿಚಾರವನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ಸನತ್ಸುಜಾತನು "ಓ ಮಹಾರಾಜಾ! ನೀನು ಯಾವ ವಿಚಾರವನ್ನು ಕುರಿತು ಇಷ್ಟು ಸಂತೋಷದಿಂದ ಕೇಳುತ್ತಿರುವೆಯೋ, ಆ ಬ್ರಹ್ಮವು ಕೇವಲ ಆತುರದಿಂದ ಲಭಿಸತಕ್ಕುದಲ್ಲ. ಬುದ್ಧಿಯಲ್ಲಿ ಮನಸ್ಸು ಚೆನ್ನಾಗಿ ಲಯಿಸಿದಾಗಲೇ ಚಿಂತಿಸಿತಿಳಿಯಬೇಕಾದ ಆ ಬ್ರಹ್ಮಸ್ವರೂಪವು, ಬ್ರಹ್ಮಚರ್ಯೆಯನ್ನು ಅನುಷ್ಠಿಸಿದವರಿಗೆ ಮಾತ್ರವೇ ಲಭಿಸತಕ್ಕುದು. ಆ ಸ್ಥಿತಿಯಲ್ಲಿ ಮನಸ್ಸು ಸಂಪೂರ್ಣವಾಗಿ ಈ ಪ್ರಪಂಚದ ಚಿಂತೆಯನ್ನೆಲ್ಲ ಬಿಟ್ಟಿರಬೇಕು" ಎಂದನು.

ಆಗ ಧೃತರಾಷ್ಟ್ರನು "ಓ ಮುನೀಂದ್ರಾ! ಆ ಬ್ರಹ್ಮಜ್ಞಾನವೆಂಬುದು ಮನಸ್ಸಿನಲ್ಲಿಯೇ ಸದಾ ನೆಲೆಗೊಂಡಿದೆಯೆಂದೂ, ಬ್ರಹ್ಮಚರ್ಯೆಯಿಂದ ಅದನ್ನು ತಿಳಿಯಬಹುದೆಂದೂ, ಬ್ರಹ್ಮಚರ್ಯದಿಂದ ಅದು ವ್ಯಕ್ತವಾಗಿ ತೋರುವುದೆಂದೂ, ಕರ್ಮಗಳನ್ನು ನಡೆಸುವಾಗಲೂ ಅದು ನಮ್ಮಲ್ಲಿದ್ದರೂ ಕರ್ಮಗಳಿಂದ ಕಾಣಿಸತಕ್ಕುದಿಲ್ಲವೆಂದೂ ನೀನು ಹೇಳುವೆ. ಆ ಬ್ರಹ್ಮನನ್ನು ತಿಳಿದವನಿಗೆ ಅಮರತ್ವವು ಎಂದರೆ ಮೋಕ್ಷವೆಂಬುದು ಹೇಗೆ" ಎಂದನು. ಅದಕ್ಕಾ ಮುನಿಯು "ರಾಜಾ! ಆ ಬ್ರಹ್ಮಜ್ಞಾನವೆಂಬುದು ಮನಸ್ಸಿನಲ್ಲಿಯೇ ಹುಟ್ಟಿ, ಅಲ್ಲಿಯೇ ನೆಲಗೊಂಡಿರತಕ್ಕುದಾದರೂ, ಆ

ಜ್ಞಾನವು ಸುಲಭವಾಗಿ ವ್ಯಕ್ತವಾಗತಕ್ಕದಲ್ಲ. ಶುದ್ಧವಾದ ಬ್ರಹ್ಮಚರ್ಯೆ ಯಿಂದಲೇ ಅದು ವ್ಯಕ್ತವಾಗುವುದು. ಅದು ವ್ಯಕ್ತವಾದಮೇಲೆ ಯೋಗಿ ಯು ಈ ಲೋಕದಿಂದ ಮುಕ್ತನಾಗುವನು. ಆಚಾರ್ಯಾನುಗ್ರಹದಿಂದ ವೃದ್ಧಿಹೊಂದಿದವರಲ್ಲಿ (ಅಥವಾ ಗುರುಗಳಲ್ಲಿ ಮತ್ತು ಜ್ಞಾನವೃದ್ಧರಲ್ಲಿ) ನಿತ್ಯವಾಗಿರುವ ಆ ಬ್ರಹ್ಮವಿದ್ಯೆಯನ್ನು ಕುರಿತು ಈಗ ನಿನಗೆ ಕೆಲವು ವಿಷ ಯುಗಳನ್ನು ತಿಳಿಸುವೆನು" ಎಂದನು.

— ಬ್ರಹ್ಮಚರ್ಯೆಯ ಕ್ರಮ. - -

ಈ ನಡುವೆ ಧೃತರಾಷ್ಟ್ರನು "ಓ ಮುನೀಂದ್ರಾ! ಬ್ರಹ್ಮವಿದ್ಯೆಗೆ ಸಾ ಧಕವಾದುದು ಬ್ರಹ್ಮಚರ್ಯೆಯೆಂದು ಹೇಳಿದೆಯಲ್ಲವೆ? ಆ ಬ್ರಹ್ಮಚರ್ಯ ವೆಂತದೆಂಬುದನ್ನು ನನಗೆ ಮೊದಲು ತಿಳಿಸಬೇಕು" ಎಂದನು. ಅದಕ್ಕಾ ಸನತ್ಸುಜಾತನು "ಮಹಾರಾಜಾ! ಯಾರು ಗುರುಸಾನ್ನಿಧ್ಯದಲ್ಲಿದ್ದು, ಬ್ರಹ್ಮಚರ್ಯವನ್ನು ಸಾಧಿಸುವರೋ ಅಂತವರೇ ಈ ಲೋಕದಲ್ಲಿ ಶಾಸ್ತ್ರಕರ್ತ ರಾಗಿದ್ದು, ಕೊನೆಗೆ ದೇಹಾವಸಾನದಲ್ಲಿ ಶಾಶ್ವತವಾದ ಪರಮಾತ್ಮನನ್ನು ಪಡೆಯುವರು. ಅವರು ಒಂದೊಂದು ಕ್ಷಣವೂ ಬ್ರಹ್ಮನಿಷ್ಠರಾಗಿ, ಈ ಲೋ ಕದಲ್ಲಿದ್ದೇ ಕಾಮುಗಳನ್ನೆಲ್ಲ ಜಯಿಸುವರು. ಅಂತವರು ಸತ್ವಗುಣವುಳ್ಳವ ರಾಗಿ, ಈ ಶರೀರದಲ್ಲಿದ್ದಾಗಲೇ, ಹಂಚಿಯಹುಲ್ಲಿನಿಂದ ಕಡ್ಡಿಯನ್ನು ಬೇರ್ಪ ಡಿಸಿ ತೆಗೆಯುವಂತೆ, ದೇಹದಿಂದ ಆತ್ಮವನ್ನು ಪ್ರತ್ಯೇಕಿಸಿ ತಿಳಿಯುವರು. ಓ ರಾಜಾ! ತಂದೆತಾಯಿಗಳು ಈ ಶರೀರವನ್ನು ಹುಟ್ಟಿಸುವರು. ಆದರೆ ಅದನ್ನು ಸಂಸ್ಕರಿಸಿ ಶುದ್ಧಿಮಾಡಿ ಹೊಸಶರೀರವನ್ನು ಕೊಡತಕ್ಕವನು ಆ ಚಾರ್ಯನು. ಆಚಾರ್ಯೋಪದೇಶದಿಂದ ಪವಿತ್ರಿತವಾದ ಹೊಸಜನ್ಮವೇ ಜರಾಮರಣರಹಿತವಾದುದು. ಬ್ರಹ್ಮಮಂತ್ರವನ್ನುಪದೇಶಿಸಿ, ಸತ್ಯವೆಂಬ ಆವರಣದಿಂದ ಹೊದಿಸಿ, ವರ್ಣಶುದ್ಧಿಯನ್ನುಂಟುಮಾಡಿ, ಅಮೃತತ್ವವನ್ನು (ಮೋಕ್ಷವನ್ನು) ಕೊಡುವ ಆಚಾರ್ಯನು ಯಾವನೋ ಅವನೇ ತಂದೆ! ಅವನೇ ತಾಯಿ! ಅವನ ವಿಷಯದಲ್ಲಿ ದ್ರೋಹವನ್ನೆಣಿಸದೆ ಸದಾ ಕೃತ ಜ್ಞತೆಯನ್ನು ತೋರಿಸುತ್ತಿರಬೇಕು. ಶಿಷ್ಯನು ಗುರುವನ್ನು ಯಾವಾಗಲೂ ಗೌರವಿಸಿ ಅಭಿವಾದನಮಾಡಬೇಕು. ಮನೋವಾಕ್ಕಾಯಶುದ್ಧಿಯಿಂದ

ಎಚ್ಚರತಪ್ಪದೆ ಅವನಲ್ಲಿ ಅಧ್ಯಯನ ಮಾಡಬೇಕು. ಹೆಮ್ಮೆಗೊಳ್ಳಬಾರದು. ಇದು ಬ್ರಹ್ಮಚರ್ಯದ ಮೊದಲನೆಯ ಪಾದವು. ಗುರುವಿನಲ್ಲಿ ಶಿಷ್ಯವೃತ್ತಿಯನ್ನು ಕ್ರಮವಾಗಿ ಹಿಡಿದು, ಶುಚಿಯಾಗಿ ವಿದ್ಯಾಭ್ಯಾಸಮಾಡುವುದೂ ಬ್ರಹ್ಮಚರ್ಯೆಯ ಮೊದಲನೆಯ ಪಾದವೆಂದು ಹೇಳುವರು. ತನ್ನ ಪ್ರಾಣಗಳಿಂದಲೂ, ತನ್ನ ಧನಗಳಿಂದಲೂ, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಆಚಾರ್ಯನಿಗೆ ಪ್ರಿಯವನ್ನುಂಟುಮಾಡುವುದು ಬ್ರಹ್ಮಚರ್ಯೆಯ ಎರಡನೆಯ ಪಾದವೆನಿಸುವುದು. ಗುರುವಿನಲ್ಲಿ ಹೇಗೋ ಹಾಗೆಯೇ ಗುರುಪತ್ನಿಯಲ್ಲಿಯೂ, ಗುರುಪುತ್ರನಲ್ಲಿಯೂ ವಿಶ್ವಾಸಗೌರವಗಳಿಂದ ನಡೆದುಕೊಳ್ಳುವುದೂ ಬ್ರಹ್ಮಚರ್ಯೆಗೆ ಎರಡನೆಯ ಪಾದವೆನಿಸುವುದು. ಆಚಾರ್ಯನು ತನಗೆ ಮಾಡಿದ ಉಪಕಾರವನ್ನೂ, ಅದರ ಪ್ರಯೋಜನವನ್ನೂ ಚೆನ್ನಾಗಿ ಮನಸ್ಸಿಗೆ ತಂದುಕೊಂಡು, ಅದರಿಂದ ತಾನು ಸಂತುಷ್ಟಹೃದಯನಾಗಿ, “ನಾನು ಅನೇಕ ವಿಷಯಗಳನ್ನು ಇವರಿಂದ ಕಲಿತೆನು, ಇದರಿಂದ ನಾನು ಉದ್ಧೃತನಾದೆನು” ಎಂದು ತಿಳಿಯುವುದು ಬ್ರಹ್ಮಚರ್ಯೆಯ ಮೂರನೆಯ ಪಾದವು. ಆಚಾರ್ಯನಿಗೆ ತಾನು ಕೊಡಬೇಕಾದ ಗುರುದಕ್ಷಿಣಾರೂಪವಾದ ಸಾಲವನ್ನು ತೀರಿಸದೆ ಬೇರೆ ಸ್ಥಳಕ್ಕೆ ಹೋಗಬಾರದು. ಗುರುದಕ್ಷಿಣೆಯನ್ನು ಸಲ್ಲಿಸಿದಮೇಲೆಯೂ ‘ನಾನು ಇದನ್ನು ನಡೆಸಿದೆನು.’ ಎಂದು ಮನಸ್ಸಿನಲ್ಲಿ ನೆನೆಸಬಾರದು. ಬಾಯಿಂದಲೂ ಆಡಬಾರದು. ಇದು ಬ್ರಹ್ಮಚರ್ಯೆಯ ನಾಲ್ಕನೆಯ ಪಾದವು. ಶಿಷ್ಯನು ಗುರುಶುಶ್ರೂಷೆಯಲ್ಲಿದ್ದು ಕಾಲನಿರೀಕ್ಷಣೆ ಮಾಡುವುದರಿಂದ ಕಾಲುಭಾಗವನ್ನು ಹೊಂದುವನು. ಆಮೇಲೆ ಗುರುವಿನಲ್ಲಿ ವಿಶ್ವಾಸಕ್ಕೆ ಪಾತ್ರನಾಗಿ ಸೇರುವುದರಿಂದ ಇನ್ನೊಂದು ಕಾಲುಭಾಗವನ್ನು ಪಡೆಯುವನು. ತನ್ನ ವಿದ್ಯಾರ್ಜನೆಯ ಉತ್ಸಾಹದಿಂದ ಅಥವಾ ಸ್ವಬುದ್ಧಿಯಿಂದ ಇನ್ನೊಂದು ಕಾಲುಭಾಗವನ್ನು ಪಡೆಯುವನು. ಶಾಸ್ತ್ರವಿಚಾರದಿಂದ ಮತ್ತೆ ಕಾಲುಭಾಗವನ್ನು ಪಡೆಯುವನು. ಬ್ರಹ್ಮಚರ್ಯವೆಂಬುದು ಹನ್ನೆರಡು ಗುಣಗಳಿಂದಲೂ, ಸತ್ಯವೇ ಮೊದಲಾದ ಬೇರೆ ಅಂಗಗಳಿಂದಲೂ, ಬಲವೆಂಬ ಯೋಗಸಾಧನೆಯಿಂದಲೂ ಕೂಡಿದುದು. ಆಚಾರ್ಯನಲ್ಲಿ ಮರೆಹೊಕ್ಕು ವೇದಾರ್ಥ

— ಬ್ರಹ್ಮಸ್ವರೂಪವು. —

ತಿರುಗಿ ಧೃತರಾಷ್ಟ್ರನು "ಓ ಮುನೀಂದ್ರಾ! ವಿದ್ವಾಂಸನು ಪರ ಮಾತ್ಮನ ಸ್ಥಿತಿಯನ್ನು ತನ್ನ ಆತ್ಮರೂಪದಿಂದಲೇ ಕಾಣುವನೆಂದು ನೀನು ಹೇಳುವೆಯಲ್ಲವೆ? ಹಾಗೆ ಕಾಣುವ ಬ್ರಹ್ಮವು ಬಿಳಿಯದೆ? ಕರಿಯದೆ? ಕೆಂಪೆ? ಅಥವಾ ನೀಲವೇ? ಕೆಂಪುಮಿಶ್ರವಾದ ನೀಲವೆ? ಅದು ಎಲ್ಲಿ ಹೇಗೆ ಪ್ರಕಾಶಿಸುವುದು? ಅದರ ರೂಪವೆಂತದು? ಬಣ್ಣವೆಂತದು?" ಎನಲು ಸನತ್ಸುಜಾತನು "ರಾಜೇಂದ್ರಾ! ನೀನು ಹೇಳಿದಂತೆಯೇ ಆ ಬ್ರಹ್ಮವು ಅವರವರ ಮನಸ್ಸಿನ ಭಾವನೆಯಂತೆ ಬಿಳುಪಾಗಿಯೋ, ಕೆಂಪಾಗಿಯೋ, ಕಪ್ಪಾಗಿಯೋ, ಅಥವಾ ಪ್ರಕಾಶವಾಗಿಯೋ ತೋರುವುದು. ಆದರೆ ಅದು ಭೂಮಿಯಲ್ಲಿಯೂ ಇರತಕ್ಕದಲ್ಲ. ಅಂತರಿಕ್ಷದಲ್ಲಿಯೂ ಇರತಕ್ಕದಲ್ಲ. ಸಮುದ್ರಜಲದಲ್ಲಿಯಾಗಲಿ ಇರುವುದಲ್ಲ. ಮತ್ತು ಇದರ ರೂಪವು ನಕ್ಷ ತ್ರಗಳಲ್ಲಿಯಾಗಲಿ, ಮಿಂಚಿನಲ್ಲಿಯಾಗಲಿ, ಮೇಘಗಳಲ್ಲಿಯಾಗಲಿ, ಚಂದ್ರ ಸೂರ್ಯರಲ್ಲಿಯಾಗಲಿ, ವಾಯುವಿನಲ್ಲಿಯಾಗಲಿ, ಇತರ ದೇವತೆಗಳಲ್ಲಿಯಾ ಗಲಿ ಆಯಾರೂಪದಿಂದ ಕಾಣಿಸತಕ್ಕದಲ್ಲ. ಋಕ್, ಯಜಸ್ಸು, ಸಾಮ, ಅಥರ್ವಣಗಳೆಂಬ ವೇದಗಳಲ್ಲಿಯಾಗಲಿ, ರಥಂತರ ಬೃಹದ್ರಥಗಳೆಂಬ ಸಾ ಮಗಳಲ್ಲಿಯಾಗಲಿ, ಮಹಾವ್ರತಗಳಲ್ಲಿಯಾಗಲಿ, ಆ ಸತ್ಯವಸ್ತುವು ಕಾಣ ತಕ್ಕದಲ್ಲ. ದಾಟಲಶಕ್ಯವಾಗಿಯೂ, ತಮಸ್ಸೆಂಬ ಅಜ್ಞಾನಕ್ಕಿಂತ ಹೊರ ಗಾಗಿಯೂ ಇರುವ ಅದರಲ್ಲಿ, ಅಂತಕನಾದ ಯಮನೂ ಕೂಡ ಅಂತ ಕಾಲದಲ್ಲಿ ಲಯಿಸಿಹೋಗುವನು. ಅದು ಅಣುವಿಗಿಂತಲೂ ಅಣುವಾದುದು. ಪರ್ವತಕ್ಕಿಂತಲೂ (ಮಹತ್ತಿಗಿಂತಲೂ) ಮಹತ್ತಾದುದು. ಕತ್ತಿಯ ತೀಕ್ಷ್ಣ ವಾದ ಅಲಗಿಗೆ ಸಮಾನವಾದುದು. ಎಲ್ಲಕ್ಕೂ ಅದೇ ಆಧಾರವು. ಆ ರೂ ಪವೇ ಅಮೃತವು. ಎಂದಿಗೂ ಚ್ಯುತಿಯಿಲ್ಲದುದು! ಅದೇ ಸಮಸ್ತಲೋಕ ಗಳು. ಅದೇ ಬ್ರಹ್ಮವು. ಅದೇ ಯಶಸ್ಸು. ಅದರಿಂದಲೇ ಪ್ರಾಣಿಗಳು ಉ ತ್ಪತ್ತಿಯಾಗಿ, ಅಲ್ಲಿಯೇ ಲಯಹೊಂದುವುವು. ಅದು ನಿರಪಾಯವಾದುದು. ಅದು ಎಲ್ಲಾ ಕಡೆಯೂ ವ್ಯಾಪಿಸಿರುವುದು. ಅದೇ ಸರ್ವವ್ಯಾಪಿಯಾದ ಯಶಸ್ಸು. ಅದನ್ನು ತಿಳಿದವರು ಯಾರೋ? ಅವರೇ ಮೃತ್ಯುವನ್ನು ಜಯಿ

ಸುವರು. ವಿದ್ವಾಂಸರಿಂದ ಬೇರೆಬೇರೆ ನಾಮಭೇದಗಳಿಂದ ವ್ಯವಹರಿಸಲ್ಪಡುವ ಈ ಪ್ರಪಂಚವು ಯಾತರಲ್ಲಿ ಕಲ್ಪಿತವಾಗಿರುವುದೋ ಅದನ್ನು ತಿಳಿದವರು ಮುಕ್ತಿಯನ್ನು ಹೊಂದುವರು. ಕವಿಗಳು ವ್ಯವಹಾರದಿಂದ ಮಾತಿನಲ್ಲಿ ಕಲ್ಪಿಸುವ ಭೇದವು ಹೊರತು, ಆ ಬ್ರಹ್ಮಕ್ಕೆ ಭೇದಗಳೇನೂ ಇಲ್ಲ. ಸರ್ವವನ್ನೂ ತನ್ನಲ್ಲಿ ಧರಿಸಿರುವ ಆ ಪರಮಾತ್ಮಸ್ವರೂಪವನ್ನು ತಿಳಿದವರು ಮುಕ್ತರಾಗುವರು. ವಿದ್ವಾಂಸರೇ ಜ್ಞಾನಯೋಗದಿಂದ ಅದನ್ನು ನೋಡಬಲ್ಲರು'' ಎಂದನು.

ಇದು ನಾಲ್ವತ್ತುನಾಲ್ಕನೆಯ ಅಧ್ಯಾಯವು,



### ಧೃತರಾಷ್ಟ್ರನಿಗೆ ಸನತ್ಸುಜಾತನ ತತ್ತ್ವೋಪದೇಶಗಳು.

ಸನತ್ಸುಜಾತಮುನಿಯು ಧೃತರಾಷ್ಟ್ರನನ್ನು ಕುರಿತು "ಓ ರಾಜಾ! ಶೋಕ, ಕ್ರೋಧ, ಲೋಭ, ಕಾಮ, ಅಹಂಕಾರ, ತೂಕಡಿಕೆ, ಈರ್ಷ್ಯೆ, ಅಜ್ಞತೆ, ಸಂದೇಹ, ಕನಿಕರ, ಅಸೂಯೆ, ತನ್ನಲ್ಲಿ ಹೀನತ್ವಬುದ್ಧಿ, ಇವು ಹನ್ನೆರಡೂ ಮನುಷ್ಯನ ಪ್ರಾಣವನ್ನೇ ನಾಶಮಾಡತಕ್ಕ ದೊಡ್ಡ ದೋಷಗಳು. ಮನುಷ್ಯನ ಬುದ್ಧಿಯನ್ನು ಕೆಡಿಸಿ, ಅವನನ್ನು ಪಾಪದಲ್ಲಿ ಪ್ರವರ್ತಿಸುವಂತೆ ಮಾಡುವ ಈ ದೋಷಗಳು ಪ್ರತಿಯೊಬ್ಬ ಮನುಷ್ಯನನ್ನೂ ಆವರಿಸುವುವು. ಪೇರಾಸೆಯುಳ್ಳವನೂ, ದಯಾಶೂನ್ಯನೂ, ಕ್ರೂರವಾಗಿ ಮಾತಾಡುವವನೂ, ಬಾಯಾಡಿಯೂ, ಮನಸ್ಸಿನಲ್ಲಿ ಕೋಪವನ್ನು ಸ್ಥಿರವಾಗಿಡುವವನೂ,ತನ್ನನ್ನು ಹೊಗಳಿಕೊಳ್ಳುವವನೂ, ಈ ಆರುಮಂದಿಯೂ ಕೆಟ್ಟಸ್ವಭಾವವುಳ್ಳವರೇ! ಅಲ್ಲದೆ ಇಂತವರಿಗೆ ಏನಾದರೂ ಅದೃಷ್ಟವಶದಿಂದ ಭಾಗ್ಯವು ಲಭಿಸಿದರೆ, ಇತರರನ್ನು ಲಕ್ಷ್ಯಮಾಡುವುದೇ ಇಲ್ಲ. ವಿಶೇಷ ಭೋಗಮಗ್ನನಾಗಿ, ದುರ್ಮಾರ್ಗದಲ್ಲಿ ನಡೆಯುವವನೂ, ಅಧಿಕ ಗರ್ವವುಳ್ಳವನೂ, ಇತರರಿಗೆ ದಾನಮಾಡಿ ತನ್ನನ್ನು ತಾನು ಅದಕ್ಕಾಗಿ ಹೊಗಳಿಕೊಳ್ಳುವವನೂ, ಕೃಪಣನೂ, ದುರ್ಬಲನೂ, ಆತ್ಮಸ್ತುತಿಪರನೂ, ಯಾವಾಗಲೂ ಕೈಹಿಡಿದ ಹೆಂಡತಿಯನ್ನು ದ್ವೇಷಿಸುವವನೂ, ಈ ಏಳುಮಂದಿಯೂ, ಪಾಪಿಗಳೆಂದೂ, ಕ್ರೂರರೆಂದೂ ಗಣಿಸಲ್ಪಡುವರು. ಧರ್ಮ, ಸತ್ಯ, ತಪಸ್ಸು, ಇಂದ್ರಿಯ

ನಿಗ್ರಹ, ಮಾತ್ಸರ್ಯವಿಲ್ಲದಿರುವಿಕೆ, ಅಕಾರ್ಯಗಳಿಗೆ ನಾಚಿಕೆ, ಸುಖದುಃಖಗಳನ್ನು ಸಹಿಸುವುದು, ಅಸೂಯೆಯಿಲ್ಲದಿರುವುದು, ದಾನ, ಅಧ್ಯಯನ, ಧೈರ್ಯ, ತಾಳ್ಮೆ, ಇವು ಹನ್ನೆರಡೂ ಬ್ರಾಹ್ಮಣನಿಗೆ ದೊಡ್ಡ ವ್ರತಗಳು. ಈ ವ್ರತಗಳನ್ನು ತಪ್ಪದೆ ಹಿಡಿಯುವವನು ಸಮಸ್ತ ಭೂಮಿಯನ್ನೂ ಆಳಬಲ್ಲನು. ಅವನು ಇವುಗಳಲ್ಲಿ ಮೂರನ್ನಾಗಲಿ, ಎರಡನ್ನಾಗಲಿ, ಕೊನೆಗೆ ಒಂದೇ ಒಂದನ್ನಾಗಲಿ, ಪಡೆದಿದ್ದರೂ ಅವನಿಗೆ ಸ್ವಂತವಾದುದೊಂದೂ ಇಲ್ಲವೆಂದು (ಯಾತರಲ್ಲಿಯೂ ತನಗೆ ಸಂಬಂಧವನ್ನಿಟ್ಟುಕೊಳ್ಳದವನೆಂದು) ತಿಳಿಯಬೇಕು.

ಇಂದ್ರಿಯನಿಗ್ರಹ, ತ್ಯಾಗ, ಎಚ್ಚರತಪ್ಪದಿರುವುದು (ಅಪ್ರಮಾದ), ಇವು ಮೂರರಲ್ಲಿಯೇ ಮುಕ್ತಿಯು ನೆಲೆಗೊಂಡಿವೆ. ಬ್ರಹ್ಮವನ್ನೇ ಪ್ರಧಾನವಾಗಿಟ್ಟುಕೊಂಡ ವಿದ್ವಾಂಸರಾದ ಬ್ರಾಹ್ಮಣರಿಗೆ ಇವು ಮುಖ್ಯವಾದುವುಗಳು. ಇತರರಲ್ಲಿ ದೋಷವಿರಲಿ, ಇಲ್ಲದಿರಲಿ, ಪರದೂಷಣೆಯು ಬ್ರಾಹ್ಮಣರಿಗೆ ಯೋಗ್ಯವಲ್ಲ. ಹಾಗೆ ಮಾಡತಕ್ಕವರು ನರಕಭಾಗಿಗಳು. ಮದವೆಂಬುದು ಹದಿನೆಂಟು ದೋಷಗಳುಳ್ಳದು. ಅವುಗಳನ್ನು ನಾನು ಇನ್ನೂ ನಿನಗೆ ವಿವರಿಸಿಲ್ಲ. ಈಗ ಹೇಳುವೆನು ಕೇಳು! ಲೋಕಕ್ಕೆ ದ್ವೇಷಕಾರಣವಾದ ಕಾರ್ಯಗಳು, ಸತ್ಕಾರ್ಯಗಳಿಗೆ ಪ್ರತಿಬಂಧಕಗಳನ್ನು ಮಾಡುವುದು, ಅಸೂಯೆ, ಕಾಮ, ಕ್ರೋಧ, ಪರಾಧೀನತೆ, ಪರದೂಷಣೆ, ಚಾಡಿಹೇಳುವುದು, ಧನದ ದುರ್ವ್ಯಯ, ವಿವಾದ, ಮಾತ್ಸರ್ಯ, ಪ್ರಾಣಿಹಿಂಸೆ, ಅಸಹನ, ಮೋಹ, ಅತಿಯಾದ ಮಾತು, ಯುಕ್ತಾಯುಕ್ತಗಳನ್ನರಿಯದಿರುವುದು, ಪರರ ಹಾನಿಯನ್ನೇ ಬಯಸುವುದು, ಇವು ಹದಿನೆಂಟೂ ಮದದೋಷಗಳಾದುದರಿಂದ, ವಿವೇಕಿಯಾದವನು ಮದಕ್ಕೆ ಅವಕಾಶಕೊಡಬಾರದು.

ನಿಜವಾದ ಸೌಹಾರ್ದಕ್ಕೆ ಮುಂದೆ ಹೇಳುವ ಆರು ಲಕ್ಷಣಗಳುಂಟು. ಮಿತ್ರನ ವ್ಯಸನವನ್ನು ನೋಡಿ ವ್ಯಸನಪಡುವುದು, ಅವನ ಹರ್ಷಕಾಲದಲ್ಲಿ ಸಂತೋಷಿಸುವುದು, ತನಗೆ ಅತ್ಯಂತ ಪ್ರಿಯವಾದ ಮತ್ತು ಕೇಳಬಾರದ ವಸ್ತುಗಳನ್ನು ಮಿತ್ರನಾದವನು ಕೇಳಿದರೂ ಹಿಂತೆಗೆಯದೆ ಕೊಟ್ಟುಬಿಡು

ವುದು, ತನ್ನ ಸರ್ವ ಸೌಭಾಗ್ಯವನ್ನಾಗಲಿ, ಪ್ರಿಯಪುತ್ರನನ್ನಾಗಲಿ, ಕೊನೆಗೆ ಕಳತ್ರವನ್ನಾಗಲಿ ತನ್ನ ಮಿತ್ರನು ಯಾಚಿಸಿದಾಗ, ಅವುಗಳನ್ನೂ ತ್ಯಾಗ ಮಾಡಲು ಹಿಂಜರಿಯದಿರುವುದು, ತನ್ನ ಮಿತ್ರನಿಗೆ ತಾನು ಕೊಟ್ಟುಬಿಟ್ಟ ಮೇಲೆ ಅವನ ಮನೆಯಲ್ಲಿ ಹೋಗಿ ನೆಲಿಸಿ ಅವನಿಂದ ಕಿತ್ತುತಿನ್ನದೆ, ಆ ಮೇಲೆ ತಾನಾಗಿ ಸಂಪಾದಿಸಿದ ವಸ್ತುವನ್ನೇ ಅನುಭವಿಸುವುದು, ಮಿತ್ರನಿಗಾಗಿ ಎಂತಹ ಕಷ್ಟಕ್ಕಾದರೂ ಹಿಂಜರಿಯದೆ, ಆತ್ಮತ್ಯಾಗಮಾಡಲು ಸಿದ್ಧನಾಗಿರುವುದು, ಇವಾರೂ ಉತ್ತಮಸೌದಾರ್ಹದ ಲಕ್ಷಣಗಳು. ಭಾಗ್ಯವಂತನೂ, ಗುಣವಂತನೂ ಆದ ಇಂತಹ ತ್ಯಾಗಿಯೇ ಸಾತ್ವಿಕನೆನಿಸುವನು. ಅಂತವನು ಪಂಚಭೂತಾತ್ಮಕಗಳಾದ ಪಂಚೇಂದ್ರಿಯಗಳನ್ನೂ, ಆ ಇಂದ್ರಿಯಗಳನ್ನೆಳೆಯತಕ್ಕ ಐದು ವಿಷಯಗಳಿಂದ ತಿರುಗಿಸಬಲ್ಲನು. ಇದೂ ಕೂಡ ನಿಷ್ಕಾಮವಾದ ಪೂರ್ಣತಪಸ್ಸೆನಿಸುವುದು. ಆದರೆ, ಸತ್ವಗುಣದಿಂದ ಜಾರಿದವರಲ್ಲಿ, ಇದೇ ಫಲೋದ್ದೇಶದೊಡನೆ ಕೂಡಿದುದಾಗಿ, ಅದರಮೇಲೆ ಸತ್ಯರೂಪವಾದ ಜ್ಞಾನಕ್ಕೆ ತಡೆಯನ್ನುಂಟುಮಾಡಿ, ಯಜ್ಞಾದಿ ಕರ್ಮಗಳ ರೂಪವಾಗಿ ಹೊರಪಡುವುವು. ರಾಜಾ! ಆದರೆ, ಇಂತಹ ಯಾಗಾದಿಗಳಾದರೂ, ಸತ್ಯಸಂಕಲ್ಪದೊಡನೆ (ಪರಮಾತ್ಮಜ್ಞಾನದೊಡನೆ) ಕೂಡಿದ್ದಾಗಲೇ ಪೂರ್ಣವೆನಿಸುವುವು. ಅಂತಹ ಯಜ್ಞವೆಂಬುದು ಒಬ್ಬನಿಗೆ ಮನಸ್ಸಿನಿಂದಲೇ (ತಮೋರೂಪವಾಗಿ) ನಡೆಯುವುದು, ಇನ್ನೊಬ್ಬನಿಗೆ ವಾಕ್ಕಿನಿಂದ (ಜಪರೂಪವಾಗಿ) ನಡೆಯುವುದು, ಬೇರೊಬ್ಬನಿಗೆ ಕರ್ಮದಿಂದ ನಡೆಯುವುದು. ಹೇಗಿದ್ದರೂ ಒಂದು ಸಂಕಲ್ಪದಿಂದ (ಫಲೋದ್ದೇಶದಿಂದ) ಸಿದ್ಧಿಹೊಂದಿದವನಿಗಿಂತಲೂ ಸಂಕಲ್ಪರಹಿತನಾದ ಬ್ರಾಹ್ಮಣನೇ ಮೇಲಾಗುವನು. ರಾಜಾ! ಮತ್ತೊಂದು ಮುಖ್ಯ ವಿಷಯವನ್ನು ಇಲ್ಲಿ ನಾನು ತಿಳಿಸುವೆನು. ಮುಖ್ಯವಾಗಿ ಬ್ರಾಹ್ಮಣನು ಈಗ ನಾನು ಹೇಳಿದ, ಪರಮಾತ್ಮಜ್ಞಾನವಿಷಯವಾದ ಯೋಗವಿದ್ಯೆಯನ್ನೇ ಅಧ್ಯಯನ ಮಾಡಬೇಕು. ಬೇರೆ ಶಾಸ್ತ್ರಗಳೆಲ್ಲವನ್ನೂ ವಿದ್ವಾಂಸರು ಮಾತಿನ ವಿಕಾರಗಳು ಮಾತ್ರವೆಂದು ಹೇಳುವರು. ಈ ಸಮಸ್ತಪ್ರಪಂಚವೂ ಈ ಯೋಗದಲ್ಲಿಯೇ ನೆಲೆಗೊಳಿಸಲ್ಪಟ್ಟಿದೆ. ಇದನ್ನು ತಿಳಿದವರೇ ಮೃತ್ಯುವನ್ನು ಜಯಿಸಿ ಮೋಕ್ಷವನ್ನು ಹೊಂದುವರು. ರಾಜಾ! ಕೇವಲ ಪುಣ್ಯಕರ್ಮ

ದಿಂದಲೇ ಆ ಪರಮಾತ್ಮನನ್ನು ಹೊಂದಲು ಸಾಧ್ಯವಲ್ಲ. ಅಗ್ನಿಹೋತ್ರ ಮೊದಲಾದ ಹೋಮಗಳನ್ನೇ ಮಾಡಲಿ, ಅಥವಾ ದೊಡ್ಡ ಯಾಗಗಳನ್ನೇ ನಡೆಸಲಿ, ಬ್ರಹ್ಮಜ್ಞಾನವಿಲ್ಲದವನು ಅದರಿಂದ ಮೋಕ್ಷಕ್ಕೆ ಭಾಗಿಯಾಗಲಾರನು. ಅವನಿಗೆ ಕೊನೆಯುವರೆಗೂ ಶಾಶ್ವತವಾದ ಸಂತೋಷವೂ ಲಭಿಸದು. ತಾನೊಬ್ಬನೇ ಮೌನವನ್ನು (ಮುನಿಧರ್ಮವನ್ನು) ಉಪಾಸಿಸಬೇಕು. ಮನಸ್ಸಿನಿಂದಲೂ ಚಲಿಸಬಾರದು. ಇತರರ ನಿಂದೆಯಿಂದ ವ್ಯಸನಕ್ಕಾಗಲಿ, ಸ್ತೋತ್ರದಿಂದ ಸಂತೋಷಕ್ಕಾಗಲೀ ಅವಕಾಶಕೊಡಬಾರದು. ಓ ರಾಜೇಂದ್ರಾ! ವೇದಗಳಲ್ಲಿ ವಿಧಿಸಲ್ಪಟ್ಟ ಕ್ರಮವಾದ ಮಾರ್ಗವನ್ನು ಹಿಡಿದು, ಇದೇ ವಿಧವಾದ ಜ್ಞಾನಮಾರ್ಗದಲ್ಲಿರುವವನು ಇಲ್ಲಿದ್ದ ಹಾಗೆಯೇ ಆ ಬ್ರಹ್ಮನನ್ನು ಸಾಕ್ಷಾತ್ಕರಿಸಬಹುದು.

ಇದು ನಾಲ್ವತ್ತೈದನೆಯ ಅಧ್ಯಾಯವು.



## ಧೃತರಾಷ್ಟ್ರನಿಗೆ ಸನತ್ಸುಜಾತನು ಬ್ರಹ್ಮತತ್ತ್ವವನ್ನುಪದೇಶಿಸಿದುದು.

ಓ ಮಹಾರಾಜಾ! ಸಮಸ್ತ ಜಗತ್ತಿಗೂ ಮೂಲವಾದ ಬೀಜವೆನಿಸಿಕೊಂಡು, ಶುದ್ಧವಾದ ತೇಜೋರೂಪವಾಗಿ, ಮಹತ್ತೆಂದೂ, ಮಹಾಯಶಸ್ಸೆಂದೂ ಕರೆಯಲ್ಪಡುತ್ತ, ಜ್ಯೋತೀರೂಪವಾಗಿರುವುದೇ ಪರಬ್ರಹ್ಮವೆನಿಸುವುದು. ಅದನ್ನೇ ದೇವತೆಗಳೆಲ್ಲರೂ ಉಪಾಸಿಸುವರು. (ಇಂದ್ರಿಯಗಳು ಅದನ್ನೇ ಅನುಸರಿಸುವುವು.) ಅದರಿಂದಲೇ ಸೂರ್ಯನು ಪ್ರಕಾಶಿಸುವನು. ಅಂತಹ ದಿವ್ಯರೂಪವುಳ್ಳ, ಷಡ್ಗುಣೈಶ್ವರ್ಯಸಂಪನ್ನನಾದ, ಅನಾದಿಯಾದ ಪರಮಾತ್ಮನನ್ನು ಯೋಗಸಿದ್ಧರು ಮಾತ್ರವೇ (ತಮ್ಮ ಜ್ಞಾನದಿಂದ) ನೋಡಬಲ್ಲರು.

ಆ ಬ್ರಹ್ಮಶಬ್ದವಾಚ್ಯನಾದ ಪರಮಾತ್ಮನಿಂದಲೇ ಸೃಷ್ಟಿಕರ್ತನಾದ ಬ್ರಹ್ಮನು ಜನಿಸಿ, ಅವನಿಂದಲೇ ಬೆಳೆದು, ಸೃಷ್ಟ್ಯಾದಿ ಕಾರ್ಯಸಾಮರ್ಥ್ಯಗಳನ್ನು ಹೊಂದಿ ಬೆಳಗುತ್ತಿರುವನು. ಆ ಪರಮಾತ್ಮನು ಸಮಸ್ತ ತೇಜೋರೂಪಗಳ ನಡುವೆ ತನಗೆ ತಾನೇ ಪ್ರಕಾಶಿಸುವನು. ತನ್ನಿಂದ ಇತರ

ತೇಜಸ್ಸುಗಳನ್ನೂ ಬೆಳಗಿಸುವನು. ಬೇರೆ ತೇಜಸ್ಸಿನಿಂದ ತಾನು ತಪಿಸಲ್ಪಡದೆ, ಸೂರ್ಯಾದಿ ತೇಜೋವಸ್ತುಗಳಿಗೂ ಭಯಪ್ರದನಾಗಿರುವನು. ಇಂತಹ ಸ್ವಯಂಪ್ರಕಾಶವುಳ್ಳ ಪರಮಾತ್ಮನನ್ನು ಯೋಗಿಗಳೇ ತಮ್ಮ ಯೋಗಬಲದಿಂದ ಚೆನ್ನಾಗಿ ಕಾಣುವರು.

ಆ ಬ್ರಹ್ಮನಿಂದಲೇ ಅಪ್ಪು (ಜಲ) ಮೊದಲಾದ ಪಂಚಸೂಕ್ಷ್ಮಭೂತಗಳೂ, ಆ ಸೂಕ್ಷ್ಮಭೂತಗಳಿಂದ ಐದು ಸ್ಥೂಲಭೂತಗಳೂ ಉಂಟಾಗುವುವು. ಆ ಪಂಚಭೂತಾತ್ಮಕವಾದ ಶರೀರದ ಮಧ್ಯದಲ್ಲಿ, ಹೃದಯಾಕಾಶದೊಳಗೆ ಜೀವೇಶ್ವರರೆಂಬ ದೇವರುಗಳು ನೆಲೆಗೊಂಡಿರುವರು. ಆ ಇಬ್ಬರು ದೇವತೆಗಳೇ ಇಹಲೋಕ ಪರಲೋಕಗಳೆರಡಕ್ಕೂ ಆಶ್ರಯಭೂತರಾಗಿರುವರು. (ಈಶ್ವರನು ಪ್ರಪಂಚಕ್ಕೆಲ್ಲಾ ಆಧಾರನಾಗಿರುವುದೊಡನೆ ತನಗೆ ತಾನೇ ಆಧಾರನು.) ಮಾಯಾರಹಿತನಾಗಿ, ಜಗತ್ಕಾರಣನಾಗಿ, ಸರ್ವವ್ಯಾಪಿಯಾಗಿ, ಆದ್ಯಂತಗಳಿಲ್ಲದೆ, ಯಾವಾಗಲೂ ಇರತಕ್ಕ ಆ ಪರಮಾತ್ಮನನ್ನು (ಶುದ್ಧ ಬ್ರಹ್ಮವನ್ನು) ಯೋಗಸಿದ್ಧರೇ ಚೆನ್ನಾಗಿ ಕಾಣುವರು.

ಆ ಬ್ರಹ್ಮವೇ ಜೀವಾತ್ಮ ಪರಮಾತ್ಮರನ್ನೂ, ಭೂಮಿಯನ್ನೂ, ಸ್ವರ್ಗವನ್ನೂ, ಅಖಿಲಬ್ರಹ್ಮಾಂಡವನ್ನೂ ವಹಿಸಿರುವುದು. ಆ ಬ್ರಹ್ಮದಿಂದಲೇ ದಿಕ್ಕುಗಳು ಹರಡಿರುವುವು. ನದಿಗಳು ಪ್ರವಹಿಸುವುವು. ಆ ಬ್ರಹ್ಮಶಕ್ತಿಯಿಂದಲೇ ಕೊನೆಯಿಲ್ಲದ ಸಮುದ್ರಗಳೂ (ಕಾಮಗಳೂ) ಉತ್ಪನ್ನವಾಗಿವೆ. ಇಂತಹ ಸರ್ವಕಾರಣನಾದ, ಸನಾತನನಾದ ಪರಮಾತ್ಮನನ್ನು ಯೋಗಸಿದ್ಧರೇ ಚೆನ್ನಾಗಿ ಕಾಣಬಲ್ಲರು.

ಶರೀರವು ನಶ್ವರವಾಗಿದ್ದರೂ, ಅನಶ್ವರಗಳಾದ (ಎಂದಿಗೂ ಕ್ಷೀಣವಾಗದ) ಕಶ್ಮಲಗಳನ್ನು ಮಾಡುವುವು. ಈ ಶರೀರವೆಂಬ ರಥವು ಪ್ರಾರಬ್ಧಕರ್ಮಗಳೆಂಬ ಚಕ್ರಗಳಮೇಲೆ ಉರುಳುತ್ತಿರುವುವು. ಇಂದ್ರಿಯಗಳೇ ಅದನ್ನೆಳೆಯುತಕ್ಕ ಕುದುರೆಗಳು. ಈ ಕುದುರೆಗಳು ಶರೀರವೆಂಬ ರಥವನ್ನು ದುರ್ವಿಷಯಗಳ ಕಡೆಗೇ ಎಳೆಯುತ್ತಿರುವುವು. ಆದರೆ ಜ್ಞಾನಿಯಾದವನು ಆ ಕುದುರೆಗಳನ್ನಡಗಿಸಿ, ಆ ರಥವನ್ನು ನಿರ್ವಿಕಾರನಾದ ಆ

ಪರಮಾತ್ಮನ ಕಡೆಗೆ ತಿರುಗಿಸಬಲ್ಲನು. ಇಂತಹ ಪರಮಾತ್ಮನನ್ನು ಯೋಗಸಿದ್ಧರಾದ ಮುನಿಗಳೇ ತಮ್ಮ ಜ್ಞಾನದೃಷ್ಟಿಯಿಂದ ಕಾಣುವರು.

ಆ ಪರಮಾತ್ಮನ ರೂಪಕ್ಕೆ ಇಂತಹದು ಸಾಟಿಯೆಂದು ಹೇಳುವುದು ಸಾಧ್ಯವಲ್ಲ. ಅದಕ್ಕೆ ಉಪಮಾನವೇ ಇಲ್ಲ. ಆ ರೂಪವನ್ನು ಕಣ್ಣಿಂದ ಕಂಡವರಿಲ್ಲ. ಇಂದ್ರಿಯಗಳಿಗಾಗಲಿ, ಬುದ್ಧಿಗಾಗಲಿ ಅದು ಗೋಚರಿಸ ತಕ್ಕುದಲ್ಲ. ಮನಸ್ಸಿನಿಂದ ಊಹಿಸುವುದಕ್ಕೂ ಸಾಧ್ಯವಲ್ಲ. ಅಂತಹ ಪರಮಾತ್ಮನನ್ನು ಹೃದಯದಲ್ಲಿ ಯಾರು ಕಾಣುವರೋ, ಅಂತವರೇ ಮುಕ್ತರಾಗುವರು. ಅಂತಹ ಪರಮಾತ್ಮನನ್ನು ಯೋಗಸಿದ್ಧರೇ ಕಾಣಬಲ್ಲರು.

ಆ ಪರಮಾತ್ಮನ ಸ್ವರೂಪವನ್ನು ತಿಳಿಯದವರಿಗೆ ಸಂಸಾರಬಂಧವು ಬಿಡಲಾರದು. ಅವಿದ್ಯೆಯೆಂಬುದು (ಅಜ್ಞಾನವು) ಬಿಟ್ಟಹೊರತು, ಆ ಪರಮಾತ್ಮನ ಸಾಕ್ಷಾತ್ಕಾರವು ಲಭಿಸದು. ಆ ಅವಿದ್ಯೆಯೆಂಬುದು ಹನ್ನೆರಡು ವರ್ಗಗಳಿಂದ ಕೂಡಿದ ಒಂದು ನದಿಯೆನಿಸಿದೆ. ಹನ್ನೆರಡು ವರ್ಗಗಳೆಂದರೆ * (೧) ಅಂತಃಕರಣವೆನಿಸಿದ ಚಿತ್ತ, (೨) ಅದರ ಕಾರ್ಯವಾದ ಸ್ಮರಣ, (೩) ಶ್ರೋತ್ರಾದಿ ಜ್ಞಾನೇಂದ್ರಿಯ ಸಮೂಹಗಳು, (೪) ಅದರ ಕಾರ್ಯಗಳಾದ ಶ್ರವಣ ಮೊದಲಾದ ಜ್ಞಾನಸಮೂಹಗಳು, (೫) ವಾಕ್ಕು ಮೊದಲಾದ ಕರ್ಮೇಂದ್ರಿಯಗಳು, (೬) ವಚನ ಮೊದಲಾದ ಆ ಇಂದ್ರಿಯ ಕಾರ್ಯಗಳು, (೭) ಶಬ್ದಾದಿ ವಿಷಯಗಳು, (೮) ಅದಕ್ಕೆ ಆಧಾರಗಳಾದ ಭೂತಗಳು, (೯) ಪ್ರಾಣಗಳು, (೧೦) ಅವುಗಳ ಕಾರ್ಯವಾದ ಶ್ವಾಸಾದಿಗಳು, (೧೧) ಪೂರ್ವವಾಸನೆ, (೧೨) ಅದರ ಕಾರ್ಯವಾದ ಪುಣ್ಯಪಾಪಕರ್ಮಗಳು. ಇವಿಷ್ಟೂ ಆ ಅವಿದ್ಯೆಯೆಂಬ ನದಿಯಲ್ಲಿ ಆಗುವ ಫಲಗಳು. ಈ ನದಿಯು ಮಹಾಭಯಂಕರವಾದುದು. ದೇವತೆಗಳಿಂದ ರಕ್ಷಿತವಾದುದು. ಇದರ ಜಲವನ್ನು ಕುಡಿದು, ಅದರ ರುಚಿಯ

---

* ದ್ವಾದಶಪೂಗಗಳು '' ಚಿತ್ತಾದಿ ಪೂಗಃ ಸ್ಮರಣಾದಿ ಪೂಗಃ | ಶ್ರೋತ್ರಾದಿ ಪೂಗಃ ಶ್ರವಣಾದಿ ಪೂಗಃ || ವಾಗಾದಿ ಪೂಗೋ ವಚನಾದಿ ಪೂಗಃ | ಶಬ್ದಾದಿ ಪೂಗೋ ವಿಯದಾದಿ ಪೂಗಃ | ಪ್ರಾಣಾದಿ ಪೂಗಃ ಶ್ವಸನಾದಿ ಪೂಗಃ | ಸಂಸ್ಕಾರ ಪೂಗಃ ಸುಕೃತಾದಿ ಪೂಗಃ || ಏತೈರ್ಮಹಾಪೂಗವರ್ಗೈಃ ಅವಿದ್ಯಾನದ್ಯಾಮಧಶ್ಚೋ ಪರಿಚ್ಯೈತಿ ಜೀವಃ ||

ನ್ನು ತಿಳಿದವರು ಅದನ್ನು ಬಿಡಲಾರದೆ, ಯಾವಾಗಲೂ ಅದರಲ್ಲಿಯೇ ಬಿದ್ದು ಮುಳುಗಿ ತೇಲುತ್ತಿರುವರು. ಇದಕ್ಕೂ ಯಾವ ಬ್ರಹ್ಮವೇ ಉತ್ಪತ್ತಿಸ್ಥಾನವೋ, ಆ ಪರಬ್ರಹ್ಮವನ್ನು ಯೋಗಸಿದ್ಧರಾದ ಮುನಿಗಳೇ ಕಾಣುವರು.

ಜೀವನು ಜೇನಿಗಾಗಿ ಸುತ್ತುತ್ತಿರುವ ಜೇನುನೊಣದಂತೆ ಸುಖಕ್ಕಾಗಿ ತೊಳಲುತ್ತಿರುವನು. ಜೇನುನೊಣವು ಶುಕ್ಲಪಕ್ಷದಲ್ಲಿ ಅರ್ಧತಿಂಗಳವರೆಗೆ ಮಾತ್ರ ತಾನು ಸಂಗ್ರಹಿಸಿದ ಜೇನನ್ನು ಕುಡಿದು, ಉಳಿದುದನ್ನು ಮಿಗಿಸಿಡುವಂತೆ, ಜೀವನು ಕರ್ಮಫಲವನ್ನು ಪರಲೋಕದಲ್ಲಿ ಅರ್ಧಮಾತ್ರವನ್ನನುಭವಿಸಿ, ಉಳಿದ ಭಾಗವನ್ನು ಹಾಗೆಯೇ ಮಿಗಿಸಿಟ್ಟುಕೊಂಡು ಈ ಲೋಕಕ್ಕೆ ಬರುವನು. ಎಂದರೆ, ಪರಲೋಕದಲ್ಲಿ ಪೂರ್ಣಫಲವನ್ನನುಭವಿಸದೆ ಕರ್ಮವಾಸನೆಯನ್ನು ಇಟ್ಟುಕೊಂಡೇ ಬರುವನು. ಸಮಸ್ತಭೂತಗಳಿಗೂ ಇಂತಹ ಕರ್ಮವಾಸನೆಯನ್ನು ಕಲ್ಪಿಸಿಟ್ಟ ಆ ಪರಮಾತ್ಮನನ್ನು ಯೋಗಸಿದ್ಧರೇ ತಮ್ಮ ಜ್ಞಾನಬಲದಿಂದ ಕಾಣಬಲ್ಲರು.

ಜೀವನೆಂಬ ರೆಕ್ಕೆಗಳಿಲ್ಲದ (ಶುದ್ಧವಾದ) ಜೇನುನೊಣವು, ಹಿರಣ್ಮಯವಾದ ಅಶ್ವತ್ಥವೃಕ್ಷದಲ್ಲಿ (ಬ್ರಾಹ್ಮಣಾದಿ ಶರೀರಗಳಲ್ಲಿ) ಸೇರಿದ್ದು, ಅಲ್ಲಿ ರೆಕ್ಕೆಗಳನ್ನು (ಉಪಾದಿಗಳನ್ನು) ಹೊಂದಿದಮೇಲೆ, ನಾನಾ ದಿಕ್ಕುಗಳಿಗೆ (ಕರ್ಮಗುಣವಾದ ಗತಿಗಳಿಗೆ) ಹೋಗಿ ತೊಳಲುವುವು. ಇಂತಹ ಜೀವಗಳಿಗೆಲ್ಲ ಆಧಾರನಾಗಿ ಅನಾದಿಯೆನಿಸಿಕೊಂಡ ಆ ಪರಮಪುರುಷನನ್ನು ಯೋಗಸಿದ್ಧರೇ ನೋಡಬಲ್ಲರು.

ಆ ಉಪಾಧಿಗಳೇ ಪೂರ್ಣವಾದ ಪರಮಾತ್ಮನಿಂದ ಪೂರ್ಣನಾದ ಜೀವನನ್ನು ಉದ್ಧರಿಸುವುವು. ಆ ಪೂರ್ಣವಾದ ಬ್ರಹ್ಮನಿಂದ ಪೂರ್ಣಪ್ರಕೃತಿಜನ್ಯವಾದ ಕಾರ್ಯಪ್ರಪಂಚಗಳನ್ನು ಕಲ್ಪಿಸುವುವು. ಮತ್ತು ಆ ಪೂರ್ಣಬ್ರಹ್ಮನಿಂದ ಪೂರ್ಣನಾದ ಜೀವನನ್ನು ಅಗಲಿಸುವುವು. ಕೊನೆಗೆ ಪೂರ್ಣವಾದ ಬ್ರಹ್ಮವೊಂದೇ ನೆಲೆಯಾಗಿ ನಿಲ್ಲುವುದು. ಅನಾದಿಯಾದ ಆ ಪರಮಪುರುಷನನ್ನು ಯೋಗಸಿದ್ಧರಾದ ಮುನಿಗಳೇ ನೋಡುವರು.

ಪೂರ್ಣಸ್ವರೂಪನಾದ ಆ ಪರಮಪುರುಷನಿಂದಲೇ ವಾಯು ಮೊದಲಾದ ಪಂಚಭೂತಗಳೂ ಹುಟ್ಟುವುವು. ಅವನ ಶಕ್ತಿಯಿಂದಲೇ ಅವು

ನಡೆಯುವುವು. ಅಗ್ನಿಯೂ, ಸೋಮನೂ (ಭೋಕ್ತೃಭೋಜ್ಯಗಳೂ) ದೇಹೇಂದ್ರಿಯಾದಿಗಳೂ, ಪ್ರಾಣವೂ ಉಂಟಾದುವು. ಅಷ್ಟೇಕೆ? ಎಲ್ಲವೂ ಆ ಪರಬ್ರಹ್ಮನಿಂದಲೇ ಉಂಟಾದುವೆಂದು ತಿಳಿ. ಒಂದೊಂದನ್ನೂ ಪ್ರತ್ಯೇಕಿಸಿ ಹೇಳುವುದಕ್ಕೆ ನಾವು ಶಕ್ತರಲ್ಲ. ಅಂತಹ ಅನಾದಿಪುರುಷನನ್ನು ಯೋಗಿಗಳೇ ನೋಡಬಲ್ಲರು.

ಆ ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿಯೇ ಯೋಗಾಭ್ಯಾಸಗಳು ಏರ್ಪಟ್ಟಿವೆ. ಆ ಯೋಗದಲ್ಲಿ ಅಪಾನವು ಪ್ರಾಣದಲ್ಲಿ ಲಯಿಸುವುದು. ಆ ಪ್ರಾಣವನ್ನು ಮನೋರೂಪಿಯಾದ ಚಂದ್ರನಲ್ಲಿಯೂ, ಆ ಮನಸ್ಸನ್ನು ಆದಿತ್ಯರೂಪವಾದ ಬುದ್ಧಿಯಲ್ಲಿಯೂ, ಆ ಬುದ್ಧಿಯನ್ನು ಪರಮಾತ್ಮನಲ್ಲಿಯೂ ಲಯಿಸುವಂತೆ ಮಾಡಬೇಕು. ಅಂತಹ ಪರಮಾತ್ಮನನ್ನು ಯೋಗಸಿದ್ಧರೇ ನೋಡುವರು.

ಆತ್ಮವೇ ಒಂದು ಹಂಸವು. ಅದಕ್ಕೆ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ, ವೆಂಬ ನಾಲ್ಕು ಪಾದಗಳು. ಅವುಗಳಲ್ಲಿ ಮೂರು ಪಾದಗಳನ್ನು ಮೇಲಕ್ಕೆತ್ತಿಕೊಂಡು ಸಂಸಾರವೆಂಬ ಜಲಾಶಯದಲ್ಲಿ ಸುತ್ತುತ್ತಿರುವುದು. ತುರೀಯವೆಂಬ ಒಂದು ಪಾದವನ್ನು ಉಪಯೋಗಿಸಲಾರದು. ಆ ಪಾದವು ಕಾಣಿಸದಂತಿದೆ. ಆ ಒಂದು ಪಾದವನ್ನು (ಬ್ರಹ್ಮಜ್ಞಾನವನ್ನು) ಮೇಲಕ್ಕೆತ್ತಿ ಉಪಯೋಗಿಸಿದ ಪಕ್ಷದಲ್ಲಿ ಆಗ ಆ ಜೀವನಿಗೆ ಜನನಮರಣಗಳೆರಡೂ ಒಂದೇ ಆಗುವುವು. ಎಂದರೆ ಅವನು ಮುಕ್ತನಾಗುವನು. ಯೋಗಸಿದ್ಧರಾದವರೇ ಈ ವಿಧವಾಗಿ ಅನಾಧಿಯಾದ ಆ ಪರಮಪುರುಷನನ್ನು ಕಾಣಬಲ್ಲರು.

ಅಂತರಾತ್ಮನೂ ಪೂರ್ಣನೂ ಆದ ಆ ಪರಬ್ರಹ್ಮನು ವಿಲಕ್ಷಣ ಅಂಗಶರೀರದ ಸಂಬಂಧದಿಂದ ಅಂಗುಷ್ಠಪ್ರಮಾಣನಾಗಿ ಹೃದಯಕಮಲದಲ್ಲಿ ಅಡಗಿರುವನು. ಸರ್ವೇಶ್ವರನೂ, ಸ್ತೋತ್ರಾರ್ಹನೂ, ಅನಾದಿಯೂ, ತೇಜೋರೂಪನೂ ಆದ ಆ ಪರಮಾತ್ಮನ ಸ್ವರೂಪವನ್ನು ಮೂಢರು ತಿಳಿಯಲಾರರು. ಯೋಗದಲ್ಲಿ ಸಿದ್ಧಿಯನ್ನು ಪಡೆದವರೇ ಅವನನ್ನು ಕಾಣಬಲ್ಲರು.

ಶಮ ದಮಾದಿ ಗುಣಗಳಿಂದ ಕೂಡಿದ್ದರೂ, ಆ ಸಾಧನಗಳೇನೂ ಇಲ್ಲದಿದ್ದರೂ, ಎಲ್ಲರಲ್ಲಿಯೂ ಆ ಪರಮಾತ್ಮನು ಒಂದೇ ವಿಧವಾಗಿಯೇ ಕಾಣಿಸತಕ್ಕವನು. ಮುಕ್ತಿದಶೆಯಲ್ಲಿಯೂ, ಸಂಸಾರದಶೆಯಲ್ಲಿಯೂ, ಅವನು ಒಂದೇ ವಿಧವಾಗಿ ನೆಲೆಸಿರುವನು. ಆದರೆ ಮುಕ್ತರು ಮಾತ್ರವೇ ಆ ಜೇನನ್ನು (ಬ್ರಹ್ಮಾನಂದವನ್ನು) ಸವಿಯಬಲ್ಲರು. ಅಂತಹ ದಿವ್ಯ ಪುರುಷನನ್ನು ಯೋಗಸಿದ್ಧರಾದ ಮುನಿಗಳೇ ನೋಡುವರು.

ವಿದ್ವಾಂಸನಾದವನು ಜ್ಞಾನಬಲದಿಂದ ತನ್ನ ಜೀವಯಾತ್ರೆಯಲ್ಲಿ ಆತ್ಮಾನಾತ್ಮಗಳೆರಡನ್ನೂ ತಿಳಿದುಕೊಂಡು ಹೋಗುವಪಕ್ಷದಲ್ಲಿ, ಅವನು ಅಗ್ನಿಹೋತ್ರವನ್ನು ಮಾಡಿದರೂ ಮಾಡದಿದ್ದರೂ ಒಂದೇ! ಆದುದರಿಂದ ಓ ರಾಜೇಂದ್ರಾ! ನಿನ್ನ ಮಾತುಗಳಾವುವೂ ನೀಚವಲ್ಲದಿರಲಿ! ನಿನಗೆ ಬ್ರಹ್ಮಜ್ಞಾನವುಂಟಾಗಲಿ! ಮನೋಜಯವಿದ್ದವರಿಗೇ ಅದು ಲಭ್ಯವು. ಅಂತಹ ಜ್ಞಾನಬಲದಿಂದ ಯಾವನನ್ನು ಕಾಣಬೇಕೋ, ಆ ಆದಿಪುರುಷನನ್ನು ಯೋಗಸಿದ್ಧರಾದವರೇ ನೋಡುವರು.

ಆ ಪರಬ್ರಹ್ಮನ ಸ್ಥಿತಿಯು ಈ ವಿಧವಾದುದು. ಆತನು ಮಹಾಮಹಿಮೆಯುಳ್ಳವನು. ಲೋಕವನ್ನೆಲ್ಲ ತನ್ನಲ್ಲಿ ಅಡಗಿಸಿಕೊಳ್ಳಬಲ್ಲವನು. ಪರಿಪೂರ್ಣನು. ಅವನನ್ನು ಯಾವನು ತಿಳಿಯುವನೋ ಅವನಿಗೆ ಉತ್ತಮ ಪುರುಷಾರ್ಥವಾದ ಮೋಕ್ಷವು ಇಲ್ಲಿಯೇ ಲಭಿಸದೆ ಹೋಗಲಾರದು. ಅಂತಹ ದಿವ್ಯಪುರುಷನನ್ನು ಯೋಗಸಿದ್ಧರೇ ನೋಡಬಲ್ಲರು.

ಲಕ್ಷೋಪಲಕ್ಷ ರೆಕ್ಕೆಗಳನ್ನು ಕಟ್ಟಿಕೊಂಡು, ಮನೋವೇಗದಿಂದ ಎಷ್ಟೋ ದೂರಕ್ಕೆ ಹೋಗಿ ಹುಡುಕಿದರೂ, ಯಾವ ಪರಮಾತ್ಮನನ್ನು ಕಾಣುವುದು ಸಾಧ್ಯವಲ್ಲವೋ, ಹೃದಯಾಕಾಶಮಧ್ಯದಲ್ಲಿಯೇ ಜ್ಞಾನಿಗಳಿಗೆ ಕಾಣಿಸುವ ಆ ಪರಮಾತ್ಮನನ್ನು ಯೋಗಸಿದ್ಧರು ತಮ್ಮ ಧ್ಯಾನದೃಷ್ಟಿಯಿಂದ ನೋಡಬಲ್ಲರು.

ಆ ಪರಮಾತ್ಮನ ರೂಪವು ಕಣ್ಣಮುಂದೆ ಕಾಣಿಸತಕ್ಕುದಲ್ಲ. ಶುದ್ಧ ಮನಸ್ಸುಳ್ಳವರು ಮಾತ್ರವೇ ಆತನನ್ನು ನೋಡಬಲ್ಲರು. ಯಾರು ಸರ್ವ

ಭೂತಹಿತರಾಗಿ, ಮನಸ್ಸನ್ನು ಜಯಿಸಿ, ಶೋಕಮೋಹಾದಿ ವಿಕಾರಗಳಿಗೆ ಎಡೆಗೊಡದಿರುವರೋ, ಅಂತವರೇ ಶುದ್ಧಮನಸ್ಸುಳ್ಳವರು. ಯಾರು, ಹೆಂಡಿರು, ಮಕ್ಕಳು, ಮನೆ, ಮಠ ಮುಂತಾದುವುಗಳ ಮೋಹವನ್ನು ತೊರೆದು ಸನ್ಯಸಿಸುವರೋ ಅಂತವರೇ ಮುಕ್ತಿಪಾತ್ರರು. ಇಂತವರಿಗೆ ಗೋಚರಿಸತಕ್ಕ ಆ ಅನಾದಿಪುರುಷನನ್ನು ಯೋಗಸಿದ್ಧಿಯನ್ನು ಪಡೆದವರೇ ಕಾಣುವರು.

ರಾಜಾ! ಕೇವಲ ಡಾಂಭಿಕಸನ್ಯಾಸದಿಂದ ಪ್ರಯೋಜನವಿಲ್ಲ. ಅದರಲ್ಲಿ ನಿರ್ವಂಚಕರಾಗಿರಬೇಕು. ಬ್ರಹ್ಮಜ್ಞಾನವಿಲ್ಲದೆಯೇ ಕೆಲವರು, ಡಾಂಭಿಕನಾದ ಗುರುವಿನ ಉಪದೇಶದಿಂದಲೋ, ಇಲ್ಲವೇ ತಮ್ಮ ಸ್ವೇಚ್ಛಾಚಾರದಿಂದಲೋ, ಹುತ್ತದಲ್ಲಿ ಅಡಗಿರುವ ಸರ್ಪದಂತೆ ಬರೀ ವೇಷದಿಂದ ತಮ್ಮನ್ನು ಮರೆಸಿಕೊಂಡಿರುವರು. ಇಂತವರನ್ನು ನೋಡಿ ಅನೇಕ ಮೂಢರು ಮರುಳಾಗುವುದುಂಟು. ಇವರನ್ನು ಆ ಡಾಂಭಿಕರು ತಮ್ಮ ದಾರಿಗೇ ಎಳೆದು ನರಕಕ್ಕೆ ಸೇರಿಸುವರು. ಇಂತಹ ವಂಚಕರಿಗೆ ಗೋಚರಿಸದ ಆ ಪರಮಾತ್ಮನನ್ನು ಯೋಗಸಿದ್ಧರು ಕಾಣುವರು.

ಯೋಗಸಿದ್ಧನಾದವನ ಅನುಭವಗಳಾವುವೆಂದರೆ, ಅವನು ತನ್ನಲ್ಲಿ ತಾನು "ಈ ಅಸತ್ತುಗಳಾದ ದೇಹೇಂದ್ರಿಯಾದಿಗಳು ನನಗೆ ಸುಖವನ್ನಾಗಲಿ, ದುಃಖವನ್ನಾಗಲಿ ಉಂಟುಮಾಡತಕ್ಕುವಲ್ಲ. ನನಗೆ ಜನನಮರಣಗಳೂ ಇಲ್ಲ. ನನಗೆ ಇದಕ್ಕಿಂತ ಬೇರೆ ಮೋಕ್ಷವೇನಿದೆ? ಸತ್ಯಾನೃತಗಳೆರಡೂ (ಎಂದರೆ ಸತ್ಯವೆನಿಸಿದ ಆಕಾಶಾದಿ ಲೋಕಗಳೂ, ಸ್ವಪ್ನ ಮೊದಲಾದ ಅಸತ್ಯ ಪ್ರಪಂಚಗಳೂ) ನನಗೆ ಕಟ್ಟುಪಟ್ಟಿವೆ. ಕಾರ್ಯಕಾರಣಗಳೆರಡರ ಉತ್ಪತ್ತಿಗೂ .ಲಯಕ್ಕೂ ನಾನೇ ಆಶ್ರಯಭೂತನು" ಎಂಬೀ ಭಾವವುಂಟಾಗುವುದು. ಇಂತಹ ಯೋಗಸಿದ್ಧಿಯುಳ್ಳವರೇ ಆ ಬ್ರಹ್ಮವನ್ನು ಕಾಣಬಲ್ಲರು.

ನಿರ್ವಿಕಾರನೂ, ಚಿದ್ರೂಪನೂ ಆದ ಪರಮಾತ್ಮನು ಸತ್ಕರ್ಮದಿಂದ ಉತ್ಕೃಷ್ಟನೂ, ಅಸತ್ಕರ್ಮದಿಂದ ಅಪಕೃಷ್ಟನೂ ಆಗುವ ಸಂಭವವಿಲ್ಲ.

ಈ ನೀಚೋಚ್ಚಭಾವಗಳೆಲ್ಲವೂ ದೇಹಾಭಿಮಾನವುಳ್ಳ ನರರಿಗೆ ಮಾತ್ರವೇ. ಬ್ರಹ್ಮವಿತ್ತುಗಳಿಗೆ ಅದೇನೂ ಇರುವುದಿಲ್ಲ. ಈ ಜ್ಞಾನಪರಿಪಾಕವೇ ಮೋಕ್ಷಕ್ಕೆ ಸಮಾನವು. ಹೀಗೆ ಮುಕ್ತರಾದವರು ಆ ಪರಮಾತ್ಮವಲ್ಲಿ ಸೇರಿ, ಬ್ರಹ್ಮಾನಂದವೆಂಬ ಜೇನನ್ನು ಸವಿಯುವರು. ಯೋಗಸಿದ್ಧರೇ ಅಂತಹ ಪರಮಪುರುಷನನ್ನು ಕಾಣುವರು.

ಆತ್ಮಜ್ಞಾನಿಗಳಿಗೆ, ಮತ್ತೊಬ್ಬರು ಹೇಳಿದ ಅತಿಕ್ರಮದ ಮಾತುಗಳು (ನಿಂದೆಗಳು) ಮನಸ್ಸಿಗೆ ಸಂಕಟವನ್ನುಂಟುಮಾಡುವುದಿಲ್ಲ. ಅಂತವನಿಗೆ ತಾನು ಅಧ್ಯಯನಮಾಡಲಿಲ್ಲವೆಂದಾಗಲಿ, ಅಗ್ನಿಹೋತ್ರಗಳನ್ನು ನಡೆಸಲಿಲ್ಲವೆಂದಾಗಲಿ ಪಶ್ಚಾತ್ತಾಪವೂ ಉಂಟಾಗದು. ಬ್ರಹ್ಮವಿದ್ಯೆಯ ಪ್ರಭಾವವು ಈ ವಿಧವಾದುದು. ಬ್ರಹ್ಮವಿದ್ಯೆಯು ಮನಸ್ಸಿಗೆ ಯೋಗಶುದ್ಧಿಯನ್ನು ಬಹುಶೀಘ್ರದಲ್ಲಿ ಉಂಟುಮಾಡುವುದು. ಇದರಿಂದ ಧೀರರು ಅಸಾಧಾರಣಪ್ರಜ್ಞೆಯನ್ನು (ಸರ್ವಜ್ಞತ್ವವನ್ನು) ಪಡೆಯುವರು. ಯೋಗಸಿದ್ಧರೇ ಜ್ಞಾನದೃಷ್ಟಿಯಿಂದ ಆ ಪರಮಾತ್ಮನನ್ನು ಕಾಣುವರು.

ಹೀಗೆ ಯಾವನಿಗೆ ಸರ್ವಭೂತಗಳಲ್ಲಿಯೂ ಆತ್ಮಜ್ಞಾನವು ಹುಟ್ಟುವುದೋ ಅಂತವನಿಗೆ ಯಾರು ಹೇಗಿದ್ದರೇನು? ಅವನು ತನ್ನವಿಚಾರವಾಗಿಯಾಗಲಿ, ಇತರರ ವಿಚಾರವಾಗಿಯಾಗಲಿ ದ್ವೇಷಾಸೂಯೆಗಳಿಂದ ದುಃಖಿಸಬೇಕಾದ ಕಾರಣವೇನಿದೆ? ಅಂತವನಿಗೆ ಎಲ್ಲವೂ ಒಂದೇ ವಿಧವಾಗಿ ಕಾಣಿಸುವುದು.

ನಾನಾ ಕಡೆಗಳಲ್ಲಿಯೂ ಕೋಡಿ ಹರಿಯುವಂತೆ ತುಂಬಿ ತುಳುಕುತ್ತಿರುವ ಪೂರ್ಣತಟಾಕಗಳಿದ್ದರೂ, ದಾಹಗೊಂಡವನು ಅದರಲ್ಲಿ ತನ್ನ ಬಾಯಾರಿಕೆಯು ತೀರುವುದಕ್ಕೆ ತಕ್ಕಷ್ಟುಮಾತ್ರ ನೀರನ್ನು ಕುಡಿದು ತೃಪ್ತನಾಗುವಂತೆ, ಆತ್ಮಜ್ಞಾನಿಗೆ ನಾನಾವೇದಶಾಸ್ತ್ರಗಳನ್ನು ನಾನಾವಿಧವಾಗಿ ಹುಡುಕಿನೋಡಿದರೂ, ಅವನು ಗ್ರಹಿಸಬೇಕಾದುದು ಆ ಆತ್ಮಜ್ಞಾನವೊಂದೇ! ಆ ಪರಮಾತ್ಮನು ಅಂಗುಷ್ಠಮಾತ್ರನಾಗಿ, (ಹೆಬ್ಬೆರಳಿನ ಪ್ರಮಾಣಕ್ಕೆ) ತನ್ನ ಹೃದಯದಲ್ಲಿಯೇ ಅಡಗಿರುವನು. ಅವನು ಸಾಧಾರಣ ದೃಷ್ಟಿಗೆ

ಕಾಣಿಸತಕ್ಕವನಲ್ಲ. ಅವನು ಜನ್ಮರಹಿತನು. ಮಹಾಮಹಿಮೆಯುಳ್ಳವನು. ಸರ್ವವ್ಯಾಪಕನು. ಹಗಲೂ, ರಾತ್ರಿಯೂ, ಬೇಸರಗೊಳ್ಳದೆ ಲೋಕನಿಯಮನ ಕಾರ್ಯದಲ್ಲಿ ಎಚ್ಚರಗೊಂಡವನು. ಅಂತಹ ಪರಮಾತ್ಮ ಸ್ವರೂಪವನ್ನು ಸಾಕ್ಷಾತ್ಕರಿಸಿದ ಪಂಡಿತನಾವನೋ, ಅವನೇ ಶುದ್ಧಾತ್ಮನಾಗಿ ನಿತ್ಯನಿಶ್ಚಿಂತನಾಗಿ ಸುಖಿಯಾಗಿರುವನು.

ಹೀಗೆ ಸರ್ವಭೂತಗಳಲ್ಲಿ ಸಮಬುದ್ಧಿ ಹುಟ್ಟಿದ ಬ್ರಹ್ಮಜ್ಞಾನಿಗೆ, " ತಾಯಿ, ತಂದೆ, ತಾತನು, ಮಗನು ಎಲ್ಲವೂ ನಾನೇ! ಇರುವುದು, ಇಲ್ಲದಿರುವುದು, ಭೂತ, ಭವಿಷ್ಯದ್ವರ್ತಮಾನಗಳು ಎಲ್ಲವೂ ನಾನೇ. ಎಲ್ಲರೂ ನನ್ನ ಆತ್ಮದಲ್ಲಿಯೇ ಇರುವರು. ನನ್ನವರು ನೀವಲ್ಲ! ನಿಮ್ಮವರು ನಾನಲ್ಲ" ವೆಂಬ ಬುದ್ಧಿಹುಟ್ಟಿ ಮೋಹಗಳೆಲ್ಲ ಬಿಟ್ಟು ಹೋಗುವುವು. ಮತ್ತು ಅಂತವನಿಗೆ, " ತನ್ನ ಉತ್ಪತ್ತಿ, ಸ್ಥಿತಿ, ಲಯಗಳಿಗೆಲ್ಲ ಆತ್ಮವೇ ಕಾರಣವು. ಬಟ್ಟೆಯಲ್ಲಿ ಹಾಸುಹೊಕ್ಕುಗಳಾಗಿ ವ್ಯಾಪಿಸಿರುವ ನೂಲೆಳೆಗಳು ಹೇಗೋ ಹಾಗೆ ನಾನು ಸರ್ವವ್ಯಾಪಕನು. ಜರಾಮರಣಗಳಿಲ್ಲದೆ ನೆಲೆಯಾಗಿರತಕ್ಕವನು. ಹಗಲು ರಾತ್ರಿಯೂ ಬೇಸರವಿಲ್ಲದೆ ಸಂಚರಿಸತಕ್ಕವನು. ಜ್ಞಾನಾಶ್ರಯನು " ಎಂದು ತೋರುವುದು. ಹೀಗೆ ತನ್ನ ಆತ್ಮಸ್ವರೂಪವನ್ನು ತಿಳಿದವನೇ ಕಲ್ಮಷರಹಿತನಾದ ಶುದ್ಧಾತ್ಮನೆನಿಸುವನು. ಆ ಪರಮಾತ್ಮನು ಅಣುವಿಗಿಂತಲೂ ಅಣುವಾಗಿ, ಸರ್ವಭೂತದಯಾಪರನಾಗಿ, ಸದಾ ಎಚ್ಚರದಿಂದಿರುವನು. ಸರ್ವಕಾರಣಭೂತನಾದ ಆ ಪರಮಾತ್ಮನು, ಸರ್ವಭೂತಗಳ ಹೃದಯಾಂತರ್ಯಾಮಿಯಾಗಿ ಬೆಳಗುತ್ತಿರುವನು. ಅಂತವನನ್ನು ಜ್ಞಾನಿಗಳು ತಮ್ಮ ಹೃದಯದಲ್ಲಿ ಸಾಕ್ಷಾತ್ಕರಿಸಿ ತಿಳಿಯಬಲ್ಲರು ".

ಇದು ನಾಲ್ವತ್ತಾರನೆಯ ಅಧ್ಯಾಯವು.

**ಇಲ್ಲಿಗೆ ಸನತ್ಸುಜಾತಪರ್ವವು ಮುಗಿದುದು.**

# ಯಾನಸಂಧಿಪರ್ವವು.

ಸಂಜಯನು ಪಾಂಡವರ ಕಡೆಯಿಂದ ತಂದಿರುವ ಸಂದೇಶವನ್ನು ಕೇಳುವುದಕ್ಕಾಗಿ ಧೃತರಾಷ್ಟ್ರಾದಿಗಳೆಲ್ಲರೂ ಸಭೆಗೆ ಬಂದುದು. ಸಂಜಯನು ಶ್ರೀಕೃಷ್ಣನ ಮಾತನ್ನು ತಿಳಿಸಿದುದು.

ಓ ಜನಮೇಜಯರಾಜಾ! ಕೇಳು! ಹೀಗೆ ಧೃತರಾಷ್ಟ್ರನು, ಸನತ್ಸುಜಾತನೊಡನೆಯೂ, ವಿದುರನೊಡನೆಯೂ ಸಂಭಾಷಣಮಾಡುತ್ತಿರುವಾಗಲೇ ರಾತ್ರಿಯು ಕಳೆದು ಬೆಳಗಾಗುತ್ತಬಂದಿತು. ಬೆಳಗಾದೊಡನೆಯೇ ದುರ್ಯೋಧನನ ಕಡೆಯ ರಾಜರೆಲ್ಲರೂ, ಸಂಜಯನು ತಂದಿರುವ ಸಂದೇಶವನ್ನು ಕೇಳಬೇಕೆಂಬ ಕುತೂಹಲದಿಂದ, ರಾಜಸಭೆಗೆ ಬರಲಾರಂಭಿಸಿದರು. ಧರ್ಮಾರ್ಥಯುಕ್ತವಾದ ಪಾಂಡವರ ಸಂದೇಶವೇನೆಂದು ಕೇಳುವುದಕ್ಕಾಗಿ, ಎಲ್ಲರೂ ಆತುರಗೊಂಡಿದ್ದರು. ಆ ಸಭೆಯಾದರೋ, ಮಂಗಳಾಲಂಕಾರಗಳಿಂದ ಕೂಡಿ, ಸುಧಾಧವಳಿತವಾಗಿ (ಸುಣ್ಣಹಚ್ಚಿ), ಚಂದ್ರನಂತೆ ಬೆಳಗುತ್ತಿರುವುದು. ಸುವರ್ಣಮಯವಾದ ಅಂಗಳಗಳಿಂದ ಮನೋಹರವಾಗಿರುವುದು. ಸುಗಂಧಜಲಸೇಚನದಿಂದ ಘಮಘಮಿಸುತ್ತಿರುವುದು. ಅಲ್ಲಲ್ಲಿ ಕೆಲವುಕಡೆ ಸುವರ್ಣಮಯವಾದ ಆಸನಗಳು! ಮರದಿಂದ ಮಾಡಿದ ಆಸನಗಳು! ರತ್ನದಿಂದ ಕೆತ್ತಲ್ಪಟ್ಟ ಆಸನಗಳು! ದಂತದ ಆಸನಗಳು! ಹೀಗೆ ಸಾಲಾಗಿ ಇಡಲ್ಪಟ್ಟಿರುವುವು. ಆ ಆಸನಗಳಮೇಲೆ ಉತ್ತಮವಾದ ಮೇಲುಹೊದಿಕೆಗಳು ಹೊದಿಸಲ್ಪಟ್ಟಿರುವುವು. ಇಂತಹ ರಮ್ಯವಾದ ಸಭಾಸ್ಥಾನವನ್ನು ರಾಜರೆಲ್ಲರೂ ಒಬ್ಬೊಬ್ಬರಾಗಿ ಪ್ರವೇಶಿಸಿದರು. ಭೀಷ್ಮ, ದ್ರೋಣ, ಕೃಪ, ಶಲ್ಯ, ಕೃತವರ್ಮ, ಜಯದ್ರಥ, ಅಶ್ವತ್ಥಾಮ, ವಿಕರ್ಣ, ಸೋಮದತ್ತ, ಬಾಹ್ಲೀಕನೇ ಮೊದಲಾದವರೂ, ಮಹಾಪ್ರಾಜ್ಞನಾದ ವಿದುರನೂ, ಮಹಾರಥನಾದ ಯುಯುತ್ಸುವೂ, ಧೃತರಾಷ್ಟ್ರನನ್ನು ಮುಂದಿಟ್ಟುಕೊಂಡು, ಒಂದು ಕೂಟವಾಗಿ ಬಂದುಸೇರಿದರು. ಸ್ವಲ್ಪಹೊತ್ತಿನಲ್ಲಿಯೇ ಕೌರವ

ರಾಜನಾದ ದುರ್ಯೋಧನನನ್ನು ಮುಂದಿಟ್ಟುಕೊಂಡು ದುಶ್ಶಾಸನನೂ, ಶಕುನಿಯೂ, ಕರ್ಣನೂ, ದುರ್ಮುಖನೂ, ದುಸ್ಸಹನೂ, ಉಲೂಕನೂ, ವಿವಿಂಶತಿಯೂ ಒಂದಾಗಿ ಸೇರಿ, ದೇವತೆಗಳು ಇಂದ್ರಸಭೆಯನ್ನು ಪ್ರವೇಶಿಸುವಂತೆ ಅಟ್ಟಹಾಸದಿಂದ ಬಂದುಸೇರಿದರು. ಅಗುಳಿಯಂತೆ ತೋಳುಗಳುಳ್ಳ ಶೂರರಾದ ರಾಜರೆಲ್ಲರೂ ಬಂದು ಕುಳಿತಮೇಲೆ, ಆ ಸಭೆಯು ಸಿಂಹಗಳಿಂದ ಶೋಭಿತವಾದ ಗುಹೆಯಂತೆ ಕಾಣುತ್ತಿತ್ತು. ಮಹಾಧನುರ್ಧಾರಿಗಳೂ, ಮಹಾಪರಾಕ್ರಮಿಗಳೂ, ಸೂರ್ಯತೇಜಸ್ಸುಳ್ಳವರೂ ಆದ ಆ ರಾಜರೆಲ್ಲರೂ ತಮತಮಗೆ ಯೋಗ್ಯವಾದ ಆಸನಗಳಲ್ಲಿ ಬಂದು ಕುಳಿತರು. ಎಲ್ಲರೂ ಸಿದ್ಧವಾಗಿ ಕುಳಿತಮೇಲೆ ದ್ವಾರಪಾಲಕನು ಬಂದು ಸಂಜಯನು ಬಂದಿರುವ ವೃತ್ತಾಂತವನ್ನು ತಿಳಿಸುತ್ತ, "ದುರ್ಯೋಧನಮಹಾರಾಜಾ! ಪಾಂಡವರ ಬಳಿಗೆ ದೂತನಾಗಿ ಹೋಗಿದ್ದ ಸಂಜಯನು ಬಂದು ದ್ವಾರದಲ್ಲಿ ಕಾದಿರುವನು" ಎಂದನು. ಒಡನೆಯೇ ರಾಜಾಜ್ಞೆಯಿಂದ ಸಂಜಯನು ಒಳಕ್ಕೆ ಕರೆಸಲ್ಪಟ್ಟನು. ಉತ್ತಮಕುಂಡಲಗಳಿಂದಲಂಕೃತನಾದ ಸಂಜಯನು, ಆ ರಾಜ ಸಭೆಯೊಳಗೆ ಪ್ರವೇಶಿಸಿ ಕೈಮುಗಿದು, "ಓ ಕುರುಶ್ರೇಷ್ಠರೇ! ನಾನು ಪಾಂಡವರಲ್ಲಿಗೆ ಹೋಗಿ ಬಂದೆನು. ಆ ಪಾಂಡವರು, ಕುರುಗಳೆಲ್ಲರನ್ನೂ ಅವರವರ ಯೋಗ್ಯತಾನುಗುಣವಾಗಿ ಗೌರವಿಸಿ, ಎಲ್ಲರ ಕ್ಷೇಮಗಳನ್ನೂ ವಿಚಾರಿಸಿದರು. ಹಿರಿಯರಿಗೆ ತಮ್ಮ ನಮಸ್ಕಾರವನ್ನು ತಿಳಿಸಿದರು. ತಮಗೆ ಸಮಾನವಯಸ್ಸುಳ್ಳ ಮಿತ್ರರನ್ನು ಮಿತ್ರಭಾವದಿಂದ ವಿಚಾರಿಸಿದರು. ಹೀಗೆಯೇ ಒಬ್ಬೊಬ್ಬರನ್ನೂ ಅವರವರ ವಯಸ್ತಾರತಮ್ಯವನ್ನನುಸರಿಸಿ ಕ್ಷೇಮಲಾಭಗಳನ್ನು ವಿಚಾರಿಸಿದರು. ನಾನು ಧೃತರಾಷ್ಟ್ರನ ಆಜ್ಞೆಯಂತೆ ಅವರಲ್ಲಿಗೆ ಹೋಗಿ, ಧೃತರಾಷ್ಟ್ರನು ಹೇಳಿಕಳುಹಿಸಿದ್ದ ಮಾತೆಲ್ಲವನ್ನೂ ಹಾಗೆಯೇ ತಿಳಿಸಿದೆನು. ಒಂದು ಮಾತನ್ನಾದರೂ ಬಿಡಲಿಲ್ಲ" ಎಂದನು.

---

[ಇಲ್ಲಿಂದ ಮುಂದೆ ಈ ಅಧ್ಯಾಯದ ಕೊನೆಯವರೆಗೆ ಇರುವ ವಿಷಯಗಳು ಕೆಲವು ಪ್ರತಿಗಳಲ್ಲಿ ಕಾಣುವುದಿಲ್ಲ. ಇಲ್ಲಿಗೇ ಅಧ್ಯಾಯವು ಮುಗಿದಿದೆ. ಆದುದರಿಂದ ಇದು ಅಧಿಕಪಾಠವೆಂದು ತೋರುತ್ತಿದೆ.]

ಆಗ ಸಭೆಯಲ್ಲಿದ್ದ ಧೃತರಾಷ್ಟ್ರನು ಸಂಜಯನನ್ನು ಕುರಿತು " ಓ ಸಂಜಯಾ! ಮೊದಲು ನೀನು ಶ್ರೀಕೃಷ್ಣನು ಯಾವ ಮಾತನ್ನಾಡಿದನೋ ಅದನ್ನು ಈ ಸಭಾಮಧ್ಯದಲ್ಲಿ ತಿಳಿಸು " ಎಂದನು. ಅದಕ್ಕಾ ಸಂಜಯನು " ಓ ಮಹಾರಾಜಾ! ನಾನು ಇಲ್ಲಿಂದ ಹೊರಟಮೇಲೆ, ಕೃಷ್ಣಾರ್ಜುನರಿಬ್ಬರೂ ನನ್ನನ್ನು ತಾವಾಗಿ ಕರೆಸಿಕೊಂಡುದರಿಂದ, ನಾನು ನೆಟ್ಟಗೆ ಶ್ರೀಕೃಷ್ಣನ ಅಂತಃಪುರಕ್ಕೇ ಹೋಗಬೇಕಾಯಿತು. ನಾನು ಬಹಳ ಭಯಪಟ್ಟು, ಹಿಮ್ಮಡಿಗಳನ್ನು ಮುಟ್ಟುವಂತೆ ಬಹಳ ಉದ್ದವಾದ ಕಂಚುಕವನ್ನು ತೊಟ್ಟು, ಬಹಳ ಭಯಭಕ್ತಿಗಳಿಂದ ನಮ್ರನಾಗಿ, ಕೈಮುಗಿದುಕೊಂಡೇ ಕೃಷ್ಣನಿದ್ದ ಅಂತಃಪುರಕ್ಕೆ ಹೋದೆನು. ಮಹಾರಾಜಾ! ಆ ಅಂತಃಪುರದಲ್ಲಿ ಕೃಷ್ಣಾರ್ಜುನರಿಬ್ಬರು, ಸತ್ಯಭಾಮೆಯೊಬ್ಬಳು, ದ್ರೌಪದಿಯೊಬ್ಬಳು, ಈ ನಾಲ್ವರು ಮಾತ್ರವೇ ಇರುತ್ತಿದ್ದರು. ಅಭಿಮನ್ಯುವಾಗಲಿ, ನಕುಲಸಹದೇವರಾಗಲಿ ಅಲ್ಲಿಗೆ ಹೋಗುವವರಲ್ಲ. ಅಲ್ಲಿ ಕೃಷ್ಣಾರ್ಜುನರಿಬ್ಬರೂ ಆಗಲೇ ಜೇನನ್ನು ಸವಿದು, ಉತ್ತಮ ಚಂದನವನ್ನು ಮೈಗೆ ಲೇಪಿಸಿಕೊಂಡು, ಪುಷ್ಪಗಳಿಂದಲೂ, ವಸ್ತ್ರಾಭರಣಗಳಿಂದಲೂ ಅಲಂಕೃತರಾಗಿ ವಿವಿಧ ರತ್ನಖಚಿತವಾದ ಮತ್ತು ನಾನಾಬಗೆಯ ವಿಚಿತ್ರವಾದ ಮೇಲುಹೊದಿಕೆಗಳಿಂದ ಕೂಡಿದ್ದ ಹಾಸಿಗೆಯಮೇಲೆ ಸಂತೋಷದಿಂದ ಕುಳಿತಿದ್ದರು. ಶ್ರೀಕೃಷ್ಣನು ಸತ್ಯಭಾಮೆಯ ತೊಡೆಯಮೇಲೆ ತಲೆಯಿಟ್ಟು ಮಲಗಿದ್ದನು. ಕೃಷ್ಣನ ಪಾದಗಳೆರಡನ್ನೂ ಅರ್ಜುನನು ತನ್ನ ಮಡಿಲಲ್ಲಿ ಎತ್ತಿಟ್ಟುಕೊಂಡಿದ್ದನು. ಅರ್ಜುನನ ಪಾದಗಳನ್ನು ದ್ರೌಪದಿಯು ತನ್ನ ತೊಡೆಯಮೇಲಿಟ್ಟುಕೊಂಡು ಒತ್ತುತ್ತಿದ್ದಳು. ಅರ್ಜುನನು ನನ್ನನ್ನು ನೋಡಿದೊಡನೆ, ಸಂತೋಷದಿಂದ ದಾಸಿಯರ ಮೂಲಕವಾಗಿ ಒಂದು ಸುವರ್ಣಾಸನವನ್ನು ನನಗಾಗಿ ತರಿಸಿಟ್ಟನು. ಆದರೆ, ನಾನು ಅದನ್ನು ಕೈಯಿಂದ ಮಾತ್ರ ಮುಟ್ಟಿ, ನೆಲದಮೇಲೆಯೇ ಕುಳಿತೆನು. ಓ ಮಹಾರಾಜಾ! ನಾನು ಯಾವುದನ್ನೂ ಮುಚ್ಚುಮರೆಮಾಡಿ ಹೇಳುವವನಲ್ಲ. ನಿರ್ವಂಚನೆಯಾಗಿ ಹೇಳುವೆನು. ಆ ಕೃಷ್ಣಾರ್ಜುನರಿಬ್ಬರೂ ತಮ್ಮ ತಮ್ಮ ಪ್ರಿಯಪತ್ನಿಯರೊಡನೆ ತಾವು ಏಕಾಂತವಾಗಿ ಇರುವಾಗಲೇ ನನ್ನನ್ನು ಕರೆಸಿ ಮಾತಾಡಿದರು. ಇದು ನನಗೆ ಅತ್ಯಾಶ್ಚರ್ಯವನ್ನುಂಟುಮಾಡಿತು. ನನ್ನ ಕಣ್ಣಿನಲ್ಲಿ ಆನಂದ

ಬಾಷ್ಪವು ತುಳುಕುತ್ತಿತ್ತು. ಆ ಮಹಾತ್ಮರಿಬ್ಬರೂ ಇಷ್ಟು ಸಲಿಗೆಯಿಂದ ಒಂದಾಗಿರುವುದನ್ನು ನೋಡಿದಾಗ ನನ್ನ ಮೈಯಲ್ಲಿ ರೋಮಾಂಚವೆದ್ದಿತು. ಎತ್ತರವಾದ ಎರಡು ಮದದಾನೆಗಳಂತೆ ತುಂಬಿದ ಶರೀರದಿಂದಲೂ, ತರುಣವಯಸ್ಸಿನಿಂದಲೂ, ಶೋಭಿಸುತ್ತಿದ್ದ ಅವರಿಬ್ಬರೂ ಒಂದೇ ಹಾಸಿಗೆಯ ಮೇಲೆ ಇರುವುದನ್ನು ನೋಡಿ ನನ್ನ ಮನಸ್ಸಿಗೆ ಮಹತ್ತಾದ ಭಯವುಂಟಾಯಿತು. ಪುರುಷಶ್ರೇಷ್ಠರಾದ ಅವರಿಬ್ಬರನ್ನೂ ನೋಡಿ ನನ್ನಲ್ಲಿ ನಾನೇ "ಕೃಷ್ಣನಿಗೆ ಪಾಂಡವರಲ್ಲಿರುವ ಈ ಅಸಾಧಾರಣವಾದ ಪ್ರೀತಿಯನ್ನು ನೋಡಿದರೆ, ಧರ್ಮರಾಜನ ಸಂಕಲ್ಪವೇನಿದ್ದರೂ ಅವನಿಗೆ ಸಾಧ್ಯವಿಲ್ಲದುದೊಂದಿಲ್ಲ. ನರನಾರಾಯಣರೆನಿಸಿಕೊಂಡ ಇವರಿಬ್ಬರೂ ಅವನ ಆಜ್ಞಾಧೀನರಾಗಿ ನಡೆಯಲು ಸಿದ್ಧರಾಗಿರುವಾಗ, ಅವನಿಗೆ ಅಸಾಧ್ಯವೇನಿದೆ?," ಎಂದುಕೊಂಡೆನು. ಮಹಾರಾಜಾ! ಆ ಕೃಷ್ಣಾರ್ಜುನರಿಬ್ಬರೂ ನನ್ನನ್ನು ಅನ್ನಪಾನಾದಿಗಳಿಂದ ಬಹುವಿಧವಾಗಿ ಸತ್ಕರಿಸಿದರು. ಆಮೇಲೆ ನಾನು ಅವರ ಮುಂದೆ ಬದ್ಧಾಂಜಲಿಯಾಗಿ ನಿಂತು, ನಾನು ಇಲ್ಲಿಂದ ತೆಗೆದುಕೊಂಡುಹೋದ ಸಂದೇಶವನ್ನು ತಿಳಿಸಿದೆನು. ಆಮೇಲೆ ಅರ್ಜುನನು ಉತ್ತಮವಾದ ಗಾಂಡೀವವನ್ನು ಹಿಡಿಯತಕ್ಕ ತನ್ನ ಕೈಯಿಂದ ತನ್ನ ತೊಡೆಯಮೇಲಿದ್ದ ಕೃಷ್ಣನ ಪಾದಗಳನ್ನು ಮೆಲ್ಲನೆ ಒತ್ತರಿಸಿಟ್ಟನು. ಅನೇಕ ದಿವ್ಯಾಭರಣಗಳಿಂದ ಭೂಷಿತನಾದ ಶ್ರೀಕೃಷ್ಣನು ಇಂದ್ರಧ್ವಜದಂತೆ ಹಾಸಿಗೆಯಿಂದ ಮೇಲೆದ್ದು ಕುಳಿತನು. ಧೃತರಾಷ್ಟ್ರಪುತ್ರರಿಗೆ ಕೋಪೋದ್ರೇಕವನ್ನು ಹುಟ್ಟಿಸತಕ್ಕುದಾಗಿಯೂ, ನಯಭಯಗಳಿಂದ ಕೂಡಿದುದಾಗಿಯೂ, ಮಾತಿನಲ್ಲಿ ಅವನಿಗಿರುವ ಅಸಾಧಾರಣ ನೈಪುಣ್ಯಕ್ಕೆ ಉಚಿತವಾಗಿಯೂ ಇರುವ ಮಾತುಗಳನ್ನು ಆಡತೊಡಗಿದನು. ತನಗೆ ಹೊರಗಿನ ಪ್ರಾಣದಂತೆ ಪ್ರಿಯನಾದ ಅರ್ಜುನನ ಮನೋಭಿಪ್ರಾಯವನ್ನು ಅನುಸರಿಸಿ, ಕೇಳುವಾಗ ಮನಸ್ಸಿಗೆ ಆಹ್ಲಾದಕರವಾಗಿಯೂ, ಆಮೇಲೆ ಹೃದಯಕ್ಕೆ ಸಂತಾಪಕರವಾಗಿಯೂ ಇರುವ ಈ ಮಾತುಗಳನ್ನು ನನ್ನೊಡನೆ ಹೇಳಿ ಕಳುಹಿಸಿದನು. "ಓ ಸಂಜಯಾ! ನೀನು ದುರ್ಯೋಧನನ ರಾಜಸಭೆಗೆ ಹೋಗಿ, ಕುರುವೃದ್ಧನಾದ ಭೀಷ್ಮನೂ, ಆಚಾರ್ಯನಾದ ದ್ರೋಣನೂ ಕೇಳುತ್ತಿರುವಹಾಗೆ ನನ್ನ ಮಾತಿನಿಂದ ಹೀಗೆಂದು ತಿಳಿಸು. ಪಾಂಡವರಿಗೆ

ನೀವು ಕೊಡಬೇಕಾದ ಭಾಗವನ್ನು ಬಿಟ್ಟುಕೊಟ್ಟು ಸೌಖ್ಯವನ್ನು ಹೊಂದಿರಿ! ನಿಮ್ಮ ಪ್ರಿಯರಾದ ಪಾಂಡವರಿಗೂ ಪ್ರಿಯವನ್ನುಂಟುಮಾಡಿರಿ; ರಾಜನಾದ ಯುಧಿಷ್ಠಿರನಾದರೋ ಜಯಕ್ಕಾಗಿ ಆತುರಗೊಂಡಿರುವನು. ನೀವು ವಿರೋಧವನ್ನು ಬೆಳೆಸದೆ ಈಗಲೇ ಒಂದಾಗಿ ಸೇರಿಕೊಂಡು, ಇಬ್ಬರೂ ಅನ್ಯೋನ್ಯವಾಗಿ ಅನೇಕ ಯಜ್ಞಗಳನ್ನು ನಡೆಸಿರಿ! ಯಥೇಷ್ಟದಕ್ಷಿಣೆಗಳನ್ನು ಕೊಡಿರಿ! ಪತ್ನೀಪುತ್ರರೊಡನೆ ಸುಖದಿಂದ ಬಾಳಿರಿ! ಈಗಲೋ ನಿಮಗೆ ಮಹತ್ತಾದ ಭಯವು ಒದಗಿರುವುದು. ಆಗ ದ್ಯೂತಸಭೆಯಲ್ಲಿ ದ್ರೌಪದಿಯು, ನಿಮ್ಮಿಂದ ಅವಮಾನಕ್ಕೀಡಾಗುತ್ತಿದ್ದ ಸಂಭವದಲ್ಲಿ, ಎಲ್ಲಿಯೋ ದೂರದಲ್ಲಿರುತ್ತಿದ್ದ ನನ್ನನ್ನು ಕುರಿತು 'ಗೋವಿಂದಾ!' ಎಂದು ಕೂಗಿದ ಕೂಗು, ಬಹುಕಾಲದಿಂದ ಬೆಳೆದುಹೋದ ಸಾಲದಂತೆ, ನನ್ನ ಹೃದಯವನ್ನು ಬಿಟ್ಟು ಹೋಗದೆ ಕುದಿಸುತ್ತಿರುವುದು. ಎಲೈ ಕೌರವರೇ! ಕೈಯಲ್ಲಿ ತೇಜೋಮಯವಾದ ಗಾಂಡೀವಧನುಸ್ಸನ್ನು ಹಿಡಿದು, ನನ್ನ ಸಹಾಯವನ್ನೂ ಪಡೆದಿರತಕ್ಕ ಅರ್ಜುನನಿಂದ ನಿಮಗೆ ಉಂಟಾಗಿರುವ ವೈರವು, ದೊಡ್ಡ ಅನರ್ಥಕ್ಕೆ ಕಾರಣವಾಗದೆ ಸುಮ್ಮನೆ ಹೋಗದು" ಎಂದನು. ಓ ಮಹಾರಾಜಾ! ಕೃಷ್ಣನು ಹೇಳಿದ ಮಾತನ್ನೂ, ಇತ್ತಲಾಗಿ ದುರ್ಯೋಧನನಿಗೆ ಮೇಲೆಮೇಲೆ ಪ್ರಬಲವಾಗುತ್ತಿರುವ ಲೋಭವನ್ನೂ ನೋಡಿ ನನಗೆ ಮಹತ್ತಾದ ಭಯವುಂಟಾಗುತ್ತಿದೆ. ಓ ಧೃತರಾಷ್ಟ್ರಮಹಾರಾಜಾ! ನಿನ್ನ ಮಗನಾದ ದುರ್ಯೋಧನನು ಇಂದ್ರಚಂದ್ರರಿಗೆ ಸಮಾನರಾದ ಆ ವೀರರ ಪ್ರಭಾವವನ್ನು ತಿಳಿದಿಲ್ಲ. ಭೀಷ್ಮದ್ರೋಣರ ಆಶ್ರಯವನ್ನೂ, ಈ ಕರ್ಣನ ಹೆಮ್ಮೆಯ ಮಾತುಗಳನ್ನೂ ನಂಬಿಕೊಂಡು, ಇವನು ಮುಂದೆ ಬರುವ ಅನರ್ಥವನ್ನು ಯೋಚಿಸದಿರುವನು" ಎಂದನು.

ಇದು ನಾಲ್ವತ್ತೇಳನೆಯ ಅಧ್ಯಾಯವು.

### ಸಂಜಯನು ಧೃತರಾಷ್ಟ್ರನಿಗೆ ಅರ್ಜುನನ ವಾಕ್ಯಗಳನ್ನು ತಿಳಿಸಿದುದು.

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಮಹಾತ್ಮನೂ, ಯುದ್ಧೋತ್ಸಾಹಿಯೂ, ದುಷ್ಟನಿಗ್ರಾಹಕನೂ ಆದ ಅರ್ಜುನನು ಹೇಳಿದ ಮಾತನ್ನೂ ಈ ಸಭೆಯಮುಂದೆ ತಿಳಿಸು" ಎಂದನು. ಆಗ ಸಂಜಯನು ದುರ್ಯೋಧನನ ಕಡೆಗೆ ತಿರುಗಿ "ರಾಜಕುಮಾರಾ! ಇದನ್ನು ನೀನು ಅವಶ್ಯವಾಗಿ ಕೇಳಬೇಕು. ಆ ಅರ್ಜುನನು ಯುಧಿಷ್ಠಿರನ ಅಂತರ್ಯವನ್ನು ತಿಳಿದು, ಮುಂದೆ ಯುದ್ಧಮಾಡುವ ಧೃಢೋದ್ದೇಶದಿಂದ, ಶ್ರೀಕೃಷ್ಣನೂ ಕೇಳುತ್ತಿರುವ ಹಾಗೆಯೇ ಯಾವಯಾವ ಮಾತುಗಳನ್ನಾಡಿದನೋ ಅವೆಲ್ಲವನ್ನೂ ಇಲ್ಲಿ ತಿಳಿಸುವೆನು. ಎಲೈ ರಾಜರೇ! ಎಲ್ಲರೂ ಕೇಳಿರಿ! ಆ ಅರ್ಜುನನಿಗೆ ತನ್ನ ವೀರ್ಯವಿಂತದೆಂದು ಚೆನ್ನಾಗಿ ತಿಳಿದಿದೆ. ಅವನಿಗೆ ಕುರುಗಳ ವಿಷಯದಲ್ಲಿ ಸ್ವಲ್ಪಮಾತ್ರವೂ ಭೀತಿಯಿಲ್ಲ. ಯುದ್ಧವನ್ನೇ ದೃಷ್ಟಿಯಲ್ಲಿಟ್ಟುಕೊಂಡು, ಅವನು ಕೃಷ್ಣನ ಮುಂದೆ ಗರ್ವದೊಡನೆ ಹೇಳಿದ ಮಾತನ್ನು ದುರ್ಯೋಧನನು ಅವಶ್ಯವಾಗಿ ಕೇಳಬೇಕು. ಅವನ ಬಾಯಿಂದ ಹೊರಟಹಾಗೆಯೇ ಅದನ್ನು ಇಲ್ಲಿ ನಾನು ತಿಳಿಸುವೆನು. ಅರ್ಜುನನು ನನ್ನನ್ನು ಕುರಿತು "ಸಂಜಯಾ! ನಾನು ಹೇಳುವ ಈ ಮಾತುಗಳನ್ನೆಲ್ಲಾ ನೀನು ಅವಶ್ಯವಾಗಿ ದುರ್ಯೋಧನನಿಗೆ ತಿಳಿಸು. ಆ ದುರ್ಯೋಧನನು ಆತ್ಮಸ್ತುತಿಪರನೂ, ದುರ್ಬುದ್ಧಿಯುಳ್ಳವನೂ ಆದ ಕರ್ಣನ ಮಾತನ್ನು ಕೇಳಿಕೊಂಡು, ನನ್ನೊಡನೆ ಯುದ್ಧಕ್ಕಾಗಿ ಬಯಸುವಂತಿದೆ. ತನಗಾಗಿ ಬುದ್ಧಿಯಿಲ್ಲದ ಮೂಢನಾದುದರಿಂದಲೇ, ಅವನು ಇತರರ ಮಾತನ್ನು ನಂಬಿಕೊಂಡು ಮರಣೋನ್ಮುಖನಾಗಿರುವನು. ಸಂಜಯಾ! ನಮ್ಮಮೇಲೆ ಯುದ್ಧಕ್ಕಾಗಿ ಕರೆಸಲ್ಪಟ್ಟಿರುವ ಎಲ್ಲಾರಾಜರೂ ಕೇಳುವಂತೆಯೇ, ನೀನು ಈ ನನ್ನ ಮಾತುಗಳೆಲ್ಲವನ್ನೂ, ಸಮಸ್ತ ಮಂತ್ರಿಗಳೊಡನೆ ಕೂಡಿದ ಧೃತರಾಷ್ಟ್ರರಾಜನಿಗೆ ತಿಳಿಸು" ಎಂದು ಹೇಳಿದನು.

ಎಲೈ ರಾಜರೇ! ವಜ್ರಹಸ್ತನಾದ ದೇವೇಂದ್ರನನ್ನು ದೇವತೆಗಳು ಹೇಗೋ ಹಾಗೆ, ಬೇರೆ ಎಲ್ಲಾ ಪಾಂಡವರೂ, ಸೃಂಜಯರೂ, ಆ ಅರ್ಜುನ

ನನ್ನು ಸುತ್ತಿ, ಅವನ ಮಾತುಗಳೆಲ್ಲವನ್ನೂ ಬಹಳ ಶ್ರದ್ಧೆಯಿಂದ ಕಿವಿ ಗೊಟ್ಟು ಕೇಳುತ್ತಿದ್ದರು. ಅರ್ಜುನನು ಯುದ್ಧವೇ ಅವಶ್ಯಕರ್ತವ್ಯ ವೆಂದು ನಿಶ್ಚಯಿಸಿಕೊಂಡಿರುವನು. ಕೈಯಲ್ಲಿ ಗಾಂಡೀವವನ್ನು ಸಿದ್ಧವಾಗಿ ಹಿಡಿದು, ಕೋಪದಿಂದ ಕೆಂಪಾದ ಕಣ್ಣುಗಳೊಡನೆ ಅವನು ಹೇಳಿದ ಮಾತು ಗಳನ್ನು ಕೇಳಿರಿ! ಆ ದುರ್ಯೋಧನನು ಅಣ್ಣನಾದ ಯುಧಿಷ್ಠಿರನಿಗೆ ರಾಜ್ಯ ವನ್ನು ಬಿಟ್ಟುಕೊಡದಿದ್ದಪಕ್ಷದಲ್ಲಿ ಕೌರವರೆಲ್ಲರೂ, ತಮ್ಮ ಪಾಪಫಲ ವನ್ನು ತಪ್ಪದೆ ಅನುಭವಿಸಬೇಕಾಗುವುದು. ಅವರು ಪೂರ್ವಜನ್ಮದಲ್ಲಿ ಎಷ್ಟೋ ಪಾಪವನ್ನು ಮಾಡಿದುದರಿಂದಲೇ ಈಗ ಅವರಿಗೆ ಈ ಬುದ್ಧಿಯು ಹುಟ್ಟಿರಬೇಕು. ಭೀಮಸೇನನು, ಅರ್ಜುನನಾದ ನಾನು, ಈ ನಕುಲಸಹ ದೇವರು, ವಾಸುದೇವನಾದ ಶ್ರೀಕೃಷ್ಣನು, ಇಂತವರೊಡನೆ ಯುದ್ಧಕ್ಕೆ ನಿಲ್ಲಬೇಕೆಂಬ ಬುದ್ಧಿಯು ಹುಟ್ಟಬೇಕಾದರೆ, ಅದು ಕೇಡುಗಾಲಕ್ಕಲ್ಲದೆ ಬೇರೆಯಲ್ಲ. ಇದಲ್ಲದೆ, ಶೈನೇಯ, ಧೃಷ್ಟದ್ಯುಮ್ನ, ಶಿಖಂಡಿ, ಮುಂತಾದ ಮಹಾವೀರರೊಡನೆಯೂ, ನೆನೆಸಿದಮಾತ್ರದಿಂದಲೇ ಭೂಮ್ಯಾಕಾಶಗಳನ್ನು ದಹಿಸಬಲ್ಲ ಮಹಾತ್ಮನಾದ ಯುಧಿಷ್ಠಿರನೊಡನೆಯೂ ದುರ್ಯೋಧನನು ಯುದ್ಧವನ್ನು ಬಯಸುವಂತಿದೆ. ವಾಸ್ತವದಲ್ಲಿ ಆ ದುರ್ಯೋಧನನು, ಇಂತವರೊಡನೆ ಯುದ್ಧಕ್ಕೆ ಸಿದ್ಧನಾದಪಕ್ಷದಲ್ಲಿ, ನಮಗೆ ನಿರಾಯಾಸ ವಾಗಿ ಕಾರ್ಯವು ಸಿದ್ಧಿಸಿದಂತೆಯೇ! ಓ ದುರ್ಯೋಧನಾ! ನೀನು ಪಾಂಡ ವರ ಸ್ವತ್ತಿಗೆಮಾತ್ರ ಆಸೆಪಟ್ಟು ಅನ್ಯಾಯವಾಗಿ ಕೆಟ್ಟುಹೋಗಬೇಡ. ನಿನಗೆ ಯುದ್ಧವನ್ನೇ ಮಾಡಬೇಕೆಂಬ ದೃಢನಿಶ್ಚಯವಿದ್ದರೆ, ಸಿದ್ಧನಾಗಿ ಬಂದು ನಿಲ್ಲು. ನೀನು ಇದುವರೆಗೆ ಕಾಡಿನಲ್ಲಿ ಪಾಂಡವರನ್ನು ಎಷ್ಟೆಷ್ಟು ವಿಧದಿಂದ ಕಷ್ಟಪಡಿಸಿ ದುಃಖಶಯ್ಯೆಯಲ್ಲಿ ಮಲಗಿಸಿಟ್ಟೆಯೋ, ಅದಕ್ಕೆ ಪ್ರತಿಯಾಗಿ ಅವರೂ ನಿನ್ನನ್ನು ರಣರಂಗದಲ್ಲಿ ಎಂದೆಂದಿಗೂ ಎಚ್ಚರ ವಾಗದಂತೆ, ದೀರ್ಘನಿದ್ರೆಯನ್ನುಂಟುಮಾಡುವ ಅಂತ್ಯಶಯ್ಯೆಯಲ್ಲಿ (ಕೊನೆ ಗಾಲದ ಹಾಸಿಗೆಯಲ್ಲಿ) ಮಲಗಿಸಿಡುವುದು ನಿಶ್ಚಯವು. ದುರಾತ್ಮನೂ, ಅನೀತಿಯಲ್ಲಿಯೇ ಪ್ರವರ್ತಿಸತಕ್ಕವನೂ ಆದ ಆ ದುರ್ಯೋಧನನು, ಜ್ಞಾನ, ತಪಸ್ಸು, ಇಂದ್ರಿಯನಿಗ್ರಹ, ಶೌರ್ಯ, ಲಜ್ಜೆ, ಧರ್ಮರಕ್ಷಣ, ಧನ ಸಂಪತ್ತಿ, ಇವೆಲ್ಲಾ ಗುಣಗಳಿಂದಲೂ ಕೌರವ ಪಾಂಡವರಿಗೆಲ್ಲ ಮೇಲೆನಿ

ಸಿದ ಯುಧಿಷ್ಠಿರನಲ್ಲಿಯೇ ಅತಿಕ್ರಮಿಸಿ ನಡೆದನು. ದುರ್ಯೋಧನನ ವಂಚನೆಯಿಂದ ಹೀಗೆ ಅನೇಕವಿಧವಾಗಿ ಕಷ್ಟಪಡಿಸಲ್ಪಟ್ಟರೂ, ಅಣ್ಣನು, ತನ್ನ ಸತ್ಯಕ್ಕೂ, ಋಜುತ್ವಕ್ಕೂ, ತಪಸ್ಸು, ಇಂದ್ರಿಯನಿಗ್ರಹ, ಧರ್ಮರಕ್ಷಣೆ, ಇವುಗಳಿಗೆಲ್ಲ ಕಟ್ಟುಬಿದ್ದು, ಸತ್ಯನಿರತನಾಗಿ, ಇದುವರೆಗೆ ಬಹಳವಾಗಿ ಸಹಿಸಿಕೊಂಡನು. ತನ್ನ ಮನಸ್ಸನ್ನು ಅಡಗಿಸಬಲ್ಲ ಧರ್ಮರಾಜನು, ಅನೇಕವರ್ಷಗಳಿಂದ ತಡೆದಿಟ್ಟುಕೊಂಡಿರುವ ಭಯಂಕರವಾದ ತನ್ನ ಕೋಪವನ್ನು ಕೌರವರಮೇಲೆ ಯಾವಾಗ ಬಿಡುವನೋ, ಆಗ ದುರ್ಯೋಧನನು ಯುದ್ಧವನ್ನುಕುರಿತು ಪರಿತಪಿಸದೆ ಹೋಗಲಾರನು. ಬೇಸಗೆಯಲ್ಲಿ ಉರಿಯುವ ಬೆಂಕಿಯು, ಒಣಗಿದ ಪೊದೆಯನ್ನು ದಹಿಸಿಬಿಡುವಂತೆ, ಧರ್ಮರಾಜನು ಕೋಪಗೊಂಡು ನೋಡಿದಮಾತ್ರದಿಂದಲೇ ಕೌರವಸೈನ್ಯವನ್ನೆಲ್ಲ ದಹಿಸಿಬಿಡಬಲ್ಲನು. ಭೀಮಸೇನನು ಯಾವಾಗ ಗದಾಪಾಣಿಯಾಗಿ ರಥದಮೇಲೆ ಕುಳಿತು ಕೌರವರಮೇಲೆ ಕೋಪವೆಂಬ ವಿಷವನ್ನು ಕಕ್ಕುತ್ತ, ಕೌರವಸೈನ್ಯವನ್ನು ನೋಡುವನೋ, ಆಗ ದುರ್ಯೋಧನನು ಈ ಯುದ್ಧಕ್ಕೆ ಅವಕಾಶಕೊಟ್ಟುದಕ್ಕಾಗಿ ಮನಸ್ಸಿನಲ್ಲಿ ದುಃಖಿಸದಿರಲಾರನು. ಭೀಮಸೇನನು ಯುದ್ಧಕವಚವನ್ನು ಧರಿಸಿ, ಸೇನೆಯ ಮುಂಭಾಗದಲ್ಲಿ ನಿಂತು, ಸಾಕ್ಷಾದ್ಯಮನಂತೆ ಕೌರವಸೈನ್ಯವನ್ನು ಧ್ವಂಸಮಾಡುವಾಗ, ಗರ್ವಿಷ್ಠನಾದ ಆ ದುರ್ಯೋಧನನು ತಾನು ಹೇಳಿದ ಗರ್ವದ ಮಾತುಗಳನ್ನೆಲ್ಲ ನೆನೆಸಿಕೊಂಡು ಸಂಕಟಪಡದೆ ಹೋಗಲಾರನು. ಭೀಮಸೇನನು ಬೆಟ್ಟದ ಶಿಖರಗಳನ್ನುರುಳಿಸುವಂತೆ, ಕೌರವಸೈನ್ಯದ ಆನೆಗಳನ್ನು ಯುದ್ಧದಲ್ಲಿ ಕೊಂದು ಕೆಡಹಿದಾಗ, ಒಡೆದ ಮಡಿಕೆಗಳಿಂದ ನೀರು ಸುರಿಯುವಂತೆ ನವರಂಧ್ರಗಳಲ್ಲಿಯೂ ರಕ್ತವನ್ನು ಕಾರುತ್ತ ಆ ಆನೆಗಳು ಕೆಳಗೆ ಬೀಳುವುದನ್ನು ನೋಡಿದಾಗ ದುರ್ಯೋಧನನು ಈ ಯುದ್ಧವನ್ನು ಕುರಿತು ಪಶ್ಚಾತ್ತಾಪಪಡದೆ ಇರಲಾರನು. ಮತ್ತು ದನಗಳ ಮಂದೆಗೆ ಸಿಂಹವು ಪ್ರವೇಶಿಸಿದಂತೆ, ಆ ಭೀಮನು ಗದಾಪಾಣಿಯಾಗಿ ಕುರುಸೈನ್ಯವನ್ನು ಪ್ರವೇಶಿಸಿ, ಸೈನ್ಯವನ್ನು ಕೊಲ್ಲುವಾಗ, ದುರ್ಯೋಧನನು ಈ ಯುದ್ಧಕ್ಕಾಗಿ ಪಶ್ಚಾತ್ತಾಪಪಡದೆ ಹೋಗಲಾರನು. ಎಂತಹ ಭಯದಲ್ಲಿಯೂ ನಿರ್ಭಯನಾಗಿ, ಸರ್ವಾಸ್ತ್ರವಿದನಾದ ಭೀಮನು ಶತ್ರುಸೈನ್ಯದಲ್ಲಿ, ಹೊಕ್ಕು

ತನ್ನ ಗದೆಯಿಂದ ರಥ, ಪದಾತಿಸೈನ್ಯಗಳನ್ನು ಹೊಡೆದು, ಕೊಡಲಿಯಿಂದ ಕಾಡನ್ನು ಕಡಿಯುವಂತೆ, ಅನೇಕ ಕೌರವಸೈನ್ಯಗಳನ್ನು ಕಡಿಯುತ್ತ ಬರುವಾಗ, ದುರ್ಯೋಧನನು ಆ ಯುದ್ಧವನ್ನು ಕುರಿತು ಸಂತಪಿಸದೆ ಇರಲಾರನು. ಹುಲ್ಲುಮೆದೆಗಳಿಂದಲೂ, ಗುಡಿಸಲುಗಳಿಂದಲೂ ತುಂಬಿದ ಒಂದು ಗ್ರಾಮಕ್ಕೆ, ಬೆಂಕಿಹಿಡಿದು ದಗ್ಧವಾಗುವಂತೆ ಭೀಮನ ಶಸ್ತ್ರಜ್ವಾಲೆಯಿಂದ ತನ್ನ ಸೈನ್ಯವೆಲ್ಲವೂ ದಗ್ಧವಾಗಿ, ಅಲ್ಲಿನ ಯೋಧರೂ, ವೀರರೂ, ಹತರಾಗಿ, ದಗ್ಧಶೇಷವಾದ ಸೈನ್ಯಗಳೆಲ್ಲವೂರಣರಂಗದಿಂದ ಹಿಂತಿರುಗಿ ಓಡುತ್ತಿರುವುದನ್ನು ಯಾವಾಗ ನೋಡುವನೋ, ಆಗ ದುರ್ಯೋಧನನು ಆ ಯುದ್ಧವನ್ನು ಕುರಿತು ಪರಿತಪಿಸದೆ ಹೋಗಲಾರನು.

ವಿಚಿತ್ರವಾಗಿ ಯುದ್ಧಮಾಡತಕ್ಕ ನಕುಲನು ಯಾವಾಗ ತನ್ನ ಸಾಮರ್ಥ್ಯದಿಂದ ರಥಿಕರ ತಲೆಗಳನ್ನೆಲ್ಲ ಕಡಿದು, ಕುರುಸೈನ್ಯದಲ್ಲಿ ರಾಶಿಹಾಕುವನೋ ಆಗ ದುರ್ಯೋಧನನು ಯುದ್ಧಕ್ಕಾಗಿ ವ್ಯಸನಪಡುವನು. ಯಾವಾಗಲೂ ಸುಖಾರ್ಹನಾಗಿದ್ದರೂ, ಇದುವರೆಗೆ ಬಹುದಿವಸಗಳಿಂದ ಕಾಡಿನಲ್ಲಿ ಬಹಳ ಕಷ್ಟವನ್ನನುಭವಿಸಿ ಬಂದ ನಕುಲನು, ವಿಷವನ್ನು ಕಕ್ಕುತ್ತಿರುವ ಕೋಪಗೊಂಡ ಸರ್ಪದಂತೆ, ತನ್ನ ಕೋಪವನ್ನು ತೀರಿಸಿಕೊಳ್ಳುವುದಕ್ಕೆ ಆರಂಭಿಸಿದಾಗ, ದುರ್ಯೋಧನನು ಆ ಯುದ್ಧಕ್ಕಾಗಿ ಪರಿತಪಿಸುವನು.

ಧರ್ಮರಾಜನಿಗಾಗಿ, ಯುದ್ಧದಲ್ಲಿ ತಮ್ಮ ಪ್ರಾಣವನ್ನೊಪ್ಪಿಸುವುದಕ್ಕೂ ಸಿದ್ಧರಾಗಿರುವ ರಾಜರು, ಶುಭ್ರವಾದ ರಥಗಳೊಡನೆ ಕುರುಸೈನ್ಯಕ್ಕಿದಿರಾಗಿ ಬಂದಾಗ, ದುರ್ಯೋಧನನು ಅದನ್ನು ನೋಡಿ ಯುದ್ಧವನ್ನು ಕುರಿತು ಪಶ್ಚಾತ್ತಾಪಪಡದೆ ಇರಲಾರನು. ವಯಸ್ಸಿನಲ್ಲಿ ಶಿಶುಗಳಾಗಿದ್ದರೂ ವೀರ್ಯದಲ್ಲಿ ಶಿಶುಗಳಂತಿಲ್ಲದೆ, ಅಸ್ತ್ರವಿದ್ಯೆಯಲ್ಲಿ ನಿಪುಣರಾಗಿ, ಮಹಾಶೂರರೆನಿಸಿದ ಐದುಮಂದಿ ಉಪಪಾಂಡವರು ತಮ್ಮ ಪ್ರಾಣಗಳಮೇಲೆಯೂ ಆಸೆಯನ್ನು ಬಿಟ್ಟು, ಕೌರವರನ್ನಿದಿರಿಸುವಾಗ, ದುರ್ಯೋಧನನು ಆ ಯುದ್ಧವನ್ನು ಕುರಿತು ಪರಿತಪಿಸದೆ ಹೋಗಲಾರನು. ಇಂದ್ರನು ದಾನವಸಂಹಾರಕ್ಕಾಗಿ ಹೊರಡುವಂತೆ, ಸಹದೇವನು ಒಳ್ಳೇ ಸುಶಿಕ್ಷಿತಗಳಾದ ಉತ್ತಮಾಶ್ವಗಳಿಂದ ಕೂಡಿ, ಸುವರ್ಣರೇಖೆಗಳಿಂದ ಚಿತ್ರಿತವಾದ ರಥವನ್ನೇರಿ ನಿಮ್ಮ

ಕಡೆಯು ರಾಜರ ತಲೆಗಳನ್ನು ಕೆಡಹುತ್ತ, ಯುದ್ಧರಂಗದಲ್ಲಿ ನಾನಾದಿಕ್ಕು ಗಳಿಗೆ ಸುತ್ತಿಬರುವಾಗ, ಆ ಭಯಂಕರನಾದ ಯುದ್ಧವನ್ನು ನೋಡಿ ದುರ್ಯೋಧನನು ತನ್ನ ಮೂರ್ಖತೆಗಾಗಿ ಪರಿತಪಿಸದಿರಲಾರನು. ಅಕಾರ್ಯಕ್ಕೆ ಲಜ್ಜಿಸತಕ್ಕವನೂ, ಸತ್ಯಸಂಧನೂ, ಚತುರನೂ, ಮಹಾಬಲಾಢ್ಯನೂ, ಸಮಸ್ತ ಧರ್ಮಗಳನ್ನು ತಿಳಿದವನೂ ಆದ ಸಹದೇವನು, ಶಕುನಿಗಿದಿರಾಗಿ ಸಂಕುಲಯುದ್ಧವನ್ನಾರಂಭಿಸಿ, ತನ್ನ ಕೈಚುರುಕಿನಿಂದ ಸೇನೆಗಳಲ್ಲಿರುವ ಜನಗಳನ್ನು ಕೊಲ್ಲುತ್ತ ಬರುವಾಗ, ದುರ್ಯೋಧನನು ಯುದ್ಧವನ್ನು ಕುರಿತು ವ್ಯಸನಪಡದೆ ಇರಲಾರನು. ಮಹಾಸ್ತ್ರವುಳ್ಳವರೂ, ಶೂರರೂ, ಸುಶಿಕ್ಷಿತರೂ, ಯುದ್ಧನಿಪುಣರೂ ಆದ ದ್ರೌಪದಿಯ ಐದುಮಂದಿ ಮಕ್ಕಳೂ, ಘೋರವಿಷವುಳ್ಳ ಸರ್ಪಗಳಂತೆ ಕೌರವಸೈನ್ಯದ ಮೇಲೆಬಿದ್ದು ಬರುವುದನ್ನು ನೋಡಿದರೆ, ಆಗ ದುರ್ಯೋಧನನು ಯುದ್ಧವನ್ನು ಕುರಿತು ಪಶ್ಚಾತ್ತಾಪಪಡುವನು. ಮೇಘವು ಮಳೆಯನ್ನು ಕರೆಯುವಂತೆ ಬಾಣಗಳನ್ನು ವರ್ಷಿಸಿ, ಶತ್ರುವೀರರನ್ನು ಕೊಲ್ಲತಕ್ಕ ಮತ್ತು ಅಸ್ತ್ರವಿದ್ಯೆಯಲ್ಲಿ ಸುಶಿಕ್ಷಿತನೂ, ಶ್ರೀಕೃಷ್ಣನಿಗೆ ಸಮಾನನೂ ಆದ ಅಭಿಮನ್ಯುವು, ಆ ಕೌರವಸೈನ್ಯದಲ್ಲಿ ಪ್ರವೇಶಿಸಿದಾಗ, ದುರ್ಯೋಧನನು ಈ ಯುದ್ಧವನ್ನು ಕುರಿತು ಪರಿತಪಿಸದೆ ಹೋಗಲಾರನು. ಬಾಲನಾಗಿದ್ದರೂ, ವೀರ್ಯದಲ್ಲಿ ಬಾಲನಲ್ಲದೆ, ಇಂದ್ರಸಮಾನನಾಗಿ, ಮೃತ್ಯುವಿನಂತೆ ಶತ್ರುಸೈನ್ಯದಮೇಲೆ ಬೀಳುತ್ತಿರುವ ಆ ಸುಭದ್ರಾಪುತ್ರನನ್ನು ನೋಡಿದಾಗ, ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದೆ ಇರಲಾರನು. ಸಿಂಹಸಮಾನವೀರ್ಯವುಳ್ಳವರೂ ತರುಣವಯಸ್ಕರೂ ಶೀಘ್ರಕಾರಿಗಳೂ ಆದ ಪ್ರಭದ್ರಕರು ಸಮಸ್ತಸೇನೆಯೊಡನೆ ಕೌರವರನ್ನು ಕೊಂದು ಕೆಡಹುತ್ತ ಬರುವಾಗ, ದುರ್ಯೋಧನನು ಆ ಯುದ್ಧಕ್ಕಾಗಿ ಪರಿತಪಿಸದೆ ಇರಲಾರನು. ಮಹಾರಥರೂ, ವೃದ್ಧರೂ ಆದ ವಿರಾಟ ದ್ರುಪದರಿಬ್ಬರೂ ಬೇರೆಬೇರೆ ಸೈನ್ಯಗಳೊಡನೆ ಕೂಡಿ ರಣರಂಗದಲ್ಲಿ ಆ ಧೃತರಾಷ್ಟ್ರಪುತ್ರರನ್ನು ಕೋಪದಿಂದ ನೋಡುವಾಗ ದುರ್ಯೋಧನನು ಈ ಯುದ್ಧವನ್ನು ಕುರಿತು ಪರಿತಪಿಸದೆ ಹೋಗಲಾರನು. ಅಸ್ತ್ರದಲ್ಲಿ ಸುಶಿಕ್ಷಿತನಾದ ದ್ರುಪದನು, ರಥಾರೂಢನಾಗಿ ಯುದ್ಧದಲ್ಲಿ ಪ್ರಾಯಸಮರ್ಥರಾದ ಕೌರವವೀರರನ್ನು ಹುಡುಕಿಹುಡುಕಿ, ತನ್ನ ಬಾಣಗಳಿಂದ ಅವರ

ತಲೆಗಳನ್ನುರುಳಿಸುವಾಗ ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದ ಹೋಗಲಾರನು. ಶತ್ರುವೀರರನ್ನು ಕೊಲ್ಲತಕ್ಕ ವಿರಾಟನು ಸೌಮ್ಯಸ್ವರೂಪವುಳ್ಳ ತನ್ನ ಕಡೆಯ ಮತ್ಸ್ಯಯೋಧರೊಡನೆ ಕೂಡಿ, ರಥಾರೂಢನಾಗಿ ಶತ್ರುಸೈನ್ಯವನ್ನು ಪ್ರವೀಶಿಸುವಾಗ, ದುರ್ಯೋಧನನು ಆ ಯುದ್ಧವನ್ನು ಕುರಿತು ಪರಿತಪಿಸದೆ ಹೋಗಲಾರನು. ಮತ್ಸ್ಯದೇಶಕ್ಕೆ ಪ್ರಮುಖನೂ, ಸೌಮ್ಯಸ್ವರೂಪವುಳ್ಳವನೂ ಆದ ವಿರಾಟನ ಜ್ಯೇಷ್ಠಪುತ್ರನು, ಪಾಂಡವರಿಗಾಗಿ ಯುದ್ಧಕವಚವನ್ನು ಧರಿಸಿ ಬರುವುದನ್ನು ನೋಡಿದಾಗ ದುರ್ಯೋಧನನು ಆ ಯುದ್ಧಕ್ಕಾಗಿ ಪರಿತಪಿಸದೆ ಹೋಗಲಾರನು. ಓ ಸಂಜಯಾ! ಮುಂದಿನ ಯುದ್ಧದಲ್ಲಿ ಕೌರವರೊಳಗೆಲ್ಲ ಮಹಾವೀರನೆನಿಸಿಕೊಂಡು, ಶಂತನುಪುತ್ರನಾದ ಭೀಷ್ಮನು ಶಿಖಂಡಿಯಿಂದ ಹತನಾಗುವುದು ನಿಶ್ಚಯವು. ಆ ಭೀಷ್ಮನು ಹತನಾದಮೇಲೆ ಕ್ಷಣಮಾತ್ರವೂ ಶತ್ರುಗಳು ನಮ್ಮ ವೇಗವನ್ನು ತಡೆಯಲಾರರು. ಇದರಲ್ಲಿ ಸಂದೇಹವಿಲ್ಲ. ನಾನು ಹೇಳುವುದು ಸತ್ಯವೆಂದೇ ತಿಳಿ. ಶಿಖಂಡಿಯು ಅನೇಕರಥಿಕರನ್ನು ಕೊಲ್ಲುತ್ತ, ದಿವ್ಯಾಶ್ವಯುಕ್ತಗಳಾದ ರಥವನ್ನೇರಿ ಭೀಷ್ಮನನ್ನಿದಿರಿಸಿ, ಅವನ ಕಡೆಯ ರಥಗಳನ್ನೆಲ್ಲ ಧ್ವಂಸಮಾಡುತ್ತ ಬಂದಾಗ, ದುರ್ಯೋಧನನು ಆ ಯುದ್ಧಕ್ಕಾಗಿ ಪಶ್ಚಾತ್ತಾಪಡುವುದು ನಿಶ್ಚಯವು. ಯಾವನು ಸೃಂಜಯರ ಸೈನ್ಯಕ್ಕೆ ಮುಂದಾಳೆನಿಸಿಕೊಂಡಿರುವನೋ, ಯಾವನಿಗೆ ದ್ರೋಣಾಚಾರ್ಯನು ಅಸ್ತ್ರರಹಸ್ಯವನ್ನು ಹೇಳಿರುವನೋ, ಆ ಧೀಮಂತನಾದ ಧೃಷ್ಟದ್ಯುಮ್ನನು ಸೈನ್ಯದ ಮುಂಭಾಗದಲ್ಲಿ ಬರುವುದನ್ನು ನೋಡಿದಾಗ, ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದೆ ಇರಲಾರನು. ಸೃಂಜಯಸೈನ್ಯಕ್ಕೆ ಅಧಿಪತಿಯೂ, ಅಪ್ರಮೇಯ ಪರಾಕ್ರಮವುಳ್ಳವನೂ ಆದ ಆ ಧೃಷ್ಟದ್ಯುಮ್ನನು, ತನ್ನ ಬಾಣಗಳಿಂದ ಕೌರವರನ್ನೊತ್ತರಿಸುತ್ತ, ದ್ರೋಣನಿಗಿದಿರಾಗಿ ಬರುವುದನ್ನು ನೋಡಿದಾಗ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡದೆ ಇರಲಾರನು. ಸೋಮಕರಿಗೆಲ್ಲ ಪ್ರಮುಖನೆನಿಸಿ ಮಾನವಂತನೂ, ಧೀಮಂತನೂ, ಬಲವಂತನೂ, ಶ್ರೀಮಂತನೂ, ಬಹಳ ಧೀರಮನಸ್ಸುಳ್ಳವನೂ ಆದ ಸಾತ್ಯಕಿಯು ಸೇನಾಪತಿಯಾಗಿ ಸೈನ್ಯದ ಮುಂದೆ ಬಂದಾಗ, ದುರ್ಯೋಧನನು ಆ ಯುದ್ಧವನ್ನು ಕುರಿತು ಪರಿತಪಿಸದೆ ಹೋಗಲಾರನು. ಓ ಸಂಜ

ಯಾ ! ಮುಖ್ಯವಾಗಿ ವೃಷ್ಣಿಸಿಂಹನಾದ ಆ ಸಾತ್ಯಕಿಯು ಯಾರಿಗೆ ಮುಂದಾಳಾಗಿರುವನೋ, ಅಂತವರನ್ನು ಬೇರೆಯವರು ಹೇಗೆತಾನೇ ತಡೆಯಬಲ್ಲರು?

ಆ ದುರ್ಯೋಧನನಿಗೆ ರಾಜ್ಯಲೋಭವನ್ನು ಬಿಟ್ಟುಬಿಡುವಂತೆ ಹೇಳು. ಆ ಸಾತ್ಯಕಿಯನ್ನೇ ನಾವು ಸೇನಾಧಿಪತ್ಯಕ್ಕೆ ಇಟ್ಟಿರುವೆವು. ಅವನು ಮಹಾ ಬಲಾಢ್ಯನು. ಯಾವುದಕ್ಕೂ ಭಯಪಡದವನು. ಅಸ್ತ್ರಗಳಲ್ಲಿ ಸುಶಿಕ್ಷಿತನು. ಅಗಲವಾದ ಎದೆಯಿಂದಲೂ, ಉದ್ದವಾದ ತೋಳುಗಳಿಂದಲೂ ಕೂಡಿದವನು. ಶತ್ರುಸೈನ್ಯಗಳನ್ನು ಧ್ವಂಸಮಾಡತಕ್ಕವನು. ಯುದ್ಧದಲ್ಲಿ ಅಸಮಾನನು. ಒಂದು ತಾಳೆಯ ಮರದಷ್ಟು ದೊಡ್ಡ ಧನುಸ್ಸನ್ನು ಹಿಡಿದವನು. ಮಹಾರಥಿಕನಾದ ಆ ಸಾತ್ಯಕಿಯು ನನ್ನ ಪ್ರೇರಣೆಯಿಂದ, ಯುದ್ಧಕ್ಕೆ ಮುಂದುವರಿದು, ಮೇಘವು ಮಳೆಯನ್ನು ಕರೆಯುವಂತೆ ಬಾಣವರ್ಷವನ್ನು ಕರೆದು, ಕೌರವಯೋಧರನ್ನೆಲ್ಲ ಆ ಬಾಣಗಳಿಂದ ಮುಚ್ಚಿಬಿಡುವಾಗ, ದುರ್ಯೋಧನನು ಆ ಯುದ್ಧಕ್ಕಾಗಿ ಪಶ್ಚಾತ್ತಾಪಪಡದಿರಲಾರನು. ದೀರ್ಘಬಾಹುವುಳ್ಳವನೂ, ದೃಢಧನುಸ್ಸುಳ್ಳವನೂ ಆದ ಆ ಸಾತ್ಯಕಿಯು ಧೈರ್ಯದಿಂದ ಯುದ್ಧಕ್ಕಿದಿರಾದೊಡನೆ, ಶತ್ರುಸೈನ್ಯವೆಲ್ಲವೂ, ಸಿಂಹದ ವಾಸನೆಯನ್ನು ಕಂಡ ಮೃಗಗಳಂತೆ ಯುದ್ಧದಿಂದ ಓಡಿಹೋಗುವುದು ನಿಶ್ಚಯವು. ಮಹಾತ್ಮನಾದ ಆ ಸಾತ್ಯಕಿಯು ಬೆಟ್ಟಗಳನ್ನಾದರೂ ಬಾಣಗಳಿಂದ ಭೇದಿಸಬಲ್ಲವನು. ಸಮಸ್ತ ಲೋಕಗಳನ್ನೂ ಸಂಹರಿಸಬಲ್ಲವನು. ಅಸ್ತ್ರಗಳಲ್ಲಿ ಮಹಾ ಚತುರನು. ಹಸ್ತವೇಗವುಳ್ಳವನು. ಆಕಾಶದ ಸೂರ್ಯನಂತೆ ಬೆಳಗುವವನು. ವೃಷ್ಣಿಕುಲಸಿಂಹನೆನಿಸಿದ ಆ ಸಾತ್ಯಕಿಯ ಅಸ್ತ್ರವಿದ್ಯಾನೈಪುಣ್ಯವು ಅಪಾರವಾದುದು. ಅತಿ ವಿಚಿತ್ರವಾದುದು. ಅಸ್ತ್ರವಿದ್ಯೆಯಲ್ಲಿ ಅತಿಪ್ರಶಸ್ತವಾದ ಗುಣಗಳು ಯಾವುವುಂಟೋ, ಅವೆಲ್ಲವೂ ಸಾತ್ಯಕಿಯಲ್ಲಿರುವುವು. ನಾಲ್ಕು ಬಿಳೀ ಕುದುರೆಗಳಿಂದ ಕೂಡಿ ಸುವರ್ಣಮಯವಾದ ಶ್ರೀಕೃಷ್ಣನ ರಥವನ್ನೇರಿ ಆ ಸಾತ್ಯಕಿಯು ಬರುವಾಗ, ಆ ರಥವನ್ನು ನೋಡಿದಮಾತ್ರದಲ್ಲಿಯೇ ಮೂಢನಾದ ದುರ್ಯೋಧನನು, ಈ ಯುದ್ಧಕ್ಕೆ ಅವಕಾಶಕೊಟ್ಟ ತನ್ನ ಅವಿವೇಕಕ್ಕಾಗಿ ಪಶ್ಚಾತ್ತಾಪಪಡದಿರಲಾರನು.

ಸುವರ್ಣರತ್ನಗಳ ಕಾಂತಿಯಿಂದ ಪ್ರಕಾಶಮಾನವಾಗಿ, ಶ್ವೇತಾಶ್ವಗಳಿಂದಲೂ, ವಾನರಧ್ವಜದಿಂದಲೂ ಕೂಡಿ, ಶ್ರೀಕೃಷ್ಣನೂ, ನಾನೂ ಒಂದಾಗಿ ಏರಿಬರುವ ಉಗ್ರರಥವನ್ನು ಕಂಡಾಗ ಮೂಢನಾದ ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡದೆ ಹೋಗಲಾರನು.

ಆ ಮಹಾಯುದ್ಧದಲ್ಲಿ ನಾನು ಗಾಂಡೀವಧನುಸ್ಸಿನ ನಾಣನ್ನು ತಟ್ಟುವಾಗ, ಸಿಡಿಲಿಗೆ ಸಮಾನವಾದ ಆ ಮಹಾಶಬ್ದವನ್ನು ಕೇಳಿ ಮೂಢನಾದ ದುರ್ಯೋಧನನು ಆಗ ಯುದ್ಧಕ್ಕಾಗಿ ಪರಿತಪಿಸುವನು. ನನ್ನ ಬಾಣವರ್ಷವೆಂಬ ಅಂಧಕಾರದಲ್ಲಿ ಸಿಕ್ಕಿ, ದನಗಳ ಮಂದೆಯಂತೆ ಚದರಿ ನಾನಾ ಕಡೆಗೆ ಹೋಗುತ್ತಿರುವ ತನ್ನ ಸೈನ್ಯವನ್ನು ಕಂಡಾಗ, ಮೂಢನೂ, ದುಸ್ಸಹಾಯನೂ ಆದ ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸುವನು. ಮೇಘದಿಂದ ಹೊರಟ ಮಿಂಚಿನ ಕಿಡಿಗಳಂತೆ ಭಯಂಕರಗಳಾಗಿ, ಒಂದೊಂದು ಸಲಕ್ಕೆ ಸಾವಿರಾರು ಮಂದಿಯನ್ನು ಧ್ವಂಸಮಾಡುವ, ಮತ್ತು ಮರ್ಮಗಳನ್ನೂ, ಮೈಯೊಳಗಿನ ಎಲುಬುಗಳನ್ನೂ ಭೇದಿಸತಕ್ಕ ನನ್ನ ಬಾಣಗಳು ಗಾಂಡೀವಧನುಸ್ಸಿನ ಹೆದೆಯಿಂದ ಪರಂಪರೆಯಾಗಿ ಹೊರಟು ಕುರುಸೈನ್ಯದ ಆನೆಗಳನ್ನೂ, ಕುದುರೆಗಳನ್ನೂ, ಕವಚಧಾರಿಗಳಾದ ಯೋಧರನ್ನೂ ಕೊಲ್ಲುವಾಗ, ಆ ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದೆ ಹೋಗಲಾರನು. ಶತ್ರುಗಳಿಂದ ಪ್ರಯೋಗಿಸಲ್ಪಟ್ಟ ಬಾಣಗಳು ನನ್ನ ಬಾಣಗಳಿಂದ ನಡುದಾರಿಯಲ್ಲಿಯೇ ಅಡ್ಡಲಾಗಿ ಕತ್ತರಿಸಲ್ಪಟ್ಟು ಕೆಳಗೆ ಬೀಳುವಾಗ, ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸುವನು. ಪಕ್ಷಿಗಳು ಮರದಿಂದ ಹಣ್ಣುಗಳನ್ನುದಿರಿಸುವಂತೆ ನನ್ನ ಬಾಣಗಳು ಕೌರವಯೋಧರ ತಲೆಗಳನ್ನು ಕೆಡಹಿ ರಣರಂಗದಲ್ಲಿ ರಾಶಿಹಾಕುವಾಗ, ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದೆ ಹೋಗಲಾರನು. ನನ್ನ ಬಾಣಗಳಿಂದ ಹತರಾಗಿ, ತಮ್ಮತಮ್ಮ ರಥಗಳಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ ಕೆಳಗೆ ಬೀಳುವ ಕುರುಸೈನಿಕರನ್ನು ನೋಡಿದಾಗ, ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದೆ ಹೋಗಲಾರನು. ನನ್ನ ಅಸ್ತ್ರಗಳು ಮೈಗೆ ತಗುಲಿ ಕೆಲಸ ಮಾಡುವುದಕ್ಕೆ ಮೊದಲೇ, ಅವುಗಳ ದರ್ಶನಮಾತ್ರದಿಂದ ನಾಶಹೊಂದು

ವ ತನ್ನ ಕಡೆಯ ಸೈನಿಕರನ್ನು ನೋಡಿದಾಗ ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದೆ ಇರಲಾರನು. ನಾನು ಜ್ವಲಿಸುತ್ತಿರುವ ನನ್ನ ಬಾಣವರ್ಷಗಳಿಂದ ಶತ್ರುಸೈನ್ಯದ ಕಾಲಾಳುಗಳನ್ನೂ, ರಥಸಮೂಹಗಳನ್ನೂ ನಾನಾಕಡೆಯಿಂದ ಹೊಡೆದೋಡಿಸಿ, ಲೋಕವನ್ನು ನುಂಗುವುದಕ್ಕಾಗಿ ಬಾಯನ್ನು ತೆರೆದುಕೊಂಡು ಬರುವ ಯಮನಂತೆ ಬಾಣಗಳನ್ನೆರಚುತ್ತ ಬರುವಾಗ, ದುರ್ಯೋಧನನು ಯುದ್ಧಕ್ಕಾಗಿ ಪರಿತಪಿಸದೆ ಹೋಗಲಾರನು. ಮುಂದೆ ರಣರಂಗದಲ್ಲಿ ನಾನು ರಥಾರೂಢನಾಗಿ ತಡೆಬಡೆಯಿಲ್ಲದೆ ಸಂಚರಿಸುತ್ತಿರುವಾಗ, ನನ್ನ ರಥದ ಧೂಳಿನಿಂದಲೇ ನಷ್ಟಪ್ರಾಯವಾಗಿ, ಆದರ ಮೇಲೆ ನನ್ನ ಗಾಂಡೀವದಿಂದ ಭೇದಿಸಲ್ಪಡುವ ತನ್ನ ಸೈನ್ಯವನ್ನು ನೋಡಿದಾಗ, ದುರ್ಯೋಧನನು ಯುದ್ಧಕ್ಕಾಗಿ ಪಶ್ಚಾತ್ತಾಪಪಡದೆ ಇರಲಾರನು. ಮುಂದಿನ ಮಹಾಯುದ್ಧದಲ್ಲಿ ದುರ್ಯೋಧನನ ಸೈನ್ಯವೆಲ್ಲವೂ ನನ್ನ ಬಾಣಗಳಿಂದ ಮೈಮುರಿದು ಪ್ರಜ್ಞೆತಪ್ಪಿ, ಸತ್ತುಳಿದ ಕೆಲವು ಸೈನ್ಯಗಳು ಭಯದಿಂದ ಪಲಾಯನಮಾಡುವುದನ್ನೂ, ರಥ ಗಜ ತುರಗಾದಿ ನಾನಾ ಸೈನಿಕರು, ದಾಹದಿಂದಲೂ, ಭಯದಿಂದಲೂ, ಬಳಲಿದ ವಾಹನಗಳಿಂದಲೂ ಪೀಡಿತರಾಗಿರುವುದನ್ನೂ, ಅಲ್ಲಲ್ಲಿ ಹತವಾಗಿ ಬಿದ್ದ ಮತ್ತು ಮುಂದೆ ಸಾಯುವುದಕ್ಕೆ ಸಿದ್ಧವಾದ ಸೈನ್ಯಗಳು ಆರ್ತಸ್ವರದಿಂದ ಅರಚಿಕೊಳ್ಳುವುದನ್ನೂ, ರಣರಂಗದ ನಾನಾಕಡೆಗಳಲ್ಲಿ ಕೆದರಿದ ತಲೆಕೂದಲುಗಳಿಂದಲೂ, ಅಸ್ಥಿಗಳಿಂದಲೂ, ಕಪಾಲಗಳಿಂದಲೂ, ಚದರಿಬಿದ್ದ ಹೆಣಗಳಿಂದಲೂ, * ಪ್ರಜಾಪತಿದೇವತಾತ್ಮಕವಾದ ವಾಜಪೇಯಯಾಗದಲ್ಲಿ ಹತವಾದ ಅನೇಕ ಪಶುಸಮೂಹಗಳಿಂದ ನಿಬಿಡವಾದ ಯಜ್ಞಶಾಲೆಯಂತಿರುವ ರಣರಂಗವನ್ನು ದುರ್ಯೋಧನನು ಯಾವಾಗ ನೋಡುವನೋ, ಆಗ ಯುದ್ಧಕ್ಕಾಗಿ ಪರಿತಪಿಸದೆ ಹೋಗಲಾರನು. ಮುಂದೆ ನಾನೂ, ಶ್ರೀಕೃಷ್ಣನೂ ರಥದಲ್ಲಿ ಒಂದಾಗಿ ಕುಳಿತು ಬರುವುದನ್ನೂ, ನನ್ನ ಮತ್ತು ಕೃಷ್ಣನ ಕೈಯಲ್ಲಿರುವ ದೇವದತ್ತ ಪಾಂಚಜನ್ಯ ಶಂಖಗಳನ್ನೂ, ನನ್ನ

---

* ಪ್ರಜಾಪತಿದೇವತಾತ್ಮಕವಾದ ವಾಜಪೇಯಯಾಗದಲ್ಲಿ ಹದಿನೆಂಟು [illegible]ಗಳನ್ನು ಕೊಲ್ಲುವುದಾಗಿ ವಿಧಿಯಿದೆ.

ಗಾಂಡೀವಧನುಸ್ಸನ್ನೂ, ಅಕ್ಷಯ ತೂಣೀರ (ಬತ್ತಳಿಕೆ) ಗಳನ್ನೂ, ನನ್ನ ಬಿಳೀ ಕುದುರೆಗಳನ್ನೂ ನೋಡಿದಾಗ, ದುರ್ಯೋಧನನು ಆ ಯುದ್ಧಕ್ಕಾಗಿ ಕೊರಗದೆ ಇರಲಾರನು. ನಾನು ನಮ್ಮ ರಾಜ್ಯಚೋರರಾದ ಆ ಶತ್ರುಗಳೆಲ್ಲರನ್ನೂ ಯುದ್ಧದಲ್ಲಿ ಒಟ್ಟಾಗಿ ಸೇರಿಸಿಕೊಂಡು, ಯುಗದ ಕೊನೆಯಲ್ಲಿ ಸಮಸ್ತಪ್ರಾಣಿಗಳನ್ನೂ ಕೊಂದು, ಬೇರೆ ಯುಗಕ್ಕೆ ತಿರುಗಿಸುವಂತೆ, ಕೌರವರನ್ನೆಲ್ಲ ನನ್ನ ಕೋಪಾಗ್ನಿಗೆ ಆಹುತಿಮಾಡುವಾಗ, ಆ ಧೃತರಾಷ್ಟ್ರನೂ, ಅವನ ಮಕ್ಕಳೂ ತಮ್ಮ ಕಾರ್ಯಕ್ಕಾಗಿ ಪರಿತಪಿಸದೆ ಹೋಗಲಾರರು. ಮುಂಗೋಪಿಯೂ, ಅಲ್ಪಬುದ್ಧಿಯುಳ್ಳವನೂ ಆದ ಆ ದುರ್ಯೋಧನನು, ತನ್ನ ಸಹೋದರರನ್ನೂ, ಭೃತ್ಯರನ್ನೂ, ತನ್ನ ಐಶ್ವರ್ಯವನ್ನೂ ಕಳೆದುಕೊಂಡು, ತಾನೂ ರಣರಂಗದಲ್ಲಿ ಹತನಾಗಿ ಬಿದ್ದು ನಡುಗುತ್ತ, ತನ್ನ ಈಗಿನ ಕೊಬ್ಬೆಲ್ಲವೂ ಅಡಗಿದಮೇಲಾದರೂ, ತನ್ನ ಅವಿವೇಕಕ್ಕಾಗಿ ತಾನು ಪಶ್ಚಾತ್ತಾಪಪಡದೆ ಹೋಗಲಾರನು. ಓ ಸಂಜಯಾ! ಹಿಂದೆ ಒಂದಾನೊಂದು ಕಾಲದಲ್ಲಿ ನಾನು ಬೆಳಗ್ಗೆ ಆಹ್ನಿಕಗಳನ್ನು ನಡೆಸುತ್ತ ಒಂದು ನೀರಿನ ತಡಿಯಲ್ಲಿ ಮಂತ್ರಜಪವನ್ನು ಮಾಡುತ್ತಿರುವಾಗ, ಬ್ರಾಹ್ಮಣನೊಬ್ಬನು ಬಂದು ನನ್ನನ್ನು ಕುರಿತು "ಅರ್ಜುನಾ! ಮುಂದೆ ದುಷ್ಕರವಾದ ಕಾರ್ಯವೊಂದು ನಿನ್ನಿಂದ ನಡೆಯತಕ್ಕುದಾಗಿದೆ. ನೀನು ಮುಂದೆ ಅನೇಕ ಶತ್ರುಗಳೊಡನೆ ಪ್ರಬಲಯುದ್ಧಮಾಡಬೇಕಾಗಿದೆ. ಆ ಯುದ್ಧದಲ್ಲಿ ನಿನಗೆ ಸಹಾಯಕನಾಗಿ ವಜ್ರಹಸ್ತನಾದ ಇಂದ್ರನು ನಿನ್ನ ಶತ್ರುಗಳನ್ನು ಕೊಲ್ಲುತ್ತ ಮುಂದೆ ಹೋಗಲೇ? ಅಥವಾ ವಸುದೇವಪುತ್ರನಾದ ಶ್ರೀಕೃಷ್ಣನು, ಸುಗ್ರೀವ ಮೊದಲಾದ ನಾಲ್ಕು ಕುದುರೆಗಳಿಂದ ಕೂಡಿದ ರಥದೊಡನೆ ನಿನ್ನ ಹಿಂದೆ ರಕ್ಷಕನಾಗಿರಲೆ" ಎಂದು ನನ್ನ ಇಷ್ಟವನ್ನು ಕೇಳಿದನು. ಆಗ ನಾನು "ವಜ್ರಹಸ್ತನಾದ ಇಂದ್ರನಿಗಿಂತಲೂ ಶ್ರೀಕೃಷ್ಣನೇ ನನಗೆ ಸಹಾಯಕನಾಗಿರಲೆಂದು" ಕೇಳಿಕೊಂಡೆನು. ನಾನು ಕೇಳಿದಂತೆಯೇ ಶತ್ರುವಧಕ್ಕಾಗಿ ಈಗ ನನಗೆ ಕೃಷ್ಣನ ಸಹಾಯವು ಒದಗಿದೆ. ಈ ಸಂಘಟನೆಗಳೆಲ್ಲವೂ ದೈವಕೃತವೆಂದೇ ನನಗೆ ತೋರುತ್ತಿದೆ. ಆ ಶ್ರೀಕೃಷ್ಣನಾದರೋ ಯುದ್ಧಮಾಡದೆಯೇ ತನ್ನ ಮನಸ್ಸಂಕಲ್ಪದಿಂದ ಮನುಷ್ಯನಿಗೆ ಜಯವನ್ನು ಕೂಡಿಸಬಲ್ಲವನು. ಆದುದರಿಂದ

ಇಂದ್ರಾದಿದೇವತೆಗಳೇ ಶತ್ರುಗಳಾಗಿ ಬಂದರೂ, ಕೃಷ್ಣಾನುಗ್ರಹಕ್ಕೆ ಪಾತ್ರನಾದವನು ಅವರನ್ನೆಲ್ಲ ನಿವಾರಿಸಬಲ್ಲನು. ಇನ್ನು ಸಾಮಾನ್ಯಮನುಷ್ಯರ ಪಾಡೇನು ? ಶ್ರೀಕೃಷ್ಣನನ್ನು ಯುದ್ಧದಲ್ಲಿ ಜಯಿಸಬೇಕೆಂದು ಬಯಸುವವನು, ಅಪಾರಬಲವುಳ್ಳ ಸಮುದ್ರವನ್ನು ತೋಳುಗಳಿಂದಲೇ ದಾಟುವುದಕ್ಕಾಗಿ ಯತ್ನಿಸುವ ಮೂಢನಲ್ಲದೆ ಬೇರೆಯಲ್ಲ. ಪರ್ವತವನ್ನು ಕೈಯಿಂದ ಒಡೆಯಬೇಕೆಂದು ಯತ್ನಿಸಿ ಅದನ್ನು ಗುದ್ದುವವನು ಕೈಯನ್ನು ಮುರಿದುಕೊಳ್ಳುವನೇ ಹೊರತು, ಆ ಪರ್ವತಕ್ಕೇನಾದರೂ ಗಾಯವಾಗುವುದೇ? ಯುದ್ಧದಲ್ಲಿ ಕೃಷ್ಣನನ್ನು ಜಯಿಸಬೇಕೆಂದು ಬಯಸುವವನು, ಪ್ರಬಲವಾಗಿ ಉರಿಯುವ ದೊಡ್ಡ ಬೆಂಕಿಯನ್ನು ಆರಿಸುವುದಕ್ಕಾಗಿ ಕೈಯಿಂದ ತಟ್ಟುವುದಕ್ಕೂ, ಚಂದ್ರಸೂರ್ಯರನ್ನು ಅಡ್ಡಗಟ್ಟಿ ತಡೆಯುವುದಕ್ಕೂ, ದೇವತೆಗಳಿಂದ ಬಲಾತ್ಕಾರಪೂರ್ವಕವಾಗಿ ಅಮೃತವನ್ನು ಅಪಹರಿಸುವುದಕ್ಕೂ ಪ್ರಯತ್ನಿಸುವ ಮೂಢನೇಹೊರತು ಬೇರೆಯಲ್ಲ. ಆ ಶ್ರೀಕೃಷ್ಣನ ಪರಾಕ್ರಮಕಾರ್ಯಗಳಾದರೂ ಸಾಮಾನ್ಯವೇ? ಅವನು ಒಂದೇ ರಥಮಾತ್ರಸಹಾಯನಾಗಿ ಭೋಜರನ್ನೆಲ್ಲ ಯುದ್ಧದಲ್ಲಿ ಓಡಿಸಿ, ಯಶಸ್ವಿನಿಯಾದ ರುಕ್ಮಿಣಿಯನ್ನು ತನಗೆ ಪತ್ನಿಯನ್ನಾಗಿ ವರಿಸಿ, ಆ ರುಕ್ಮಿಣಿಯಲ್ಲಿ ಮಹಾತ್ಮನಾದ ಪ್ರದ್ಯುಮ್ನನನ್ನು ಪುತ್ರನನ್ನಾಗಿ ಪಡೆದವನು. ಗಾಂಧಾರರಾಜರನ್ನೆಲ್ಲ ನಿಗ್ರಹಿಸಿ, ನಗ್ನಜಿತ್ತಿನ ಎಲ್ಲಾ ಪುತ್ರರನ್ನೂ ಜಯಿಸಿ, ಸೆರೆಯಲ್ಲಿ ಕಟ್ಟುಬಿದ್ದು ಮೊರೆಯಿಡುತ್ತಿದ್ದ ಸುದರ್ಶನನೆಂಬ ದೇವಶ್ರೇಷ್ಠನನ್ನು ಬಿಡಿಸಿದವನು. ಕವಾಟವೆಂಬ ನಗರದಲ್ಲಿ ಪಾಂಡ್ಯನನ್ನು ಕೊಂದವನು ಕಳಿಂಗರನ್ನೂ, ದಂತವಕ್ತ್ರನನ್ನೂ ಸಂಹರಿಸಿದನು. ವಾರಣಾಸಿಯೆಂಬ ನಗರಿಯು ಇವನಿಂದ ದಗ್ಧವಾಗಿ ಅನೇಕವರ್ಷಗಳವರೆಗೆ ಅದಕ್ಕೆ ಪಾಲಕರಿಲ್ಲದಂತಾಯಿತು.

ಹಿಂದೆ ಯುದ್ಧದಲ್ಲಿ ನಿಷಾದದೇಶದ ರಾಜನಾಗಿ, ಎಂತವರಿಗೂ ದುರ್ಜ್ಞಯನೆನಿಸಿದ ಏಕಲವ್ಯನೆಂಬ ನಿಷಾದರಾಜನನ್ನು ಇವನೇ ಕೊಂದನು. ಆಗ ಅವನು ವೇಗದಿಂದ ಪರ್ವತಕ್ಕೆ ತಾಡಿಸಲ್ಪಟ್ಟು ಇಂದ್ರಹತನಾದ ಜಂಭಾಸುರನಂತೆ ಸತ್ತುಬಿದ್ದನು. ಮತ್ತು ಇವನು ಹಿಂದೆ ಬಲರಾಮನೊಡಗೂಡಿ

ಸಭಾಮಧ್ಯದಲ್ಲಿ ಕುಳಿತಿದ್ದ ಉಗ್ರಸೇನನ ಮಗನಾದ ಕಂಸನನ್ನು ಅವನ ಆಸನದಿಂದ ಎಳೆದುಹಾಕಿ, ವೃಷ್ಣಿಗಳು, ಅಂಧಕರು, ಮೊದಲಾದ ಅವನ ಕಡೆಯವರೆಲ್ಲರೂ ನೋಡುತ್ತಿದ್ದಹಾಗೆಯೇ ಅವನನ್ನು ಕೊಂದು ಉಗ್ರ ಸೇನನಿಗೆ ರಾಜ್ಯವನ್ನು ಕೊಟ್ಟನು. ಮತ್ತು ಇವನು ಗಗನಚಾರಿಯಾಗಿ ಮಹಾಭಯಂಕರನಾದ ಸಾಲ್ವನೆಂಬ ಸೌಭದೇಶದ ರಾಜನನ್ನು ಕೊಂದ ನು. ಮಹಾಮಾಯಾವಿಯಾದ ಆ ಸಾಲ್ವನು ಬೀಸಿದ ಶತಘ್ನಿಯನ್ನು ಸೌಭಪುರದ್ವಾರದಲ್ಲಿ ಇವನು ತನ್ನ ಕೈಯಿಂದಲೇ ತಡೆದು ಆತುಕೊಂಡ ನು. ಅಂತಹ ಕೃಷ್ಣನೊಡನೆ ಯಾವನು ತಾನೇ ಇದಿರಾಗಿ ನಿಂತು ತಡೆ ಯಬಲ್ಲನು? ಭಯಂಕರವಾದ ಮತ್ತು ಎಂತವರಿಗೂ ದುರ್ಗಮವಾದ ಪ್ರಾಗ್ಜ್ಯೋತಿಷವೆಂಬ ನಗರದಲ್ಲಿದ್ದ ಮಹಾಬಲಶಾಲಿಯಾದ ನರಕಾಸುರನು ಭೂಮಿಯ ಪುತ್ರನು! ಅವನು ಅದಿತಿದೇವಿಯ ಕಿವಿಯಲ್ಲಿದ್ದ ರತ್ನಕುಂಡಲ ಗಳನ್ನಪಹರಿಸಿ ತಂದವನು. ಮೃತ್ಯುಭಯವೇ ಇಲ್ಲದ ದೇವತೆಗಳೆಲ್ಲ ಇಂದ್ರನೊಡನೆ ಸೇರಿಬಂದರೂ ಅವನನ್ನಿದಿರಿಸಲಾರದೆ ಹೋದರು. ಕೊನೆಗೆ ಅವರು ಶ್ರೀಕೃಷ್ಣನ ಮಹಾಮಹಿಮೆಯನ್ನೂ, ಪರಾಕ್ರಮವನ್ನೂ, ಅವನ ದಿವ್ಯಾಯುಧವನ್ನೂ, ಇವನ ಅವತಾರದ ಪ್ರಯೋಜನವನ್ನೂ ಚೆನ್ನಾಗಿ ತಿಳಿದು, ಶ್ರೀಕೃಷ್ಣನಲ್ಲಿಗೆ ಬಂದು, ಆ ದೈತ್ಯನನ್ನು ಕೊಲ್ಲುವುದಕ್ಕಾಗಿ ಪ್ರಾರ್ಥಿಸಿಕೊಂಡರು. ಈ ಕೃಷ್ಣನೂ ಕೂಡ ಅವರಿಗೆ ಅಭಯವನ್ನು ಕೊಟ್ಟು, ಆ ದುಷ್ಕರಕಾರ್ಯವನ್ನು ನಡೆಸಲು ಒಪ್ಪಿಕೊಂಡನು. ನಿರ್ಮೋ ಚನವೆಂಬ ನಗರಕ್ಕೆ ಪ್ರವೇಶಿಸಿ, ಆರುಸಾವಿರಮಂದಿ ಅಸುರರನ್ನು ಕೊಂದು, ಅವರ ಆಯುಧಗಳನ್ನೂ, ಪಾಶಗಳನ್ನೂ, ಕ್ಷಣಮಾತ್ರದಲ್ಲಿ ಕಡಿದುಹಾಕಿ ದನು. ಅಲ್ಲಿಯೇ ಆತನು ಮುರಾಸುರನನ್ನೂ ಇನ್ನೂ ಅನೇಕರಾಕ್ಷಸ ರನ್ನೂ ಕೊಂದನು. ಆ ನಗರದೊಳಗೆ ಪ್ರವೇಶಿಸಿದಮೇಲೆ, ಕೃಷ್ಣನಿಗೂ ನರಕಾಸುರನಿಗೂ ಅಲ್ಲಿ ಯುದ್ಧವು ಆರಂಭವಾಗಿ, ಕೊನೆಗೆ ನರಕಾಸುರನು ಕೃಷ್ಣನಿಂದ ಹತನಾಗಿ, ಬಿರುಗಾಳಿಗೆ ಸಿಕ್ಕಿ ಮುರಿದುಬಿದ್ದ ಕರ್ಣಿಕಾರ ವೃಕ್ಷದಂತೆ ಸತ್ತುಬಿದ್ದನು. ಹೀಗೆ ಕೃಷ್ಣನು ಮುರಾಸುರ ನರಕಾಸುರ ರಿಬ್ಬರನ್ನೂ ಕೊಂದು, ಅವನಿಂದ ಅಪಹರಿಸಲ್ಪಟ್ಟಿದ್ದ ಅದಿತಿಯ ರತ್ನ ಕುಂಡಲಗಳೆರಡನ್ನೂ ತೆಗೆದುಕೊಂಡು, ಜಯಲಕ್ಷ್ಮಿಯಿಂದಲೂ, ಕೀರ್ತಿ

ಯಿಂದಲೂ ಕೂಡಿದವನಾಗಿ ಅಲ್ಲಿಂದ ಹಿಂತಿರುಗಿದನು. ಎಣೆಯಿಲ್ಲದ ಮಹಾಮಹಿಮೆಯುಳ್ಳ ಇವನ ಅದ್ಭುತಕಾರ್ಯಕ್ಕೆ ಸಂತೋಷಿಸಿ, ದೇವತೆಗಳೆಲ್ಲರೂ ಅವನನ್ನು ನೋಡಿ "ಎಂತಹ ಯುದ್ಧದಲ್ಲಿಯಾದರೂ ನಿನಗೆ ಸ್ವಲ್ಪವೂ ಬಳಲಿಕೆಯಿಲ್ಲದಿರಲಿ! ಜಲದಲ್ಲಿಯಾಗಲಿ, ಆಕಾಶದಲ್ಲಿಯಾಗಲಿ ನಿನ್ನ ಸಂಚಾರಕ್ಕೆ ತಡೆಯಿಲ್ಲದಿರಲಿ! ಯಾವ ಶಸ್ತ್ರಗಳೂ ನಿನ್ನ ದೇಹದಲ್ಲಿ ನಾಟಿ ನೋವನ್ನುಂಟುಮಾಡದಿರಲಿ" ಎಂಬೀ ವರಗಳನ್ನೆಲ್ಲ ಕೊಟ್ಟರು. ಹೀಗೆ ದೇವತೆಗಳಿಂದ ಅನೇಕ ವರಗಳನ್ನು ಪಡೆದು ಕೃತಾರ್ಥನಾಗಿ ಬಂದ ಆ ಕೃಷ್ಣನ ಮಹಿಮೆಯು ಊಹಿಸುವುದಕ್ಕೂ ಸಾಧ್ಯವಲ್ಲದುದು. ಅವನು ಮಹಾ ಬಲಾಢ್ಯನು. ಎಲ್ಲಾ ಗುಣಸಮೃದ್ಧಿಯಿಂದ ಕೂಡಿದವನು. ಅಪಾರ ವೀರ್ಯವುಳ್ಳವನು. ಸಾಕ್ಷಾನ್ಮಹಾವಿಷ್ಣುವೇ ಅವನು. ಎಂತವರಿಗೂ ಸಹಿಸಲಸಾಧ್ಯನಾದವನು. ಇಂತಹ ಕೃಷ್ಣನನ್ನೂ ತಾನು ಜಯಿಸುವೆನೆಂದು ಮೂಢನಾದ ಆ ದುರ್ಯೋಧನನು ನೆನೆಸುವಂತಿದೆ! ಕೃಷ್ಣನನ್ನು ತಾನು ಕೈಸೆರೆಹಿಡಿಯಬಹುದೆಂದೂ ಯೋಚಿಸುವಂತಿದೆ. ಕೃಷ್ಣನು ಇದನ್ನೆಲ್ಲ ತಿಳಿದಿದ್ದರೂ ನಮ್ಮನ್ನು ನೋಡಿ ಎಲ್ಲವನ್ನೂ ಸಹಿಸಿಕೊಂಡಿರುವನು. ಆ ದುರ್ಯೋಧನನು ಈಗಲೂ ನನ್ನಿಂದ ಕೃಷ್ಣನನ್ನು ಅಗಲಿಸಬೇಕೆಂದು ಸಮಯವನ್ನು ಹುಡುಕುತ್ತಿರುವನು. ಕೃಷ್ಣನಿಗೆ ಪಾಂಡವರಲ್ಲಿರುವ ಮಮತೆಯನ್ನು ಅವನು ಹೇಗೆ ತಪ್ಪಿಸಬಲ್ಲನೋ, ಅದು ಮುಂದಿನ ಯುದ್ಧದಲ್ಲಿ ಅವನಿಗೆ ಚೆನ್ನಾಗಿ ತಿಳಿಯದೆ ಹೋಗಲಾರದು. ಓ ಸಂಜಯಾ! ಈಗ ನಾನು ಯುದ್ಧವನ್ನಾರಂಭಿಸಿದರೆ, ನಮ್ಮ ಆಚಾರ್ಯರನ್ನೇ ನಾನು ಇದಿರಿಸಬೇಕಾಗಿ ಬರುವುದು. ಆದರೇನು? ನಾನು ರಣರಂಗಕ್ಕೆ ಹೋದೊಡನೆ, ಮೊದಲು ತಾತನಾದ ಭೀಷ್ಮನಿಗೂ, ದ್ರೋಣಾಶ್ವತ್ಥಾಮರಿಗೂ, ಅಪ್ರತಿಮನಾದ ಕೃಪಾಚಾರ್ಯನಿಗೂ ನಮಸ್ಕರಿಸಿ, ನಿರ್ಭಯವಾಗಿ ನನ್ನ ರಾಜ್ಯಕ್ಕೆ ಹೋರಾಡದೆ ಬಿಡಲಾರೆನು. ಧರ್ಮದೇವತೆಯೇ ತಾನಾಗಿ ಪಾಪಿಗಳಾದ ಕೌರವರನ್ನು ನಾಶಮಾಡುವುದೆಂದು ನನಗೆ ದೃಢವಾದ ನಂಬಿಕೆಯುಂಟು. ಘಾತುಕರಾದ ಆ ಧೃತರಾಷ್ಟ್ರಪುತ್ರರು ಕಪಟದ್ಯೂತದಲ್ಲಿ ನಮ್ಮನ್ನು ಸೋಲಿಸಿ, ಹನ್ನೆರಡು ವರ್ಷಗಳವರೆಗೆ ನಾವು ಕಾಡಿನಲ್ಲಿ ಕಷ್ಟಪಡುವಂತೆ ಮಾಡಿದರು. ಅಲ್ಲಿಂದಾಚೆಗೆ ಒಂದುವರ್ಷದ ಅಜ್ಞಾತವಾಸವನ್ನೂ ಕಳೆದು

ಬದುಕಿ ಬಂದೆವು. ನಾವು ಇನ್ನೂ ಸಾಯದೆ ಬದುಕಿರುವಾಗ ನಮ್ಮಲ್ಲಿ ವೈರವನ್ನು ಬೆಳೆಸಿದ ಆ ಕೌರವರಿಗೆ ಇನ್ನುಮೇಲೆ ಸುಖವೆಲ್ಲಿಯದು? ಮತ್ತು ಅವರಿಗೆ ರಾಜ್ಯವಾಗಲಿ, ಆ ಪದವಿಯಾಗಲಿ ನಿಲ್ಲುವುದೆಂದರೇನು? ಓ ಸಂಜಯಾ! ಈಗ ಒಂದುವೇಳೆ ಇಂದ್ರಾದಿದೇವತೆಗಳೇ ಅವರಿಗೆ ಬೆಂಬಲವಾಗಿದ್ದು, ಯುದ್ಧದಲ್ಲಿ ಅವರೇ ನಮ್ಮನ್ನು ಜಯಿಸುವಪಕ್ಷದಲ್ಲಿ, ಆಗ ಲೋಕದಲ್ಲಿ ಧರ್ಮಕ್ಕಿಂತಲೂ ಅಧರ್ಮವೇ ಮೇಲೆಂದು ಸಿದ್ಧವಾಗುವುದು. ಆಗ ಸತ್ಕಾರ್ಯಗಳೊಂದೂ ಕೆಲಸಕ್ಕೆ ಬಾರವೆಂದೂ ಸ್ಥಿರಪಡುವುದು. ಒಂದುವೇಳೆ ಯುದ್ಧದಲ್ಲಿ ಪೌರುಷಕ್ಕೂ, ಸತ್ಕಾರ್ಯಗಳಿಗೂ ಸಂಬಂಧವೇನೂ ಇಲ್ಲವೆಂದೂ, ಆ ಕೌರವರಿಗಿಂತಲೂ ನಮ್ಮಲ್ಲಿ ವಿಶೇಷವೇನೂ ಇಲ್ಲವೆಂದೂ, ಆ ದುರ್ಯೋಧನನು ನೆನೆಸಿಕೊಂಡಿದ್ದರೂ ಇರಲಿ! ಆಗಲೂ ಶ್ರೀಕೃಷ್ಣನೊಡನೆ ಸೇರಿ ಆ ದುರ್ಯೋಧನನ್ನು ಅವನ ಸಮಸ್ತ ಪರಿವಾರದೊಡನೆ ನಾನು ಕೊಲ್ಲುವುದೇ ನಿಶ್ಚಯವು. ಆ ದುರ್ಯೋಧನನ ಪಾಪಕೃತ್ಯಕ್ಕೂ, ನಮ್ಮ ಸುಕೃತಕ್ಕೂ ತಕ್ಕ ಫಲವುಂಟಾದರೆಮಾತ್ರ, ಮುಂದಿನ ಯುದ್ಧದಲ್ಲಿ ಕೌರವರಿಗೆ ಪರಾಜಯವಾಗಬೇಕಾದುದೇ ನ್ಯಾಯವು. ಎಲೈ ಕೌರವರೇ! ಕಣ್ಣಿಂದ ಕಂಡಹಾಗೆ ನಾನು ಹೇಳುತ್ತಿರುವೆನು. ನೀವು ಯುದ್ಧಕ್ಕೆ ನಿಂತರೆಮಾತ್ರ ನಿಮಗೆ ನಾಶವು ನಿಶ್ಚಯವು. ಯುದ್ಧಕ್ಕೆ ಮುಂದಾಗದಿದ್ದರೆ ನೀವು ಉಳಿಯುವಿರಿ! ಆ ಯುದ್ಧದಲ್ಲಿ ನಾನು ಯಾವನನ್ನೂ ಉಳಿಸುವಹಾಗಿಲ್ಲ. ಕರ್ಣನೊಡನೆ ಸೇರಿಸಿ ಧೃತರಾಷ್ಟ್ರಪುತ್ರರಾದ ನಿಮ್ಮೆಲ್ಲರನ್ನೂ ಕೊಂದು, ಕೌರವರಾಜ್ಯವನ್ನೆಲ್ಲ ಜಯಿಸಿ, ನಾನು ಕೈವಶಮಾಡಿಕೊಳ್ಳುವುದೇ ಸಿದ್ಧವು. ಹೇಗೆ ಉಚಿತವೋ ಹಾಗೆ ಮಾಡಿರಿ! ಇಷ್ಟರಲ್ಲಿಯೇ ನೀವು ನಿಮ್ಮ ಪತ್ನಿಯರು ಮೊದಲಾದ ಇಷ್ಟಭೋಗಗಳನ್ನೆಲ್ಲ ಯಥೇಷ್ಟವಾಗಿ ಅನುಭವಿಸಿ ಬಿಡಿರಿ! ನಮ್ಮಲ್ಲಿ ವಯೋವೃದ್ಧರಾದ ಅನೇಕ ಬ್ರಾಹ್ಮಣೋತ್ತಮರುಂಟು. ಅವರು ಅನೇಕವಿಷಯಗಳನ್ನೋದಿದವರು! ಶೀಲವಂತರು! ಒಳ್ಳೇ ಉತ್ತಮಕುಲದವರು. ಸಂವತ್ಸರಗತಿಗಳನ್ನೆಲ್ಲ ಚೆನ್ನಾಗಿ ಬಲ್ಲವರು. ಜ್ಯೋತಿಷದಲ್ಲಿ ನಿಪುಣರು. ಗ್ರಹನಕ್ಷತ್ರಗತಿಗಳನ್ನು ಬಹಳ ನಿರ್ಣಯವಾಗಿ ತಿಳಿದವರು. ಅದೃಷ್ಟಸಂಬಂಧವಾದ ಹಾನಿವೃದ್ಧಿಗಳ ರಹಸ್ಯವನ್ನೆಲ್ಲ ತಿಳಿಯಬಲ್ಲವರು. ಭವಿಷ್ಯದ್ವೃ

ತ್ತಾಂತಗಳನ್ನೂ ತಿಳಿದು ಹೇಳಬಲ್ಲವರು. ಅವರು ಎಂತಹ ಪ್ರಶ್ನೆಗಳ ನ್ನಾದರೂ ತಿಳಿದು ಹೇಳಬಲ್ಲರು. ಅಂತವರು ಹೇಳುವುದನ್ನು ಕೇಳಿದರೆ, ರಾಶಿಚಕ್ರಗಳು, ಮುಹೂರ್ತಗಳು ಮುಂತಾದುವೆಲ್ಲವೂ ಮುಂದೆ ಕೌರವ ಸೃಂಜಯರಿಗೆಲ್ಲ ಮಹತ್ತಾದ ಕ್ಷಯವನ್ನೂ, ಪಾಂಡವರಿಗೆ ಜಯವನ್ನೂ ಸೂಚಿಸುತ್ತಿರುವುವು. ಅಜಾತಶತ್ರುವಾದ ಧರ್ಮರಾಜನು ಕೂಡ ಶತ್ರು ನಿಗ್ರಹಕ್ಕಾಗಿಯೇ ಸಿದ್ಧನಾಗಿರುವನು. ಅವನು ಮನಸ್ಸಿನಿಂದ ಕೋರಿದು ದೆಲ್ಲ ಕೈಗೂಡುವುದೂ ಸಿದ್ಧವೇ! ಪರೋಕ್ಷವನ್ನು ಪ್ರತ್ಯಕ್ಷದಂತೆ ತಿಳಿಯ ಬಲ್ಲ ವೃಷ್ಣಿಸಿಂಹನಾದ ಶ್ರೀಕೃಷ್ಣನೂ ನಮ್ಮ ಜಯದಲ್ಲಿಯೇ ನಿಶ್ಚಯ ಜ್ಞಾನವುಳ್ಳವನಾಗಿರುವನು. ನಾನೂ ಮುಂದಿನ ಕಾರ್ಯದಲ್ಲಿ ಸ್ವಬುದ್ಧಿ ಯಿಂದ ಜಾಗರೂಕನಾಗಿಯೇ ಇರುವೆನು. ನಾನು ಮುಂದಾಗಿ ನೆನೆಸಿದು ದೊಂದೂ ಇದುವರೆಗೆ ವಿಫಲವಾದುದಿಲ್ಲ. ಧೃತರಾಷ್ಟ್ರಪುತ್ರರು ಯುದ್ಧಕ್ಕೆ ನಿಲ್ಲುವುದಾದರೆ, ಅವರಾರೂ ಉಳಿಯುವಹಾಗಿಲ್ಲ. ಓ ಕೌರವರೇ? ನಾನು ಕೈಯಿಂದೆತ್ತುವುದಕ್ಕೆ ಮೊದಲೇ ನನ್ನ ಗಾಂಡೀವವು ಆಕಳಿಸಿ ಬಾಯಿ ಬಿಡುತ್ತಿರುವುದು! ನಾನು ತಟ್ಟುವುದಕ್ಕೆ ಮುಂದಾಗಿಯೇ ನನ್ನ ಬಿಲ್ಲಿನ ಹೆದೆಯು ದುಡಿಯುತ್ತಿರುವುದು! ನಾನು ಕೈಯಿಡದೆಯೇ ನನ್ನ ಬಾಣ ಗಳು ಬತ್ತಳಿಕೆಯಿಂದ ಹೊರಗೆ ಬರಲು ಹಾರಿಹಾರಿ ಕುಣಿಯುತ್ತಿರುವುವು. ಹಾವು ತನ್ನ ಪರೆಯನ್ನು ಸುಲಿದು ಹೊರಗೆ ಬರುವಂತೆ ನನ್ನ ಖಡ್ಗವು ಒರೆಯಿಂದ ಹೊರಗೆ ಹೊರಡುತ್ತಿದೆ. ಈಗಾಗಲೇ ನನ್ನ ಧ್ವಜದಿಂದ "ಓ ಕಿರೀಟೀ! ನೀನು ಯುದ್ಧಕ್ಕಾಗಿ ಯಾವಾಗ ರಥವನ್ನು ಹೂಡುವೆ?" ಎಂಬ ಭಯಂಕರವಾದ ಧ್ವನಿಯು ಕೇಳಿಸುತ್ತಿದೆ. ಈಗಾಗಲೇ ಕೌರವರ ನಾಶಕ್ಕೆ ಸೂಚಕವಾಗಿ, ರಾತ್ರಿಯಲ್ಲಿ ಅಸಂಖ್ಯಾತಗಳಾದ ನರಿಗಳು ಊಳಿ ಡುತ್ತಿವೆ. ಅಂತರಿಕ್ಷದಿಂದ ರಾಕ್ಷಸಪಿಶಾಚಾದಿ ಭೂತಗಳು ಇಳಿಯುತ್ತಿವೆ. ಹದ್ದು, ಕಾಗೆ, ನರಿ, ನವಿಲು, ತೋಳ, ಹುಲಿ, ಕೊಕ್ಕರೆ, ಮುಂತಾಗಿ ಇನ್ನೂ ಅನೇಕ ಕ್ರೂರಮೃಗಗಳೂ, ಚಿನ್ನದ ರೆಕ್ಕೆಗಳುಳ್ಳ ಪಕ್ಷಿಗಳೂ, ಬಿಳೀ ಕುದು ರೆಗಳಮೇಲೆ ಹೂಡಿದ ನನ್ನ ರಥವನ್ನು ನೋಡಿದೊಡನೆ ಆತುರದಿಂದ ಅಲ್ಲ ಲ್ಲಿ ಗುಂಪುಕೂಡುತ್ತಿವೆ. ನಾನೊಬ್ಬನೇ ನನ್ನ ಬಾಣವರ್ಷದಿಂದ, ಅನೇಕ ರಾಜರನ್ನೂ, ಯೋಧರನ್ನೂ ಮೃತ್ಯುಲೋಕಕ್ಕೆ ಕಳುಹಿಸಬಲ್ಲೆನು! ಪ್ರಬ

ಲವಾಗಿ ಉರಿಯುವ ದಾವಾಗ್ನಿಯು ಬೇಸಗೆಯಲ್ಲಿ ವನವನ್ನು ಹೇಗೋ ಹಾಗೆ ನಾನು ಸ್ಥೂಣಾಕರ್ಣ, ಪಾಶುಪತಾಸ್ತ್ರ, ಬ್ರಹ್ಮಾಸ್ತ್ರ ಮುಂತಾಗಿ, ಇನ್ನೂ ಇಂದ್ರನು ನನಗೆ ಅನುಗ್ರಹಿಸಿಕೊಟ್ಟ ಎಲ್ಲಾ ಅಸ್ತ್ರಗಳನ್ನೂ ಪ್ರಯೋಗಿಸಿ, ಕೌರವರನ್ನು ಧ್ವಂಸಮಾಡದೆ ಬಿಡುವವನಲ್ಲ. ನಾನು ಆ ಅಸ್ತ್ರಬಲವನ್ನು ನಂಬಿಯೇ ಧಾರ್ತರಾಷ್ಟ್ರರನ್ನೆಲ್ಲ ತೀರಿಸಿಬಿಡುವುದಾಗಿ ದೃಢನಿಶ್ಚಯವನ್ನು ಮಾಡಿರುವೆನು. ಯುದ್ಧರಂಗದಲ್ಲಿ ನನಗಿದಿರಾದವರಲ್ಲಿ ಒಬ್ಬನನ್ನಾದರೂ ನಾನು ಉಳಿಸುವ ಹಾಗಿಲ್ಲ. ಆಮೇಲೆಯೇ ನನ್ನ ಮನಸ್ಸಿಗೆ ಶಾಂತಿಯುಂಟು. ಅದರಿಂದಾಚೆಗೇ ನಾನು ವಿಶ್ರಾಂತಿಯನ್ನು ತೆಗೆದುಕೊಳ್ಳತಕ್ಕವನು. ಇದೇ ನನ್ನ ಸ್ಥಿರಭಾವವು. ಸಂಜಯಾ! ನೀನು ಇದನ್ನು ಆ ಕೌರವರ ಮುಂದೆ ಸ್ಪಷ್ಟವಾಗಿ ತಿಳಿಸಿಬಿಡು. ಇಂದ್ರಾದಿದೇವತೆಗಳೂ ಯಾರನ್ನು ಜಯಿಸಲಾರರೋ, ಅಂತವರೊಡನೆ ಆ ದುರ್ಯೋಧನನು ಯುದ್ಧಕ್ಕಾಗಿ ಬಯಸುವನು. ಅವನ ಮೌಢ್ಯವನ್ನು ನೋಡಿದೆಯಾ?

ಕೊನೆಯ ಮಾತನ್ನು ಹೇಳುವೆನು ಕೇಳು! ಈಗಲೂ ವೃದ್ಧನಾದ ಭೀಷ್ಮನು, ಕೃಪನು, ದ್ರೋಣನು, ಅವನ ಮಗನಾದ ಅಶ್ವತ್ಥಾಮನು, ಧೀಮಂತನಾದ ವಿದುರನು, ಇವರೆಲ್ಲರೂ ಹೇಗೆ ಹೇಳುವರೋ ಅದರಂತೆ ನಡೆಯಲಿ! ಕೌರವರೆಲ್ಲರೂ ತಮ್ಮ ಮೂರ್ಖಸ್ವಭಾವವನ್ನು ಬಿಟ್ಟು ದೀರ್ಘಾಯುಷ್ಮಂತರಾಗಿ ಬಾಳಲಿ" ಎಂದನು.

ಇದು ನಾಲ್ವತ್ತೆಂಟನೆಯ ಅಧ್ಯಾಯವು.

ಭೀಷ್ಮನು ಕೃಷ್ಣಾರ್ಜುನರಿಬ್ಬರೂ ನರನಾರಾಯಣರ ಅವತಾರವೆಂಬುದನ್ನು ಸೂಚಿಸಿ, ಕರ್ಣನನ್ನು ನಿಂದಿಸುತ್ತ, ಯುದ್ಧಪ್ರಯತ್ನದಿಂದ ಕೌರವರಿಗೆ ವಿನಾಶವು ಸಿದ್ಧವೆಂದು ಹೇಳಿದುದು.

ಸಂಜಯನು ಈ ಮಾತುಗಳನ್ನು ಮುಗಿಸಿದಮೇಲೆ ಭೀಷ್ಮನು ಎಲ್ಲಾ ರಾಜರೂ ಕೇಳುವಂತೆ ಹೀಗೆಂದು ಹೇಳಿದನು. "ರಾಜರೆ! ಕೇಳಿರಿ!

ಹಿಂದೊಮ್ಮೆ ಬೃಹಸ್ಪತಿಯೂ, ಶುಕ್ರಾಚಾರ್ಯನೂ ಬ್ರಹ್ಮನ ಬಳಿಯಲ್ಲಿದ್ದರು. ಆಗ ಇಂದ್ರನನ್ನು ಮುಂದಿಟ್ಟುಕೊಂಡು, ಎಲ್ಲಾ ದೇವತೆಗಳೂ, ಅಗ್ನಿಯೂ, ವಸುಗಳೂ, ಆದಿತ್ಯರೂ, ಸಾಧ್ಯರೂ, ಸಪ್ತರ್ಷಿಗಳೂ, ವಿಶ್ವಾವಸು ಮೊದಲಾದ ಗಂಧರ್ವರೂ, ಅಪ್ಸರಸ್ಸುಗಳೂ, ಎಲ್ಲರೂ ಬ್ರಹ್ಮಸಭೆಯಲ್ಲಿ ನೆರೆದಿದ್ದರು. ಲೋಕಪಿತಾಮಹನೆನಿಸಿಕೊಂಡು, ಎಲ್ಲರಿಗೂ ಹಿರಿಯನಾದ ಬ್ರಹ್ಮನಿಗೆ ಬಹಳ ಭಯಭಕ್ತಿಯಿಂದ ನಮಸ್ಕರಿಸಿ, ಅವನ ಸುತ್ತಲೂ ಕುಳಿತಿದ್ದರು. ಹೀಗೆ ಎಲ್ಲರೂ ನೆರೆದಿದ್ದ ಕಾಲದಲ್ಲಿ, ಅವರೆಲ್ಲರ ತೇಜಸ್ಸನ್ನೂ, ಮನಸ್ಸನ್ನೂ ಆಕರ್ಷಿಸುವಂತಿರುವ ಅದ್ಭುತತೇಜಸ್ಸಿನೊಡನೆ ದೇವತೆಗಳಲ್ಲಿ ಮೊದಲನೆಯವರೆನಿಸಿಕೊಂಡ ನರನಾರಾಯಣರೆಂಬ ಮಹರ್ಷಿಗಳಿಬ್ಬರು, ಬ್ರಹ್ಮದೇವನನ್ನು ಉಚಿತಗೌರವಾದಿಗಳಿಂದ ಸಮ್ಮಾನಿಸದೆ ಆ ಸಭೆಯಿಂದ ಹೊರಗೆ ಹೋಗುತ್ತಿದ್ದರು. ಆಗ ಬೃಹಸ್ಪತಿಯು ಅವರಿಬ್ಬರ ದಿವ್ಯತೇಜಸ್ಸನ್ನು ನೋಡಿ ಭ್ರಾಂತನಾಗಿ ಬ್ರಹ್ಮದೇವನನ್ನು ಕುರಿತು "ದೇವಾ! ಯಾರಿವರು ? ಈ ಸಭೆಯಲ್ಲಿ ನಿನಗೂ ನಮಸ್ಕರಿಸದೆ ಹೋಗುತ್ತಿರುವರು. ಅವರ ಸಂಗತಿಯನ್ನು ನಮಗೆ ತಿಳಿಸಬೇಕು" ಎಂದನು. ಆಗ ಬ್ರಹ್ಮನು "ಆಚಾರ್ಯಾ! ಇವರಿಬ್ಬರೂ ನರನಾರಾಯಣರೆಂಬ ತಪಸ್ವಿಗಳು. ತಮ್ಮ ತೇಜಸ್ಸಿನಿಂದ ಭೂಮ್ಯಾಕಾಶಗಳೆರಡನ್ನೂ ಬೆಳಗುವಂತೆ ಜ್ವಲಿಸುತ್ತಿರುವರು. ಪ್ರಿಯದರ್ಶನವುಳ್ಳವರು. ಮಹಾಬಲಾಢ್ಯರು. ನಮ್ಮೆಲ್ಲರನ್ನೂ ಮೀರಿಸಿದವರು. ಇವರು ಬೇರೆ ಉತ್ತಮಲೋಕದಿಂದ ಈಗಲೇ ಇಲ್ಲಿಗೆ ಬಂದರು. ತಮ್ಮ ತಪಸ್ಸಿನಿಂದ ಅದ್ಭುತಶಕ್ತಿಯನ್ನೂ, ಪರಾಕ್ರಮವನ್ನೂ ಪಡೆದವರು. ಅವರು ಯಾವಾಗಲೂ ತಮ್ಮ ಕಾರ್ಯಗಳಿಂದ ಲೋಕವನ್ನು ಸಂತೋಷಗೊಳಿಸತಕ್ಕವರು. ದೇವಗಂಧರ್ವಾದಿಗಳಿಗೂ ಪೂಜ್ಯರು. ಒಂದೇ ಅಂಶವನ್ನು ಎರಡಾಗಿ ವಿಭಾಗಿಸಿಕೊಂಡು ರಾಕ್ಷಸವಿನಾಶಕ್ಕಾಗಿ ಎರಡು ವ್ಯಕ್ತಿಗಳಾಗಿರುವರು. ಇವರಿಬ್ಬರೂ ಮಹಾಪ್ರಾಜ್ಞರು" ಎಂದನು. ಓ ರಾಜರೆ! ಈ ಮಾತನ್ನು ಕೇಳಿದೊಡನೆ ಅಲ್ಲಿದ್ದ ದೇವೇಂದ್ರನು ಸಮಸ್ತದೇವಗಣಗಳೊಡನೆ ಬೃಹಸ್ಪತಿಯನ್ನು ಮುಂದಿಟ್ಟುಕೊಂಡು, ಆ ನರನಾರಾಯಣರಿಬ್ಬರೂ ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ಬಂದನು. ಒಮ್ಮೆ ದೇವಾಸುರ ಯುದ್ಧದಲ್ಲಿ ದೇವತೆಗಳಿಗೆ ಅಪಾಯಭಯವುಂಟಾದಾಗ, ಇಂದ್ರನು

ಈ ನರನಾರಾಯಣರ ಬಳಿಯಲ್ಲಿ ವರಗಳನ್ನು ಪ್ರಾರ್ಥಿಸಿದನು. ಆ ಮಹರ್ಷಿಗಳು ಇಂದ್ರನಲ್ಲಿ ಪ್ರಸನ್ನರಾಗಿ, ಅವನಿಗೆ ಇಷ್ಟವರಗಳನ್ನು ಕೊಡುವುದಾಗಿ ವಾಗ್ದಾನವನ್ನು ಮಾಡಿದಮೇಲೆ, ತಮಗೆ ದಾನವರೊಡನೆ ಯುದ್ಧದಲ್ಲಿ ಸಹಾಯಮಾಡಬೇಕೆಂದು ಕೇಳಿಕೊಂಡನು. ಇವರು ಸಹಾಯಮಾಡುವುದಾಗಿ ಒಪ್ಪಿದರು. ಇವರ ಸಹಾಯಬಲದಿಂದಲೇ ಇಂದ್ರನು ದೈತ್ಯದಾನವರನ್ನೆಲ್ಲ ಜಯಿಸಿದನು. ನರನೆಂಬವನೇ ಹಿಂದೆ ಇಂದ್ರನ ಯುದ್ಧದಲ್ಲಿ ಪೌಲೋಮರೆಂದೂ, ಕಾಲಖಂಜರೆಂದೂ ಕರೆಯಲ್ಪಡುವ ಲಕ್ಷೋಪಲಕ್ಷ ದೈತ್ಯರನ್ನು ಕೊಂದನು. ಮತ್ತು ನಿರಂಕುಶಸಂಚಾರವುಳ್ಳ ರಥದಲ್ಲಿ ಕುಳಿತು, ತನ್ನನ್ನು ನುಂಗಬೇಕೆಂದು ಬಂದ ಜಂಭಾಸುರನನ್ನು ಕೊಂದವನೂ ಇವನೇ. ಹಿಂದೆ ಸಮುದ್ರದ ಆಚೆಗಿರುವ ಹಿರಣ್ಯಪುರವೆಂಬ ದೈತ್ಯನಗರವನ್ನು ಮುತ್ತಿ, ಅಲ್ಲಿದ್ದ ಅರುವತ್ತುಸಾವಿರ ಮಂದಿ ನಿವಾತಕವಚರನ್ನು ಕೊಂದು, ಆ ಪಟ್ಟಣವನ್ನು ಧ್ವಂಸಮಾಡಿದವನೂ ಈತನೇ! ಈ ವಿಧವಾಗಿ ಇವನು ದೇವೇಂದ್ರನಿಗೆ ಸಹಾಯಮಾಡಿದುದಲ್ಲದೆ, ಖಾಂಡವದಹನಕಾಲದಲ್ಲಿ ಸಮಸ್ತದೇವತೆಗಳೊಡಗೂಡಿದ ಇಂದ್ರನನ್ನು ಜಯಿಸಿ, ಅಗ್ನಿಯನ್ನು ತೃಪ್ತಿಗೊಳಿಸಿದನು. ಇದರಂತೆಯೇ ಇವನಿಗೆ ಅರ್ಧದೇಹದಂತಿರುವ ನಾರಾಯಣನೂಕೂಡ ಈ ಲೋಕದಲ್ಲಿ ಅಸಂಖ್ಯಾತರಾದ ದೈತ್ಯದಾನವರನ್ನು ಕೊಂದನು. ಮಹಾವೀರ್ಯವುಳ್ಳ ಆ ನರನಾರಾಯಣರೆಂಬ ಪೂರ್ವದ ದೇವತೆಗಳೇ ಈಗ ಕೃಷ್ಣಾರ್ಜುನರೆಂಬ ಹೆಸರಿನಿಂದ ಅವತರಿಸಿ ಒಂದಾಗಿ ಸೇರಿರುವರೆಂದು ಕೇಳುವೆವು. ಮನುಷ್ಯಲೋಕದಲ್ಲಿ ಇಂದ್ರಾದಿದೇವತೆಗಳಿಗೂ ಇವರು ದುರ್ಜಯರು. ಶ್ರೀಕೃಷ್ಣನೇ ಆ ನಾರಾಯಣನು. ಅರ್ಜುನನೇ ನರನು. ಒಂದೇ ಆತ್ಮವು ಎರಡಾಗಿ, ಈ ಕೃಷ್ಣಾರ್ಜುನ ರೂಪದಿಂದ ಕಾಣುತ್ತಿರುವುದೆಂದು ತಿಳಿಯಿರಿ. ಈ ಮಹಾತ್ಮರಿಬ್ಬರೂ ಸ್ವಶಕ್ತಿಯಿಂದ ಅಕ್ಷಯಗಳಾದ ಅನೇಕ ಲೋಕಗಳಲ್ಲಿ ತಡೆಯಿಲ್ಲದೆ ಸಂಚರಿಸಬಲ್ಲರು. ಯುದ್ಧಸಮಯವು ಬಂದಾಗ ದುಷ್ಟನಿಗ್ರಹಕ್ಕಾಗಿ ತಿರುಗಿತಿರುಗಿ ಅವತರಿಸುತ್ತಿರುವರು. ಇವರಿಗೆ ಈ ಲೋಕಸಂಚಾರಶಕ್ತಿಯು ಅವರ ಸತ್ಕರ್ಮಬಲದಿಂದಲೇ ಉಂಟಾದುದು. ಇದನ್ನೇ ನಾರದನೂ ಹೇಳಿರುವನು. ಇವರಮೇಲೆಯೇ ವೇದಜ್ಞನಾದ ನಾರದನು-

ವೃಷ್ಣಿಗಳಿಗೆ ಕರ್ಮಪ್ರಾಧಾನ್ಯವನ್ನು ಉಪದೇಶಿಸಿದನು. ಓ ದುರ್ಯೋಧನಾ! ಶಂಖ ಚಕ್ರ ಗದಾಧಾರಿಯಾದ ಆ ಶ್ರೀಕೃಷ್ಣನೊಡನೆ ಭಯಂಕರವಾದ ಗಾಂಡೀವ ಧನುಸ್ಸನ್ನೂ ಅಸ್ತ್ರಗಳನ್ನೂ ಹಿಡಿದು ನಿನ್ನಿದಿರಾಗಿ ನಿಂತ ಅರ್ಜುನನನ್ನು ನೀನು ಯಾವಾಗ ನೋಡುವೆಯೋ, ಆಗ ನಿನಗೆ ಈಗ ನಾನು ಹೇಳುವ ಮಾತು ನೆನಪಿಗೆ ಬಾರದೆ ಹೋಗದು. ಮಹಾತ್ಮರೂ, ಸನಾತನಮಹರ್ಷಿಗಳೂ ಆದ ಇಬ್ಬರು ಕೃಷ್ಣರೂ (ಕೃಷ್ಣಾರ್ಜುನರಿಬ್ಬರೂ) ಒಂದೇ ರಥದಲ್ಲಿ ಕುಳಿತು ಯುದ್ಧಕ್ಕೆ ಇದಿರಾಗುವುದನ್ನು ನೋಡಿದಾಗ, ನೀನು ನನ್ನ ಮಾತನ್ನು ಸ್ಮರಿಸಿಕೊಳ್ಳುವೆ. ವತ್ಸ! ದುರ್ಯೋಧನಾ! ಈಗ ನನ್ನ ಮಾತನ್ನು ನೀನು ಕೇಳದೆಹೋದಪಕ್ಷದಲ್ಲಿ, ಕೌರವರಿಗೆ ಉಳಿಗಾಲವಿಲ್ಲ. ನಿನ್ನ ಬುದ್ಧಿಯಾದರೋ ಧರ್ಮಾರ್ಥಗಳೆರಡನ್ನೂ ಬಿಟ್ಟು ವಿಪರೀತವಾಗಿ ಪ್ರವರ್ತಿಸುತ್ತಿದೆ. ಈಗಲೂ ನನ್ನ ಹಿತವಾದವನ್ನು ನೀನು ಕೇಳದೆ ಇದ್ದರೆ, ನಿನ್ನ ಕಡೆಯವರನೇಕರು ಸತ್ತ ಸುದ್ದಿಯನ್ನು ನೀನು ಕೇಳುವುದು ನಿಶ್ಚಯವು. ಕುರುಗಳೆಲ್ಲರೂ ನಿನ್ನನ್ನು ಹಿಂಬಾಲಿಸುತ್ತಿರುವರು. ನೀನೂ ನಿನ್ನ ದುರ್ಮಂತ್ರಿಗಳಾದ ಮೂವರ ದುರ್ಬೋಧನೆಯನ್ನೇ ಕೇಳುತ್ತಿರುವೆ. ಹೀನಜಾತಿಯವನೆನಿಸಿಕೊಂಡು, ಪರಶುರಾಮನ ಶಾಪಕ್ಕೊಳಗಾದ ಕರ್ಣನೊಬ್ಬನು, ಜೂಜುಗಾರನಾದ ಶಕುನಿಯೊಬ್ಬನು, ಮಹಾಪಾಪಶೀಲನೂ, ಅಲ್ಪನೂ ಆದ ದುಶ್ಶಾಸನನೆಂಬ ನಿನ್ನ ತಮ್ಮನೊಬ್ಬನು, ಈ ಮೂವರ ಮಾತುಗಳೇ ನಿನಗೆ ಪ್ರಮಾಣವು'' ಎಂದನು. ಆಗ ಕರ್ಣನು ಭೀಷ್ಮನನ್ನು ನೋಡಿ ''ಓ ಪಿತಾಮಹಾ! ನಿನಗೆ ಇಷ್ಟು ವಯಸ್ಸಾಗಿದ್ದು ನೀನು ಇಂತಹ ಮಾತನ್ನಾಡಬಾರದು. ನನ್ನನ್ನು ಹೀನಜಾತಿಯವನೆಂದು ಹೇಳುವೆಯಾ? ನಾನು ಕ್ಷತ್ರಧರ್ಮದಲ್ಲಿಯೇ ಇರತಕ್ಕವನು. ಎಂದಿಗೂ ಸ್ವಧರ್ಮವನ್ನು ತಪ್ಪಿ ನಡೆದವನಲ್ಲ. ನನ್ನನ್ನು ಹೀಗೆ ನಿಂದಿಸುವುದಕ್ಕೆ ನನ್ನಲ್ಲಿ ನೀನು ನೋಡಿದ ನೀಚಕಾರ್ಯವೇನಿದೆ? ನಾನು ನಿರ್ದೋಷಿಯೆಂಬುದನ್ನೂ, ನನ್ನಲ್ಲಿ ಸ್ವಲ್ಪವಾದರೂ ತಪ್ಪಿಲ್ಲವೆಂಬುದನ್ನೂ ಈ ಧೃತರಾಷ್ಟ್ರಪುತ್ರರು ಚೆನ್ನಾಗಿ ಬಲ್ಲರು! ಈ ದುರ್ಯೋಧನನಲ್ಲಿ ನಾನು ಲವಮಾತ್ರವಾದರೂ ತಪ್ಪಿ ನಡೆದವನಲ್ಲ. ಭೀಷ್ಮಾಚಾರ್ಯಾ! ನಾನು ಈ ದುರ್ಯೋಧನನಿಗಾಗಿ ನನ್ನ ಸರ್ವಪ್ರಯತ್ನದಿಂದಲೂ ಮುಂದಿನ ಯುದ್ಧ

ದಲ್ಲಿ ಆ ಪಾಂಡವರೆಲ್ಲರನ್ನೂ ಕೊಂದೇ ಕೊಲ್ಲುವೆನು. ವಿವೇಕಿಯಾದ ಯಾವನು ತಾನೇ ಮೊದಲೊಮ್ಮೆ ತಮಗೆ ದ್ವೇಷಿಗಳಾದವರಲ್ಲಿ ತಿರುಗಿ ಸಂಧಿಯನ್ನು ಬಯಸುವನು? ಧೃತರಾಷ್ಟ್ರನಿಗೂ, ಅದಕ್ಕಿಂತಲೂ ವಿಶೇಷವಾಗಿ ಈ ದುರ್ಯೋಧನನಿಗೂ ಪ್ರಿಯವಾವುದೋ, ಅದೆಲ್ಲವನ್ನೂ ನಡೆಸಬೇಕಾದುದು ನನ್ನ ಕರ್ತವ್ಯವು. ಏಕೆಂದರೆ, ಕೌರವರಾಜ್ಯವು ಈಗ ಇವರಿಗೇ ಸ್ಥಿರಪಟ್ಟಿದೆಯಲ್ಲವೆ?" ಎಂದನು. ಕರ್ಣನು ಹೇಳಿದ ಮಾತನ್ನು ಕೇಳಿ ಭೀಷ್ಮನು ತಿರುಗಿ ಧೃತರಾಷ್ಟ್ರನನ್ನು ಕುರಿತು "ಮಹಾರಾಜಾ! ಈ ಕರ್ಣನೇನೋ ಯಾವಾಗಲೂ ಪಾಂಡವರನ್ನು ತಾನು ಕೊಲ್ಲುವುದಾಗಿ ತನ್ನ ಪರಾಕ್ರಮವನ್ನು ಕೊಚ್ಚಿಕೊಳ್ಳುತ್ತಿರುವನು. ಆದರೇನು? ಮಹಾತ್ಮರಾದ ಆ ಪಾಂಡವರ ಒಂದು ಕಲಾಮಾತ್ರಕ್ಕೂ ಇವನು ಸಾಟಿಯಲ್ಲ. ದುರ್ಬುದ್ಧಿಯುಳ್ಳ ಈ ಸೂತಪುತ್ರನಿಂದಲೇ ನಿನ್ನ ಎಲ್ಲಾ ಮಕ್ಕಳ ಬುದ್ಧಿಯೂ ಕೆಟ್ಟುಹೋಗಿ, ಅವರು ದುರ್ಮಾರ್ಗದಲ್ಲಿ ಪ್ರವರ್ತಿಸುತ್ತಿರುವರು. ಮಂದಬುದ್ಧಿಯುಳ್ಳ ನಿನ್ನ ಮಗನಾದ ದುರ್ಯೋಧನನು ಈ ಕರ್ಣನನ್ನು ನಂಬಿಕೊಂಡೇ ದೇವಕುಮಾರರೂ, ಮಹಾವೀರರೂ ಆದ ಆ ಪಾಂಡವರನ್ನು ಅನೇಕವಿಧದಲ್ಲಿ ಅವಮಾನಗೊಳಿಸಿರುವನು. ಓ ಮಹಾರಾಜಾ! ಆ ಪಾಂಡವರು ಒಟ್ಟಾಗಿ ಸೇರಿಯಾಗಲಿ, ಅವರಲ್ಲಿ ಒಬ್ಬೊಬ್ಬರೇ ಪ್ರತ್ಯೇಕವಾಗಿಯಾಗಲಿ, ನಡೆಸಿದ ಕಾರ್ಯಗಳಂತೆ ದುಷ್ಕರವಾದ ಯಾವುದಾದರೂ ಒಂದು ಕಾರ್ಯವನ್ನು ಈ ಸೂತಪುತ್ರನು ಇದುವರೆಗೆ ನಡೆಸಿದುದುಂಟೇ? ಹಿಂದೆ ವಿರಾಟನಗರದಲ್ಲಿ ತನ್ನ ಕಣ್ಣೆದಿರಾಗಿಯೇ ಅರ್ಜುನನಿಂದ ತನ್ನ ತಮ್ಮನು ಹತನಾಗಿ ಬಿದ್ದುದನ್ನು ನೋಡಿ ಇವನು ಮಾಡಿದುದೇನು? ಆ ಪಾಂಡವರಲ್ಲಿಯೋ ಎಲ್ಲರೂ ಮಹಾಸ್ತ್ರಗಳನ್ನು ಬಲ್ಲವರು! ಸಮಸ್ತದೇವತೆಗಳ ಐಶ್ವರ್ಯವನ್ನಾದರೂ ಅಲಕ್ಷ್ಯಮಾಡಿಬಿಡುವರೇ ಹೊರತು ಜಯವನ್ನು ಮಾತ್ರ ಬಿಡುವವರಲ್ಲ. ಅದೇ ವಿರಾಟನಗರದಲ್ಲಿ ಕೌರವರೆಲ್ಲರೂ ಕೂಡಿರುವಾಗಲೇ, ಧನಂಜಯನು ಅವರನ್ನೆಲ್ಲ ಬಡಿದು ಅವರ ಮೈಮೇಲಿದ್ದ ಬಟ್ಟೆಗಳನ್ನೆಲ್ಲ ಕಿತ್ತುಕೊಂಡು ಹೋದನಲ್ಲವೆ? ಆಗ ಈ ಕರ್ಣನು ಅಲ್ಲಿರಲಿಲ್ಲವೇನು? ಇದಲ್ಲದೆ ನಿನ್ನ ಮಗನಾದ ದುರ್ಯೋಧನನು ಘೋಷಯಾತ್ರೆಯ ನೆವದಿಂದ ಅರಣ್ಯದಲ್ಲಿ ಪಾಂಡವರನ್ನು ಕೆಣಕುವುದ

ಕ್ಕಾಗಿ ಹೋದಾಗ, ಗಂಧರ್ವರು ಅವನನ್ನು ಸೆರೆಹಿಡಿದುಕೊಂಡು ಹೋಗ
ಲಿಲ್ಲವೆ? ಈಗ ಗೂಳಿಯಂತೆ ಹೆಮ್ಮೆಯಿಂದ ಕೂಗಿಕೊಳ್ಳುವ ಕರ್ಣನು ಆಗ
ಎಲ್ಲಿದ್ದನು? ಆ ಗಂಧರ್ವರು ಅವಳಿಮಕ್ಕಳಾದ ಆ ನಕುಲಸಹದೇವರೊ
ಡನೆಯೇ ಯುದ್ಧಕ್ಕೆ ನಿಲ್ಲಲಾರದೆ ಪರಾಜಿತರಾದರು. ಅಂತವರನ್ನು
ಜಯಿಸಲಾರದೆ ಹೋದ ಈ ಕರ್ಣನು, ಈಗ ಬಾಯಿಗೆ ಬಂದಂತೆ ಸುಳ್ಳು
ಸುಳ್ಳಾಗಿ ಬಗುಳಿ, ತನ್ನ ಜಂಭವನ್ನು ಹೇಳಿಕೊಳ್ಳುತ್ತಿರುವನು. ಧರ್ಮಾ
ರ್ಥಗಳೆರಡಕ್ಕೂ ವೈರಿಯಾದ ಈತನ ಮಾತುಗಳೇ ನಿನ್ನ ಮಗನಿಗೆ
ಪ್ರಿಯವಾಗಿವೆ. ಮಹಾರಾಜಾ! ನಿನಗೆ ಕ್ಷೇಮವುಂಟಾಗಲಿ!'' ಎಂದನು.
ಭೀಷ್ಮನು ಈ ಮಾತನ್ನು ಮುಗಿಸಿದೊಡನೆ ದ್ರೋಣಾಚಾರ್ಯನು ಧೃತ
ರಾಷ್ಟ್ರನನ್ನು ನೋಡಿ, ಗೌರವಪೂರ್ವಕವಾಗಿ, "ಮಹಾರಾಜಾ! ಭರತ
ಕುಲಕ್ಕೆಲ್ಲಾ ಮೇಲೆನಿಸಿದ ಈ ಭೀಷ್ಮಾಚಾರ್ಯನು ಹೇಳಿದಂತೆ ನಡೆಸು!
ಬರೀ ಗರ್ವದಿಂದ ಹೆಮ್ಮೆಕೊಚ್ಚಿಕೊಳ್ಳುವವರ ಮಾತಿಗೆ ಕಿವಿಗೊಡಬೇಡ.
ಈಗ ಯುದ್ಧಕ್ಕಿಂತಲೂ ಪಾಂಡವರೊಡನೆ ಸಂಧಿಯೇ ಒಳ್ಳೆಯದೆಂದು
ನನಗೂ ತೋರುತ್ತಿದೆ. ಅರ್ಜುನನು ಯಾವಯಾವ ಮಾತನ್ನು ಹೇಳಿದು
ದಾಗಿ ಈಗ ಸಂಜಯನು ಇಲ್ಲಿ ನಮಗೆ ಬಂದು ತಿಳಿಸಿದನೋ, ಅದರಂತೆ
ಯೇ ಅವನು ಎಲ್ಲವನ್ನೂ ನಡೆಸುವನೆಂದೇ ನನಗೂ ಚೆನ್ನಾಗಿ ನಂಬಿಕೆಯಿ
ದೆ. ಮೂರು ಲೋಕಗಳಲ್ಲಿಯೂ ಆ ಅರ್ಜುನನಿಗೆ ಸಮಾನನಾದ ಧನು
ರ್ಧಾರಿಯು ಬೇರೊಬ್ಬನಿಲ್ಲ'' ಎಂದನು. ಭೀಷ್ಮದ್ರೋಣರಿಬ್ಬರೂ ಸಾರ
ವತ್ತಾದ ಈ ಹಿತವಾದಗಳನ್ನು ಹೇಳಿದರೂ, ಧೃತರಾಷ್ಟ್ರನು ಅವೊಂದನ್ನೂ
ಲಕ್ಷ್ಯಮಾಡದೆ, ತಿರುಗಿ ಸಂಜಯನನ್ನು ಕುರಿತು, ಪಾಂಡವರ ಸಂಗತಿಯೇ
ನೆಂದು ಪ್ರಶ್ನೆಮಾಡತೊಡಗಿದನು. ಧೃತರಾಷ್ಟ್ರನು ಹೀಗೆ ಭೀಷ್ಮದ್ರೋ
ಣರ ಮಾತನ್ನೂ ಲಕ್ಷ್ಯಮಾಡದೆ ಹೋದುದನ್ನು ನೋಡಿ, ಕೌರವರಿಗೆ ಆ
ಗಲೇ ತಮ್ಮ ಜೀವಿತದಲ್ಲಿ ನಿರಾಶೆ ಹುಟ್ಟಿತು.

ಇದು ನಾಲ್ವತ್ತೊಂಭತ್ತನೆಯ ಅಧ್ಯಾಯವು.

ಪಾಂಡವರು ಯಾರ ಬಲದಿಂದ ನಮ್ಮೊಡನೆ ಯುದ್ಧಕ್ಕೆ
ಯತ್ನಿಸುತ್ತಿರುವರೆಂದು ಧೃತರಾಷ್ಟ್ರನು ಕೇಳಲು,
ಸಂಜಯನು ಪಾಂಡವರ ಪ್ರಭಾವವನ್ನು ನೆನೆ
ಸಿಕೊಂಡು ಮೂರ್ಛಿತನಾಗಿ, ಆಮೇಲೆ ಆ
ಪಾಂಡವರಿಗಿದ್ದ ಬೆಂಬಲವನ್ನು
ತಿಳಿಸಿದುದು.

ಆಗ ಧೃತರಾಷ್ಟ್ರನು "ಸಂಜಯಾ! ಆ ಧರ್ಮರಾಜನ ಅಭಿಪ್ರಾಯ ವೇನು? ಈಗಲಾದರೋ, ನಮ್ಮ ಕಡೆಗೆ ಅನೇಕರಾಜರು ತಮ್ಮ ಅಪಾರ ಸೈನ್ಯಗಳೊಡನೆ ಬಂದು ಸೇರಿರುವರು. ಈ ಸಂಗತಿಯನ್ನು ಆ ಧರ್ಮಪು ತ್ರನೂ ಕೇಳಿರಬಹುದು. ಇಂತಹ ನಮ್ಮೊಡನೆ ಅವನು ಯುದ್ಧಕ್ಕಾಗಿ ಮಾಡುತ್ತಿರುವ ಸನ್ನಾಹವೇನು? ಅವನ ತಮ್ಮಂದಿರಲ್ಲಿಯಾಗಲಿ, ಮಕ್ಕ ಳಲ್ಲಿಯಾಗಲಿ, ಅವನ ಆಜ್ಞೆಗಾಗಿ ಅವನ ಮುಖವನ್ನು ನೋಡುತ್ತಿರುವವ ರಾರು? "ಯುದ್ಧಪ್ರಯತ್ನವನ್ನು ಬಿಟ್ಟುಬಿಡು" ಎಂದು ಅವನನ್ನು ಯಾರಾದರೂ ನಿವಾರಿಸುವವರುಂಟೇನು? ಮೂಢರಾದ ನನ್ನ ಮಕ್ಕ ಳೇನೋ ಧರ್ಮರತನಾದ ಆ ಪಾಂಡುಪುತ್ರನನ್ನು ಅನೇಕವಿಧವಾಗಿ ಅವ ಮಾನಪಡಿಸಿ ರೇಗಿಸಿರುವುದು ನಿಜವೇ! ಅದಕ್ಕಾಗಿ ಕೋಪಗೊಂಡ ಆ ಪಾಂಡುಪುತ್ರನನ್ನು ಸಮಾಧಾನಗೊಳಿಸಿ ಅಲ್ಲಿ ಯಾರೂ ತಡೆಯುವವ ರಿಲ್ಲವೆ?" ಎಂದನು. ಆದಕ್ಕಾ ಸಂಜಯನು "ಮಹಾರಾಜಾ! ಆ ಧರ್ಮಪುತ್ರನಿಗೆ ಸಹಾಯಕ್ಕೆ ಕಡಿಮೆಯೇನಿದೆ? ಪಾಂಡವರೂ, ಪಾಂಚಾ ಲರೂ, ಅವನ ಆಜ್ಞೆಗಾಗಿ ಅವನ ಮುಖವನ್ನೇ ಇದಿರುನೋಡುತ್ತಿರು ರವು. ರಾಜೇಂದ್ರಾ! ನಿನಗೆ ಕ್ಷೇಮವುಂಟಾಗಲಿ! ಆ ಧರ್ಮರಾಜನು ಎಲ್ಲರನ್ನೂ ತನ್ನ ಕೈಕೆಳಗೆ ಅಡಗಿಸಿಟ್ಟುಕೊಂಡಿರುವನು. ಪಾಂಡವರ ಮತ್ತು ಪಾಂಚಾಲರ ರಥಸಮೂಹಗಳು ಬೇರೆಬೇರೆ ವಿಭಾಗವಾಗಿ ನಿಂತು, ಆ ಯುಧಿಷ್ಠಿರನ ಆಗಮನವನ್ನು ಎಷ್ಟೋ ಗೌರವದಿಂದ ಆದರಿಸುತ್ತಿರು ವುವು. ಆಕಾಶದಲ್ಲಿ ತೇಜೋರಾಶಿಯಾದ ಸೂರ್ಯನು ಉದಿಸಿಬಂದಂತೆ, ಮಹಾತೇಜಸ್ವಿಯಾದ ಆ ಯುಧಿಷ್ಠಿರನನ್ನು ಕಂಡಾಗ, ಪಾಂಚಾಲರೆ ಲ್ಲರೂ ಎಷ್ಟೋ ಆದರದಿಂದ ಗೌರವಿಸುತ್ತಿರುವರು. ಅಷ್ಟೇಕೆ? ದನಗ

ಳನ್ನು ಮೇಯಿಸುವ ಗೊಲ್ಲರು, ಕುರಿಗಳನ್ನು ಕಾಯುವ ಕುರುಬರು ಮೊದಲುಗೊಂಡು, ಪಾಂಚಾಲ, ಕೇಕಯ, ಮತ್ಸ್ಯದೇಶದ ಸಮಸ್ತ ಜನರೂ ಆ ಧರ್ಮರಾಜನನ್ನು ಬಹಳವಾಗಿ ಪ್ರೀತಿಸುತ್ತಿರುವರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಕನ್ಯಕೆಯರೆಲ್ಲರೂ, ಧರ್ಮರಾಜನು ಬೀದಿಯಲ್ಲಿ ಬರುವುದನ್ನು ಕೇಳಿದೊಡನೆ ತಮ್ಮ ಆಟಪಾಟಗಳನ್ನೆಲ್ಲ ಬಿಟ್ಟು, ಗುಂಪುಗುಂಪಾಗಿ ಅವನನ್ನು ನೋಡುವುದಕ್ಕಾಗಿ ಇದಿರುಗೊಂಡು ಬರುವರು" ಎಂದನು.

ಆಗ ಧೃತರಾಷ್ಟ್ರನು "ಸಂಜಯಾ! ಅವೆಲ್ಲವೂ ಹಾಗಿರಲಿ! ಆ ಧರ್ಮಪುತ್ರನು ಯಾವ ಬಲವನ್ನು ನಂಬಿಕೊಂಡು ನಮ್ಮೊಡನೆ ಯುದ್ಧಕ್ಕೆ ಯತ್ನಿಸುತ್ತಿರುವನು? ಧೃಷ್ಟದ್ಯುಮ್ನನ ಸೈನ್ಯದಿಂದಲೇ? ಸೋಮಕರ ಸೈನ್ಯದಿಂದಲೇ? ಯಾವ ಸೇನಾಬಲದಿಂದ ಅವನು ನಮ್ಮನ್ನು ಇದಿರಿಸುವುದಾಗಿರುವನು?" ಎಂದನು. ಧೃತರಾಷ್ಟ್ರನು ಈ ಪ್ರಶ್ನೆಯನ್ನು ಕೇಳಿದೊಡನೆ ಸಂಜಯನು ಸ್ವಲ್ಪಹೊತ್ತಿನವರೆಗೆ ಏನನ್ನೋ ಯೋಚಿಸುವಂತಿದ್ದು ಆಮೇಲೆ ನಿಟ್ಟುಸಿರನ್ನು ಬಿಟ್ಟನು. ಇದ್ದಕ್ಕಿದ್ದಹಾಗೆಯೇ ಅವನಿಗೆ ಪ್ರಜ್ಞೆ ತಪ್ಪಿತು. ಮೂರ್ಛಿತನಾಗಿ ಆ ಸಭಾಮಧ್ಯದಲ್ಲಿ ಬಿದ್ದುಬಿಟ್ಟನು. ಆಗ ವಿದುರನು ಭಯಾತುರದಿಂದ ಆ ಸಭೆಯಲ್ಲಿ ಧೃತರಾಷ್ಟ್ರನನ್ನು ನೋಡಿ "ಮಹಾರಾಜಾ! ಅದೋ! ಸಂಜಯನು ಮೂರ್ಛೆಹೋಗಿ ನೆಲದಮೇಲೆ ಬಿದ್ದುಬಿಟ್ಟನು. ಅವನ ಬಾಯಿಂದ ಮಾತೇ ಹೊರಡುವುದಿಲ್ಲ. ಅವನಿಗೆ ಮೈಮೇಲೆ ಪ್ರಜ್ಞೆಯೇ ಇಲ್ಲ!" ಎಂದನು.

ಆಗ ಧೃತರಾಷ್ಟ್ರನು "ಹೌದು! ವಾಸ್ತವವೇ! ಸಂಜಯನು ಮೂರ್ಛಿತನಾಗಿರುವನು. ಅವನು ಈಗಲೇ ಅಲ್ಲಿ ಮಹಾರಥರಾದ ಪಾಂಡವರನ್ನು ನೋಡಿ ಬಂದವನು. ಪುರುಷಶ್ರೇಷ್ಠರೆನಿಸಿದ ಅವರ ಮಹಿಮೆಯನ್ನು ನೆನೆಸಿಕೊಂಡು, ಅವನ ಮನಸ್ಸು ಕಲಗಿ ಹೀಗೆ ಮೂರ್ಛಿತನಾಗಿರಬೇಕು" ಎಂದನು.

ಜನಮೇಜಯಮಹಾರಾಜಾ! ಇಷ್ಟರಲ್ಲಿಯೇ ಸಂಜಯನಿಗೆ ಸ್ವಲ್ಪ ಸ್ವಲ್ಪವಾಗಿ ಮೂರ್ಛೆ ತಿಳಿದು ಪ್ರಜ್ಞೆಯುಂಟಾಯಿತು. ಸ್ವಲ್ಪ ಚೇತರಿಸಿ

ಕೊಂಡಮೇಲೆ ಆ ರಾಜಸಭೆಯಲ್ಲಿ ತಿರುಗಿ ಧೃತರಾಷ್ಟ್ರನನ್ನು ಕುರಿತು "ಮಹಾರಾಜಾ! ವಿರಾಟನಗರದಲ್ಲಿ ಅಜ್ಞಾತವಾಸದಿಂದ ಕಂದಿದ ಮೈಯುಳ್ಳ ಮಹಾರಥರಾದ ಆ ಪಾಂಡವರನ್ನು ಈಗಲೇ ನಾನು ನೋಡಿ ಬಂದುದರಿಂದ, ಆ ನೆನಪು ಬಂದು ನನಗೆ ಹೇಗೋ ಪ್ರಜ್ಞೆತಪ್ಪಿದಂತಾಯಿತು. ಆ ಪಾಂಡವರಿಗೆ ಮುಂದಿನ ಯುದ್ಧದಲ್ಲಿ ಸಹಾಯಕರಾರೆಂಬುದನ್ನು ತಿಳಿಸುವೆನು ಕೇಳು. ಆ ಪಾಂಡವರು ವೀರನಾದ ಧೃಷ್ಟದ್ಯುಮ್ನನನ್ನು ನಿಮ್ಮನ್ನಿದಿರಿಸುವುದಕ್ಕಾಗಿ ಮುಂದೆ ಬಿಡುವರು. ಯಾವನು ಕೋಪದಿಂದಾಗಲಿ, ಭಯದಿಂದಾಗಲಿ, ಲೋಭದಿಂದಾಗಲಿ, ಹಣದಾಸೆಯಿಂದಾಗಲಿ, ಅಥವಾ ಬೇರೆ ಯಾವ ನೆವದಿಂದಾಗಲಿ, ಸತ್ಯವನ್ನು ಬಿಡುವವನಲ್ಲವೋ, ಧರ್ಮಕ್ಕೆ ಯಾವನು ಮುಖ್ಯ ಪ್ರಮಾಣವೆನಿಸಿರುವನೋ, ಆ ಅಜಾತಶತ್ರುವೇ ನಿಮ್ಮನ್ನಿದಿರಿಸುವನು. ಬಾಹುಬಲದಲ್ಲಿ ಯಾವನಿಗೆ ಸಮಾನನು ಈ ಭೂಮಿಯಲ್ಲಿಯೇ ಬೇರೊಬ್ಬನಿಲ್ಲವೋ, ಧನುರ್ಧಾರಿಗಳಲ್ಲಿ ಮೇಲೆನಿಸಿದ ಯಾವನು ಸಮಸ್ತರಾಜರನ್ನೂ ತನ್ನ ವಶಮಾಡಿಕೊಂಡಿರುವನೋ, ಯಾವನು ಅಂಗ, ಮಗಧ, ಕಳಿಂಗ, ಕಾಶೀ ರಾಜರನ್ನು ಯುದ್ಧದಲ್ಲಿ ಜಯಿಸಿದನೋ, ಅಂತಹ ಭೀಮನ ಬಲದಿಂದ ಪಾಂಡವರು ನಿಮ್ಮೊಡನೆ ಯುದ್ಧಕ್ಕೆ ಸಿದ್ಧರಾಗಿರುವರು. ಯಾವನು ತನ್ನ ನಾಲ್ವರು ಸಹೋದರರನ್ನೂ ಅರಗಿನ ಮನೆಯಿಂದಲೂ, ನರಭಕ್ಷಕನಾದ ಹಿಡಿಂಬನೆಂಬ ರಾಕ್ಷಸನಿಂದಲೂ, ವಾರಣಾವತದಲ್ಲಿ ಪ್ರಬಲವಾದ ಉರಿಯಿಂದಲೂ ತಪ್ಪಿಸಿ ಕಾಪಾಡಿದನೋ, ಯಾವನು ದ್ರೌಪದಿಯನ್ನು ಸೈಂಧವನು ಅಪಹರಿಸಿಕೊಂಡು ಹೋಗುತ್ತಿದ್ದಾಗ ತಪ್ಪಿಸಿದನೋ, ಯಾವನು ದ್ರೌಪದಿಯ ಪ್ರೀತಿಗಾಗಿ ಭಯಂಕರವೂ, ದುರ್ಗಮವೂ ಆದ ಗಂಧಮಾದನ ಪರ್ವತಕ್ಕೆ ಹೋಗಿ, ಅಲ್ಲಿ ಕ್ರೋಧವಶರೆಂಬ ಯಕ್ಷರನ್ನು ಕೊಂದು, ಸೌಗಂಧಿಕ ಪುಷ್ಪಗಳನ್ನು ತಂದನೋ, ಯಾವನು ತನ್ನ ಭುಜಗಳಲ್ಲಿ ಸಾವಿರಾನೆಗಳ ಬಲವುಳ್ಳವನೋ, ಅಂತಹ ವೃಕೋದರನ ಬಲದಿಂದ ಪಾಂಡವರು ನಿಮ್ಮನ್ನಿದಿರಿಸುವರು. ಪೂರ್ವದಲ್ಲಿ ಯಾವನು ಶ್ರೀಕೃಷ್ಣನೊಡಗೂಡಿ ಅಗ್ನಿಯನ್ನು ತೃಪ್ತಿಗೊಳಿಸುವುದಕ್ಕಾಗಿ ಇಂದ್ರನೊಡನೆ ಯುದ್ಧಮಾಡಿ ಜಯಿಸಿದನೋ, ಯಾವನು ದೇವದೇವನಾದ ಮಹೇಶ್ವರನನ್ನು ಯುದ್ಧದಿಂದ

ಮೆಚ್ಚಿಸಿದನೋ, ಯಾವನು ಸಮಸ್ತ ರಾಜರನ್ನೂ ತನ್ನ ವಶಗೊಳಿಸಿರುವನೋ, ವೀರಾಗ್ರಣಿಯಾದ ಆ ಅರ್ಜುನನ ಬಲದಮೇಲೆ ಪಾಂಡವರು ನಿಮ್ಮೊಡನೆ ಯುದ್ಧಕ್ಕೆ ನಿಂತಿರುವರು.

ವಿಚಿತ್ರವಾಗಿ ಯುದ್ಧಮಾಡುವುದರಲ್ಲಿ ನಿಪುಣನಾದ ಯಾವನು ಅನೇಕ ಮ್ಲೇಚ್ಛಸೈನ್ಯದಿಂದ ತುಂಬಿದ ಪಶ್ಚಿಮದಿಕ್ಕನ್ನೆಲ್ಲ ಜಯಿಸಿ ವಶಮಾಡಿಕೊಂಡನೋ, ವೀರನೂ, ಅತಿಸುಂದರನೂ, ಮಹಾಧನುರ್ಧಾರಿಯೂ ಆದ ನಕುಲನ ಬಲವನ್ನು ಮುಂದಿಟ್ಟುಕೊಂಡು ಈಗ ಪಾಂಡವರು ನಿಮ್ಮೊಡನೆ ಯುದ್ಧಕ್ಕೆ ನಿಲ್ಲುತ್ತಿರುವರು.

ಯಾವನು ಅಂಗ, ಕಳಿಂಗ, ಕಾಶೀ, ಮಾಗಧ ದೇಶಗಳನ್ನು ಯುದ್ಧದಲ್ಲಿ ಜಯಿಸಿದನೋ, ಯಾವನಿಗೆ ವೀರ್ಯದಲ್ಲಿ ಅಶ್ವತ್ಥಾಮ, ಧೃಷ್ಟಕೇತು, ರುಕ್ಮಿ, ಪ್ರದ್ಯುಮ್ನರೆಂಬ ನಾಲ್ವರು ಮಾತ್ರವೇ ಲೋಕದಲ್ಲಿ ಸಮಾನರೆನಿಸಿರುವರೋ, ಅಂತಹ ವೀರನೂ, ತರುಣನೂ ಆದ ಸಹದೇವನೊಡನೆ ಪಾಂಡವರು ನಿಮಗೆ ಅನರ್ಥಕಾರಣವಾದ ಯುದ್ಧವನ್ನು ತಂದೊಡ್ಡುತ್ತಿರುವರು. ಮೊದಲು ಕಾಶೀರಾಜನ ಮಗಳಾಗಿದ್ದು, ಸತ್ತಮೇಲೆಯೂ ಭೀಷ್ಮನನ್ನು ಕೊಲ್ಲಬೇಕೆಂಬ ಉದ್ದೇಶದಿಂದ ಘೋರತಪಸ್ಸನ್ನು ಮಾಡಿ ಪಾಂಚಾಲರಾಜನ ಮಗಳಾಗಿ ಹುಟ್ಟಿ, ದೈವವಶದಿಂದ ತಿರುಗಿ ಪುರುಷತ್ವವನ್ನು ಪಡೆದು, ಅದರಿಂದ ಸ್ತ್ರೀಪುರುಷರ ಗುಣಾಗುಣಗಳೆಲ್ಲವನ್ನೂ ತಿಳಿದವನಾದನೋ, ಭೀಷ್ಮವಧವನ್ನುದ್ದೇಶಿಸಿಯೇ ಯಕ್ಷನು ಹೆಣ್ಣಾಗಿದ್ದ ಯಾವಳನ್ನು ಗಂಡುಸನ್ನಾಗಿ ಮಾಡಿದನೋ, ಮಹಾಧನ್ವಿಯೂ, ಭಯಂಕರಪರಾಕ್ರಮಿಯೂ, ಪಾಂಚಾಲರಾಜಪುತ್ರನೂ ಆದ ಆ ಶಿಖಂಡಿಯನ್ನು ಈಗ ಪಾಂಡವರು ನಿಮ್ಮೊಡನೆ ಯುದ್ಧಕ್ಕಾಗಿ ತಂದೊಡ್ಡುತ್ತಿರುವರು.

ಕೇಕಯದೇಶದ ರಾಜಕುಮಾರರಾದ ಐದು ಮಂದಿ ಸಹೋದರರು ಯಾರುಂಟೋ, ಮಹಾ ಧನ್ವಿಗಳೂ, ಶೂರರೂ, ಕವಚಧಾರಿಗಳೂ ಆದ ಅವರ ಸಹಾಯಬಲದಿಂದ ಪಾಂಡವರು ನಿಮ್ಮೊಡನೆ ಯುದ್ಧಕ್ಕೆ ಸಿದ್ಧರಾಗಿರುವರು. ಉದ್ದವಾದ ತೋಳುಗಳುಳ್ಳವನೂ, ಅಸ್ತ್ರಪ್ರಯೋಗದಲ್ಲಿ ವಿಶೇಷವಾದ ಹಸ್ತಲಾಘವವುಳ್ಳವನೂ, ಧೀರನೂ, ಅಮೋಘ ಪರಾಕ್ರಮವು

ಳ್ಳವನೂ, ವೃಷ್ಣಿವೀರನೂ ಆದ ಸಾತ್ಯಕಿಯೊಡನೆ ನಿಮಗೆ ಯುದ್ಧವ
ಸಂಘಟಿಸುವುದು. ಮಹಾತ್ಮರಾದ ಪಾಂಡವರನ್ನು ಕಷ್ಟಕಾಲದಲ್ಲಿ (ಅ
ಜ್ಞಾತವಾಸದಲ್ಲಿ) ಯಾವನು ಕಾಪಾಡಿದನೋ, ಅಂತಹ ವಿರಾಟನೊಡನ
ನೀವು ಯುದ್ಧಮಾಡಬೇಕಾಗಿ ಬರುವುದು. ವಾರಣಾಸೀ (ಕಾಶೀ) ನಗರ
ದಲ್ಲಿ ಮಹಾರಥನೆನಿಸಿಕೊಂಡ ಕಾಶೀರಾಜನಿಗಿದಿರಾಗಿ ನೀವು ಯುದ್ಧಮಾ
ಡಬೇಕಾಗುವುದು. ಬಾಲಕರಾದರೂ ಯುದ್ಧದಲ್ಲಿ ದುರ್ಜಯರೆನಿಸಿಕೊಂಡು,
ಮಹಾಬಲಾಢ್ಯರೂ, ಸರ್ಪಕ್ಕೆ ಸಮಾನವಾದ ಸ್ಪರ್ಶವೇಗವುಳ್ಳವರೂ ಆದ
ಉಪಪಾಂಡವರೊಡನೆ ನೀವು ಯುದ್ಧಮಾಡಬೇಕು. ಯಾವನು ವೀರ್ಯ
ದಲ್ಲಿ ಕೃಷ್ಣನಿಗೂ, ಶಾಂತಿಯಲ್ಲಿ ಧರ್ಮರಾಜನಿಗೂ ಸಾಟಿಯೆನಿಸಿಕೊಂಡಿ
ರುವನೋ, ಆ ಅಭಿಮನ್ಯುವು ಪಾಂಡವರಿಗಾಗಿ ಯುದ್ಧದಲ್ಲಿ ನಿಮ್ಮನ್ನಿದಿರಿ
ಸುವನು. ವೀರ್ಯದಲ್ಲಿ ಅಸಮಾನನೂ, ಮಹಾಯಶಸ್ವಿಯೂ, ಕೋಪ
ಗೊಂಡಾಗ ಯುದ್ಧದಲ್ಲಿ ಎಂತವರಿಗೂ ತಡೆಯಲಸಾಧ್ಯನೂ, ಮಹಾರಥ
ನೂ, ಶಿಶುಪಾಲನ ಮಗನೂ ಆದ ಧೃಷ್ಟಕೇತುವನ್ನು ಪಾಂಡವರು ನಿಮ್ಮಿ
ದಿರಾಗಿ ಯುದ್ಧಕ್ಕೆ ನಿಲ್ಲಿಸುವರು. ಅವನು ಪಾಂಡವರ ಸಹಾಯಾರ್ಥ
ವಾಗಿ ಒಂದಕ್ಷೋಹಿಣೀ ಸೇನೆಯೊಡನೆ ಸಿದ್ಧವಾಗಿ ಬಂದಿರುವನು. ದೇವ
ತೆಗಳಿಗೆ ದೇವೇಂದ್ರನಂತೆ ಪಾಂಡವರಿಗೆ ಮುಖ್ಯಾಶ್ರಯನಾದ ವಾಸುದೇವ
ನೇ ಅವರ ಸಹಾಯಕ್ಕಾಗಿ ನಿಮ್ಮೊಡನೆ ಯುದ್ಧಕ್ಕೆ ನಿಂತಿರುವನು. ಚೇದಿ
ರಾಜನ ಸಹೋದರನಾದ ಶರಭನು ತರತರ್ಷನೊಡನೆ ಪಾಂಡವರ ಪಕ್ಷದಲ್ಲಿ
ರುವುದರಿಂದ, ಅವರಿಬ್ಬರೊಡನೆ ನಿಮಗೆ ಯುದ್ಧವಾಗಬೇಕಾಗಿದೆ. ಜರಾ
ಸಂಧಪುತ್ರರಾದ, ಸಹದೇವ ಜಯತ್ಸೇನರೆಂಬ ವೀರರಿಬ್ಬರೂ ಪಾಂಡವರ
ಪಕ್ಷದಲ್ಲಿರುವರು. ಮಹಾತೇಜಸ್ವಿಯಾದ ದ್ರುಪದನು ದೊಡ್ಡ ಸೈನ್ಯದೊ
ಡನೆ ಬಂದು ಪಾಂಡವರಿಗಾಗಿ ಪ್ರಾಣವನ್ನಾದರೂ ತೊರೆದು ಯುದ್ಧಮಾ
ಡಲು ಸಂಕಲ್ಪಿಸಿರುವನು. ಇವರಲ್ಲದೆ, ಇನ್ನೂ ಪೂರ್ವದೇಶದ ಮತ್ತು
ಉತ್ತರದೇಶದ ಬಹುಮಂದಿ ರಾಜರು ನೂರಾರು ಸಂಖ್ಯೆಯಿಂದ ಧರ್ಮ
ರಾಜನ ಕಡೆಗೆ ಬಂದು ಸೇರಿರುವರು. ಅವರೆಲ್ಲರ ಬಲದಿಂದ ಈಗ ಧರ್ಮ
ರಾಜನು ನಿಮ್ಮನ್ನಿದಿರಿಸುವುದಕ್ಕೆ ಸಿದ್ಧನಾಗಿರುವನು' ಎಂದನು

ಇದು ಐವತ್ತನೆಯ ಅಧ್ಯಾಯವು.

ಧೃತರಾಷ್ಟ್ರನು ಭೀಮಸೇನನ ಪರಾಕ್ರಮವನ್ನು ನೆನೆಸಿ
ಕೊಂಡು ಭಯದಿಂದ ಕೊರಗಿದುದು.

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ನೀನು ಈಗ ಯಾರುಯಾರನ್ನು ಹೇಳಿದೆಯೋ ಅವರೊಬ್ಬೊಬ್ಬರೂ ಮಹಾಧನುರ್ಧಾರಿಗಳು! ಒಬ್ಬೊಬ್ಬರೂ ವೀರರು! ಅವರೆಲ್ಲರೂ ಈಗ ಒಂದಾಗಿ ಸೇರಿರುವರು. ಅದೂ ಹೋಗಲಿ! ಅವರೆಲ್ಲರೂ ಒಂದು! ಭೀಮನೊಬ್ಬನೇ ಒಂದು! ಅಷ್ಟು ಮಂದಿ ಸೇರಿಯೂ ಭೀಮನೊಬ್ಬನಿಗೆ ಸಾಟಿಯೆನಿಸಲಾರರು. ಆ ಭೀಮನ ಭಯವೇ ನನಗೆ ಎಲ್ಲಕ್ಕಿಂತಲೂ ಪ್ರಬಲವಾಗಿದೆ. ಹುಲಿಯನ್ನು ಕಂಡ ಜಿಂಕೆಯಂತೆ ನಾನು ಆ ಭೀಮನ ಕೋಪವನ್ನು ನೆನೆಸಿಕೊಂಡು ರಾತ್ರಿಯೆಲ್ಲ ನಿದ್ರೆಯಿಲ್ಲದೆ, ನಿಟ್ಟುಸಿರು ಬಿಡುತ್ತ ಹಾಸಿಗೆಯಲ್ಲಿ ಹೊರಳಾಡುತ್ತಿರುವೆನು. ಸಿಂಹಕ್ಕೆ ಪಶುವು ಹೇಗೋ ಹಾಗೆ ನಾನು ಭೀಮನಿಗಾಗಿಯೇ ಅಂಜುತ್ತಿರುವೆನು. ಮಹಾಬಾಹುವೂ, ಇಂದ್ರಸಮಾನವೀರ್ಯವುಳ್ಳವನೂ ಆದ ಆ ಭೀಮನಿಗಿದಿರಾಗಿ ನಿಲ್ಲುವ ವೀರನೊಬ್ಬನಾದರೂ ಈ ನಮ್ಮ ಸೈನ್ಯದಲ್ಲಿರುವಂತೆ ನನಗೆ ಕಾಣಿಸಲಿಲ್ಲ. ಅವನೋ ತನ್ನ ತಿರಸ್ಕಾರವನ್ನು ಸ್ವಲ್ಪಮಾತ್ರವೂ ಸಹಿಸತಕ್ಕವನಲ್ಲ. ಇದರಮೇಲೆ ನಮ್ಮಲ್ಲಿ ದೃಢವೈರವನ್ನಿಟ್ಟಿರುವನು. ಕೋಪಸೂಚಕವಾದ ಅವನ ನಗೆಯನ್ನೂ, ಅವನ ಆವೇಶವನ್ನೂ, ಅವನ ಓರೆನೋಟವನ್ನೂ, ಅವನ ಮಹಾವೇಗವನ್ನೂ, ಅವನ ಮಹೋತ್ಸಾಹವನ್ನೂ, ಮಹಾಬಲವನ್ನೂ, ಅವನ ಮಹಾಭುಜಗಳನ್ನೂ ನೆನೆಸಿಕೊಂಡರೆ, ಮುಂದಿನ ಯುದ್ಧದಲ್ಲಿ ಅವನು ಮೂಢರಾದ ನನ್ನ ಮಕ್ಕಳನ್ನೆಲ್ಲ ಬಲಾತ್ಕಾರದಿಂದ ಹಿಡಿದು ಒಟ್ಟಿಗೆ ತೀರಿಸಿಬಿಡುವನೆಂದೇ ತೋರಿದೆ. ದಂಡಪಾಣಿಯಾದ ಯಮನಂತೆ ಅವನು ಗದೆಯನ್ನು ಹಿಡಿದು ನಿಂತಮಾತ್ರಕ್ಕೇ ನನ್ನ ಮಕ್ಕಳಿಗೆ ಮಹಾನರ್ಥವೊದಗಿದಂತೆಯೇ ಹೊರತು ಬೇರೆಯಲ್ಲ. ಆ ಭೀಮನು ಬ್ರಹ್ಮದಂಡವನ್ನೆತ್ತಿದಂತೆ ಎಂಟು ಏಣುಗಳಿಂದ ಕೂಡಿ, ಚಿನ್ನದ ಕಟ್ಟುಳ್ಳ ಭಯಂಕರವಾದ ಗದೆಯನ್ನು ಕೈಯಲ್ಲಿ ಹಿಡಿದು ನಿಲ್ಲುವುದು ಈಗಲೇ ನನ್ನ ಮನಸ್ಸಿನಲ್ಲಿ ಕಟ್ಟಿದೆ. ಮೃಗಗಳ ಗುಂಪಿನಲ್ಲಿ ಸಿಂಹವು ನುಗ್ಗಿದಂತೆ ಆ ಭೀಮನು ನಮ್ಮ ಸೈನ್ಯದಲ್ಲಿ

ನುಗ್ಗಿ ಉಲ್ಲೋಲಕಲ್ಲೋಲವಾಗಿ ಮಾಡಿಬಿಡುವನು. ಪಂಚಪಾಂಡವರಲ್ಲಿ ಅವನೊಬ್ಬನೇ ನನ್ನ ಮಕ್ಕಳೆಲ್ಲರ ವಿಷಯದಲ್ಲಿಯೂ ಮಹಾಕ್ರೂರನಾಗಿರುವನು. ಎಷ್ಟು ತಿಂದರೂ ಅವನ ಹೊಟ್ಟೆಗೆ ಸಾಲದು. ಬಾಲ್ಯದಿಂದಲೂ ನನ್ನ ಮಕ್ಕಳು ಆನೆಯ ಕೈಬಡಿತಕ್ಕೆ ಸಿಕ್ಕಿದಂತೆ, ಅವನಿಂದ ಪ್ರತಿದಿನವೂ ಪೆಟ್ಟುತಿಂದು ಬಹಳವಾಗಿ ನೊಂದಿರುವುದನ್ನು ನೆನೆಸಿಕೊಂಡು ನನ್ನ ಎದೆಯು ನಡುಗುತ್ತಿದೆ. ನಮ್ಮೊಳಗಿನ ಈ ಜಗಳಕ್ಕೆಲ್ಲ ಆ ಭೀಮನೇ ಮೂಲಕಾರಣವು. ಆ ಭೀಮನು ಯುದ್ಧದಲ್ಲಿ ಕೋಪಾವೇಶದಿಂದ ಕೂಡಿದ ನಮ್ಮ ಗಜ ತುರಗ ಪದಾತಿ ಸೈನ್ಯಗಳನ್ನೆಲ್ಲ, ನುಂಗಿಬಿಡುತ್ತಿರುವುದು ಈಗಲೇ ನನ್ನ ಕಣ್ಣೆದಿರಿಗೆ ಕಾಣುವಂತಿದೆ. ಆ ಭೀಮನು ಅಸ್ತ್ರಗಳಲ್ಲಿ ದ್ರೋಣಾಚಾರ್ಯನಿಗೆ ಸಮಾನನು. ವೇಗದಲ್ಲಿ ವಾಯುವಿಗೆ ಸಮಾನನು. ಕೋಪದಲ್ಲಿ ಕಾಲಭೈರವನಿಗೆ ಸಮಾನನು. ಅಂತವನನ್ನು ಯುದ್ಧದಲ್ಲಿ ಯಾವನು ತಾನೇ ಕೊಲ್ಲಬಲ್ಲನು? ಸಂಜಯಾ! ನೀನು ಈಗಲೂ ಆ ಭೀಮನಲ್ಲಿ ಈ ಮಾತನ್ನು ಹೇಳು! ಅವನು ನನ್ನ ಮಕ್ಕಳನ್ನೆಲ್ಲ ಆಗಲೇ ಕೊಲ್ಲದೆ ಇದುವರೆಗೆ ಬಿಟ್ಟುದೇ ನನಗೆ ಪರಮಲಾಭವೆಂದು ನಾನು ತಿಳಿದಿರುವೆನು. ಹಿಂದೆ ಮಹಾಭಯಂಕರಪರಾಕ್ರಮವುಳ್ಳ ಯಕ್ಷರಾಕ್ಷಸರನ್ನೆಲ್ಲ ಯಾವನೊಬ್ಬನೇ ಹೊಡೆದೋಡಿಸಿದನೋ, ಅಂತವನ ವೇಗವನ್ನು ಮನುಷ್ಯಮಾತ್ರದವನಾದ ಯಾವನು ತಾನೇ ತಡೆದು ನಿಲ್ಲಬಲ್ಲನು? ಸಂಜಯಾ! ಅವನು ಬಾಲ್ಯದಿಂದಲೂ, ಯಾವಾಗಲೂ ನನಗೆ ವಿಧೇಯನಾಗಿದ್ದವನೇ ಅಲ್ಲ. ಇದರಮೇಲೆ ದುರ್ಬುದ್ಧಿಯುಳ್ಳ ನನ್ನ ಮಕ್ಕಳು ಅವನನ್ನು ಅಷ್ಟೊಂದು ವಿಧವಾಗಿ ಕಷ್ಟಪಡಿಸಿದಮೇಲೆ ಈಗ ಕೇಳಬೇಕಾದುದೇನು? ಆ ಭೀಮನೋ ಸಹಜವಾಗಿಯೇ ಕ್ರೂರನು. ಅತಿ ಕೋಪಸ್ವಭಾವವುಳ್ಳವನು. ಅವನು ಎರಡು ತುಂಡಾಗಿಯಾದರೂ ಬೀಳುವನೇ ಹೊರತು, ಮತ್ತೊಬ್ಬರಿಗೆ ಬಗ್ಗುವವನಲ್ಲ. ಅವನು ವಕ್ರಿಸಿನೋಡುವ ದೃಷ್ಟಿಯೋ! ಅವನ ಹುಬ್ಬುಗಂಟೋ! ಸಂಜಯಾ! ನಾನೇನು ಹೇಳಲಿ! ಆ ವೃಕೋದರನು ನಮ್ಮೊಡನೆ ತಾಳ್ಮೆಯಿಂದ ನಡೆಯುವದೆಂದರೇನು? ಅವನೋ ಮಹಾಶೂರನು. ಬಲದಲ್ಲಿ ಇದಿರಿಲ್ಲದವನು. ತಾಳೆಯ ಮರದಷ್ಟು ಎತ್ತರವಾದ ಆಕಾರವುಳ್ಳವನು. ಅರ್ಜುನನಿಗಿಂತಲೂ ಗೇಣುದ್ದದಷ್ಟು ದೊಡ್ಡ

ವನು. ಒಳ್ಳೇ ಗೌರವರ್ಣವುಳ್ಳವನು. ಮಧ್ಯಮ ಪಾಂಡವನಾದ ಅವನು, ವೇಗದಲ್ಲಿ ಕುದುರೆಗಳನ್ನೂ, ದೇಹಬಲದಲ್ಲಿ ಆನೆಗಳನ್ನೂ ಮೀರಿದವನು. ಅವನು ಮಾತಾಡುವಾಗ ಅಕ್ಷರಗಳೇ ಸ್ಫುಟವಿಲ್ಲದಂತೆ ಆಡುವನು. ಜೇನಿನಂತೆ ಕಣ್ಣುಳ್ಳವನು. ಅವನ ರೂಪ ವೀರ್ಯಾದಿಗಳ ವಿಷಯವಾಗಿ ಹಿಂದೆ ವ್ಯಾಸಮಹರ್ಷಿಯು ನನಗೆ ಹೇಳಿದುದೆಲ್ಲಾ ಈಗ ನಿಜವಾಗಿ ಕಾಣಿಸುತ್ತಿರುವುದು. ಕೋಪಸ್ವಭಾವವುಳ್ಳ ಆ ಭೀಮನು, ಯುದ್ಧದಲ್ಲಿ ಉಕ್ಕಿನ ದಂಡದಿಂದ ಒಂದೊಂದೇ ಪ್ರಹಾರಕ್ಕೆ ಅನೇಕ ರಥಗಳನ್ನೂ, ಆನೆಗಳನ್ನೂ, ಕುದುರೆಗಳನ್ನೂ, ಕಾಲಾಳುಗಳನ್ನೂ ಬಡಿದು ಕೆಡಹುವನು. ಅವನು ಸ್ವಲ್ಪಮಾತ್ರವೂ ಸಹನವಿಲ್ಲದವನು! ಆತುರಗಾರನು! ಹಿಂದೆ ನಮ್ಮಿಂದ ಎಷ್ಟೋ ವಿಧವಾದ ಕಷ್ಟಗಳಿಗೂ, ಅವಮಾನಕ್ಕೂ ಗುರಿಮಾಡಲ್ಪಟ್ಟವನು. ಹೀಗಿರುವಾಗ ಇನ್ನು ಯುದ್ಧದಲ್ಲಿ ಅವನ ಕೈಗೆ ನಮ್ಮವರು ಸಿಕ್ಕಿದರೆ ಸುಮ್ಮನೆ ಬಿಡುವನೇ? ಗಂಟುಗಳಿಲ್ಲದೆ ಸಮವಾಗಿ, ಸ್ಥೂಲವಾಗಿ, ಒಳ್ಳೇ ಏಣುಗಳುಳ್ಳುದಾಗಿ, ನೂರಾರು ಗಂಟೆಗಳ ಧ್ವನಿಯಿಂದ ಕೂಡಿದ ಚಿನ್ನದ ಕಟ್ಟುಳ್ಳ ಉಕ್ಕಿನ ಗದೆಯನ್ನು ಅವನು ಹಿಡಿದು ನಿಂತರೆ, ನನ್ನ ಮಕ್ಕಳು ಹೇಗೆತಾನೇ ತಡೆಯಬಲ್ಲರು? ಅದಾದರೋ ಒಂದೇ ಪ್ರಹಾರಕ್ಕೆ ನೂರು ಮಂದಿಯನ್ನು ಕೊಲ್ಲುವ ಪ್ರಭಾವವುಳ್ಳುದು. ಸಂಜಯಾ! ಮುಖ್ಯವಾಗಿ ಹಡಗು ಮುಂತಾದ ದಾಟುವ ಸಾಮಗ್ರಿಗಳೊಂದೂ ಇಲ್ಲದೆ, ಅಪಾರವೂ, ಅಗಾಧವೂ ಆಗಿ, ಬಾಣಗಳೆಂಬ ಅಲೆಗಳ ವೇಗವುಳ್ಳ, ಆ ಭೀಮಸೇನನೆಂಬ ಮಹಾಜಲ ದುರ್ಗವನ್ನು ದಾಟಿಹೋಗಬೇಕೆಂದು ಬಯಸುವವರು ಕೇವಲಮೂಢರು. ಅಪ್ಪಾ! ನಾನೇನು ಮಾಡಲಿ! ಬಾಲರಾಗಿದ್ದರೂ ತಾವೇ ಪಂಡಿತರೆಂದು ತಿಳಿದುಕೊಂಡಿರುವ ನನ್ನ ಮಕ್ಕಳಮುಂದೆ ನಾನು ಎಷ್ಟು ಗೋಳಾಡಿದರೂ ಅವರು ಕೇಳುವಹಾಗಿಲ್ಲ. ಜೇನಿನಲ್ಲಿ ದೃಷ್ಟಿಯಿಟ್ಟು ನಡೆಯುವವರು, ಮುಂದೆ ತಾವು ಬೀಳುವ ಹಳ್ಳವನ್ನರಿಯದಂತೆ, ಭೀಮನ ಪರಾಕ್ರಮವನ್ನರಿಯದೆ ಅವರು ಮನುಷ್ಯರೂಪದಿಂದಿರುವ ಮೃತ್ಯುವಿನ ಬಾಯಲ್ಲಿ ಬೀಳುವುದಕ್ಕಾಗಿಯೇ ಹೋಗುತ್ತಿರುವರು. ದೈವವೇ ಅವರನ್ನು ಮುಂದೆ ತಳ್ಳುವಾಗ ನಾನೇನು ಮಾಡಬಲ್ಲೆನು? ಸಿಂಹದ ಕೈಗೆ ಸಿಕ್ಕಿದ ಮಹಾಮೃಗಗಳಂತೆ ಅವರು ಸಾಯುವುದೇ ನಿಶ್ಚಯವು. ಆ

ಭೀಮನ ಕೈಯಲ್ಲಿರುವ ಗದೆಯಾದರೂ ಸಾಮಾನ್ಯವೇ! ಉರೆಯಲ್ಲಿಡಲ್ಪಟ್ಟು, ಮೊಳದುದ್ದವಾಗಿ, ಆರು ಏಣುಗಳುಳ್ಳುದಾಗಿ, ಸ್ಪರ್ಶಮಾತ್ರದಿಂದಲೇ ಪ್ರಾಣಿಗಳನ್ನು ಕೊಲ್ಲುವ ಆ ಭೀಮನ ಕೈಗದೆಯನ್ನು ನನ್ನ ಮಕ್ಕಳು ಹೇಗೆತಾನೇ ತಡೆದುನಿಲ್ಲಬಲ್ಲರು? ಅವನು ಗದೆಯನ್ನು ತಿರುಗಿಸುತ್ತ, ಕಡೆಬಾಯಿಗಳನ್ನು ನೆಕ್ಕಿಕೊಂಡು, ಹೊಗೆಯಾಡುವಂತೆ ಆಗಾಗ ಕೋಪದಿಂದ ನಿಟ್ಟುಸಿರು ಬಿಟ್ಟುಕೊಂಡು ಭಯಂಕರವಾಗಿ ಕೂಗುವನು. ಇದಿರಾದ ಆನೆಗಳ ತಲೆಯನ್ನು ಭೇದಿಸುವನು. ಆ ಆನೆಗಳ ಕೂಗಿಗಿಂತಲೂ ಪ್ರಬಲವಾಗಿ ಅವುಗಳ ಮುಂದೆ ಕೂಗುವನು. ರಥಮಾರ್ಗಗಳಲ್ಲಿ ಅಡ್ಡಗಟ್ಟಿ ನಿಂತು, ರಥದ ಮೇಲಿರುವ ರಥಿಕರನ್ನು ಗುರಿಯಿಟ್ಟು ಹೊಡೆಯುವನು. ಉರಿಯುವ ಬೆಂಕಿಯಂತೆ ಕೋಪಗೊಂಡ ಆ ಭೀಮನ ವೇಗವನ್ನು ನನ್ನ ಮಕ್ಕಳು ಹೇಗೆತಾನೇ ತಡೆಯಬಲ್ಲರು? ಮಹಾಬಲವುಳ್ಳ ಆ ಭೀಮನು ನನ್ನ ಸೈನ್ಯಗಳೆಲ್ಲವನ್ನೂ ಓಡಿಸುತ್ತ ಗದಾಪಾಣಿಯಾಗಿ ನರ್ತಿಸುವಂತೆ, ರಣರಂಗದಲ್ಲಿ ದಾರಿಮಾಡಿಕೊಂಡು ಸೈನ್ಯಗಳನ್ನು ಕೊಂದು, ಪ್ರಳಯಕಾಲದ ರೀತಿಯನ್ನು ಆಗಲೇ ತೋರಿಸದೆ ಬಿಡನು. ಆ ವೃಕೋದರನು ನನ್ನ ಮಕ್ಕಳ ಸೈನ್ಯದಲ್ಲಿ ಪ್ರವೇಶಿಸಿ, ಪುಷ್ಪಿಸಿದ ಗಿಡಗಳನ್ನು ಮುರಿದು ಕೆಡಹುವಂತೆ ಲೀಲಾಮಾತ್ರದಿಂದ ಅದನ್ನು ಧ್ವಂಸಮಾಡಿಬಿಡುವನು. ರಥಗಳು ಕಣ್ಣಿಗೆ ಬಿದ್ದೊಡನೆ ಅದರಲ್ಲಿ ರಥಿಕರಾಗಲಿ, ಸಾರಥಿಗಳಾಗಲಿ, ಕುದುರೆಗಳಾಗಲಿ, ಧ್ವಜಗಳಾಗಲಿ ಯಾವುದೂ ಇಲ್ಲದಂತೆ ಶೂನ್ಯಪ್ರಾಯವಾಗಿ ಮಾಡಿಬಿಡುವನು. ಕುದುರೆಗಳನ್ನು ಕಂಡರೆ, ಕುದುರೆಯ ಮೇಲಿದ್ದವರನ್ನು ಕೊಂದು ಕೆಡಹುವನು. ಗಂಗಾನದಿಯ ಪ್ರವಾಹವೇಗವು ತನ್ನ ಅಕ್ಕಪಕ್ಕಗಳಲ್ಲಿ ಜಲಪ್ರಾಯವಾದ ಪ್ರದೇಶದಲ್ಲಿರುವ ವೃಕ್ಷಗಳನ್ನೆಲ್ಲ ಸುಲಭವಾಗಿ ಉರುಳಿಸಿಬಿಡುವಂತೆ, ಮುಂದಿನ ಯುದ್ಧದಲ್ಲಿ ಆ ಭೀಮನು ನನ್ನ ಸೈನ್ಯವನ್ನು ಲೀಲಾಮಾತ್ರದಿಂದ ಮುರಿಯುವನು. ಆ ಭೀಮನನ್ನು ನೋಡುವಾಗಲೇ ಭಯದಿಂದ ನನ್ನ ಮಕ್ಕಳೂ, ಈ ಕಡೆಯ ಭೃತ್ಯರೂ, ಎಲ್ಲಾ ರಾಜರೂ ಸಾಯುವುದು ನಿಶ್ಚಯವು. ಪೂರ್ವದಲ್ಲಿ ಶ್ರೀಕೃಷ್ಣನನ್ನು ತನಗೆ ಸಹಾಯವಾಗಿಟ್ಟುಕೊಂಡು ಯಾವನು ಜರಾಸಂಧನ ಅಂತಃಪುರದಲ್ಲಿ ಪ್ರವೇಶಿಸಿ, ಅವನನ್ನು ಕೊಂದುಕೆಡಹಿದನೋ

ಆ ಭೀಮನ ವೀರ್ಯವೆಷ್ಟೆಂದು ಹೇಳಬಹುದು? ಆ ಜರಾಸಂಧನೋ ಮಹಾ ಧೀಮಂತನು! ಎಣೆಯಿಲ್ಲದ ಪರಾಕ್ರಮವುಳ್ಳವನು! ಮಗಧರಾಜನಾದ ಆತನು ಸಮಸ್ತಭೂಮಿಯನ್ನೂ ತನ್ನ ವಶಮಾಡಿಕೊಂಡಿದ್ದವನು. ಆದರೆ, ನಮ್ಮ ಕಡೆಗೆ ಭೀಷ್ಮನಿದ್ದುದರಿಂದ ನಾವೂ, ತಮ್ಮ ತಂತ್ರದಿಂದ ಅಂಧಕ ವೃಷ್ಣಿಗಳೂ, ಆ ಜರಾಸಂಧನಲ್ಲಿ ಸೆರೆಸಿಕ್ಕದೆ ತಪ್ಪಿಸಿಕೊಂಡುದು ಅದೃಷ್ಟ ವೇಹೊರತು ಬೇರೆಯಲ್ಲ! ಅಂತಹ ಜರಾಸಂಧನನ್ನು ಭೀಮನು ಆಯು ಧವೇನೂ ಇಲ್ಲದೆಯೇ ಕೊಂದನೆಂದಮೇಲೆ, ಭೀಮನ ಪರಾಕ್ರಮಕ್ಕೆ ಇದಕ್ಕಿಂತಲೂ ಇನ್ನೇನು ಬೇಕು? ಸರ್ಪವು ಬಹುಕಾಲದಿಂದ ಅಡಗಿ ಸಿದ್ದ ತನ್ನ ವಿಷವನ್ನು ಕಕ್ಕುವಂತೆ, ಆ ಭೀಮನು ಬಹುಕಾಲದಿಂದ ಅಡ ಗಿಸಿಕೊಂಡಿದ್ದ ತನ್ನ ಕೋಪವನ್ನೂ, ಪರಾಕ್ರಮವನ್ನೂ ಈಗ ನನ್ನ ಮಕ್ಕಳಮೇಲೆ ಬೀಸುವನು. ಮಹೇಂದ್ರನು ತನ್ನ ವೈರಿಗಳಾದ ದಾನವ ರನ್ನು ವಜ್ರಾಯುಧದಿಂದ ಹೇಗೋ ಹಾಗೆ ಭೀಮನು ಗದಾಪಾಣಿಯಾಗಿ ನನ್ನ ಮಕ್ಕಳನ್ನು ಹುಟ್ಟಡಗಿಸಿ ಬಿಡುವನು. ಎಂತವರಿಂದಲೂ ತಡೆಯು ವುದಕ್ಕೂ, ಸಹಿಸುವುದಕ್ಕೂ ಸಾಧ್ಯವಿಲ್ಲದ ತೀವ್ರವೇಗವುಳ್ಳ ಭೀಮನು, ಕೆಂಪೇರಿದ ಕಣ್ಣುಗಳೊಡನೆ ಇದಿರಾಗಿ ಬರುತ್ತಿರುವುದು ಈಗಲೇ ನನ್ನ ಕಣ್ಣಿದಿರಿಗೆ ಕಾಣಿಸುವಂತಿದೆ. ಸಂಜಯಾ! ಗದೆಯಾಗಲಿ, ಆಯುಧ ವಾಗಲಿ, ರಥವಾಗಲಿ, ಕವಚವಾಗಲಿ, ಯಾವುದೂ ಇಲ್ಲದೆ ಬರೀ ತೋಳು ಗಳಿಂದಲೇ ಯುದ್ಧಮಾಡಬಲ್ಲ ಅವನ ಮುಂದೆ ಯಾವ ಪುರುಷನು ತಾನೇ ನಿಲ್ಲಬಲ್ಲನು? ಈ ಭೀಷ್ಮನೂ, ದ್ರೋಣನೂ, ಅಶ್ವತ್ಥಾಮನೂ, ಈ ಕೃಪಾಚಾರ್ಯನೂ, ಇವರೆಲ್ಲರೂ ನನ್ನಂತೆಯೇ ಆ ಭೀಮನ ಪರಾ ಕ್ರಮವೆಂತದೆಂಬುದನ್ನು ಚೆನ್ನಾಗಿ ತಿಳಿದೇ ಇರುವರು. ಆದರೇನು? ಅವರು ಆರ್ಯಧರ್ಮವನ್ನು (ಕ್ಷತ್ರಧರ್ಮವನ್ನು) ಬಲ್ಲವರಾದುದರಿಂದಲೂ, ನಮ್ಮ ಉಪ್ಪನ್ನು ತಿಂದುದರಿಂದಲೂ, ಹೇಗೋ ಒಂದು ವಿಧದಲ್ಲಿ ಯುದ್ಧ ಮಾಡಿಯೇ ತೀರಬೇಕೆಂಬ ಉದ್ದೇಶದಿಂದಲೂ, ವಿಧಿಯಿಲ್ಲದೆ ನಮ್ಮವರ ಸೇನೆಯಲ್ಲಿ ಮುಂದಾಳಾಗಿ ನಿಂತಿರುವರು. ಓ ಸಂಜಯಾ! ಮುಖ್ಯವಾಗಿ ಮನುಷ್ಯನಿಗೆ ಎಲ್ಲಾ ವಿಷಯದಲ್ಲಿಯೂ ದೈವವೇ ಬಲವತ್ತಾದುದು. ಏಕೆಂ ದರೆ, ಪಾಂಡವರಿಗೆ ಜಯವು ನಿಶ್ಚಯವೆಂದು ನಮ್ಮೆಲ್ಲರಿಗೂ ತೋರಿದ್ದರೂ,

ನನ್ನ ಮಕ್ಕಳನ್ನೇ ನಾನು ಅಡಗಿಸಲಾರದೆ ಹೋದೆನಲ್ಲವೇ! ಆದರೇನು! ಮಹಾಧನುರ್ಧಾರಿಗಳಾದ ಈ ಭೀಷ್ಮಾದಿಗಳೆಲ್ಲ ಭೂಮಿಯಲ್ಲಿ ಮಹತ್ತಾದ ಕೀರ್ತಿಯನ್ನು ನೆಲೆಗೊಳಿಸಿ, ಇಂದ್ರಲೋಕದ ಮಾರ್ಗವನ್ನುದ್ದೇಶಿಸಿ, ಯುದ್ಧದಲ್ಲಿ ಪ್ರಾಣಗಳನ್ನು ಬಿಡಲು ಸಿದ್ಧರಾಗಿರುವರು. ಭೀಷ್ಮಾದಿಗಳಿಗೆ ನನ್ನ ಮಕ್ಕಳು ಹೇಗೋ ಪಾಂಡವರೂ ಹಾಗೆಯೇ ಮೊಮ್ಮಕ್ಕಳೆನಿಸಿರುವರು. ದ್ರೋಣನಿಗೂ, ಕೃಪನಿಗೂ, ನಮ್ಮವರು ಹೇಗೋ ಹಾಗೆಯೇ ಪಾಂಡವರೂ ಶಿಷ್ಯರು. ಆದರೆ, ಅವರು ನಮ್ಮ ಆಶ್ರಯವನ್ನು ಪಡೆದು, ನಮ್ಮಿಂದ ಅಲ್ಪಸ್ವಲ್ಪ ವೇತನವನ್ನೂ, ಸತ್ಕಾರವನ್ನೂ ಹೊಂದಿದುದಕ್ಕಾಗಿ, ಆ ಕೃತಜ್ಞತೆಯನ್ನು ಸಲ್ಲಿಸಬೇಕೆಂದು ಅವರು ನಮ್ಮ ಪಕ್ಷದಲ್ಲಿರುವರು. ಮುಖ್ಯವಾಗಿ ಒಳ್ಳೇಸ್ವಭಾವವುಳ್ಳವರಾದುದರಿಂದಲೇ ಆ ಮೂವರು ವೃದ್ಧರೂ ನಮ್ಮನ್ನಗಲದೆ, ಆ ದುರ್ಯೋಧನಾದಿಗಳ ಕೆಟ್ಟ ನಡತೆಯನ್ನು ತಿಳಿದೂ, ಇಲ್ಲಿಂದ ಬಿಟ್ಟುಹೋಗದಿರುವರು. ಯುದ್ಧದಲ್ಲಿ ಶಸ್ತ್ರವನ್ನು ಹಿಡಿದು ಮರಣಹೊಂದುವುದೇನೋ ಕ್ಷತ್ರಿಯನಿಗೆ ಉತ್ತಮಧರ್ಮವೆಂದು ಹೇಳುವರು. ಆದರೆ, ಪರಮಸಾಧುಗಳಾದ ಆ ಪಾಂಡವರೊಡನೆ ಇವರೆಲ್ಲರೂ ಯುದ್ಧಮಾಡಬೇಕಾಗಿ ಬಂದುದನ್ನು ಕುರಿತು ನಾನು ವ್ಯಸನಪಡುವೆನು. ಮೊದಲು ವಿದುರನು ಸಾರಿಸಾರಿ ನಮಗೆ ಎಚ್ಚರಿಸಿದ ಮಹಾಭಯಕಾಲವು ಸಮೀಪಿಸಿಬಿಟ್ಟಿತು. ಈಗಿನ ದುಃಖನಿವೃತ್ತಿಗೆ ವಿವೇಕಜ್ಞಾನವೊಂದೂ ಪ್ರಯೋಜನಕಾರಿಯಾಗಿ ನನಗೆ ತೋರಲಿಲ್ಲ. ದುಃಖವೇ ಪ್ರಬಲತಮವಾಗಿ ತಿಳುವಳಿಕೆಯನ್ನೆಲ್ಲ ಅಡಗಿಸಿಬಿಡುವುದು. ಲೋಕವ್ಯಾಪಾರಗಳನ್ನೇ ತೊರೆದ ವಿರಕ್ತರಾದ ಋಷಿಗಳೂ ಕೂಡ ಸುಖದಿಂದ ಮೇಲೆಮೇಲೆ ಸುಖಕ್ಕೂ, ದುಃಖದಿಂದ ದುಃಖಕ್ಕೂ ಭಾಗಿಗಳಾಗಿರುವರು. ಹೀಗಿರುವಾಗ, ಹೆಂಡಿರು ಮಕ್ಕಳು, ಮೊಮ್ಮಕ್ಕಳು, ನೆಂಟರು, ರಾಜ್ಯ, ಕೋಶ, ಧನಾದಿಗಳಲ್ಲಿ ಮೋಹಗೊಂಡ ಸಾಮಾನ್ಯಜನರನ್ನು ಹೇಳತಕ್ಕುದೇನು? ಪ್ರಬಲವಾದ ಈಗಿನ ಸಂದೇಹದಲ್ಲಿ ನಾನು ಹೇಗೆಮಾಡುವುದು ಉಚಿತವು? ಯೋಚಿಸಿನೋಡಿದರೆ ಸರ್ವವಿಧದಿಂದಲೂ ಕೌರವರಿಗೆ ವಿನಾಶವೇ ಸಿದ್ಧವೆಂದು ತೋರಿದೆ. ಐಶ್ವರ್ಯಕ್ಕಾಗಿ ಆಸೆಪಟ್ಟು, ಮೂಢರಾದ ನನ್ನ ಮಕ್ಕಳು ಧ್ಯೂತವೆಂಬ ಪಾಪಕಾರ್ಯದಲ್ಲಿ ಪ್ರವರ್ತಿಸಿದುದೇ ಈ ಮಹತ್ತಾದ ವ್ಯಸ

ನಕ್ಕೆ ಮೂಲಕಾರಣವಾಯಿತು. ಕಾಲಗತಿಯೇ ಹೀಗೆ ತಿರುಗುತ್ತಿರುವಾಗು ಯಾರೇನು ಮಾಡಬಲ್ಲರು? ಚಕ್ರನೇಮಿ (ಚಕ್ರದ ಬಳೆ) ಗಳು, ನೀಚೋಚ್ಚಗತಿಗಳನ್ನೆಲ್ಲ ಸಹಿಸಿಕೊಂಡು ಅದರಲ್ಲಿಯೇ ಅಂಟಿರುವಂತೆ, ನಾವೂ ಕಾಲಚಕ್ರದ ಗತಿಯನ್ನೆಲ್ಲ ಸಹಿಸಿಕೊಂಡಿರಬೇಕಾದುದೇಹೊರತು ಇದಕ್ಕಾಗಿ ಭಯಪಟ್ಟೋಡುವುದಕ್ಕೂ ಸಾಧ್ಯವಲ್ಲ. ಸಂಜಯಾ! ಈಗ ನಾನೇನನ್ನು ಮಾಡಲಿ! ಹೇಗೆತಾನೇ ಮಾಡಲಿ! ಎಲ್ಲಿಗೆ ಹೋಗಲಿ! ಮುಖ್ಯವಾಗಿ ಮೂಢಾತ್ಮರಾದ ಈ ಕುರುಗಳು ಕಾಲವಶರಾಗಿ ನಾಶಹೊಂದುವುದೇನೋ ನಿಶ್ಚಯವು! ನನ್ನ ನೂರು ಮಕ್ಕಳೂ ಹತರಾದ ಮೇಲೆ, ಮನೆಯಲ್ಲಿ ಹೆಂಗಸರ ಗೋಳಾಟವನ್ನು ಕೇಳುವಾಗ ನಾನು ಏನನ್ನುತಾನೇ ಮಾಡುವೆನು. ನನಗೆ ಸಾವು ತಾನೇ ಹೇಗೆ ಬರುವುದೋ? ಬೇಸಗೆಯಲ್ಲಿ ಗಾಳಿಯಿಂದ ಪ್ರೇರಿತವಾದ ಬೆಂಕಿಯು ಒಣಗಿದ ಪೊದರನ್ನು ಹೇಗೋ ಹಾಗೆ, ಗದಾಪಾಣಿಯಾದ ಭೀಮನು ಅರ್ಜುನಸಹಿತನಾಗಿ, ನಮ್ಮ ಕಡೆಯವರೆಲ್ಲರನ್ನೂ ತೀರಿಸಿಬಿಡುವುದು ನಿಶ್ಚಯವೇ” ಎಂದನು.

ಇದು ಐವತ್ತೊಂದನೆಯ ಅಧ್ಯಾಯವು.

---

ಧೃತರಾಷ್ಟ್ರನು ಅರ್ಜುನನ ಪರಾಕ್ರಮವನ್ನು ವರ್ಣಿಸಿ ದುಃಖಿಸಿದುದು.

ಸಂಜಯಾ! ಯಾವನ ಬಾಯಿಂದ ನಿರರ್ಥಕಗಳಾದ ಮಾತುಗಳು ಹೊರಟುದನ್ನೇ ನಾವು ಕೇಳಲಿಲ್ಲವೋ, ಅಂತಹ ಧನಂಜಯನೇ ಯುದ್ಧಮಾಡಲು ನಿಂತಮೇಲೆ ಅವನಿಗೆ ತ್ರೈಲೋಕ್ಯವೂ ಸ್ವಾಧೀನವಾದಂತೆಯೇ! ಯುದ್ಧದಲ್ಲಿ ಗಾಂಡೀವಧಾರಿಯಾದ ಆ ಅರ್ಜುನನಿಗೆ ಸಮಾನನಾಗಿ ರಥಯುದ್ಧವನ್ನು ಮಾಡತಕ್ಕವನು ಬೇರೆ ಯಾವನೆಂದು ನಾನು ಎಷ್ಟೆಷ್ಟು ಚಿಂತಿಸಿದರೂ ತೋರಲಿಲ್ಲ. ಹರಿತವಾದ ಕೊಕ್ಕೆಗಳುಳ್ಳ ಮರ್ಮಭೇದಕಗಳಾದ ಬಾಣಗಳನ್ನು ಆ ಅರ್ಜುನನು ಬಿಡುತ್ತಬಂದರೆ, ಅವನಿಗೆ ಇದಿರಾಗಿ ನಿಂತು ಯುದ್ಧಮಾಡುವವನು ಯಾವನುತಾನೇ ಉಂಟು? ಆದರೆ ನಮ್ಮಲ್ಲಿ ದ್ರೋಣಕರ್ಣರಿಬ್ಬರೂ ಅವನಿಗಿದಿರಾಗಿ ನಿಲ್ಲಬಹುದು.

ಇವರಿಬ್ಬರೂ ಮಹಾವೀರರು! ಪುರುಷಶ್ರೇಷ್ಠರು! ಅನೇಕಾಸ್ತ್ರಗಳನ್ನು ಬಲ್ಲವರು! ಬಲಶಾಲಿಗಳಲ್ಲಿ ಮೇಲಾದವರು! ಎಂತಹ ಯುದ್ಧದಲ್ಲಿಯೂ ಪರಾಜಯಹೊಂದತಕ್ಕವರಲ್ಲ. ಇವರಿಬ್ಬರೂ ಯುದ್ಧಕ್ಕೆ ನಿಂತರೆ, ಜಯಾಪಜಯಗಳು ಹೇಗೋ ಎಂದು ಲೋಕಕ್ಕೆ ಸಂದೇಹವುಂಟಾಗಬಹುದು. ಆದರೆ ನನಗೆಮಾತ್ರ ನಮ್ಮವರಿಗೆ ಜಯವಾಗದೆಂದೇ ನಿಶ್ಚಯವಿದೆ. ಏಕೆಂದರೆ, ಆ ಕರ್ಣನು ಕೇವಲ ದಯಾಸ್ವಭಾವವುಳ್ಳವನು, ಮತ್ತು ಅಜಾಗ್ರತೆಯುಳ್ಳವನು; ಆಚಾರ್ಯನು ವೃದ್ಧನು, ಇದರಮೇಲೆ ಅರ್ಜುನಾದಿಗಳಿಗೆ ತಾನು ಗುರುವೆನಿಸಿಕೊಂಡವನು. ಅತ್ತಲಾಗಿ ಅರ್ಜುನನಾದರೋ ಮಹಾಸಮರ್ಥನು, ಬಲಾಢ್ಯನು, ದೃಢಧನುಸ್ಸುಳ್ಳವನು, ಎಂತಹ ಶ್ರಮವನ್ನಾದರೂ ಸಹಿಸಬಲ್ಲವನು. ಇವರು ಕೈಕಲೆತರೆ ಬಹಳ ಪ್ರಬಲವಾದ ಯುದ್ಧವು ನಡೆಯುವುದೇನೋ ನಿಶ್ಚಯವು. ಯಾರೂ ಸೋಲುವಹಾಗಿಲ್ಲ. ಈ ಯುದ್ಧದಲ್ಲಿ ಸೇರತಕ್ಕವರೆಲ್ಲರೂ ಶಸ್ತ್ರಾಸ್ತ್ರಗಳನ್ನು ಬಲ್ಲವರು. ಎಲ್ಲರೂ ಶೂರರು. ಎಲ್ಲರೂ ಮಹಾಕೀರ್ತಿಯನ್ನು ಪಡೆದವರು. ಸಮಸ್ತ ದೇವೈಶ್ವರ್ಯವನ್ನಾದರೂ ಬಿಡುವರೇಹೊರತು, ಜಯವನ್ನು ಬಿಡತಕ್ಕವರಲ್ಲ. ಅತ್ತಲಾಗಿ ಅರ್ಜುನನಿಗೂ, ಇತ್ತಲಾಗಿ ದ್ರೋಣಕರ್ಣರಿಗೂ ಯುದ್ಧವುಂಟಾದರೆ ಅವನಾದರೂ ಸಾಯಬೇಕು! ಇವರಾದರೂ ಸಾಯಬೇಕು. ಹೀಗಿಲ್ಲದೆ ಶಾಂತಿಯುಂಟಾಗಲಾರದು. ಆದರೆ ಅರ್ಜುನನನ್ನು ಕೊಲ್ಲುವವನಾಗಲಿ, ಜಯಿಸುವವನಾಗಲಿ ಈ ಲೋಕದಲ್ಲಿ ಬೇರೊಬ್ಬನು ಇರುವನೆಂದೇ ನನಗೆ ತಿಳಿಯಲಿಲ್ಲ. ಮೂಢರಾದ ನನ್ನ ಮಕ್ಕಳ ವಿಷಯದಲ್ಲಿ ಆ ಅರ್ಜುನನಿಗೆ ಉಂಟಾಗಿರುವ ಕೋಪವು ಹೇಗೆತಾನೇ ಶಾಂತವಾಗಬೇಕು? ಲೋಕದಲ್ಲಿ ಇನ್ನೂ ಎಷ್ಟೋ ಮಂದಿ ನಾನಾಸ್ತ್ರಗಳನ್ನು ಬಲ್ಲವರುಂಟು. ಅವರು ಯುದ್ಧದಲ್ಲಿ ಕೆಲವುವೇಳೆ ಜಯಿಸುವುದೂ ಉಂಟು. ಪರಾಜಿತರಾಗಿ ಬರುವುದೂ ಉಂಟು. ಆದರೆ, ಅರ್ಜುನನಿಗಾದರೋ ಎಲ್ಲಿ ಹೋದರೂ ಜಯವೆಂದೇ ಕೇಳಿಬಲ್ಲೆವು. ಹಿಂದೆ ಖಾಂಡವವನದಹನಕಾಲದಲ್ಲಿ ಮೂವತ್ತುಮೂರುಕೋಟಿ ದೇವತೆಗಳನ್ನೂ ಯುದ್ಧಕ್ಕೆ ಕರೆದು ಅವರನ್ನೆಲ್ಲ ಜಯಿಸಿ ಅಗ್ನಿಯನ್ನು ತೃಪ್ತಿಗೊಳಿಸಿದನು. ಅವನಿಗೆ ಪರಾಜಯವೆಂಬುದನ್ನೇ ನಾವು ಕೇಳಿಲ್ಲ. ಯಾವನಿಗೆ ಯುದ್ಧದಲ್ಲಿ ಆ ಶ್ರೀಕೃಷ್ಣನೇ

ಸಾರಥಿಯಾಗಿ (ನಿಯಾಮಕನಾಗಿ) ಇರುವನೋ, ಅವನಿಗೆ ಜಯವು ನಿಶ್ಚಯವೇ. ಆ ಇಬ್ಬರು ಕೃಷ್ಣರೂ (ಕೃಷ್ಣಾರ್ಜುನರು) ಒಂದೇ ರಥದಲ್ಲಿ ಕುಳಿತು, ಅರ್ಜುನನ ಕೈಯಲ್ಲಿರುವ ಗಾಂಡೀವಧನುಸ್ಸನ್ನೂ ನಾಣೇರಿಸಿಟ್ಟರೆ ಏಕಕಾಲದಲ್ಲಿ ಮೂರು ತೇಜಸ್ಸುಗಳೂ ಒಂದಾಗಿ ಸೇರಿದಂತಾಗುವುದೆಂದು ಕೇಳುವೆನು. ಸಂಜಯಾ! ನಮ್ಮಲ್ಲಿ ಅಂತಹ ಧನುಸ್ಸೂ ಇಲ್ಲ! ಅಂತಹ ಯೋಧನೂ ಇಲ್ಲ! ಅಂತಹ ಸಾರಥಿಯೂ ಇಲ್ಲ! ಮೂಢನಾದ ಈ ದುರ್ಯೋಧನನಾಗಲಿ, ಇವನ ವಶವರ್ತಿಗಳಾಗಲಿ ಇದನ್ನು ತಿಳಿಯದೆ ಅನ್ಯಾಯವಾಗಿ ಸಾಯುತ್ತಿರುವರು. ಓ ಸಂಜಯಾ! ಕ್ರೂರವಾದ ಸಿಡಿಲು ತಲೆಯಮೇಲೆ ಬಿದ್ದರೂ ಒಂದುವೇಳೆ ಅದು ಪ್ರಾಣಗಳನ್ನುಳಿಸಬಹುದು. ಆ ಅರ್ಜುನನಿಂದ ಪ್ರಯೋಗಿಸಲ್ಪಟ್ಟ ಬಾಣಗಳೇನೋ ಯಾರನ್ನೂ ಉಳಿಸಲಾರದು. ಇದಲ್ಲದೆ ಆ ಅರ್ಜುನನು ಈಗಲೂ ನನ್ನ ಕಣ್ಣಿದಿರಿಗೆ ಬಾಣಗಳನ್ನು ಪ್ರಯೋಗಿಸುವಂತೆಯೂ, ನಮ್ಮ ಕಡೆಯವರನ್ನು ಹೊಡೆಯುವಂತೆಯೂ, ತನ್ನ ಬಾಣವರ್ಷಗಳಿಂದ ಅವರ ತಲೆಗಳನ್ನು ಕೆಡಹುವಂತೆಯೂ ಕಾಣಿಸುತ್ತಿರುವನು. ಸಂಜಯಾ! ಆ ಅರ್ಜುನನ ಗಾಂಡೀವದಿಂದ ಹೊರಟ ಬಾಣಮಯವಾದ ತೇಜಸ್ಸು ನಾನಾಕಡೆಗೂ ಜ್ವಲಿಸುತ್ತ ನನ್ನ ಮಕ್ಕಳ ಸೈನ್ಯವನ್ನೆಲ್ಲ ಈಗಲೇ ದಹಿಸುತ್ತಿದೆಯೋ ಎಂಬಂತೆ ಕಾಣುತ್ತಿದೆ. ಆ ಸವ್ಯಸಾಚಿಯ ರಥಘೋಷದಿಂದಲೇ ನಮ್ಮ ಸೈನ್ಯವು ಭಯಪಟ್ಟು, ನಾನಾ ಕಡೆಗೆ ಹೆದರಿ ಓಡುವಂತಿದೆ. ದೊಡ್ಡ ಬೆಂಕಿಯು ವಾಯುಪ್ರೇರಿತವಾಗಿ ಒಣಗಿದ ಪೊದೆಯನ್ನು ಸುಡುವಂತೆ, ಆ ಅರ್ಜುನನ ಬಾಣಗಳು ನಮ್ಮ ಸೈನ್ಯವನ್ನು ಸುಡುವಂತಿದೆ. ಮುಂದೆ ಯುದ್ಧದಲ್ಲಿ ಶತ್ರುಗಳನ್ನು ಕೊಲೆ ಮಾಡುವ ಘಾತುಕನಾದ ಆ ಕಿರೀಟಿಯು, ಯಾವಾಗ ಗಾಂಡೀವಧನುಸ್ಸಿನಿಂದ ತೀಕ್ಷ್ಣಬಾಣಗಳನ್ನು ಪ್ರಯೋಗಿಸಲಾರಂಭಿಸುವನೋ, ಆಗ ಬ್ರಹ್ಮನಿಂದ ಲೋಕಸಂಹಾರಕ್ಕಾಗಿ ಸೃಷ್ಟಿಸಲ್ಪಟ್ಟ ಯಮನೇ ಬಂದಂತೆ ಯಾರಿಗೂ ತಡೆಯಲು ಸಾಧ್ಯವಲ್ಲ. ಸಂಜಯಾ! ಮುಂದಿನ ಯುದ್ಧದಲ್ಲಿ ನಮ್ಮ ಕಡೆಯ ಕೌರವರ ನಾಶವನ್ನು ಅಡಿಗಡಿಗೆ ನಾನು ಕೇಳದೆ ತೀರದು. ಅಂತೂ ಭರತವಂಶಕ್ಕೆ ದೊಡ್ಡ ಕ್ಷಯಕಾಲವು ಬಂದಿದೆ'' ಎಂದನು.

ಇದು ಐವತ್ತೆರಡನೆಯ ಅಧ್ಯಾಯವು.

ಧೃತರಾಷ್ಟ್ರನು ಪಾಂಡವರ ಬಲಾತಿಶಯವನ್ನು ತಿಳಿಸಿ,
ಕೌರವರನ್ನು ತಾನೇ ಸಮಾಧಾನಕ್ಕೆ ತರುವುದಾಗಿ
ಸಂಜಯನಿಗೆ ತಿಳಿಸಿದುದು.

ಓ ಸಂಜಯಾ! ಪಾಂಡವರು ಹೇಗೆ ಅತಿಶಯಪರಾಕ್ರಮವುಳ್ಳವರಾಗಿಯೂ, ಜಯಾತುರವುಳ್ಳವರಾಗಿಯೂ ಇರುವರೋ, ಹಾಗೆಯೇ ಅವರ ಕಡೆಯವರೆಲ್ಲರೂ, ಮಹಾಬಲಾಢ್ಯರಾಗಿಯೂ, ಜಯಕ್ಕಾಗಿ ತಮ್ಮ ಪ್ರಾಣವನ್ನೇ ಒಪ್ಪಿಸತಕ್ಕವರಾಗಿಯೂ ಇರುವರು. ಪಾಂಚಾಲರು, ಕೇಕಯರು, ಮತ್ಸ್ಯರು, ಮಾಗಧರು, ವತ್ಸರು ಮುಂತಾದ ರಾಜರೆಲ್ಲರೂ ಆ ಕಡೆಯಲ್ಲಿ ಅದ್ಭುತಪರಾಕ್ರಮಿಗಳೆಂದು ನೀನೇ ಹೇಳಿದೆ. ಇದಲ್ಲದೆ ದೇವೇಂದ್ರನೊಡನೆ ಕೂಡಿದ ಈ ಸಮಸ್ತ ಲೋಕಗಳನ್ನೂ ಯಾವನು ತನ್ನ ವಶದಲ್ಲಿರಿಸಿಕೊಳ್ಳಬಲ್ಲನೋ, ಲೋಕಸೃಷ್ಟಿಕರ್ತನೆನಿಸಿದ ಆ ಶ್ರೀಕೃಷ್ಣನೂ ಪಾಂಡವರ ಜಯಕ್ಕಾಗಿ ಕಂಕಣವನ್ನು ಕಟ್ಟಿರುವನು. ಅರ್ಜುನನಿಂದಲೇ ಸಮಸ್ತ ಧನುರ್ವಿದ್ಯೆಯನ್ನೂ ಕಲಿತ ಸಾತ್ಯಕಿಯೂ ಅವರ ಕಡೆಗೆ ನಿಂತಿರುವನು. ಅವನು ಬೀಜಗಳನ್ನು ಬಿತ್ತುವಂತೆ ಯುದ್ಧದಲ್ಲಿ ಬಾಣಗಳನ್ನೆರಚುವನು. ಮಹಾರಥನೂ, ಉತ್ತಮಾಸ್ತ್ರಗಳನ್ನು ಬಲ್ಲವನೂ ಆದ ಧೃಷ್ಟದ್ಯುಮ್ನನು ಅವರ ಕಡೆಗೆ ಸೇರಿ ನಮ್ಮವರೊಡನೆ ಯುದ್ಧಕ್ಕೆ ನಿಲ್ಲುವನು. ಸಂಜಯಾ! ಆ ಧರ್ಮರಾಜನ ಕೋಪಕ್ಕೂ, ಅರ್ಜುನನ ಪರಾಕ್ರಮಕ್ಕೂ, ಭೀಮನ ಬಲಕ್ಕೂ, ನಕುಲಸಹದೇವರ ವೀರ್ಯಕ್ಕೂ, ಹೆದರಿ ನನ್ನ ಎದೆಯು ನಡುಗುತ್ತಿರುವುದು. ಪುರುಷಶ್ರೇಷ್ಠರಾದ ಆ ಪಾಂಡವರೇನೋ ಅಮಾನುಷವಾದ ಒಂದು ದೊಡ್ಡ ಬಲೆಯನ್ನು ನಮ್ಮ ಮುಂದೆ ಒಡ್ಡಿರುವರು. ನಮ್ಮ ಸೇನೆಗಳು ಆ ಬಲೆಯಿಂದ ತಪ್ಪಿಸಿಕೊಂಡು ಹೋಗಲಾರವು. ಇದನ್ನು ನೆನಸಿಕೊಂಡೇ ನಾನು ಗೋಳಾಡುತ್ತಿರುವೆನು. ಆ ಪಾಂಡುಪುತ್ರನು ನೋಡುವುದಕ್ಕೆ ಆಸೆಹುಟ್ಟಿಸತಕ್ಕ ರೂಪವುಳ್ಳವನು. ಅವನ ಮನಸ್ಸು ಉದಾರವಾದುದು. ವೀರಲಕ್ಷ್ಮಿಯು ಅವನನ್ನೊಲಿದಿರುವಳು. ಅವನ ಮುಖದಲ್ಲಿ ಬ್ರಹ್ಮವರ್ಚಸ್ಸು ಉಕ್ಕುತ್ತಿರುವುದು. ಅವನು ಮಹಾಮೇಧಾವಿ! ಧರ್ಮಾತ್ಮನು! ಸುಶಿಕ್ಷಿತವಾದ ಪ್ರಜ್ಞೆಯುಳ್ಳವನು!

ಅನೇಕ ಮಿತ್ರರಿಂದಲೂ, ಮಂತ್ರಿಗಳಿಂದಲೂ ಯುದ್ಧವೀರರಾದ ಮತ್ತು ಮಹಾರಥರೆನಿಸಿಕೊಂಡ ತಮ್ಮಂದಿರಿಂದಲೂ, ಮಾವಂದಿರಿಂದಲೂ ಕೂಡಿದವನು. ಧೈರ್ಯ, ಸ್ಥಿರಮನಸ್ಸು, ರಹಸ್ಯಗೋಪನ, ಅಹಿಂಸೆ, ಔದಾರ್ಯ, ಲಜ್ಜೆ, ನಿಷ್ಕಪಟವಾದ ಪರಾಕ್ರಮ, ಶಾಸ್ತ್ರಜ್ಞಾನ, ಆತ್ಮನಿಗ್ರಹ, ಹಿರಿಯರ ಸೇವೆ, ಇಂದ್ರಿಯಜಯ ಮೊದಲಾದ ಸಮಸ್ತ ಗುಣಗಳಿಂದ ತುಂಬಿದವನು. ಜ್ವಲಿಸುವ ಅಗ್ನಿಯಂತೆಯೂ, ತಪಿಸುವ ಸೂರ್ಯನಂತೆಯೂ, ಮಹಾತೇಜಸ್ವಿಯಾದ ಆ ಧರ್ಮರಾಜನನ್ನಿದಿರಿಸಿ ಯಾವನು ತಾನೇ ಅಗ್ನಿಯಲ್ಲಿ ಬೀಳುವ ಪತಂಗದಂತೆ ನಾಶಕ್ಕೀಡಾಗುವನು ?

ಆ ಧರ್ಮರಾಜನು ನನಗೆ ದೇಹದಲ್ಲಿ ಅಡಗಿದ ಬೆಂಕಿಯಂತಿರುವನು. ನಾನು ಅವನನ್ನು ಎಷ್ಟೋ ವಿಧವಾಗಿ ಸುಳ್ಳುಸುಳ್ಳಾದ ಉಪಚಾರಗಳಿಂದ ವಂಚಿಸಿರುವೆನು. ಮುಂದೆ ಅವನು ಮೂಢರಾದ ನನ್ನ ಮಕ್ಕಳನ್ನು ಯುದ್ಧದಲ್ಲಿ ತೀರಿಸದೆ ಬಿಡುವನೆ? ಎಲೈ ಕೌರವರೇ ! ಆ ಪಾಂಡವರೊಡನೆ ಯುದ್ಧಮಾಡದಿರುವುದೇ ಒಳ್ಳೆಯದೆಂದು ನನಗೆ ತೋರುವುದು. ನನ್ನ ಮಾತನ್ನು ಕೇಳಿರಿ. ಯುದ್ಧಕ್ಕೆ ಅವಕಾಶಕೊಟ್ಟರೆ ನಮ್ಮ ವಂಶವೇ ಮೊತ್ತಕ್ಕೆ ನಾಶವಾಗುವುದು. ಇದು ನಿಶ್ಚಯವು. ಶಾಂತಿಯೇ ನನ್ನ ನಿಜವಾದ ಉದ್ದೇಶವು. ಅದರಿಂದಲೇ ನನ್ನ ಮನಸ್ಸಿಗೆ ನೆಮ್ಮದಿಯುಂಟು. ಯುದ್ಧಮಾಡದಿರುವುದು ನಿಮಗೆ ಇಷ್ಟವಾದರೆ ನಾವೂ ನಮ್ಮಿಂದಾದ ಮಟ್ಟಿಗೆ ಸಮಾಧಾನಕ್ಕಾಗಿ ಯತ್ನಿಸುವೆವು. ನಾವು ಸಂಕಟಪಡುವುದನ್ನು ಧರ್ಮರಾಜನು ಸಹಿಸಲಾರನು. ನಮ್ಮ ಕಷ್ಟವನ್ನೂ ಉಪೇಕ್ಷಿಸಲಾರನು. ಈ ಕಲಹಕ್ಕೆಲ್ಲ ನಾನೇ ಕಾರಣನೆಂದು ಭಾವಿಸಿ ಅವನು ನನ್ನಮೇಲೆ ಅಧರ್ಮವನ್ನು ಆರೋಪಿಸಿ ನಿಂದಿಸುತ್ತಿರುವನಲ್ಲವೆ ?" ಎಂದನು.

ಇದು ಐವತ್ತುಮೂರನೆಯ ಅಧ್ಯಾಯವು.



ಪಾಂಡವರ ಕಷ್ಟಗಳಿಗೂ, ಅವರನ್ನು ರೇಗಿಸುವುದಕ್ಕೂ, ಸಂಜಯನು ಧೃತರಾಷ್ಟ್ರನೇ ಕಾರಣನೆಂದು ತೋರಿಸಿ, ಅವನನ್ನು ನಿಂದಿಸಿದುದು.

ಆಗ ಸಂಜಯನು ಧೃತರಾಷ್ಟ್ರನನ್ನು ಕುರಿತು, "ಮಹಾರಾಜಾ! ನೀನು ಹೇಳಿದುದು ವಾಸ್ತವವೇ! ಪಾಂಡವರು ನಿನ್ನನ್ನೇ ನಿಂದಿಸುವುದು ನಿಜವು. ಮುಂದಿನ ಯುದ್ಧದಲ್ಲಿ ಅರ್ಜುನನ ಗಾಂಡೀವದಿಂದ ಕ್ಷತ್ರಿಯರಿಗೆಲ್ಲ ನಾಶವು ಸಿದ್ಧವೆಂದೇ ತೋರುವುದು. ಆ ಸವ್ಯಸಾಚಿಯ ಸತ್ವವನ್ನು ತಿಳಿದಿದ್ದೂ ನೀನು ಪುತ್ರಮೋಹಕ್ಕೊಳಗಾಗಿ ಈ ರೀತಿ ಮಾಡುವೆಯೆಂದು ನಾನು ತಿಳಿದಿರಲಿಲ್ಲ. ಮಗನಲ್ಲಿರುವ ಮೋಹದಿಂದ ತಿಳಿದುತಿಳಿದೂ ಆ ಪಾಂಡವರ ವಿಷಯದಲ್ಲಿ ಅಪರಾಧವನ್ನು ಮಾಡಿದ ನಿನಗೆ, ಈಗ ಅವಕ್ಕಾಗಿ ಅವರನ್ನು ಕುರಿತು ವ್ಯಸನಪಡುವುದರಿಂದ ಪ್ರಯೋಜನವಿಲ್ಲ. ಮೊದಲಿಂದಲೂ ಆ ಪಾಂಡವರು ನಿನ್ನಿಂದಲೇ ವಂಚಿಸಲ್ಪಟ್ಟಿರುವರು. ತಂದೆಯೂ, ಹಿರಿಯವನೂ, ಮಿತ್ರನೂ, ಒಳ್ಳೇ ಸುಶಿಕ್ಷಿತಚಿತ್ತನೂ ಆದವನು, ತನ್ನವರಿಗೆ ಹಿತವನ್ನೇ ಯೋಚಿಸುವನೇ ಹೊರತು ದ್ರೋಹವನ್ನೆಣಿಸಲಾರನು. ಹಾಗೆ ದ್ರೋಹವನ್ನೆಣಿಸಿದವನು ಗುರುವೆನಿಸುವುದಿಲ್ಲ. ಜೂಜಾಡುವ ಕಾಲದಲ್ಲಿ ನೀನು ನಿನ್ನ ಮಕ್ಕಳ ಜಯವನ್ನು ನೋಡಿನೋಡಿ ಸಂತೋಷಿಸುತ್ತಿದ್ದವನಲ್ಲವೇ! "ನಾವು ಇದನ್ನು ಜಯಿಸಿದೆವು! ಈ ಆಟದಲ್ಲಿ ನಮಗೆ ಇದು ಸಿಕ್ಕಿತು!" ಎಂದು ನಿನ್ನ ಕಡೆಯವರು ಕೂಗಾಡುವುದನ್ನೂ, ಪಾಂಡವರು ಸೋತುದನ್ನೂ, ಕೇಳಿ ನೀನು ಹುಡುಗುತನದಿಂದ ನಗುತ್ತಿರಲಿಲ್ಲವೆ. ಆಗ ನಿನ್ನ ಮಕ್ಕಳು ಪಾಂಡವರನ್ನು ಕುರಿತು ಕಠಿನವಾದ ಮಾತುಗಳನ್ನಾಡುತ್ತಿದ್ದರೂ, ನೀನು ಉಪೇಕ್ಷಿಸಿದೆಯಲ್ಲವೆ? ರಾಜ್ಯವೆಲ್ಲಾ ಪೂರ್ಣವಾಗಿ ನಿನಗೇ ದಕ್ಕಿಬಿಡುವುದೆಂಬ ಸಂತೋಷದಲ್ಲಿದ್ದೆಯೇಹೊರತು, ಮುಂದೆ ಬರುವ ಈ ಅನರ್ಥವನ್ನು ನೀನು ಯೋಚಿಸಲಿಲ್ಲ. ನಿನಗೆ ಪಿತ್ರಾರ್ಜಿತವಾದ ರಾಜ್ಯವೆಷ್ಟೆಂದು ಬಲ್ಲೆಯಾ? ಜಾಂಗಲವೆಂಬ ಹಿರಣ್ಯಪ್ರಾಂತ್ಯಗಳೊಡನೆ ಕೂಡಿದ ಕುರುದೇಶಗಳಷ್ಟೇಹೊರತು, ಅದಕ್ಕಿಂತ ಹೆಚ್ಚಿಲ್ಲ! ಹೀಗಿರುವಾಗಲೂ, ಆ ಪಾಂಡವರು ತಮ್ಮ ಭುಜಬಲ

ದಿಂದ ಜಯಿಸಿದ ರಾಜ್ಯವನ್ನೆಲ್ಲ ನೀನೇ ಕೈಸೇರಿಸಿಕೊಂಡಿರುವೆ. ಆ ಪಾಂಡವರೂ ನಿನ್ನಲ್ಲಿ ತಂದೆಯೆಂಬ ಗೌರವವನ್ನಿಟ್ಟು, ತಮ್ಮ ಬಾಹುವೀರ್ಯದಿಂದ ಸಂಪಾದಿಸಿದ ಭೂಮಿಯನ್ನು ತಾವಾಗಿಯೇ ನಿನಗೆ ಒಪ್ಪಿಸಿದರು. ಓ ರಾಜಶ್ರೇಷ್ಠಾ! ಹಾಗಿದ್ದರೂ ನಾನೇ ಇದನ್ನೆಲ್ಲ ಸಂಪಾದಿಸಿದವನೆಂದು ನೀನು ತಿಳಿದುಕೊಂಡಿರುವೆ. ಇದಲ್ಲದೆ ಹಿಂದೆ ಹಡಗಿಲ್ಲದ ಸಮುದ್ರಮಧ್ಯದಲ್ಲಿ ಮುಳುಗಿಹೋದಂತೆ, ಗಂಧರ್ವರಾಜನ ಕೈಗೆ ಸಿಕ್ಕಿಬಿದ್ದ ನಿನ್ನ ಮಕ್ಕಳನ್ನು ಅವನಿಂದ ಬಿಡಿಸಿ ನಿನಗೆ ತಂದೊಪ್ಪಿಸಿದವರಾರು? ಅಂತಹ ಪಾಂಡವರನ್ನೇ ನಿನ್ನ ಮಕ್ಕಳು ದ್ಯೂತದಲ್ಲಿ ವಂಚಿಸಿ, ಕಾಡಿಗೆ ಅಟ್ಟಿದುದದನ್ನು ನೋಡಿ ನೀನು ಹುಡುಗುತನದಿಂದ ಬಾರಿಬಾರಿಗೂ ನಗುತ್ತಿದ್ದವನಲ್ಲವೆ? ಅರ್ಜುನನು ತೀಕ್ಷ್ಣಬಾಣಗಳನ್ನು ಮೇಲೆಮೇಲೆ ಪ್ರಯೋಗಿಸುತ್ತಿದ್ದರೆ, ಸಮುದ್ರಗಳಾದರೂ ಶೋಷಿಸಿಹೋಗುವುವು. ಇನ್ನು ಮಾಂಸಯೋನಿಗಳಾದ ಮನುಷ್ಯರ ಪಾಡೇನು? ಧನುರ್ಧಾರಿಗಳಾಗಿ ಬಾಣಪ್ರಯೋಗ ಮಾಡುವವರಲ್ಲಿ ಅರ್ಜುನನಿಗಿಂತಲೂ ಮೇಲಾದವರಿಲ್ಲ! ಧನುಸ್ಸಿನಲ್ಲಿ ಗಾಂಡೀವಕ್ಕೆ ಮಿಂಚಿದುದಲ್ಲ! ಸಮಸ್ತ ಭೂತಗಳಲ್ಲಿಯೂ ಆ ಶ್ರೀಕೃಷ್ಣನಿಗಿಂತಲೂ ಮೇಲಾದವನಿಲ್ಲ! ಆಯುಧಗಳಲ್ಲಿ ಅವನ ಸುದರ್ಶನವನ್ನು ಮಿಂಚಿದುದಿಲ್ಲ! ಧ್ವಜಗಳಲ್ಲಿ ಆ ಅರ್ಜುನನ ಧ್ವಜವಾದ ವಾನರಕ್ಕಿಂತಲೂ ಮೇಲಾದುದಿಲ್ಲ! ಇವೆಲ್ಲವೂ ಈಗ ಆ ಅರ್ಜುನನ ರಥದಲ್ಲಿ ಒಂದಾಗಿ ಸೇರಿರುವಾಗ ಅವನನ್ನಿದಿರಿಸಬಲ್ಲವರಾರು? ಆ ಅರ್ಜುನನ ರಥವು ಮೇಲೆತ್ತಿದ ಕಾಲಚಕ್ರದಂತೆ ನಮ್ಮೆಲ್ಲರನ್ನೂ ನಾಶಗೊಳಿಸುವುದೇ ನಿಶ್ಚಯವು. ಓ ರಾಜಾ! ಈಗ ಆ ಪಾಂಡವರು ಕೇಳಿದ ಐದು ಗ್ರಾಮಗಳು ಮಾತ್ರವೇ ಅಲ್ಲ. ಯಾವನ ಕಡೆಗೆ ಆ ಭೀಮಾರ್ಜುನರಿಬ್ಬರೂ ಯೋಧರಾಗಿ ನಿಂತಿರುವರೋ ಆ ಯುಧಿಷ್ಠಿರನಿಗೆ ಸಮಸ್ತ ಭೂಮಿಯೂ ಈಗ ಸ್ವಂತವೆಂದೇ ತಿಳಿ. ಓ ಮಹಾರಾಜಾ! ಆ ಭೀಮಸೇನನಿಂದ ಹತವಾಗಿ ಮುಳುಗಿಹೋಗುತ್ತಿರುವ ನಿನ್ನ ಸೈನ್ಯವನ್ನೆಲ್ಲ ದುರ್ಯೋಧನಾದಿಗಳು ಕಣ್ಣಿಂದ ನೋಡುವಾಗಲೇ ಸಾಯುವರು. ಆ ಭೀಮಾರ್ಜುನರ ಪರಾಕ್ರಮಕ್ಕೆ ಹೆದರಿಬ ನಿನ್ನ ಮಕ್ಕಳೂ, ಅವರನ್ನು ಹಿಂಬಾಲಿಸುವ ಇತರ ರಾಜರೂ, ಹೇಗೆತಾನೇ ಮುಂದಿನ ಯುದ್ಧದಲ್ಲಿ ಜಯವನ್ನು ಹೊಂದುವರು?

ಈಗ ಮತ್ಸ್ಯರಾಗಲಿ, ಪಾಂಚಾಲರಾಗಲಿ, ಕೇಕಯರಾಗಲಿ, ಯಾರೂ ನಿನ್ನ ನ್ನು ಆದರಿಸುವುದಿಲ್ಲ. ಸಾಲ್ವ, ಶೂರಸೇನ ದೇಶದವರೂ ನಿನ್ನನ್ನು ಅವ ಮಾನಗೊಳಿಸುತ್ತಿರುವರು. ನಿನ್ನಲ್ಲಿ ಯಾರಿಗೂ ಗೌರವವಿಲ್ಲ. ಇವ ರೆಲ್ಲರೂ ಅರ್ಜುನನ ಪರಾಕ್ರಮವನ್ನು ಒಲ್ಲವರಾದುದರಿಂದಲೇ ಅವ ನಲ್ಲಿ ಭಕ್ತಿಯುಳ್ಳವರಾಗಿ, ಆ ಪಾಂಡವರಲ್ಲಿ ಸೇರಿಕೊಂಡು ಯಾವಾಗಲೂ ನಿನ್ನ ಮಕ್ಕಳನ್ನು ವಿರೋಧಿಸುತ್ತಿರುವರು. ಅವಧ್ಯರೂ, ಧರ್ಮಾತ್ಮರೂ ಆದ ಪಾಂಡುಪುತ್ರರಲ್ಲಿ ವಿರೋಧವನ್ನು ಬೆಳೆಸಿ, ಅವರನ್ನು ವಂಚಿಸಿ ಕಷ್ಟ ಪಡಿಸಿದುದಲ್ಲದೆ, ಈಗಲೂ ಯಾವನು ಅವರನ್ನು ದ್ವೇಷಿಸುತ್ತಿರುವನೋ, ಪಾಪಿಯೂ, ದುರಾತ್ಮನೂ ಆದ ಆ ನಿನ್ನ ಮಗನನ್ನು ನಿನ್ನಿಂದಾದ ಎಲ್ಲಾ ಉಪಾಯಗಳಿಂದಲೂ ನೀನು ಹೇಗಾದರೂ ಅಡಗಿಸಿಡಬೇಕು. ಪಾಪ ಸ್ವಭಾವವುಳ್ಳ ಅವನ ವಿಷಯದಲ್ಲಿ ಪಶ್ಚಾತ್ತಾಪಪಡಲೇ ಬಾರದು. ಓ ಮಹಾರಾಜಾ! ನಾನು ಮುಚ್ಚುಮರೆಯಿಲ್ಲದೆ ಅವನಿದಿರಾಗಿಯೇ ಹೇಳು ತ್ತಿರುವೆನು. ಹಿಂದೆ ದ್ಯೂತಕಾಲದಲ್ಲಿಯೇ ನಾನೂ, ಧೀಮಂತನಾದ ವಿದುರನೂ ನಿನಗೆ ಎಷ್ಟೋ ವಿಧದಿಂದ ಹೇಳಿದೆವು. ಆ ಪಾಂಡವರ ವಿಷ ಯವಾಗಿ ನಾವು ನಿನಗೆ ಸಾರಿಸಾರಿ ಹೇಳಿದುದೆಲ್ಲಾ ಅರಣ್ಯರೋದನವಾ ಯಿತು" ಎಂದನು.

ಇದು ಐವತ್ತುನಾಲ್ಕನೆಯ ಅಧ್ಯಾಯವು.

ದುರ್ಯೋಧನನು ಭೀಷ್ಮದ್ರೋಣಾದಿಗಳು ತನಗೆ ಅಭಯ ಕೊಟ್ಟಿರುವುದನ್ನೂ, ತನ್ನ ಮತ್ತು ಪಾಂಡವರ ಕಡೆಯ ಬಲಾಬಲ ತಾರತಮ್ಯವನ್ನೂ ತಿಳಿಸಿ, ಧೃತರಾಷ್ಟ್ರ ನನ್ನು ಸಮಾಧಾನಗೊಳಿಸಿದುದು.

ಆಗ ದುರ್ಯೋಧನನು ತಂದೆಯನ್ನು ಕುರಿತು "ಮಹಾರಾಜಾ! ನೀನೇಕೆ ಹೀಗೆ ಭಯಪಡುವೆ? ನಮಗಾಗಿಯೂ ನೀನು ಚಿಂತಿಸಿ ದುಃಖಿಸ ಬೇಕಾದುದಿಲ್ಲ. ಶತ್ರುಗಳು ಎಷ್ಟೇ ಬಲಾಢ್ಯರೆನಿಸಿದ್ದರೂ ಯುದ್ಧದಲ್ಲಿ ನಾವು ಜಯಿಸಬಲ್ಲೆವು. ಇದಕ್ಕೊಂದು ನಿದರ್ಶನವನ್ನು ಹೇಳುವೆನು ಕೇಳು.

ಹಿಂದೆ ನಾವು ಜೂಜಿನಲ್ಲಿ ಪಾಂಡವರನ್ನು ಸೋಲಿಸಿ ಕಾಡಿಗಟ್ಟಿದಾಗ, ಕೃಷ್ಣನು ಅವರನ್ನು ಸಂಧಿಸಿದನು. ಆಗ ಕೇಕಯರಾಜನೂ, ಧೃಷ್ಟದ್ಯುಮ್ನನೂ, ಧೃಷ್ಟಕೇತುವೂ, ಇನ್ನೂ ಅನೇಕರಾಜರೂ ಶತ್ರುರಾಜರನ್ನು ಧ್ವಂಸಮಾಡತಕ್ಕ ಅನೇಕ ಪ್ರಬಲ ಸೈನ್ಯದೊಡನೆ ಆ ಪಾಂಡವರನ್ನು ಹಿಂಬಾಲಿಸುತ್ತಿದ್ದರು. ಇಂದ್ರಪ್ರಸ್ಥಕ್ಕೆ ಬಹಳ ದೂರವಿಲ್ಲದ ಒಂದಾನೊಂದು ಸ್ಥಳದಲ್ಲಿ, ಮೇಲೆ ಹೇಳಿದ ಮಹಾರಥರೆಲ್ಲರೂ ಒಟ್ಟಾಗಿ ಸೇರಿದರು. ಆಗ ಮಾತಿನಮೇಲೆ ಮಾತುಗಳು ಬಂದು, ಅವರೆಲ್ಲರೂ, ಎಲ್ಲಾ ಕುರುಗಳೊಡನೆ ಸೇರಿಸಿ ನಿನ್ನನ್ನೂ ಬಹಳವಾಗಿ ನಿಂದಿಸಿದರು. ವನಪ್ರಯಾಣಕ್ಕಾಗಿ ಕೃಷ್ಣಾಜಿನವನ್ನು ಧರಿಸಿದ್ದ ಯುಧಿಷ್ಠಿರನನ್ನು ಆ ರಾಜರೆಲ್ಲರೂ ಕೃಷ್ಣನೊಡನೆ ನಾನಾವಿಧದಿಂದ ಉಪಚರಿಸುತ್ತಿದ್ದರು. ಆಗ ಅವರು ನಮ್ಮೆಲ್ಲರನ್ನೂ ಸಮಸ್ತ ಪರಿವಾರಗಳೊಡನೆ ನಿಗ್ರಹಿಸಿ, ಈ ರಾಜ್ಯವನ್ನು ತಿರುಗಿ ಪಾಂಡವರಿಗೆ ಸಾಧಿಸಿಕೊಡುವುದಾಗಿ ಧರ್ಮರಾಜನಿಗೆ ಅಭಯವನ್ನು ಕೊಟ್ಟರು. ಈ ಸಂಗತಿಯು ನನ್ನ ಕಿವಿಗೆ ಬಿದ್ದಿತು. ಆಗ ನಾನು ಆ ಪಾಂಡವರಿಂದ ನಮಗೆಲ್ಲಾ ನಾಶವುಂಟಾಗುವುದೆಂಬ ಭಯದಿಂದ, ಭೀಷ್ಮನನ್ನೂ, ದ್ರೋಣನನ್ನೂ, ಕೃಪನನ್ನೂ ಕರೆಸಿ, ಹೀಗೆಂದು ಹೇಳಿದೆನು. "ಆಚಾರ್ಯರೇ! ಅತ್ತಲಾಗಿ ಪಾಂಡವರು ಯುದ್ಧಕ್ಕೆ ಸಿದ್ಧರಾಗಿರುವಂತೆ ತೋರುತ್ತಿದೆ. ನಮ್ಮೆಲ್ಲರನ್ನೂ ಕೊಲ್ಲುವುದೇ ಕೃಷ್ಣನ ನಿಶ್ಚಯವು. ವಿದುರನನ್ನು ಹೊರತು, ನಿಮ್ಮನ್ನೂ ಸೇರಿಸಿ ಎಲ್ಲರನ್ನೂ ಅವನು ಕೊಲ್ಲಿಸದೆ ಬಿಡನು. ಒಂದುವೇಳೆ, ಕೌರವರಲ್ಲಿ ವೃದ್ಧನೂ, ಧರ್ಮಜ್ಞನೂ ಆದವನೆಂದು ನಮ್ಮ ತಂದೆಯನ್ನು ಉಳಿಸಿದರೂ ಉಳಿಸಬಹುದು. ಉಳಿದ ನಮ್ಮೆಲ್ಲರನ್ನೂ ಕೊಂದು, ಕೌರವರ ರಾಜ್ಯವನ್ನೆಲ್ಲಾ ಧರ್ಮರಾಜನ ಏಕಾಧಿಪತ್ಯಕ್ಕೆ ಒಪ್ಪಿಸಿಬಿಡುವುದಾಗಿರುವನು. ಈಗ ನಾವು ಮಾಡಬೇಕಾದುದೇನು? ಆ ಪಾಂಡವರ ಕಾಲಿಗೆ ಬಿದ್ದು, ಶರಣಾಗತರಾಗುವುದೇ? ಅಥವಾ ಊರನ್ನು ಬಿಟ್ಟು ಎಲ್ಲಿಯಾದರೂ ತಲೆತಪ್ಪಿಸಿಕೊಂಡು ಓಡಿಹೋಗುವುದೇ? ಇಲ್ಲವೇ ಕ್ಷತ್ರಿಯ ಧರ್ಮವನ್ನನುಸರಿಸಿ ಪ್ರಾಣಗಳನ್ನಾದರೂ ತೊರೆದು ಯುದ್ಧಕ್ಕೆ ನಿಲ್ಲುವೆವೆ? ನಾವು ಯುದ್ಧಕ್ಕೆ ನಿಂತರೆ ಸೋಲುವುದೇನೋ ನಿಶ್ಚಯವು. ಪ್ರಾಯಿಕವಾಗಿ ಎಲ್ಲಾ ರಾಜ

ರಾಜರೂ ಆ ಧರ್ಮರಾಜನ ವಶವರ್ತಿಗಳಾಗಿರುವರು. ನಮ್ಮ ದೇಶದ ಪ್ರಜೆಗಳಿಗೂ ನಮ್ಮಲ್ಲಿ ಅನುರಾಗವು ತಪ್ಪಿರುವುದು. ನಮ್ಮ ಮಿತ್ರರಾಜರೂ ನಮ್ಮಲ್ಲಿ ಕೋಪಗೊಂಡಿರುವರು. ಹೀಗೆ ಎಲ್ಲಾ ರಾಜರಿಂದಲೂ, ಸ್ವಜನರಿಂದಲೂ, ತಿರಸ್ಕೃತರಾದ ನಾವು ಈಗ ಮಾಡುವುದೇನು? ಈ ಸ್ಥಿತಿಯಲ್ಲಿ ನಾವು ಪಾಂಡವರ ಕಾಲಿಗೆಬಿದ್ದು ಶರಣಾಗತರಾದರೂ ಅದರಲ್ಲಿ ತಪ್ಪೇನೂ ನನಗೆ ಕಾಣುವುದಿಲ್ಲ. ಆದರಿಂದ ನಾವೆಲ್ಲರೂ ಅನೇಕ ವರ್ಷಗಳವರೆಗೆ ಸಮಾಧಾನದಿಂದಿರಬಹುದು. ನನ್ನಿಂದ ಅಪಾರದುಃಖಕ್ಕೂ, ಕಷ್ಟಕ್ಕೂ, ಗುರಿಯಾದ ನನ್ನ ತಂದೆಗಾಗಿಯೇ ನಾನು ಶೋಕಿಸಿ, ಹೇಗಾದರೂ ಈ ಕೆಲಸವನ್ನು ನಡೆಸಬೇಕಾಗಿದೆ. ಅವನೋ, ಕಣ್ಣಿಲ್ಲದ ಕುರುಡನಾಗಿ, ತನ್ನ ಪ್ರಜ್ಞೆಯೇ ಕಣ್ಣಾಗಿ ಉಳ್ಳವನು. ಚಕ್ರವರ್ತಿಯೆನಿಸಿಕೊಂಡವನು. ನನ್ನಿಂದಲೇ ಅವನಿಗೆ ಈ ಸಂಕಟಗಳೆಲ್ಲಾ ಉಂಟಾಗಿವೆ. ಇದಲ್ಲದೆ, ಓ ಜನಕಾ! ನಿನ್ನ ಎಲ್ಲಾ ಮಕ್ಕಳೂ ನನ್ನ ಪ್ರೀತಿಗಾಗಿಯೇ ನನ್ನ ಶತ್ರುಗಳಾದ ಪಾಂಡವರಿಗೆ ಎಷ್ಟೋ ವಿರೋಧಗಳನ್ನು ನಡೆಸಿದರು. ಇದು ಮೊದಲಿಂದ ನಿನಗೂ ತಿಳಿದಿರುವುದು. ಇದರಿಂದ ಆ ಪಾಂಡವರು ಧೃತರಾಷ್ಟ್ರನಮೇಲೆ ತಮ್ಮ ವೈರವನ್ನು ತೀರಿಸಿಕೊಳ್ಳುವುದಕ್ಕಾಗಿ, ಅವನ ಸಮಸ್ತ ಪರಿವಾರಗಳೊಡನೆ ಸೇರಿಸಿ ಕುಲಚ್ಛೇದವನ್ನೇ ಮಾಡುವರು. ಇದಕ್ಕಾಗಿ ಈಗ ನಾವು ಮಾಡಬೇಕಾದುದೇನೋ ಅದನ್ನು ತಿಳಿಸಬೇಕು" ಎಂದೆನು.

ಆಗ ದ್ರೋಣನೂ, ಭೀಷ್ಮನೂ, ಕೃಪನೂ, ಅಶ್ವತ್ಥಾಮನೂ ನಾನು ಬಹಳ ಚಿಂತಾಕುಲನಾಗಿ ಕೊರಗುತ್ತಿರುವುದನ್ನು ನೋಡಿ ಹೀಗೆಂದು ಹೇಳಿದರು. "ನಮ್ಮಲ್ಲಿ ಶತ್ರುಗಳು ದ್ರೋಹಬುದ್ಧಿಯನ್ನಿಟ್ಟರೂ, ನೀನು ಅದಕ್ಕಾಗಿ ಭಯಪಡಬಾರದು. ನಾವಿರುವಾಗ ಯುದ್ಧದಲ್ಲಿ ನಮ್ಮನ್ನು ಯಾರೂ ಜಯಿಸಲಾರರು. ನಾವು ಒಬ್ಬೊಬ್ಬರಾಗಿಯೇ ಶತ್ರುರಾಜರೆಲ್ಲರನ್ನೂ ಜಯಿಸಬಲ್ಲೆವು. ಯಾರು ಬೇಕಾದರೂ ಬರಲಿ! ನಮ್ಮ ತೀಕ್ಷ್ಣಬಾಣಗಳಿಂದ ಅವರ ಕೊಬ್ಬನ್ನು ಅಡಗಿಸುವೆವು. ಹಿಂದೆ ಈ ಭೀಷ್ಮನೊಬ್ಬನೇ ತನ್ನ ತಂದೆಯ ಮರಣದಿಂದ ಅತಿಕ್ರುದ್ಧನಾಗಿ, ಒಂದೇ ರಥ

ದಿಂದ ಅನೇಕರಾಜರನ್ನು ಜಯಿಸಿದನು. ಆಗ ಆ ರಾಜರೆಲ್ಲರೂ ಭಯ ದಿಂದ ತಾವಾಗಿ ಬಂದು ಇವನಲ್ಲಿ ಮರೆಹೊಕ್ಕರಲ್ಲವೆ? ಅಂತಹ ಸಮರ್ಥ ನಾದ ಭೀಷ್ಮನು ನಮ್ಮ ಕಡೆಗಿರುವಾಗ, ಶತ್ರುಗಳನ್ನು ಜಯಿಸುವ ವಿಷ ಯದಲ್ಲಿ ಅಂಜಿಕೆಯೇನಿದೆ?'' ಎಂದರು.

ಹೀಗೆ ಆ ಕಾಲದಲ್ಲಿ ಈ ಭೀಷ್ಮಾದಿ ವೀರರೆಲ್ಲರೂ, ನನ್ನ ಮುಂದೆ ಶತ್ರುಜಯಕ್ಕಾಗಿ ದೃಢನಿಶ್ಚಯವನ್ನೇ ಮಾಡಿರುವರು. ಇದಲ್ಲದೆ, ಆಗ ಭೂಮಿಯೆಲ್ಲವೂ ಆ ಶತ್ರುಗಳ ವಶವಾಗಿಯೇ ಇದ್ದಿತು. ಈಗಲಾದ ರೋ ಸಂಪೂರ್ಣವಾಗಿ ನಮ್ಮ ವಶವಾಗಿರುವುದು. ಆ ಪಾಂಡವರು ದೇಶವನ್ನು ಬಿಟ್ಟು ಬಹುಕಾಲದಿಂದ ಕಾಡಿನಲ್ಲಿದ್ದುದರಿಂದ, ರೆಕ್ಕೆಮುರಿದ ಹಕ್ಕಿಗಳಂತೆ ವೀರ್ಯಹೀನರಾಗಿರುವರು. ರಾಜ್ಯವೆಲ್ಲ ಈಗ ನಮ್ಮ ಕೈ ಯಲ್ಲಿರುವುದು. ನಮ್ಮ ಸುಖದುಃಖಗಳಲ್ಲಿ ಸಮಭಾಗಿಗಳಾದ ಅನೇಕ ರಾಜರು ಈಗ ನಮ್ಮ ಸಹಾಯಕ್ಕಾಗಿ ಕರೆಸಲ್ಪಟ್ಟಿರುವರು. ಈ ರಾಜರು ನನಗಾಗಿ ಅಗ್ನಿಯಲ್ಲಾದರೂ ಪ್ರವೇಶಿಸುವರು. ಸಮುದ್ರದಲ್ಲಿಯಾದರೂ ಬೀಳುವುದಕ್ಕೆ ಸಿದ್ಧರಾಗಿರುವರು. ಓ ಜನಕಾ! ಈಗ ನೀನು ದುಃಖಿ ಸುವುದನ್ನು ನೋಡಿದರೆ, ಇವರೆಲ್ಲರೂ ನೀನು ಹುಚ್ಚನೆಂದು ತಿಳಿದು ನಗುವರಲ್ಲವೆ? ನಮ್ಮ ಶತ್ರುಗಳ ಆತ್ಮಸ್ತುತಿಯನ್ನು ಕೇಳಿ ನೀನು ಭಯ ಪಟ್ಟು ಗೋಳಾಡುತ್ತಿರುವೆ! ಈಗ ನಮ್ಮಲ್ಲಿ ಬಂದಿರುವ ರಾಜರಲ್ಲಿ ಒಬ್ಬೊ ಬ್ಬರೇ ಪಾಂಡವರನ್ನು ಜಯಿಸಬಲ್ಲರು. ಈ ರಾಜರಲ್ಲಿ ಒಬ್ಬೊಬ್ಬನೂ, ಶತ್ರುಜಯಕ್ಕೆ ತಾನೊಬ್ಬನೇ ಸಾಕೆಂದು ಹೇಳುತ್ತಿರುವನು. ಇಂತಹ ರಾ ಜರ ಸಹಾಯದಿಂದ ಪೂರ್ಣವಾದ ನಮ್ಮ ಸೇನೆಯನ್ನು ಇಂದ್ರನಾದರೂ ಜಯಿಸಲಾರನು. ಸ್ವಯಂಭುವಾದ ಬ್ರಹ್ಮನಾದರೂ ಕೊಂದು ತೀರಿಸ ಲಾರದಷ್ಟು ಅಕ್ಷಯವಾದ ಸೇನಾಬಲವು ನಮ್ಮಲ್ಲಿದೆ. ಜನಕಾ! ಅಷ್ಟೇಕೆ? ಈಗ ಯುಧಿಷ್ಠಿರನು ಹೇಳಿಕಳುಹಿಸಿದ ಮಾತುಗಳಿಂದಲೇ ಅವನು ನಮಗೆ ಹೆದರುತ್ತಿರುವನೆಂದು ಚೆನ್ನಾಗಿ ಸ್ಪಷ್ಟವಾಗುವುದು. ನಮ್ಮ ಸೈನ್ಯಕ್ಕೂ, ನಮ್ಮ ಪ್ರಭಾವಕ್ಕೂ, ಭಯಪಟ್ಟೇ ಅವನು ಪಟ್ಟಣಗಳನ್ನೇನೂ ಕೇಳದೆ, ಐದು ಗ್ರಾಮಗಳಾದರೂ ತಮಗೆ ಸಾಕೆಂದು ಬೇಡಿಕೊಳ್ಳುತ್ತಿರುವನು. ಆ

ಯುಧಿಷ್ಠಿರನನ್ನು ನೀನು ಬಹಳ ಸಮರ್ಥನೆಂದು ತಿಳಿದಿರುವುದು ತಪ್ಪು. ನನ್ನ ಪೂರ್ಣ ಪ್ರಭಾವವನ್ನೂ, ಬಲವನ್ನೂ ನೀನು ತಿಳಿದಿಲ್ಲವೆಂದು ತೋರುತ್ತದೆ. ಈಗ ಗದಾಯುದ್ಧದಲ್ಲಿ ನನಗೆ ಸಮಾನನು ಈ ಭೂಮಿಯಲ್ಲಿ ಯಾವನೊಬ್ಬನೂ ಇಲ್ಲವು. ಹಿಂದೆ ಇದ್ದವನೂ ಇಲ್ಲ! ಮುಂದೆ ಹುಟ್ಟುವನೂ ಇಲ್ಲವೆಂದು ತಿಳಿ! ನಾನು ಎಷ್ಟೋ ಕಷ್ಟದಿಂದ ಪ್ರಯತ್ನಪಟ್ಟು ಗುರುಕುಲದಲ್ಲಿ ವಿದ್ಯೆಕಲಿತು ಅದರಲ್ಲಿ ಪಾರಂಗತನಾಗಿ ಬಂದವನು. ಭೀಮನಿಂದಾಗಲಿ, ಬೇರೊಬ್ಬನಿಂದಾಗಲಿ ನನಗೆ ಲವಮಾತ್ರವೂ ಭಯವಿಲ್ಲ. ಗದೆಯಲ್ಲಿ ದುರ್ಯೋಧನನಿಗೆ ಸಾಟಿಯಿಲ್ಲವೆಂಬುದು ಲೋಕಕ್ಕೆಲ್ಲ ತಿಳಿದ ಸಂಗತಿ! ನಾನು ಆ ಸಂಕರ್ಷಣ (ಬಲರಾಮ) ನಲ್ಲಿಯೇ ಶಿಕ್ಷಿತನಾಗಿ, ಯುದ್ಧದಲ್ಲಿ ಅವನಿಗೆ ಸಮಾನನೆನಿಸಿರುವೆನು. ಬಲದಲ್ಲಿ ಅವನಿಗಿಂತಲೂ ಮೇಲಾಗಿಯೂ ಇರುವೆನು. ನನ್ನ ಗದೆಯ ಪೆಟ್ಟನ್ನು ಭೀಮನು ಎಂದಿಗೂ ತಡೆದುಕೊಳ್ಳಲಾರನು. ನನ್ನ ಒಂದೇ ಒಂದು ಪ್ರಹಾರವು ಆ ಭೀಮನನ್ನು ಯಮಪುರಿಗೆ ಕಳುಹಿಸಿಬಿಡುವುದು. ಆ ವೃಕೋದರನು ಗದಾಪಾಣಿಯಾಗಿ ನನ್ನಿದಿರಿಗೆ ಬರುವುದನ್ನೇ ನಾನೂ ಆಸೆಯಿಂದ ನಿರೀಕ್ಷಿಸುತ್ತಿರುವೆನು. ಇದು ಬಹುಕಾಲದಿಂದ ನನಗಿರುವ ಮನೋರಥವಾಗಿದೆ. ಅವನು ನನ್ನ ಗದಾಪ್ರಹಾರದಿಂದ ಮೈಮುರಿದು ಮೃತನಾಗಿ ಮಲಗುವುದೇ ನಿಶ್ಚಯವು. ನಾನು ನನ್ನ ಗದೆಯಿಂದ ಒಂದಾವರ್ತಿ ಹೊಡೆದರೆ, ಹಿಮವತ್ಪರ್ವತವಾದರೂ ನೂರಾರು ಶಕಲಗಳಾಗಿ ಒಡೆದು ಹೋಗುವುದು. ಆ ಭೀಮನೂ ಇದನ್ನು ಬಲ್ಲನು! ಕೃಷ್ಣಾರ್ಜುನರೂ ಇದನ್ನು ಚೆನ್ನಾಗಿ ಬಲ್ಲರು. ಆದುದರಿಂದ ಜನಕಾ! ನಿನಗೆ ಆ ಭೀಮನ ವಿಷಯವಾದ ಭಯವು ಸ್ವಲ್ಪಮಾತ್ರವೂ ಬೇಡ! ನಾನು ಅವನನ್ನು ತೀರಿಸಿಬಿಡುವೆನು. ಭೀಮನು ನನ್ನಿಂದ ಹತನಾದ ಕೂಡಲೆ, ನಮ್ಮ ಕಡೆಯ ಅನೇಕರಥಿಕರು ಅರ್ಜುನನನ್ನು ಯುದ್ಧದಲ್ಲಿ ಕೆಡಹಿಬಿಡುವರು. ರಥಯುದ್ಧದಲ್ಲಿ ಅರ್ಜುನನಿಗೆ ಸಮಾನರೂ, ಅವನಿಗಿಂತಲೂ ಒಂದು ಕೈ ಮೇಲಾದವರೂ ನಮ್ಮ ಕಡೆಯಲ್ಲಿ ಅನೇಕರಿರುವರು. ಭೀಷ್ಮನು, ದ್ರೋಣನು, ಕೃಪನು, ಅಶ್ವತ್ಥಾಮನು, ಕರ್ಣನು, ಭೂರಿಶ್ರವಸ್ಸು, ಪ್ರಾಗ್ಜ್ಯೋತಿಷಪತಿಯಾದ ಭಗದತ್ತನು, ಶಲ್ಯನು, ಜಯದ್ರಥನು, ಇವರಲ್ಲಿ ಒಬ್ಬೊಬ್ಬನೇ ಆ ಪಾಂಡವರನ್ನು ಕೊಲ್ಲಲು ಸಮ

ರ್ಥನಾಗಿರುವನು. ಅಂತವರೆಲ್ಲರೂ ಒಂದಾಗಿ ಸೇರಿರುವಾಗ ಕೇಳಬೇಕೆ? ಕ್ಷಣಮಾತ್ರದಲ್ಲಿ ಅವರನ್ನೆಲ್ಲ ಯಮಪುರಿಗೆ ಸೇರಿಸಿಬಿಡುವರು. ಅನೇಕ ರಾಜರಿಂದ ಕೂಡಿದ ನಮ್ಮ ಪೂರ್ಣವಾದ ಸೈನ್ಯವು, ಆ ಅರ್ಜುನನೊಬ್ಬನನ್ನು ಜಯಿಸಲಾರದೆಂದು ನೀನು ತಿಳಿಯುವುದಕ್ಕೆ ಕಾರಣವೇನೋ ನನಗೆ ತೋರಲಿಲ್ಲ. ಭೀಷ್ಮನ ಬಾಣಸಮೂಹಗಳಿಗೂ, ದ್ರೋಣ ಕೃಪಾಶ್ವತ್ಥಾಮರಿಗೂ ಇದಿರಾದೊಡನೆ ಆ ಪಾರ್ಥನು ಬೆಚ್ಚುಬೆರಗಾಗಿ ಪ್ರಾಣವನ್ನು ಬಿಡದಿರನು. ನನ್ನ ಪಿತಾಮಹನಾದ ಗಾಂಗೇಯನು ಬ್ರಹ್ಮರ್ಷಿಗಳಿಗೆ ಸಮಾನನು. ಅವನು ದೇವತೆಗಳಿಗೂ ದುಸ್ಸಹವಾದ ಮಹಾತೇಜಸ್ಸಿನೊಡನೆ ಶಂತನುವಿನಲ್ಲಿ ಹುಟ್ಟಿ, ತಂದೆಗಿಂತಲೂ ಮೇಲೆನಿಸಿಕೊಂಡಿರುವನು. ಅಲ್ಲದೆ, ಅವನು ತಂದೆಯ ಅನುಗ್ರಹದಿಂದ ಸ್ವೇಚ್ಛಾಮರಣಿಯಾಗಿರುವನು. ಅವನಾಗಿ ಇಷ್ಟಪಟ್ಟ ಹೊರತು ಅವನನ್ನು ಕೊಲ್ಲಲು ಯಾರೂ ಸಮರ್ಥರಲ್ಲ. ದ್ರೋಣನಾದರೂ ಸಾಮಾನ್ಯನೇ? ಬ್ರಹ್ಮರ್ಷಿಯಾದ ಭರದ್ವಾಜನಿಂದ (ದ್ರೋಣಿಯಲ್ಲಿ) ಕಲಶದಲ್ಲಿ ಜನಿಸಿದನು. ಉತ್ತಮಾಸ್ತ್ರವಿದನಾದ ಅಶ್ವತ್ಥಾಮನು ಆ ದ್ರೋಣನಿಂದ ಜನಿಸಿದವನು. ಆಚಾರ್ಯರಲ್ಲಿ ಮುಖ್ಯನೆನಿಸಿಕೊಂಡ ಕೃಪನು ಗೌತಮಮಹರ್ಷಿಯಿಂದ ಶರಸ್ತಂಬದಲ್ಲಿ (ನೊದೆಹುಲ್ಲಿನ ತೆನೆಯಲ್ಲಿ) ಹುಟ್ಟಿದವನು. ಶ್ರೀಮಂತನಾದ ಅವನಿಗೂ ಸಾವಿಲ್ಲವೆಂದೇ ನಾನು ಕೇಳಿರುವೆನು. ರಾಜಾ! ಅಶ್ವತ್ಥಾಮನ ತಂದೆ, ತಾಯಿ, ಮಾವನು ಈ ಮೂವರೂ ಅಯೋನಿಜರು. ಅಂತಹ ಮಹಾಮಹಿಮೆಯುಳ್ಳ ದ್ರೋಣಪುತ್ರನು ನಮ್ಮ ಕಡೆಯಲ್ಲಿರುವಾಗ ನಮಗೆ ಯಾರ ಭಯವೇನಿದೆ? ಈ ಹಿಂದೆ ಹೇಳಿದವರೆಲ್ಲರೂ ಮಹಾರಥರು! ದೇವಸಮಾನರು! ಯುದ್ಧದಲ್ಲಿ ಇಂದ್ರನನ್ನಾದರೂ ನಿಗ್ರಹಿಸಬಲ್ಲವರು. ಅರ್ಜುನನು ಇವರಲ್ಲಿ ಒಬ್ಬೊಬ್ಬರನ್ನಾದರೂ ಇದಿರಿಸಿ ನಿಲ್ಲಲಾರನು. ಎಲ್ಲರೂ ಒಂದಾಗಿ ಸೇರಿರುವಾಗ ಅವನನ್ನು ಕೊಲ್ಲುವುದೇನು ದೊಡ್ಡದು? ನಮ್ಮ ಕರ್ಣನೇನು ಸಾಧಾರಣನೇ? ಭೀಷ್ಮ ದ್ರೋಣ ಕೃಪರು ಮೂವರಿಗೂ ಅವನೊಬ್ಬನೇ ಸಮಾನನೆಂದು ನನಗೆ ತೋರಿದೆ. ಹಿಂದೆ ಪರಶುರಾಮನೇ ಅವನನ್ನು ನೋಡಿ "ಶಸ್ತ್ರಾಸ್ತ್ರಗಳಲ್ಲಿ ನೀನು ನನಗೆ ಸಮಾನನು" ಎಂದು ಒಪ್ಪಿರುವನು. ಇದಲ್ಲದೆ, ಇವನಿಗೆ ಜನ್ಮಸಿದ್ಧ

ಗಳಾದ ಎರಡು ದಿವ್ಯಕುಂಡಲಗಳಿದ್ದುವು. ಮಹೇಂದ್ರನು ಶಚೀದೇವಿ ಗಾಗಿ ಆ ಕುಂಡಲಗಳನ್ನು ಅವನಿಂದ ಯಾಚಿಸಿ ತೆಗೆದುಕೊಂಡು, ಅದಕ್ಕೆ ಪ್ರತಿಯಾಗಿ ಮಹಾಭಯಂಕರವಾಗಿಯೂ, ಎಲ್ಲಿಯೂ ವಿಫಲವಾಗದೆಯೂ ಇರುವ ಒಂದು ಶಕ್ತ್ಯಾಯುಧವನ್ನು ಕೊಟ್ಟಿರುವನು. ಆ ಶಕ್ತಿಯ ಬಲ ವುಳ್ಳ ಕರ್ಣನ ಮುಂದೆ ಅರ್ಜುನನು ಬದುಕಿಹೋಗುವುದೆಂದರೇನು? ರಾಜೇಂದ್ರಾ! ಕೈಯಲ್ಲಿರುವ ಹಣ್ಣಿನಂತೆ ನನಗೆ ಯುದ್ಧದಲ್ಲಿ ಜಯವೆಂಬು ದು ನಿಶ್ಚಯವು. ಹಾಗೆಯೇ ನಮ್ಮ ಶತ್ರುಗಳಿಗೆ ಪರಾಜಯವೂ ಸಿದ್ಧವೇ!

ಈ ಭೀಷ್ಮನು ಒಂದು ಹಗಲಿನಲ್ಲಿ ಹತ್ತುಲಕ್ಷ ಸೈನ್ಯವನ್ನು ನಾಶ ಮಾಡಬಲ್ಲವನು. ದ್ರೋಣ ಕೃಪಾಶ್ವತ್ಥಾಮರೂ ಅವನಿಗೆ ಸಮಾನರೇ! ಇದಲ್ಲದೆ ನಮ್ಮ ಕಡೆಯಲ್ಲಿರುವ ಸಂಶಪ್ತಕರೆಂಬ ಕ್ಷತ್ರಿಯ ಸಮೂಹಗಳು "ನಾವು ವೈರಿಗಳನ್ನು ಕೊಲ್ಲುವೆವು! ಇಲ್ಲವೇ ಅವನ ಕೈಯಿಂದ ಸಾಯು ವೆವು" ಎಂದು ದೃಢಪ್ರತಿಜ್ಞೆಯುಳ್ಳವರಾಗಿ, ಅರ್ಜುನನನ್ನು ಕೊಲ್ಲುವು ದಕ್ಕೆ ದೃಢಶಪಥವನ್ನು ಮಾಡಿರುವರು. ಹೀಗಿರುವಾಗ ನಿನ್ನ ಚಿಂತೆಗೆ ಕಾರಣವೇನಿದೆ? ಜನಕಾ? ಆ ಭೀಮನೊಬ್ಬನು ಹತನಾದರೆ, ಆಮೇಲೆ ಶತ್ರುಪಕ್ಷದಲ್ಲಿ ನಮ್ಮನ್ನಿದಿರಿಸಿ ನಿಲ್ಲಬಲ್ಲನಾವನುಂಟು? ತಿಳಿದಿದ್ದರೆ ಹೇಳು ನೋಡುವೆನು! ಆ ಕಡೆಯಲ್ಲಿ ಐದುಮಂದಿ ಪಾಂಡವರು, ಧೃಷ್ಟದ್ಯುಮ್ನ ನೊಬ್ಬನು! ಸಾತ್ಯಕಿಯೊಬ್ಬನು! ಈ ಏಳು ಮಂದಿಯೇ! ಆ ಪಾಂಡವರ ಕಡೆಯ ಮಹತ್ತಾದ ಸೈನ್ಯವೆಂಬುದೆಲ್ಲ ಇಷ್ಟರಲ್ಲಿಯೇ ತೀರಿಹೋಯಿತು.

ನಮ್ಮಲ್ಲಿ ನೋಡು! ಭೀಷ್ಮ, ದ್ರೋಣ, ಕೃಪರೇ ಮೊದಲಾಗಿ, ಇನ್ನೂ ಅನೇಕ ಶೂರರಿರುವರು. ಅಶ್ವತ್ಥಾಮನು, ಸೂರ್ಯಪುತ್ರನಾದ ಕರ್ಣನು, ಬಾಹ್ಲಿಕನು, ಸೋಮದತ್ತನು, ಪ್ರಾಗ್ಜ್ಯೋತಿಷಪತಿ, ಶಲ್ಯನು, ಅವಂತಿರಾಜನು, ಜಯದ್ರಥನು, ದುಶ್ಶಾಸನನು, ದುರ್ಮುಖನು, ದುಸ್ಸಹ ನು, ಶ್ರುತಾಯು, ಚಿತ್ರಸೇನನು, ಪುರುಮಿತ್ರನು, ವಿವಿಂಶತಿ, ಶಲನು, ಭೂರಿಶ್ರವಸ್ಸು, ನಿನ್ನ ಮಗನಾದ ವಿಕರ್ಣನು ಇಂತಹ ಮಹಾಶೂರರನೇಕ ರುಂಟು. ಅಲ್ಲದೆ, ನಮ್ಮ ಕಡೆಗೆ ಹನ್ನೊಂದಕ್ಷೌಹಿಣೀ ಸೇನೆಗಳು ಬಂದು ಸೇರಿವೆ. ಶತ್ರುಪಕ್ಷದಲ್ಲಿಯೋ ಏಳಕ್ಷೌಹಿಣಿಗಳು ಮಾತ್ರವೇ! ಹೀಗಿರು

ವಾಗ ನನಗೆ ಪರಾಜಯುವೆಂದರೇನು? ಶತ್ರುಸೈನ್ಯವು ತಮ್ಮ ಸೈನ್ಯದ ಮೂರರಲ್ಲಿ ಒಂದು ಪಾಲಿನಷ್ಟು ಕಡಿಮೆಯಾಗಿದ್ದಾಗ, ಯುದ್ಧಕ್ಕೆ ಹೋಗ ಬಹುದೆಂದು ಬೃಹಸ್ಪತಿಯ ವಚನವುಂಟು. ಅದರಂತೆ ಈಗ ನಮ್ಮ ಸೈನ್ಯ ವು ಅದಕ್ಕಿಂತಲೂ ಇನ್ನೂ ಸ್ವಲ್ಪ ಅಧಿಕವಾಗಿಯೇ ಇದೆ. ಇದಲ್ಲದೆ, ಆ ಶತ್ರುಸೈನ್ಯವು ನಮ್ಮ ಸೇನೆಯಷ್ಟು ಸಾರವಾಗಿಯೂ ಇಲ್ಲ. ಅನೇಕ ಗುಣ ಗಳಲ್ಲಿ ಹೀನವಾಗಿದೆ. ಅದಕ್ಕಿಂತ ನಮ್ಮದು ಎಷ್ಟೋ ಅಧಿಕಗುಣವುಳ್ಳ ದು. ಇದನ್ನೆಲ್ಲ ನೀನು ಚೆನ್ನಾಗಿ ಯೋಚಿಸು. ನಮ್ಮ ಕಡೆಯ ಬಲಾ ಧಿಕ್ಯವನ್ನೂ, ಪಾಂಡವರಿಗೆ ಆ ಭಾಗದಲ್ಲಿರುವ ನ್ಯೂನತೆಯನ್ನೂ ತಿಳಿದು ಕೊಂಡರೆ, ನೀನು ಈಗ ನಮ್ಮ ಅಪಜಯಕ್ಕಾಗಿ ಚಿಂತಿಸಬೇಕಾದ ಕಾರಣ ವೇನೇನೂ ಇರುವುದಿಲ್ಲ" ಎಂದನು. ಹೀಗೆಂದು ಹೇಳಿ ದುರ್ಯೋಧ ನನು ತಿರುಗಿ ಪಾಂಡವರ ಪ್ರವರ್ತನೆಯೇನೆಂಬುದನ್ನು ತಿಳಿದುಕೊಳ್ಳುವು ದಕ್ಕಾಗಿ ಪ್ರಶ್ನೆಮಾಡುವನು.

ಇದು ಐವತ್ತೈದನೆಯ ಅಧ್ಯಾಯವು.



ತಿರುಗಿ ಪಾಂಡವರ ಅಭಿಪ್ರಾಯವನ್ನು ತಿಳಿಯುವುದಕ್ಕಾಗಿ
ದುರ್ಯೋಧನನು ಸಂಜಯನನ್ನು ಪ್ರಶ್ನೆಮಾಡಿದುದು.
ಸಂಜಯನ ಉತ್ತರವು.

ದುರ್ಯೋಧನನು ಸಂಜಯನನ್ನು ಕುರಿತು "ಓ ಸಂಜಯಾ! ಆ ಪಾಂಡವರಿಗೆ ಬೇರೆ ರಾಜರ ಕಡೆಯಿಂದ ಏಳು ಅಕ್ಷೌಹಿಣೀಸೈನ್ಯಗಳು ಬಂದು ಸೇರಿವೆಯೆಂದು ಹೇಳಿದೆಯಲ್ಲವೆ? ಅವರು ಇನ್ನೂ ಯುದ್ಧಕ್ಕಾಗಿ ಮಾಡಿರುವ ಬೇರೆ ಸನ್ನಾಹಗಳೇನು? ಅವರ ಪ್ರಯತ್ನವೆಂತದು?" ಎಂದನು. ಅದಕ್ಕಾ ಸಂಜಯನು "ಓ ರಾಜಾ! ಆ ಯುಧಿಷ್ಠಿರನು ಯುದ್ಧಕ್ಕಾಗಿ ಬಹಳ ಉತ್ಸಾಹಗೊಂಡಿರುವನು. ಭೀಮಾರ್ಜುನರಾಗಲಿ, ನಕುಲಸಹದೇವರಾಗಲಿ, ಯುದ್ಧಕ್ಕಾಗಿ ಸ್ವಲ್ಪವಾದರೂ ಹೆದರಿ ಹಿಂಜರಿ ಯುವುದಿಲ್ಲ. ಅರ್ಜುನನು ತನ್ನ ಮಂತ್ರಾಸ್ತ್ರಗಳ ಪ್ರಭಾವವನ್ನು ಪರೀ

ಕ್ಷಿಸಿ ನೋಡಬೇಕೆಂಬುದಕ್ಕಾಗಿ ದಿಕ್ಕುಗಳನ್ನೆಲ್ಲ ಬೆಳಗುವಂತೆ ತನ್ನ ದಿವ್ಯ ರಥವನ್ನು ಜೋಡಿಸಿಕೊಂಡು ಆಗಾಗ ಸುತ್ತುತ್ತಿರುವನು. ಮಿಂಚಿನಿಂದ ಕೂಡಿದ ಮೇಘದಂತೆ, ಅಧಿಕ ಕಾಂತಿವಿಶಿಷ್ಟವಾಗಿ ಸುತ್ತುತಿದ್ದ ಅವನ ರಥ ವನ್ನು ನಾನೇ ನೋಡಿಬಂದೆನು. ಆಗ ಅರ್ಜುನನು ನನ್ನನ್ನು ನೋಡಿ, ಉತ್ಸಾಹದಿಂದ "ಸಂಜಯಾ! ನಮ್ಮ ಈ ವಿಜಯರಥವನ್ನು ನೋಡಿ ದೆಯಾ! ನಾವು ಜಯಿಸುವುದು ನಿಶ್ಚಯವು" ಎಂದನು. ದುರ್ಯೋಧನ ಮಹಾರಾಜಾ! ಅವನು ಹೇಳಿದಂತೆಯೇ ಆಗುವುದೆಂದು ನನಗೂ ತೋ ರಿದೆ" ಎಂದನು.

ಆಗ ದುರ್ಯೋಧನನು ಸಂಜಯನನ್ನು ನೋಡಿ ನಗುತ್ತ, "ಸಂಜ ಯಾ! ನಮ್ಮಿಂದ ಪಗಡೆಯಲ್ಲಿ ಸೋತು ಓಡಿಹೋದ ಆ ಪಾಂಡವರ ಪರಾ ಕ್ರಮವನ್ನು ನೀನು ಇಷ್ಟೊಂದು ವಿಧವಾಗಿ ಕೊಂಡಾಡುತ್ತಿರುವೆ. ಇರಲಿ! ಆ ಅರ್ಜುನನ ರಥದ ಕುದುರೆಗಳೂ, ಅವನ ಧ್ವಜಗಳೂ, ಹೇಗಿವೆ? ಅದನ್ನು ಹೇಳು!" ಎಂದನು. ಅದಕ್ಕಾ ಸಂಜಯನು "ಮಹಾರಾಜಾ! ತ್ವಷ್ಟೃ ವೆನಿಸಿದ ವಿಶ್ವಕರ್ಮನು, ಇಂದ್ರನೊಡನೆಯೂ, ಧಾತೃವಿನೊಡನೆಯೂ ಕಲೆತು, ಹಲವು ಬಗೆಯ ವಿಚಿತ್ರದಿವ್ಯಾಕೃತಿಗಳನ್ನು ಆ ಅರ್ಜುನನ ರಥದಲ್ಲಿ ಯಾವಾಗಲೂ ನಿರ್ಮಿಸಿಟ್ಟಿರುವನು. ಹೀಗೆ ವಿಶ್ವಕರ್ಮನು, ದೇವ ಮಾಯೆಯಿಂದ ಬಹಳ ಬೆಲೆಯುಳ್ಳ ಸಣ್ಣ ದೊಡ್ಡ ದಿವ್ಯಾಕೃತಿಗಳನ್ನೆಲ್ಲ ಕಲ್ಪಿಸಿರುವುದಲ್ಲದೆ, ಭೀಮಸೇನನ ಪ್ರಾರ್ಥನೆಯಮೇಲೆ ವಾಯುಪುತ್ರನಾದ ಹನುಮಂತನು (ಅವಶ್ಯವು ಬಂದಾಗ) ತನ್ನ ಆಕೃತಿಯನ್ನು ಆ ಅರ್ಜುನನ ರಥದ ಧ್ವಜದಲ್ಲಿ ನೆಲೆಗೊಳಿಸುವನು. ಆ ಧ್ವಜವನ್ನೆತ್ತಿ ಕಟ್ಟಿದಾಗ, ಅದು ಮೇಲೆಯೂ, ಅಡ್ಡಲಾಗಿಯೂ ಒಂದು ಯೋಜನದೂರಕ್ಕೆ ನಾನಾ ದಿಕ್ಕುಗಳನ್ನೂ ಆವರಿಸುವುದು. ಮರಗಳೊಂದೂ ಅದರ ಸಂಚಾರಕ್ಕೆ ಅಡ್ಡಿಯಾಗಿ ನಿಲ್ಲದು. ಹೀಗೆ ವಿಶ್ವಕರ್ಮನು ಅದರಲ್ಲಿ ತನ್ನ ಮಾಯೆ ಯನ್ನು ಕಲ್ಪಿಸಿರುವನು. ಆಕಾಶದಲ್ಲಿ ಇಂದ್ರಧನುಸ್ಸು (ಕಾಮನ ಬಿಲ್ಲು) ಹೇಗೋಹಾಗೆ, ಆ ಧ್ವಜವು ಅನೇಕವರ್ಣಗಳಿಂದ್ಧ ವಿಚಿತ್ರಿತವಾಗಿ ಕಾಣು ವುದು. ಅದರ ನಿರ್ಮಾಣಚಾತುರ್ಯವೇನೆಂದು ಯಾರಿಗೂ ತಿಳಿಯುವಂ

ತಿಲ್ಲ. ಆ ಒಂದೇ ಧ್ವಜವು ಅನೇಕಾಕಾರದಿಂದ ತಿಳಿಯುವಂತೆ, ವಿಶ್ವಕ ರ್ಮನು ಚಮತ್ಕಾರದಿಂದ ಅದನ್ನು ನಿರ್ಮಿಸಿರುವನು. ಜ್ವಾಲೆಯೊಡ ಗೂಡಿ ಬೆಂಕಿಯಿಂದ ಹೊರಟ ಹೊಗೆಯು ಆಕಾಶವನ್ನೆಲ್ಲ ವ್ಯಾಪಿಸಿ ನಾನಾ ಕಡೆಗೆ ಹರಡುವಂತೆ, ತೇಜೋವಿಶಿಷ್ಟಗಳಾದ ಹಲವು ವಿಚಿತ್ರವರ್ಣಗಳು ಆ ಧ್ವಜದಿಂದ ನಾನಾಕಡೆಗಳಿಗೆ ಹೊರಡುವುವು. ಇದೆಲ್ಲ ವಿಶ್ವಕರ್ಮನ ನಿರ್ಮಾಣಚಾತುರ್ಯವು. ಆ ರಥವು ವಿಶೇಷ ಭಾರವಿಲ್ಲದೆ ಲಘುವಾಗಿ ರುವುದರೊಡನೆ, ಅದರ ಗತಿಗೆ ಎಲ್ಲಿಯೂ ತಡೆಯಿಲ್ಲ. ಅದಕ್ಕೆ ವಾಯುವೇ ಗವುಳ್ಳ ಬಿಳೀ ಕುದುರೆಗಳುಂಟು. ಅದು ಚಿತ್ರರಥನೆಂಬ ಗಂಧರ್ವರಾಜ ನಿಂದ ಅವನಿಗೆ ಕೊಡಲ್ಪಟ್ಟುವು. ಆ ಕುದುರೆಗಳ ಗತಿಗೆ ಭೂಮಿಯಲ್ಲಿ ಯಾಗಲಿ, ಅಂತರಿಕ್ಷದಲ್ಲಿಯಾಗಲಿ, ಸ್ವರ್ಗದಲ್ಲಿಯಾಗಲಿ ಎಲ್ಲಿಯೂ ಅಡ್ಡಿ ಯಿಲ್ಲ. ಆ ಕುದುರೆಗಳನ್ನು ಮೇಲೆಮೇಲೆ ಶತ್ರುಗಳು ಕೊಲ್ಲುತ್ತ ಬಂದರೂ, ಯಾವಾಗಲೂ ಅವು ನೂರು ಸಂಖ್ಯೆಯಷ್ಟೇ ಇರುವಂತೆ ಅವುಗಳಿಗೆ ವರವುಂಟು. ಯುಧಿಷ್ಠಿರನ ರಥಕ್ಕೂ ಕೂಡ, ಬಲದಲ್ಲಿಯೂ, ವೇಗದ ಲ್ಲಿಯೂ ಅರ್ಜುನನ ಕುದುರೆಗಳಿಗೆ ಸಮಾನಗಳಾಗಿ, ದಂತದಂತೆ ಬಿಳೀ ವರ್ಣವುಳ್ಳ ದೊಡ್ಡ ಕುದುರೆಗಳುಂಟು. ಭೀಮಸೇನನಿಗೂ ಹಾಗೆಯೇ ವಾ ಯುವೇಗವುಳ್ಳವುಗಳೂ, ನಕ್ಷತ್ರದಂತೆ ಪ್ರಕಾಶವುಳ್ಳವುಗಳೂ ಆದ ಕುದುರೆ ಗಳುಂಟು. ಇದರಂತೆಯೇ ಸಹದೇವನಿಗೂ ಕೂಡ, ಕಪ್ಪಾದ ಮೈಬಣ್ಣ ದಿಂದಲೂ, ತಿತ್ತಿರಿಪಕ್ಷಿಯ ರೆಕ್ಕೆಯಂತೆ ವಿಚಿತ್ರವಾದ ಬೆನ್ನಿನಿಂದಲೂ, ಕೂಡಿ ಅರ್ಜುನನ ಕುದುರೆಗಳಿಗಿಂತಲೂ ಮೇಲೆನಿಸಿಕೊಂಡ ರಥಾಶ್ವಗ ಳುಂಟು. ಅವುಗಳನ್ನು ಅರ್ಜುನನೇ ವೀರನಾದ ಅವನಿಗೆ ಪ್ರೀತಿಯಿಂದ ಕೊಟ್ಟನು. ಆ ಕುದುರೆಗಳು ಮಹೋತ್ಸಾಹದಿಂದ ಸಹದೇವನನ್ನು ವಹಿ ಸತಕ್ಕವುಗಳು. ನಕುಲನಿಗೆ ಇಂದ್ರನಿಂದ ಕೊಡಲ್ಪಟ್ಟ ಉತ್ತಮಾಶ್ವಗ ಳುಂಟು. ಅವೂ ವಾಯುವಂತೆ ವೇಗವುಳ್ಳವುಗಳು. ವೃತ್ರವೈರಿಯಾದ ಇಂದ್ರನನ್ನು ಹೇಗೋ ಹಾಗೆ ಆ ಕುದುರೆಗಳು ನಕುಲನನ್ನು ವಹಿಸುವುವು. ಹೀಗೆಯೇ ಸುಭದ್ರೆಯ ಮತ್ತು ದ್ರೌಪದಿಯ ಕುಮಾರರಿಗೂ ಚಿತ್ರರಥ ನೆಂಬ ಗಂಧರ್ವನಿಂದ ಕೊಡಲ್ಪಟ್ಟ ಉತ್ತಮಾಶ್ವಗಳುಂಟು. ಅವೆಲ್ಲವೂ ವಯಸ್ಸಿನಲ್ಲಿಯೂ, ವೀರ್ಯದಲ್ಲಿಯೂ ಹಿಂದೆ ಹೇಳಿದ ಕುದುರೆಗಳಿಗೆ ಸಮಾ

ನಗಳೆನಿಸಿ, ಮಹಾವೇಗವುಳ್ಳವುಗಳಾಗಿ, ವಿಚಿತ್ರಾಕೃತಿಯಿಂದ ಕೂಡಿವೆ''
ಎಂದನು.

ಇದು ಐವತ್ತಾರನೆಯ ಅಧ್ಯಾಯವು.

ಸಂಜಯನು ಪಾಂಡವರ ಕಡೆಗೆ ಸೇರಿರುವ ಎಲ್ಲಾ ರಾಜರ ಹೆಸರನ್ನೂ, ಅವರವರು ಯಾರುಯಾರನ್ನು ಕೊಲುವುದಾಗಿ ನಿಶ್ಚಯಿಸಿಕೊಂಡಿರುವರೆಂಬುದನ್ನೂ ಧೃತರಾಷ್ಟ್ರನಿಗೆ ತಿಳಿಸಿದುದು. ಇದನ್ನು ಕೇಳಿ ರೋದಿಸತೊಡಗಿದ ಧೃತರಾಷ್ಟ್ರನಿಗೆ ದುರ್ಯೋಧನನ ಸಮಾಧಾನೋಕ್ತಿಗಳು.

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು, "ಸಂಜಯಾ! ಪಾಂಡವರಲ್ಲಿ ಪ್ರೀತಿಯಿಂದ ಅವರ ಕಡೆಗೆ ಬಂದು ಸೇರಿ, ನನ್ನ ಮಕ್ಕಳೊಡನೆ ಯುದ್ಧಕ್ಕೆ ಸಿದ್ಧರಾಗಿರುವ ರಾಜರಲ್ಲಿ ನೀನು ಯಾರುಯಾರನ್ನು ಕಂಡು ಬಂದೆ?'' ಎಂದನು. ಅದಕ್ಕಾ ಸಂಜಯನು, ಅಂಧಕರಿಗೂ, ವೃಷ್ಣಿಗಳಿಗೂ ಪ್ರಧಾನನೆನಿಸಿದ ಶ್ರೀಕೃಷ್ಣನು ಅಲ್ಲಿರುವುದನ್ನು ನೋಡಿದೆನು. ಮಹಾರಥರೆಂದು ಲೋಕಪ್ರಖ್ಯಾತರಾಗಿರುವ, ಚೇಕಿತಾನನೂ, ಸಾತ್ಯಕಿಯೂ ಬೇರೆಬೇರೆ ಒಂದೊಂದು ಅಕ್ಷೌಹಿಣೀಸೈನ್ಯದೊಡನೆ ಅಲ್ಲಿಗೆ ಬಂದು ಸೇರಿರುವರು. ದ್ರುಪದನು ಸತ್ಯಜಿತ್ತು ಮೊದಲಾದ ತನ್ನ ಹತ್ತುಮಂದಿ ಪುತ್ರರೊಡನೆ ಧೃಷ್ಟದ್ಯುಮ್ನನನ್ನು ಮುಂದಿಟ್ಟುಕೊಂಡು ಅಲ್ಲಿಗೆ ಬಂದಿರುವನು. ಶಿಖಂಡಿಯು ಅವರೆಲ್ಲರಿಗೂ ಅಂಗರಕ್ಷಕನಾಗಿರುವನು. ಅವನ ಸೈನ್ಯಗಳೆಲ್ಲವೂ ಸಮಸ್ತ ಸಾಧನಸಮೃದ್ಧಿಗಳಿಂದ ಕೂಡಿರುವುವು. ವಿರಾಟನು ತನ್ನ ಮಕ್ಕಳಾದ ಶಂಖನೊಡನೆಯೂ, ಉತ್ತರನೊಡನೆಯೂ ಕೂಡಿ ಮದಿರಾಕ್ಷ ಸೂರ್ಯದತ್ತಾದಿ ವೀರರಿಂದ ಪರಿವೃತನಾಗಿ, ಒಂದು ಅಕ್ಷೌಹಿಣೀಸೈನ್ಯಸಮೇತನಾಗಿ, ತನ್ನ ಎಲ್ಲಾ ಸಹೋದರರೊಡನೆಯೂ, ಪುತ್ರರೊಡನೆಯೂ ಪಾಂಡವರ ಕಡೆಯಲ್ಲಿ ಯುದ್ಧಕ್ಕೆ ಸಿದ್ಧನಾಗಿರುವನು. ಮಗಧಾಧಿಪತಿಯಾದ ಜರಾಸಂಧನ ಪುತ್ರನೂ, ಚೇದಿರಾಜನಾದ ಧೃಷ್ಟ

ಕೇತುವೂ ಬೇರೆಬೇರೆ ಒಂದೊಂದು ಅಕ್ಷೌಹಿಣೀಸೈನ್ಯಗಳೊಡನೆ ಅಲ್ಲಿ ಸಿದ್ಧ ರಾಗಿರುವರು. ಲೋಹಿತವರ್ಣದ ಧ್ವಜವುಳ್ಳ ಕೇಕಯದೇಶದ ಐದು ಮಂದಿ ಸಹೋದರರೂ ಒಂದು ಅಕ್ಷೌಹಿಣೀಸೈನ್ಯದೊಡನೆ ಪಾಂಡವರ ಕಡೆಗೆ ಬಂದು ಸೇರಿರುವರು. ಮಹಾರಾಜಾ! ಯುದ್ಧಕ್ಕಾಗಿ ಪಾಂಡವರ ಕಡೆಯಲ್ಲಿ ಸಿದ್ಧರಾಗಿದ್ದ ಇಷ್ಟು ಮಂದಿಯನ್ನೂ ನಾನು ನೋಡಿಬಂದೆನು. ದೇವ ದಾನವ ಮನುಷ್ಯ ಗಂಧರ್ವರ ಬೇರೆಬೇರೆ ವ್ಯೂಹರಚನಾಕ್ರಮಗಳ ನ್ನೆಲ್ಲ ಬಲ್ಲ ಮಹಾರಥನಾದ ಧೃಷ್ಟದ್ಯುಮ್ನನು ಆ ಪಾಂಡವರ ಕಡೆಯ ಸೈನ್ಯಗಳಿಗೆಲ್ಲ ಈಗ ನಿಯಾಮಕನಾಗಿ ಏರ್ಪಟ್ಟಿರುವನು. ಅವನೇ ಮೊಟ್ಟ ಮೊದಲು ಸೇನಾಮುಖದಲ್ಲಿ ನಿಲ್ಲತಕ್ಕವನು. ಭೀಷ್ಮನಿಗಿದಿರಾಗಿ ಶಿಖಂಡಿ ಯನ್ನು ನಿಲ್ಲಿಸುವರು. ಅವನಿಗೆ ತನ್ನ ಸೈನಿಕರೊಡನೆ ವಿರಾಟನು ಬೆಂಬಲ ವಾಗುವನು. ಧರ್ಮರಾಜನು ಶಲ್ಯನಿಗಿದಿರಾಗಿ ನಿಲ್ಲುವನು. ಆದರೆ ಇವ ರಿಬ್ಬರೂ ಯುದ್ಧಕ್ಕೆ ಸರಿಯಾದ ಜೋಡಿಯಲ್ಲವೆಂದು ಅಲ್ಲಿ ಕೆಲವರು ಹೇಳು ತ್ತಿದ್ದರು. ನಿನ್ನ ಮಗನಾದ ದುರ್ಯೋಧನನು, ತನ್ನ ಪುತ್ರರೊಡನೆಯೂ ನೂರು ಮಂದಿ ಸಹೋದರರೊಡನೆಯೂ, ಮತ್ತು ಪೂರ್ವ ದಕ್ಷಿಣ ದೇಶ ಗಳ ರಾಜರೊಡನೆಯೂ ಭೀಮಸೇನನ ಭಾಗಕ್ಕೆ ಬಿಡಲ್ಪಟ್ಟಿರುವನು. ಕರ್ಣ ನೂ, ಅಶ್ವತ್ಥಾಮನೂ, ವಿಕರ್ಣನೂ, ಸೈಂಧವನೂ ಇವರೆಲ್ಲರೂ ಅರ್ಜು ನನ ಪಾಲಿಗೆ ಸೇರಿರುವರು. ಇದಲ್ಲದೆ ಇನ್ನೂ ಬೇರೆ ಯಾರುಯಾರು ಯುದ್ಧದಲ್ಲಿ ಇತರರಿಗೆ ಜಯಿಸುವುದಕ್ಕೆ ಸಾಧ್ಯವಿಲ್ಲದಿರುವರೋ, ಮತ್ತು ತಾವೇ ಶೂರರೆಂದು ಯಾರುಯಾರು ಹೆಮ್ಮೆಗೊಂಡಿರುವರೋ, ಅಂತವರ ನ್ನೆಲ್ಲ ಅರ್ಜುನನು ತನ್ನ ಪಾಲಿಗೆ ಇಟ್ಟುಕೊಂಡಿರುವನು. ಕೇಕಯದೇಶದ ಐದುಮಂದಿ ರಾಜಪುತ್ರರೂ ನಮ್ಮ ಕಡೆಯಲ್ಲಿರುವ ಕೇಕಯಸೈನ್ಯಗಳೊ ಡನೆಯೇ ಯುದ್ಧಕ್ಕೆ ನಿಲ್ಲುವುದಾಗಿರುವರು. ಮೂಲವರೂ, ಸಾಲ್ವಕರೂ, ಮತ್ತು ಸಂಶಪ್ತಕರೆಂದು ಪ್ರಖ್ಯಾತರಾದ ತ್ರಿಗರ್ತರಾಜರಿಬ್ಬರೂ ಆ ಕೇಕ ಯರಾಜಪುತ್ರರ ಪಾಲಿಗೇ ಸೇರಿರುವರು. ದುರ್ಯೋಧನನ ಮತ್ತು ದುಶ್ಶಾ ಸನನ ಮಕ್ಕಳೆಲ್ಲರನ್ನೂ ಅಭಿಮನ್ಯುವು ತನ್ನ ಭಾಗಕ್ಕೆ ಇಟ್ಟುಕೊಂಡಿರು ವನು. ಹಾಗೆಯೇ ಬೃಹದ್ಬಲರಾಜನೂ ಆ ಅಭಿಮನ್ಯುವಿನ ಪಾಲಿಗೇ ಸೇರಿ ರುವನು. ಸುವರ್ಣಾಲಂಕೃತವಾದ ಐದುಮಂದಿ ಉಪಪಾಂಡವರೂ ಧೃಷ್ಟ

ದ್ಯುಮ್ನನನ್ನು ಮುಂದಿಟ್ಟುಕೊಂಡು, ದ್ರೋಣನನ್ನು ಇದಿರಿಸಿ ನಿಲ್ಲುವುದಾಗಿರುವರು. ಚೇಕಿತಾನನು ಸೋಮದತ್ತನನ್ನು ರಥಯುದ್ಧದಲ್ಲಿ ಇದಿರಿಸುವನು. ಸಾತ್ಯಕಿಯು ಭೋಜರಾಜನಾದ ಕೃತವರ್ಮನಿಗೆ ಇದಿರಾಗುವನು. ಯುದ್ಧದಲ್ಲಿ ಇಂದ್ರಸಮಾನನೆನಿಸಿಕೊಂಡ ಶೂರನಾದ ಸಹದೇವನು, ನಿನ್ನ ಮೈದುನನಾದ ಶಕುನಿಯನ್ನು ತನ್ನ ಭಾಗಕ್ಕೆ ಇಟ್ಟುಕೊಂಡಿರುವನು. ಕುಟಿಲಸ್ವಭಾವವುಳ್ಳ ಉಲೂಕನನ್ನೂ ಮತ್ತು ಸರಸ್ವತೀತೀರದಿಂದ ಬಂದಿರುವ ಸಾರಸ್ವತರೆಂಬ ಗಣಗಳನ್ನೂ ನಕುಲನು ತನ್ನ ಭಾಗಕ್ಕೆ ಇಟ್ಟುಕೊಂಡಿರುವನು. ಓ ಮಹಾರಾಜಾ! ಇವರು ಹೊರತು, ಇನ್ನೂ ಬೇರೆಬೇರೆ ಯಾವಯಾವ ರಾಜರು ನಮ್ಮ ಕಡೆಯಿಂದ ಯುದ್ಧಕ್ಕಾಗಿ ಹೋಗಿ ನಿಲ್ಲುವರೋ, ಅವರಲ್ಲಿ ಒಬ್ಬೊಬ್ಬರ ಹೆಸರನ್ನೂ ನಿರ್ದೇಶಿಸಿ ಆ ಪಾಂಡವರು ತಮ್ಮೊಳಗೆ ಹಂಚಿಟ್ಟುಕೊಂಡಿರುವರು. ಇದಕ್ಕಾಗಿ ನೀನು ಮುಂದೇನು ಮಾಡಬೇಕೋ ಅದನ್ನು ನಿನ್ನ ಮಕ್ಕಳೊಡನೆ ಆಲೋಚಿಸಿ, ವಿಳಂಬವಿಲ್ಲದೆ ಮುಂದಿನ ಕಾರ್ಯವನ್ನು ನಡೆಸು'' ಎಂದನು. ಆಗ ಧೃತರಾಷ್ಟ್ರನು ''ಸಂಜಯಾ! ನಾನೇನು ಮಾಡಲಿ? ಮೂಢರಾದ ನನ್ನ ಮಕ್ಕಳು, ಪಗಡೆಯಾಟದಲ್ಲಿ ಮೋಸವನ್ನು ಹಿಡಿದು ಪಾಂಡವರನ್ನು ವಂಚಿಸಿಬಿಟ್ಟರು. ಬಲಾಢ್ಯನಾದ ಆ ಭೀಮನೊಡನೆ ಮಹಾವೈರವು ಪ್ರಾಪ್ತವಾದಮೇಲೆ ನಮ್ಮವರೇನೋ ಉಳಿಯುವಹಾಗಿಲ್ಲ. ನಮ್ಮ ಕಡೆಗೆ ಬಂದು ಸೇರಿರುವ ರಾಜರೆಲ್ಲರೂ, ತಮ್ಮ ದುರ್ದೈವದಿಂದ ಕಾಲವಶರಾಗಿ ಬೆಂಕಿಯಲ್ಲಿ ಬೀಳುವ ಪತಂಗಗಳಂತೆ, ಅರ್ಜುನನ ಗಾಂಡೀವಾಗ್ನಿಗೆ ತಾವಾಗಿ ಹೋಗಿ ಬೀಳುತ್ತಿರುವರು. ನಮ್ಮಿಂದ ಕಷ್ಟಕ್ಕೆ ಗುರಿಯಾದ ಆ ಪಾಂಡವರಿಗೆ ಹೆದರಿ ಈಗಾಗಲೇ ನಮ್ಮ ಸೈನ್ಯಗಳೆಲ್ಲ ಚದರಿ ಓಡುವಂತೆ ನನಗೆ ತೋರುತ್ತಿದೆ. ಯುದ್ಧದಲ್ಲಿ ಪಾಂಡವರಿಂದ ಚದರಿಸಲ್ಪಡುವ ನಮ್ಮ ಸೈನ್ಯವನ್ನು ಯಾವನುತಾನೇ ತಿರುಗಿ ಒಟ್ಟುಗೂಡಿಸಬಲ್ಲನು? ಅವರೆಲ್ಲರೂ ಅತಿರಥರು! ಮಹಾಶೂರರು! ಪ್ರಸಿದ್ಧ ಕೀರ್ತಿಯುಳ್ಳವರು! ಮಹಾಪರಾಕ್ರಮಿಗಳು! ತೇಜಸ್ಸಿನಲ್ಲಿ ಸೂರ್ಯಾಗ್ನಿಗಳಿಗೆ ಸಮಾನರು! ಎಂತಹ ಯುದ್ಧದಲ್ಲಿಯೂ ಅವರು ಜಯಿಸದೆ ಹಿಂತಿರುಗುವವರಲ್ಲ. ಯಾವ ಸೈನ್ಯಕ್ಕೆ ಯುಧಿಷ್ಠಿರನೇ ನಿಯಾಮಕನಾಗಿ, ಶ್ರೀಕೃಷ್ಣನೇ ರಕ್ಷಕನಾಗಿ, ಮಹಾ

ವೀರರೆನಿಸಿಕೊಂಡ, ಸವ್ಯಸಾಚಿ, ವೃಕೋದರರಿಬ್ಬರೂ (ಅರ್ಜುನ ಭೀಮರಿಬ್ಬರೂ) ಸ್ವತಃ ಯುದ್ಧಮಾಡತಕ್ಕವರಾಗಿರುವರೋ, ಅಂತಹ ಸೈನ್ಯವನ್ನು ಯಾವನು ತಾನೇ ಇದಿರಿಸಬಲ್ಲನು? ಇದಲ್ಲದೆ ಅಲ್ಲಿ ನಕುಲನು, ಸಹದೇವನು, ಪೃಷತಪುತ್ರನಾದ ಧೃಷ್ಟದ್ಯುಮ್ನನು, ಸಾತ್ಯಕಿ, ದ್ರುಪದನು, ಸಹೋದರನೊಡಗೂಡಿದ ಧೃಷ್ಟಕೇತು, ಉತ್ತಮೌಜಸ್ಸು, ಪಾಂಚಾಲದೇಶದ ಯುಧಾಮನ್ಯು, ಶಿಖಂಡಿ, ಕ್ಷತ್ರದೇವನು, ವಿರಾಟಪುತ್ರನಾದ ಉತ್ತರನು, ಮತ್ತು ಕಾಶಯರು, ಚೇದಿಗಳು, ಮತ್ಸ್ಯರು, ಸೃಂಜಯರು, ಮುಂತಾಗಿ ಇನ್ನೂ ಅನೇಕ ಕ್ಷತ್ರಿಯರು ಆ ಕಡೆಯಲ್ಲಿರುವರು. ಮತ್ತು ವಿರಾಟಪುತ್ರನಾದ ಬಭ್ರು, ಪಾಂಚಾಲರು, ಪ್ರಭದ್ರಕರು ಇಂತಹ ಮಹಾವೀರರೂ ಪಾಂಡವರಿಗೆ ಸಹಾಯಕರಾಗಿ ನಿಂತಿರುವರು. ಅಲ್ಲಿ ಎಲ್ಲರೂ ಮಹಾವೀರರು! ರಣಧೀರರು! ಪರ್ವತಗಳನ್ನಾದರೂ ಭೇದಿಸಬಲ್ಲವರು. ಹೀಗೆ ಸಹಾಯಸಂಪತ್ತುಳ್ಳ ಆ ನಮ್ಮ ವೈರಿಗಳು ತಾವಾಗಿ ಇಷ್ಟಪಡದಿದ್ದರೆ, ದೇವೇಂದ್ರನಾದರೂ ಅವರಿಂದ ಭೂಮಿಯನ್ನು ಕಿತ್ತುಕೊಳ್ಳಲಾರನು. ಅಮಾನುಷಪರಾಕ್ರಮವುಳ್ಳವರೂ, ಸರ್ವಗುಣಸಂಪನ್ನರೂ ಆದ ಅಂತಹ ಪಾಂಡವರೊಡನೆ ನನ್ನ ದುಷ್ಪುತ್ರನು ಯುದ್ಧಮಾಡುವುದಕ್ಕಾಗಿ ಯತ್ನಿಸಿರುವನು. ನಾನು ಎಷ್ಟೆಷ್ಟು ಗೋಳಾಡಿ ಕೇಳಿಕೊಂಡರೂ ಅವನು ಕೇಳುವಹಾಗಿಲ್ಲವಲ್ಲ! ಅಯ್ಯೋ! ನಾನೇನು ಮಾಡಲಿ?" ಎಂದನು.

ಆಗ ದುರ್ಯೋಧನನು ತಂದೆಯನ್ನು ನೋಡಿ "ಜನಕಾ! ಇದೇನು? ಹೀಗೆ ನಿಷ್ಕಾರಣವಾಗಿ ಗೋಳಾಡುತ್ತಿರುವೆ? ಪಾಂಡವರಲ್ಲಿ ವಿಶೇಷವೇನಿದೆ? ನಾವೂ ಅವರೂ, ಇಬ್ಬರೂ ಒಂದೇ ಜಾತಿಯವರು. ಇಬ್ಬರೂ ಮನುಷ್ಯರಾಗಿ ಭೂಮಿಯಲ್ಲಿ ಹುಟ್ಟಿದವರೇ! ಹೀಗಿರುವಾಗ ಆ ಪಾಂಡವರಿಗೆಮಾತ್ರ ಜಯವೆಂದು ನೀನು ತಿಳಿಯುವುದೇಕೆ? ನಮ್ಮ ಕಡೆಯಲ್ಲಿರುವ ವೀರರೇನು ಸಾಮಾನ್ಯರೆ? ನಮ್ಮ ಪಿತಾಮಹನಾದ ಈ ಭೀಷ್ಮನು! ಈ ದ್ರೋಣನು! ಈ ಕೃಪನು! ಎಂತವರಿಗೂ ದುರ್ಜಯನಾದ ಈ ಕರ್ಣನು! ಜಯದ್ರಥನು! ಸೋಮದತ್ತನು, ಅಶ್ವತ್ಥಾಮನು, ಇವರೆಲ್ಲರೂ ಮಹಾ ತೇಜಸ್ವಿಗಳು! ಮಹಾಧನುರ್ಧಾರಿಗಳು! ಸಮಸ್ತ ದೇವಗಣಗಳೂ

ಡನೆ ದೇವೇಂದ್ರನೇ ಬಂದರೂ ಇವರನ್ನು ಜಯಿಸಲಾರನು. ಇನ್ನು ಆ ಪಾಂಡವರು ಎಷ್ಟುಮಾತ್ರದವರು? ಅನೇಕ ರಾಜರು ಈಗ ನನಗಾಗಿ ಆ ಪಾಂಡವರನ್ನು ಇದಿರಿಸುವುದಕ್ಕೆ ಸಿದ್ಧರಾಗಿರುವರು. ಇವರಲ್ಲಿ ಒಬ್ಬೊಬ್ಬರೂ ಸುಶೀಲರು! ಶಸ್ತ್ರಧಾರಿಗಳು! ಶೂರರು! ಸಮರ್ಥರು! ಪಾಂಡವರನ್ನು ಕೊಲ್ಲುವುದಕ್ಕೆ ಒಬ್ಬೊಬ್ಬರೇ ಸಮರ್ಥರು. ಆ ಪಾಂಡವರು ನಮ್ಮವರನ್ನು ಯುದ್ಧದಲ್ಲಿ ಕಣ್ಣಿದಿರಾಗಿ ನೋಡುವುದಕ್ಕೂ ಸಮರ್ಥರಲ್ಲವೆಂದು ತಿಳಿ! ನಾನೊಬ್ಬನೇ ಆ ಪಾಂಡವರನ್ನೂ, ಅವರ ಮಕ್ಕಳನ್ನೂ ಯುದ್ಧದಲ್ಲಿ ಸಂಹರಿಸುವುದಕ್ಕೆ ಶಕ್ತನಾಗಿರುವೆನು. ಇದರಮೇಲೆ ಎಲ್ಲಾ ರಾಜರ ಸಹಾಯವೂ ನನಗೆ ಒದಗಿರುವುದು. ನನಗೆ ಪ್ರಿಯುವನ್ನುಂಟುಮಾಡಬೇಕೆಂದು ಬಂದಿರುವ ಈ ರಾಜರೆಲ್ಲರೂ ಬಲೆಯಿಂದ ಜಿಂಕೆಗಳನ್ನು ಬಂಧಿಸುವಂತೆ ಆ ಪಾಂಡವರನ್ನು ಸುತ್ತಿ ಮುತ್ತಿ ಸೆರೆಹಿಡಿದು ತರುವರೆಂದು ತಿಳಿ! ಹಾಗಿಲ್ಲವೇ ನಮ್ಮ ಕಡೆಯ ರಥಸಮೂಹಗಳಿಗೂ, ಬಾಣಪರಂಪರೆಗಳಿಗೂ ತಡೆಯಲಾರದೆ ಪಾಂಡವರು ನಿಮಿಷಮಾತ್ರದಲ್ಲಿ ಪಲಾಯನಮಾಡುವರು'' ಎಂದನು.

ಆಗ ಧೃತರಾಷ್ಟ್ರನು ''ಸಂಜಯಾ! ನೋಡಿದೆಯಾ! ಮೂಢನಾದ ನನ್ನ ಮಗನು ಹುಚ್ಚನಂತೆ ಹರಟುತ್ತಿರುವನು. ಇವನೇನೋ ಆ ಯುಧಿಷ್ಠಿರನನ್ನು ಯುದ್ಧದಲ್ಲಿ ಜಯಿಸುವುದಕ್ಕೆ ಎಂದಿಗೂ ಶಕ್ತನಲ್ಲ. ಧರ್ಮಜ್ಞರೂ, ಮಹಾತ್ಮರೂ, ಯಶಸ್ವಿಗಳೂ ಆದ ಆ ಪಾಂಡವರ ಬಲವೆಷ್ಟೆಂಬುದನ್ನು ಭೀಷ್ಮನು ಚೆನ್ನಾಗಿ ತಿಳಿದಿರುವನು ಆದರಿಂದಲೇ ಅವನು ಆ ಪಾಂಡವರೊಡನೆ ಯುದ್ಧಕ್ಕೆ ನಿಲ್ಲಬಾರದೆಂದು ಸಾರಿಸಾರಿ ಹೇಳುತ್ತಿರುವನು. ಅದು ಹೋಗಲಿ! ಸಂಜಯಾ! ಆ ಪಾಂಡವರ ಪ್ರವರ್ತನೆಯೇನೆಂಬುದನ್ನು ಚೆನ್ನಾಗಿ ಇನ್ನೂ ನನಗೆ ತಿಳಿಸು. ಉರಿಯುತ್ತಿರುವ ಬೆಂಕಿಗೆ ತುಪ್ಪವನ್ನು ಸುರಿದಂತೆ, ಮೊದಲೇ ನಮ್ಮಲ್ಲಿ ಕೋಪಗೊಂಡಿರುವ ಆ ಪಾಂಡವರನ್ನು ಮತ್ತಷ್ಟು ರೇಗಿಸಿ, ಯುದ್ಧಕ್ಕಾಗಿ ಪ್ರೇರಿಸುವವನು ಅಲ್ಲಿ ಯಾವನಾದರೂ ಉಂಟೇನು?'' ಎಂದನು. ಅದಕ್ಕೆ ಸಂಜಯನು ''ಮಹಾರಾಜಾ! ಇಲ್ಲದೆಯೇನು? ಧೃಷ್ಟದ್ಯುಮ್ನನು ಅವರಿಗೆ ಯಾವಾ

ಗಲೂ ಯುದ್ಧಕ್ಕಾಗಿ ಉದ್ಯೋಧಿಸುತ್ತಲೇ ಇರುವನು. ಅವನು ಪಾಂಡ ವರನ್ನು ಸಂಧಿಸಿದಾಗಲೆಲ್ಲ "ಯುದ್ಧಮಾಡಿರಿ! ಹೆದರಬೇಡಿರಿ! ಆ ಧೃತ ರಾಷ್ಟ್ರಪುತ್ರನಿಗಾಗಿ ಎಷ್ಟೇ ವೀರಕ್ಷತ್ರಿಯರು ಯುದ್ಧಕ್ಕೆ ಬಂದರೂ ಬರಲಿ! ಸಮುದ್ರದಲ್ಲಿರುವ ತಿಮಿಯು ಸಣ್ಣ ಮೀನುಗಳನ್ನು ಹೇಗೋ ಹಾಗೆ, ನಾನೊಬ್ಬನೇ ಅವರೆಲ್ಲರನ್ನೂ ಇದಿರಿಸಿ, ಅವರವರ ಸಮಸ್ತಸೈನ್ಯಗಳೊ ಡನೆ ಅವರನ್ನೆಲ್ಲ ತೀರಿಸಿಬಿಡುವೆನು. ಭೀಷ್ಮ, ದ್ರೋಣ, ಕೃಪ, ಕರ್ಣ, ಶಲ್ಯಾಶ್ವತ್ಥಾಮರೇ ಮೊದಲಾಗಿ ಯಾರು ಬಂದರೂ, ನಾನು ಅವರನ್ನೆಲ್ಲ ಯುದ್ಧದಲ್ಲಿ ನಿವಾರಿಸಬಲ್ಲೆನು. ಆ ದುರ್ಯೋಧನನನ್ನು ನನ್ನ ಪಾಲಿಗೆ ಬಿಟ್ಟುಬಿಡಿರಿ. ಸಮುದ್ರಜಲವನ್ನು ಅದರ ವೇಲೆಯು (ತೀರವು) ಹೇಗೋ ಹಾಗೆ, ಆ ದುರ್ಯೋಧನನ ಕಡೆಯ ಸೈನ್ಯವಾವುದೂ ಮುಂದೆ ಕಾಲಿಡದಂತೆ ನಾನು ತಡೆಯಬಲ್ಲೆನು" ಎಂದು ಧೃಷ್ಟದ್ಯುಮ್ನನು ಪಾಂಡವರನ್ನು ಹುರಿ ಗೊಳಿಸುತ್ತಿರುವನು. ಹೀಗೆ ಹೇಳುತ್ತಿರುವ ಧೃಷ್ಟದ್ಯುಮ್ನನನ್ನು ನೋಡಿ ಧರ್ಮಾತ್ಮನಾದ ಯುಧಿಷ್ಠಿರನು "ಓ ಪಾಂಚಾಲಕುಮಾರಾ! ನಿನ್ನ ಧೈರ್ಯವನ್ನೂ, ವೀರ್ಯವನ್ನೂ ನಂಬಿಯೇ ಪಾಂಡವರಾದ ನಾವೂ, ಪಾಂಚಾಲರೂ ಈ ಯುದ್ಧಕ್ಕೆ ಸಿದ್ಧರಾಗಿರುವೆವು. ನಮ್ಮೆಲ್ಲರನ್ನೂ ಈ ಕಷ್ಟದಿಂದ ಉದ್ಧರಿಸಬೇಕಾದ ಭಾರವು ನಿನ್ನದೇ! ಓ ಮಹಾಬಾಹೂ! ನೀನು ಕ್ಷತ್ರಧರ್ಮದಲ್ಲಿ ನೆಲೆಗೊಂಡವನೆಂದೂ, ಕೌರವರನ್ನು ನಿಗ್ರಹಿಸುವು ದಕ್ಕೆ ನೀನೊಬ್ಬನೇ ನಮಗೆ ಸಾಕಾಗಿರುವೆಯೆಂದೂ ನಾನು ಬಲ್ಲೆನು. ಮುಂದೆ ಕೌರವರು ನಮಗಿದಿರಾಗಿ ಯುದ್ಧಕ್ಕೆ ಬಂದು ನಿಂತಾಗ, ನೀನು ಮಾಡಬೇಕೆಂದಿರುವ ಕಾರ್ಯವೆಲ್ಲವೂ ನಮಗೆ ಶ್ರೇಯಸ್ಕರವೇ ಎಂಬುದ ರಲ್ಲಿ ಸಂದೇಹವಿಲ್ಲ! ಈ ಯುದ್ಧದಿಂದ ಹೆದರಿಹೋದವರೂ, ಅದರಲ್ಲಿ ನೊಂದವರೂ, ತಮಗೆ ರಕ್ಷಣೆಯನ್ನು ಕೋರತಕ್ಕವರೂ, ನಿನ್ನಂತೆ ಪೌರು ಷವನ್ನು ತೋರಿಸತಕ್ಕ ಶೂರನನ್ನು ಸಹಸ್ರಧನಕ್ಕಾದರೂ ಕೊಂಡುಕೊಳ್ಳ ಬೇಕೆಂಬುದು ನೀತಿಜ್ಞರ ಮತವು. ಅಂತಹ ಗುಣಗಳೆಲ್ಲವೂ ನಿನ್ನಲ್ಲಿವೆ. ನೀನು ಶೂರನು! ವೀರನು! ಮಹಾಪರಾಕ್ರಮಿ! ಯುದ್ಧಕ್ಕಾಗಿ ಭಯಪೀ ಡಿತರಾದವರನ್ನು ಕಾಪಾಡಬಲ್ಲವನೆಂಬುದರಲ್ಲಿ ಸಂದೇಹವಿಲ್ಲ" ಎಂದನು. ಧರ್ಮರಾಜನು ಹೇಳಿದ ಈ ಮಾತನ್ನು ಕೇಳಿದಮೇಲೆ, ಧೃಷ್ಟದ್ಯುಮ್ನನು

ನಿರ್ಭಯವಾಗಿ ನನ್ನನ್ನು ಕುರಿತು "ಓ ಸಂಜಯಾ! ನೀನು ವಿಳಂಬಮಾಡದೆ ಈಗಲೇ ಹೊರಡು! ಆ ದುರ್ಯೋಧನನ ಸಭೆಗೆ ಹೋಗಿ, ಅವನ ಸಹಾಯಕ್ಕಾಗಿ ಅಲ್ಲಿ ಬಂದು ನೆರೆದಿರುವ ಎಲ್ಲಾ ರಾಜರ ಮುಂದೆ ಈಗ ನಾನು ಹೇಳುವ ಮಾತನ್ನು ತಿಳಿಸು. ಕುರುಗಳು, ಬಾಹ್ಲೀಕರು, ಪ್ರತೀಪದೇಶದವರು, ಶರದ್ವತಪುತ್ರನಾದ ಕೃಪನು, ಕರ್ಣನು, ದ್ರೋಣಾಶ್ವತ್ಥಾಮರು, ಜಯದ್ರಥನು, ದುಶ್ಶಾಸನನು, ದುರ್ಯೋಧನನು, ವಿಕರ್ಣನು. ಪಿತಾಮಹನಾದ ಭೀಷ್ಮನು, ಇವರೆಲ್ಲರೂ ನೆರೆದಿರುವಾಗಲೇ ಈ ಮಾತನ್ನು ನೀನು ತಿಳಿಸಬೇಕು. "ದೇವತೆಗಳಿಂದ ರಕ್ಷಿತನಾದ ಅರ್ಜುನನ ಕೈಯಲ್ಲಿ ಸಿಕ್ಕಿ ಸಾಯಬೇಡಿರಿ! ಅದಕ್ಕೆ ಮೊದಲೇ ಸಾಧುವಾದ ಮನುಷ್ಯನೊಬ್ಬನನ್ನು ಧರ್ಮರಾಜನ ಬಳಿಗೆ ಕಳುಹಿಸಿ ಅವನನ್ನು ಬೇಡಿಕೊಳ್ಳಿರಿ! ಅವನಿಗೆ ಸೇರಬೇಕಾದ ರಾಜ್ಯಗಳನ್ನು ಒಡನೆಯೇ ಕೊಟ್ಟುಬಿಡಿರಿ! ಸವ್ಯಸಾಚಿಗೆ ಸಾಟಿಯಾದ ಯುದ್ಧವೀರನು ಈ ಭೂಮಿಯಲ್ಲಿ ಬೇರೊಬ್ಬನಿಲ್ಲ! ಗಾಂಡೀವಧನುರ್ಧಾರಿಯಾದ ಆ ಅರ್ಜುನನ ದಿವ್ಯರಥವು ದೇವತೆಗಳಿಂದ ರಕ್ಷಿತವಾದುದು. ಮನುಷ್ಯಮಾತ್ರನಿಂದ ಅವನನ್ನು ಜಯಿಸುವುದು ಸಾಧ್ಯವಲ್ಲ. ಅವನೊಡನೆ ಯುದ್ಧಕ್ಕಾಗಿ ಬಯಸಬೇಡಿರಿ" ಎಂದು ಹೇಳು" ಎಂದನು.

ಇದು ಐವತ್ತೇಳನೆಯ ಅಧ್ಯಾಯವು.

ಧೃತರಾಷ್ಟ್ರನು ಭೀಷ್ಮಾದಿಗಳಿಗೆ ಸಮ್ಮತವಲ್ಲದ ಯುದ್ಧಕ್ಕೆ ಪ್ರವರ್ತಿಸಬಾರದೆಂದು ದುರ್ಯೋಧನನಿಗೆ ಹೇಳಲು, ಅವನು ಕರ್ಣದುಶ್ಶಾಸನರ ಸಹಾಯದಿಂದಲೇ ತಾನು ಪಾಂಡವರನ್ನು ಜಯಿಸುವುದಾಗಿ ಹೇಳಿದುದು. ಧೃತರಾಷ್ಟ್ರನ ಬುದ್ಧಿವಾದಗಳು.

ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಆ ಧರ್ಮರಾಜನಾದರೋ ಉತ್ತಮಕ್ಷತ್ರಿಯ ತೇಜಸ್ಸುಳ್ಳವನು. ಕುಮಾರವಯಸ್ಸಿನಿಂದಲೇ ಅರ್ಜುನನು ಮಂತ್ರಾಸ್ತ್ರಗಳಲ್ಲಿ ಪಳಗಿದವನು. ಅಂತವರೊಡನೆ

ಮೂಢರಾದ ನನ್ನ ಮಕ್ಕಳು ಯುದ್ಧವನ್ನು ಬಯಸುವರು. ನಾನು ಎಷ್ಟು ಗೋಳಿಟ್ಟರೂ ಅವರು ಕೇಳುವಹಾಗಿಲ್ಲವಲ್ಲಾ! ಏನು ಮಾಡಲಿ? ಅಪ್ಪ ದುರ್ಯೋಧನಾ! ನೀನು ಭರತಕುಲಕ್ಕೆಲ್ಲ ಮೇಲೆನಿಸಿದವನಲ್ಲವೆ! ಯುದ್ಧ ಪ್ರಯತ್ನವನ್ನು ಬಿಟ್ಟುಬಿಡು. ಜಯಾಪಜಯದಲ್ಲಿ ಯಾರಿಗೂ ನಂಬಿಕೆ ಯಿಲ್ಲದ ಯುದ್ಧವನ್ನು ಹಿರಿಯರು ಆದರಿಸುವುದಿಲ್ಲ. ಮಂತ್ರಿಗಳೊಡನೆ ಸೇರಿ ಸುಖವಾಗಿ ಜೀವಿಸುವುದಕ್ಕೆ ನಿನಗೆ ಅರ್ಧರಾಜ್ಯವೇ ಸಾಕು! ಪಾಂ ಡುವಿನ ಮಕ್ಕಳಿಗೆ ಉಚಿತವಾದ ಭಾಗಗಳನ್ನು ಕೊಟ್ಟುಬಿಡು! ಕುರು ಗಳೆಲ್ಲರೂ ಇದೇ ನ್ಯಾಯವೆಂದು ಅಭಿಪ್ರಾಯಪಡುವರು. ಮಹಾತ್ಮರಾದ ಪಾಂಡವರೊಡನೆ ಸೇರಿ ಸಮಾಧಾನದಿಂದ ಬಾಳುವುದೇ ನಮಗೆ ಒಳ್ಳೆಯ ದೆಂದು ಎಲ್ಲರ ಅಭಿಪ್ರಾಯವು. ಅಪ್ಪ ದುರ್ಯೋಧನಾ! ನಿನ್ನ ಸೇನಾ ಬಲವೇನೆಂಬುದನ್ನು ನೀನೇ ಚೆನ್ನಾಗಿ ನೋಡು! ನಿನಗೆ ನಾಶಕಾಲವು ಸಮಿಾಪಿಸಿತೆಂದೇ ಕಾಣುತ್ತಿದೆ. ನೀನಾದರೋ ಮೋಹದಿಂದ ಅದೊಂದ ನ್ನೂ ತಿಳಿಯಲಾರೆ. ನನಗೇನೋ ಯುದ್ಧವೆಂಬುದು ಸರ್ವಥಾ ಸಮ್ಮತ ವಿಲ್ಲ. ಈ ಬಾಹ್ಲೀಕನೂ ಅದಕ್ಕೆ ಇಷ್ಟಪಡುವುದಿಲ್ಲ. ಭೀಷ್ಮನಾಗಲಿ, ದ್ರೋಣನಾಗಲಿ, ಅಶ್ವತ್ಥಾಮನಾಗಲಿ, ಸಂಜಯನಾಗಲಿ ಯಾರೂ ಯುದ್ಧ ವನ್ನು ಅನೋದಿಸುವುದಿಲ್ಲ. ಸೋಮದತ್ತನೂ, ಶಲನೂ, ಕೃಪನೂ, ಸತ್ಯ ವ್ರತನೂ, ಪುರುಮಿತ್ರನೂ, ಜಯನೂ, ಭೂರಿಶ್ರವಸ್ಸೂ ಇವರಲ್ಲಿ ಯಾರೊ ಬ್ಬರೂ ಯುದ್ಧಕ್ಕೆ ಇಷ್ಟಪಡುವುದಿಲ್ಲ. ಕುರುಗಳು ಯಾರುಯಾರನ್ನು ತಮ್ಮ ಸಹಾಯಕ್ಕಾಗಿ ನಂಬಿಕೊಂಡಿರುವರೋ, ಅವರಲ್ಲಿ ಯಾರೂ ಮನಃ ಪೂರ್ವಕವಾಗಿ ಯುದ್ಧವನ್ನು ಆದರಿಸುವವರಿಲ್ಲ. ಹೀಗಿರುವಾಗ ನೀನೊ ಬ್ಬನುಮಾತ್ರ ಆ ಯುದ್ಧಕ್ಕಾಗಿ ಹೀಗೇಕೆ ಆತುರಪಡುವೆ? ನೀನು ನಿನ್ನ ಸ್ವಬುದ್ಧಿಯಿಂದ ಹೀಗೆ ಹೋಗುವವನಲ್ಲ. ಕರ್ಣನೂ, ಪಾಪಾತ್ಮನಾದ ದುಶ್ಶಾಸನನೂ, ಶಕುನಿಯೂ ನಿನ್ನಿಂದ ಇಂತಹ ಕೆಲಸಗಳನ್ನು ಮಾಡಿ ಸುವರು" ಎಂದನು.

ಆಗ ದುರ್ಯೋಧನನು "ಜನಕಾ! ನಾನು ಇವರು ಯಾರಲ್ಲಿಯೂ ಜಯಾಭಿಲಾಷೆಯನ್ನಿಟ್ಟಿಲ್ಲ. ನಿನ್ನನ್ನಾಗಲಿ, ದ್ರೋಣಾಶ್ವತ್ಥಾಮರನ್ನಾ

ಗಲಿ, ಸಂಜಯುನನ್ನಾಗಲಿ ನಂಬಿಕೊಂಡೇ ನಾನು ಈ ಯುದ್ಧಕ್ಕೆ ಹೊಡಿ ದವನಲ್ಲ. ಈ ಭೀಷ್ಮನನ್ನೂ, ಕಾಂಭೋಜರನ್ನೂ, ಕೃಪನನ್ನೂ, ಬಾಹ್ಲೀ ಕನನ್ನೂ, ಸತ್ಯವ್ರತನನ್ನೂ, ಪುರುಮಿತ್ರನನ್ನೂ ನಾನು ನಂಬಿಕೊಂಡಿಲ್ಲ. ಇನ್ನು ನಿನ್ನ ಕಡೆಯುವರು ಯಾರಲ್ಲಿಯೂ ನಾನು ಭಾರವನ್ನಿಟ್ಟು ಈ ಯುದ್ಧಕ್ಕಾಗಿ ಕರೆಸಿದವನಲ್ಲ. ನಾನೂ, ಈ ಕರ್ಣನೂ ಇಬ್ಬರೇ ಸೇರಿ, ಈ ರಣಯಜ್ಞವನ್ನಾರಂಭಿಸಿ, ನಾವಿಬ್ಬರೇ ದೀಕ್ಷಿತರಾಗಿ, ಆ ಯುಧಿಷ್ಠಿರನನ್ನು ಯಜ್ಞಪಶುವನ್ನಾಗಿ ಮಾಡಿ, ಯಜ್ಞಕಾರ್ಯವನ್ನು ಪೂರಯಿಸಿಬಿಡು ವೆವು. ನನ್ನ ರಥವೇ ಆ ಯಜ್ಞಕ್ಕೆ ವೇದಿಕೆ! ನನ್ನ ಕತ್ತಿಯೇ ಸ್ರುವವು! ನನ್ನ ಗದೆಯೇ ಸ್ರುಕ್ಕು! ನನ್ನ ಯುದ್ಧಕವಚವೇ ಕೃಷ್ಣಾಜಿನವು! ನನ್ನ ನಾಲ್ಕು ಕುದುರೆಗಳೇ ನಾಲ್ಕುಮಂದಿ ಹೋತೃಗಳು! (ಋತ್ವಿಕ್ಕುಗಳು) ನನ್ನ ಬಾಣಗಳೇ ದರ್ಭೆಗಳು! ನನ್ನ ಯಶಸ್ಸೇ ಹವಿಸ್ಸು! ಓ ರಾಜೇಂ ದ್ರಾ! ಈ ಆತ್ಮಯಜ್ಞವನ್ನಾರಂಭಿಸಿ, ಯುಧಿಷ್ಠಿರನನ್ನು ಯುದ್ಧದಲ್ಲಿ ಜಯಿಸಿ, ವೈರಿಗಳನ್ನು ನಿರ್ಮೂಲಮಾಡಿ, ಜಯಲಕ್ಷ್ಮಿಯನ್ನು ಸಾಧಿಸಿ ಕರುವೆವು ನೋಡು! ನಾನು, ನನ್ನ ತಮ್ಮನಾದ ದುಶ್ಶಾಸನನು, ಕರ್ಣನು, ನಾವು ಮೂವರೇ ಆ ಪಾಂಡವರನ್ನು ಯುದ್ಧದಲ್ಲಿ ಕೊಲ್ಲುವೆವು. ನಾನು ಆ ಪಾಂಡವರನ್ನು ಕೊಂದು ಸಮಸ್ತ ಭೂಮಿಯನ್ನೂ ಏಕಾಧಿಪತಿ ಯಾಗಿ ಆಳಬೇಕು, ಇಲ್ಲವೇ ನನ್ನನ್ನು ಕೊಂದು ಆ ಪಾಂಡವರೇ ಈ ಭೂಮಿಯನ್ನೆಲ್ಲ ಅನುಭವಿಸಲಿ! ಮಹಾರಾಜಾ! ನಾನು ನನ್ನ ಜೀವ ವನ್ನಾಗಲಿ, ರಾಜ್ಯವನ್ನಾಗಲಿ, ಧನವನ್ನಾಗಲಿ, ನನ್ನ ಸರ್ವಸ್ವವನ್ನಾಗಲಿ, ಬಿಡುವೆನೇಹೊರತು, ಆ ಪಾಂಡವರೊಡನೆ ಮಾತ್ರ ಕೂಡಾಡಲಾರೆನು. ಹರಿತವಾದ ಒಂದು ಸೂಜಿಯ ಮೊನೆಯಿಂದ ಕೀರಿದಷ್ಟು ನೆಲವನ್ನಾದರೂ ನಾನು ಪಾಂಡವರಿಗೆ ಬಿಟ್ಟುಕೊಡಲಾರೆನು" ಎಂದನು. ಅದಕ್ಕಾ ಧೃತ ರಾಷ್ಟ್ರನು "ಎಲೈ ಮಕ್ಕಳಿರಾ! ನಿಮ್ಮೆಲ್ಲರಿಗಾಗಿ ನಾನು ವ್ಯಸನಪಡು ವೆನು. ಈ ದುರ್ಯೋಧನನನ್ನೇನೋ ನಾನು ತೊರೆದುಬಿಟ್ಟೆನು! ನೀವೂ ಆ ಮೂರ್ಖನನ್ನೇ ಹಿಂಬಾಲಿಸುವುದಾದರೆ, ಅವನೊಡನೆ ನೀವೂ ಯಮ ಪುರಿಗೆ ಹೋಗಬೇಕಾದುದೇ ನಿಶ್ಚಯವು. ಜಿಂಕೆಗಳ ಮಂದೆಗೆ ಹುಲಿಗಳು ನುಗ್ಗಿದಂತೆ, ಆ ಪಾಂಡವರು ನಿಮ್ಮ ಸೈನ್ಯದಲ್ಲಿ ನುಗ್ಗಿ ಮುಖ್ಯಮುಖ್ಯ

ರಾದವರನ್ನೇ ಹಿಡಿದು ಕೊಲ್ಲುವರು. ಈಗ ನಮಗೇನೋ ಕಾಲವೇ ವಿಪ ರೀತವಾಗಿ ಕಾಣುತ್ತಿದೆ! ಮುಂದಿನ ಯುದ್ಧದಲ್ಲಿ ದೀರ್ಘಬಾಹುವಾದ ಆ ಸಾತ್ಯಕಿಯು ಕೌರವಸೇನೆಯೆಂಬ ಸ್ತ್ರೀಯನ್ನು ಎಳೆದಾಡಿ, ಭಂಗಿಸಿ, ತಿಕ್ಕಿ ಕೆಡಹುವುದರಲ್ಲಿ ಸಂದೇಹವಿಲ್ಲ. ಮತ್ತು ಶ್ರೀಕೃಷ್ಣನು ಆ ಅರ್ಜು ನನ ಬಲವನ್ನೂ, ಐಶ್ವರ್ಯವನ್ನೂ ಮೇಲೆಮೇಲೆ ಹೆಚ್ಚಿಸಲು ಬದ್ಧಕಂಕಣ ನಾಗಿರುವನು. ಶಿನಿ ಪುತ್ರನಾದ ಸಾತ್ಯಕಿಯು, ರಣರಂಗದಲ್ಲಿ ಬೀಜಗ ಳನ್ನು ಬಿತ್ತಿದಂತೆ ತನ್ನ ಬಾಣಗಳನ್ನು ಹರಡುವನು. ಮುಂದೆ ಯುದ್ಧ ದಲ್ಲಿ ಆ ಭೀಮನು ಸೇನಾಮುಖದಲ್ಲಿ ತಲೆದೋರುವನು. ಪಾಂಡವರ ಕಡೆ ಯವರೆಲ್ಲರೂ, ಸುರಕ್ಷಿತವಾದ ಕೋಟೆಯನ್ನಾಶ್ರಯಿಸುವಂತೆ ಎಂತವ ರಿಗೂ ಭಯಪಡದ ಆ ಭೀಮನನ್ನು ಆಶ್ರಯಿಸಿರುವರು.

ಎಲ ಮೂಢ ದುರ್ಯೋಧನಾ! ಮುಂದೆ ಆ ಭೀಮನು ನಮ್ಮ ಆನೆ ಗಳ ಕೊಂಬನ್ನು ಮುರಿದು, ಅವುಗಳ ಕುಂಭಸ್ಥಳವನ್ನು ಭೇದಿಸಿ, ಮುರಿ ದುಬಿದ್ದ ಬೆಟ್ಟಗಳಂತೆ ಅವುಗಳನ್ನು ರಣರಂಗದಲ್ಲಿ ಕೊಂದು ಕೆಡಹುವು ದನ್ನು ನೋಡಿದಾಗ ನೀನು ನನ್ನ ಮಾತನ್ನು ನೆನೆಸಿಕೊಳ್ಳುವೆ. ಭೀ ಮನ ಸ್ಪರ್ಶಮಾತ್ರಕ್ಕೇ ಹೆದರಿ ನಡುಗುವ ನೀನು ಅವನನ್ನು ಕಂಡೊಡನೆ ನಾನು ಹೇಳಿದುದನ್ನು ನೆನೆಸಿಕೊಳ್ಳುವೆ. ಎಲೈ! ಕುಮಾರರೇ! ಮತ್ತೊ ಮ್ಮೆ ಹೇಳುವೆನು. ನಿಮಗೆ ಮಹತ್ತಾದ ಭಯವು ಇದಿರುನೋಡುತ್ತಿದೆ. ಈಗಲೇ ನೀವು ಪಾಂಡವರೊಡನೆ ಶಾಂತಿಯನ್ನು ಮಾಡಿಕೊಳ್ಳದಿದ್ದರೆ, ಆಮೇಲೆ ಭೀಮನ ಗದೆಯಿಂದ ಹತರಾಗಿ ರಣರಂಗದಲ್ಲಿ ಮಲಗಿ ಶಾಂತರಾ ಗಬೇಕಾಗುವುದು. ದುರ್ಯೋಧನಾ! ಮಹಾರಣ್ಯವನ್ನು ಕಡಿದು ಕೆಡಹು ವಂತೆ, ಭೀಮನು ಕುರುಸೈನ್ಯವನ್ನು ಕತ್ತರಿಸಿ ಕೆಡಹುವಾಗ, ನಾನು ಈಗ ಏನು ಹೇಳಿದೆನೆಂದು ನೆನೆಸಿಕೊಳ್ಳುವೆ'' ಎಂದನು.

ಓ ಜನಮೇಜಯರಾಜಾ! ಧೃತರಾಷ್ಟ್ರನು ಆ ಸಭೆಯಲ್ಲಿದ್ದವರೊ ಡನೆ ಇಷ್ಟು ಮಾತನ್ನು ಹೇಳಿ, ತಿರುಗಿ ಸಂಜಯನನ್ನು ಪ್ರಶ್ನೆಮಾಡುವನು.

ಇದು ಐವತ್ತೆಂಟನೆಯ ಅಧ್ಯಾಯವು.



ಸಂಜಯನು ಅರ್ಜುನನು ಹೇಳಿಕಳುಹಿಸಿದ ಮಾತುಗಳನ್ನು ಧೃತರಾಷ್ಟ್ರನಿಗೆ ತಿಳಿಸಿದುದು.

ತಿರುಗಿ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಆ ಕೃಷ್ಣನ ಮಾತುಗಳಾದಮೇಲೆ ಅರ್ಜುನನು ಹೇಳಿಕಳುಹಿಸಿದ ಮಾತುಗಳಲ್ಲ ಇನ್ನೇನಾದರೂ ಉಳಿದಿದ್ದರೆ ಅದನ್ನೂ ತಿಳಿಸಿಬಿಡು. ನನಗೆ ಅದನ್ನು ಕೇಳಬೇಕೆಂಬ ಆತುರವು ಹೆಚ್ಚಾಗಿರುವುದು" ಎಂದನು. ಅದಕ್ಕಾ ಸಂಜಯನು "ಮಹಾರಾಜಾ! ಕೃಷ್ಣನು ಹೇಳಿದ ಮಾತುಗಳನ್ನೆಲ್ಲಾ ಕೇಳಿದಮೇಲೆ ಅರ್ಜುನನು, ಅಲ್ಲಿ ಕೃಷ್ಣನೂ ಕೇಳುತ್ತಿರುವಹಾಗೆಯೇ ನಮ್ಮ ಕಡೆಯಲ್ಲಿ ಪ್ರತಿಯೊಬ್ಬರ ಕ್ಷೇಮಲಾಭಗಳನ್ನೂ ವಿಚಾರಿಸಿ, ತನ್ನ ವಂದನವನ್ನು ತಿಳಿಸಬೇಕೆಂದು ಹೇಳಿದನು." ಅವನು ನನ್ನನ್ನು ಕುರಿತು "ಸಂಜಯಾ! ನಮ್ಮ ಪಿತಾಮಹನಾದ ಭೀಷ್ಮನು, ಧೃತರಾಷ್ಟ್ರನು, ದ್ರೋಣಾಚಾರ್ಯನು, ಕೃಪಾಚಾರ್ಯನು, ಮಹಾರಾಜನಾದ ಶಲ್ಯನು, ಬಾಹ್ಲೀಕನು, ಅಶ್ವತ್ಥಾಮನು, ಸೋಮದತ್ತಪುತ್ರನು, ಶಕುನಿ, ದುಶ್ಶಾಸನನು, ಶಲನು, ಪುರುಮಿತ್ರನು, ವಿವಿಂಶತಿ, ವಿಕರ್ಣನು, ಚಿತ್ರಸೇನನು, ಜಯತ್ಸೇನನು, ಅವಂತಿದೇಶದ ವಿಂದಾನುವಿಂದರು, ಪುರುವಂಶದ ದುರ್ಮುಖನು, ಸಿಂಧುರಾಜನು, ದುಸ್ಸಹನು, ಭೂರಿಶ್ರವಸ್ಸು, ಭಗದತ್ತನು, ಪುರುವಂಶದ ಜಲಸಂಧನು, ಇನ್ನೂ ಅಲ್ಲಿ ಕೌರವರ ಪ್ರೀತಿಗಾಗಿ ಆ ಕಡೆಗೆ ಬಂದು ಸೇರಿರುವ ಯಾವಯಾವ ರಾಜರುಂಟೋ, ಅವರೆಲ್ಲರಿಗೂ ಅವರವರ ಯೋಗ್ಯತಾನುಸಾರವಾಗಿ ನನ್ನ ಕುಶಲಪ್ರಶ್ನವನ್ನೂ, ವಂದನವನ್ನೂ ತಿಳಿಸು. ದುರ್ಯೋಧನನೇನೋ ಅವರೆಲ್ಲರನ್ನೂ ನಮ್ಮ ಕೋಪಾಗ್ನಿಯಲ್ಲಿ ಆಹುತಿಮಾಡುವುದಕ್ಕಾಗಿಯೇ ಕರೆಸಿರುವನೆಂಬುದು ನಿಶ್ಚಯವು! ಓ ಸಂಜಯಾ! ಆ ದುರ್ಯೋಧನನು, ಸ್ವಲ್ಪವಾದರೂ ಸಹನವಿಲ್ಲದವನು. ಪಾಪಪ್ರವರ್ತಕರಿಗೆಲ್ಲಾ ಪ್ರಧಾನನೆನಿಸಿದವನು. ದುರ್ಬುದ್ಧಿಯುಳ್ಳವನು, ಅತ್ಯಂತ ಲೋಭಬುದ್ಧಿಯುಳ್ಳವನು. ನೀನು ಸಮಸ್ತರಾಜರಮುಂದೆ ಅವನಿಗೂ, ಅವನ ಮುಖ್ಯ ಮಂತ್ರಿಗಳಿಗೂ, ಈಗ, ನಾನು ಹೇಳುವ ಮಾತುಗಳನ್ನೆಲ್ಲ ಸಮಗ್ರವಾಗಿ ತಿಳಿಸಬೇಕು" ಎಂದು ಹೇಳಿ, ನನ್ನನ್ನು ಪ್ರೇ

ಮದಿಂದ ಆಲಿಂಗಿಸಿ, ಸಮೀಪದಲ್ಲಿದ್ದ ಕೃಷ್ಣನನ್ನು ನೋಡಿ, ಧರ್ಮಯುಕ್ತ ವಾಗಿಯೂ, ಸಾರವತ್ತಾಗಿಯೂ ಇರುವ ಈ ಮಾತನ್ನು ಹೇಳಿದನು. "ಓ ಸಂಜಯಾ! ಯದುವೀರನೂ, ಮಹಾತ್ಮನೂ ಆದ ಶ್ರೀಕೃಷ್ಣನು ಹೇಳಿದ ಮಾತುಗಳನ್ನೆಲ್ಲ ಕೇಳಿದೆಯಷ್ಟೆ? ಅವೆಲ್ಲವೂ ನಿನ್ನ ಸ್ಮರಣೆಯಲ್ಲಿರುವು ದಷ್ಟೆ? ಅದನ್ನೂ ಮತ್ತು ಈಗ ನಾನು ಹೇಳುವ ಮಾತನ್ನೂ ಎಲ್ಲಾ ರಾಜರೂ ನೆರೆದಿರುವಾಗ ನೀನು ದುರ್ಯೋಧನನಿಗೆ ತಿಳಿಸು! 'ಎಲೈ ಧಾರ್ತ ರಾಷ್ಟ್ರರೇ! ಮುಂದೆ ಮಹತ್ತಾದ ನರಯಜ್ಞವೊಂದು ನಡೆಯುವುದು. ನನ್ನ ಬಾಣಗಳೆಂಬ ಬೆಂಕಿಯ ಹೊಗೆಯಿಂದಲೂ, ರಥನೇಮಿಧ್ವನಿಗಳೆಂಬ ಮಂತ್ರಗಳಿಂದಲೂ, ಪ್ರವರ್ತಿಸುವ ಆ ಯಾಗದಲ್ಲಿ, ಶತ್ರುಗಳ ಶಸ್ತ್ರಬಲ ವನ್ನೆಲ್ಲಾ ನುಂಗಿಬಿಡತಕ್ಕ ನನ್ನ ಗಾಂಡೀವಧನುಸ್ಸೆಂಬ ಸ್ರುವದಿಂದ, ನೀವೆ ಲ್ಲರೂ ಆಹುತಿಯಾಗದಂತೆ ಈಗಲೇ ಎಚ್ಚರತೆಗೆದುಕೊಳ್ಳಿರಿ! ನೀವೆಲ್ಲರೂ ಸೇರಿ ಈ ಅಪಾಯದಿಂದ ತಪ್ಪಿಸಿಕೊಳ್ಳುವುದಕ್ಕೆ ಅನುಕೂಲವಾದ ಪ್ರಯ ತ್ನವನ್ನು ಅಕ್ಕರೆಯಿಂದ ಮಾಡಿರಿ! ಈಗ ನೀವು ನಮ್ಮಣ್ಣನಾದ ಯುಧಿ ಷ್ಠಿರನಿಗೆ ಸೇರಬೇಕಾದ ಅರ್ಧರಾಜ್ಯವನ್ನು ಕೊಡದಿದ್ದರೆ, ರಥ, ಗಜ, ತುರಗ, ಪದಾತಿಗಳೆಂಬ ನಿಮ್ಮ ಚತುರಂಗಸೈನ್ಯದೊಡನೆ ನಿಮ್ಮನ್ನೂ ಕೂಡಿ ಸಿ, ನನ್ನ ತೀಕ್ಷ್ಣಬಾಣಗಳಿಂದ ಅಮಂಗಳಕರವಾದ ಆ ಯಮದಿಕ್ಕಿನ ಮಾರ್ಗವಾಗಿ ಸಾಗಿಸಿಬಿಡುವೆನು''

ಓ ಮಹಾರಾಜಾ! ಅರ್ಜುನನು ಈ ಮಾತನ್ನು ಹೇಳಿದಮೇಲೆ, ನಾನು ಕೃಷ್ಣನನ್ನೂ, ಅರ್ಜುನನನ್ನೂ ನಮಸ್ಕರಿಸಿ, ಅವರ ಅನುಮತಿ ಯನ್ನು ಪಡೆದು, ಅವರ ಸಂದೇಶವನ್ನು ನಿನಗೆ ತಿಳಿಸುವುದಕ್ಕಾಗಿ ಒಡ ನೆಯೇ ಇಲ್ಲಿಗೆ ಆತುರದಿಂದ ಹೊರಟುಬಂದೆನು" ಎಂದನು.

ಇದು ಐವತ್ತೊಂಭತ್ತನೆಯ ಅಧ್ಯಾಯವು.

ಧೃತರಾಷ್ಟ್ರನು ತಮ್ಮ ಮತ್ತು ಶತ್ರುಗಳ ಬಲಾಬಲವನ್ನು ಯೋಚಿಸಿ, ಪಾಂಡವರಿಗೆ ದೇವತೆಗಳ ಬಲವಿರುವುದ ರಿಂದ, ಅವರೊಡನೆ ಸಂಧಿಮಾಡಿಕೊಳ್ಳುವುದೇ ತನ್ನ ಅಭಿಮತವೆಂದು ದುರ್ಯೋಧನ ನಿಗೆ ತಿಳಿಸಿದುದು.

ಓ ಜನಮೇಜಯರಾಜಾ! ಕಣ್ಣಿಲ್ಲದ ಕುರುಡನಾಗಿದ್ದರೂ, ಪ್ರಜ್ಞೆ ಯೇ ಕಣ್ಣಾಗಿ ಉಳ್ಳ ಆ ಧೃತರಾಷ್ಟ್ರನು, ಸಂಜಯನ ಮಾತುಗಳನ್ನೆಲ್ಲ ಕೇಳಿದಮೇಲೆ, ಆ ಮಾತುಗಳ ಗುಣದೋಷಗಳನ್ನು ತನ್ನೊಳಗೆ ತಾನೇ ಆಲೋಚಿಸತೊಡಗಿದನು. ಪುತ್ರಮೋಹವಶನಾಗಿದ್ದರೂ, ಸಹಜವಾಗಿ ಧೀಮಂತನೂ, ವಿವೇಕಿಯೂ ಆದ ಆ ಧೃತರಾಷ್ಟ್ರನು, ಬಹಳ ಸೂಕ್ಷ್ಮ ದೃಷ್ಟಿಯಿಂದ ಕೃಷ್ಣಾರ್ಜುನರು ಹೇಳಿಕಳುಹಿಸಿದ ಮಾತುಗಳ ಗುಣ ದೋಷಗಳನ್ನೆಲ್ಲ ವಿಮರ್ಶಿಸಿದನು. ಅವುಗಳ ಬಲಾಬಲವನ್ನೂ ನಿಶ್ಚಯಿ ಸಿಕೊಂಡನು. ಹೀಗೆ ಪಾಂಡವರ ಸಂದೇಶದಲ್ಲಿರುವ ಗುಣಾವಗುಣಗಳನ್ನು ಯೋಚಿಸಿದಮೇಲೆ, ತಮಗೂ ಪಾಂಡವರಿಗೂ ಇರುವ ಬಲಾಬಲತಾರ ತಮ್ಯವೇನೆಂಬುದನ್ನು ಮನಸ್ಸಿನಲ್ಲಿ ಗುಣಿಸಿದನು. ಪಾಂಡವರಲ್ಲಿ ಪೌರು ಷವೂ, ದೈವಬಲವೂ ಎರಡೂ ಕಲೆತಿರುವುದನ್ನು ಹೋಲಿಸಿದಾಗ, ಕೌರವರ ಬಲವು ಬಹಳ ಅಲ್ಪವಾದುದೆಂದು ಅವನಿಗೆ ತೋರಿತು ಆಗ ದುರ್ಯೋ ಧನನನ್ನು ಕುರಿತು ಹಿತವಾದಗಳನ್ನು ಹೇಳತೊಡಗಿದನು. "ಓ ದುರ್ಯೋ ಧನಾ! ನನಗೇನೋ ಈ ಯುದ್ಧದ ಚಿಂತೆಯು ಬಿಟ್ಟುಹೋಗದು! ಅಡಿ ಗಡಿಗೆ ಬಾಧಿಸುತ್ತಲೇ ಇರುವುದು. ನನ್ನ ಮನಸ್ಸಿನ ಭಾವವೆಲ್ಲ ನಿಜವಾಗಿ ಪ್ರತ್ಯಕ್ಷದಂತೆಯೇ ಕಾಣುತ್ತಿದೆ. ನಾನು ಅನುಮಾನದಿಂದ ಹೇಳುವುದಿಲ್ಲ. ಯಾವ ಪ್ರಾಣಿಯಾದರೂ ಮಕ್ಕಳಲ್ಲಿ ಪ್ರೀತಿಯನ್ನು ತೋರಿಸುವುದು ಸಹ ಜವೇ! ಪ್ರತಿಯೊಂದು ಪ್ರಾಣಿಯೂ, ತನ್ನಿಂದಾದಮಟ್ಟಿಗೆ ತನ್ನ ಮಕ್ಕಳಿಗೆ ಕ್ಷೇಮವನ್ನೂ, ಪ್ರಿಯವನ್ನೂ ಉಂಟುಮಾಡುವುವು. ಉಪಕಾರಿಗಳ ಸ್ವಭಾವವೋ, ಎಲ್ಲರ ವಿಷಯದಲ್ಲಿಯೂ ಹೀಗೆಯೇ ಇದೆ. ಸತ್ಪುರುಷರು ತಮಗೆ ಎಂದಾದರೂ ಒಮ್ಮೆ ಉಪಕಾರಮಾಡಿದವರಿಗೆ ಪ್ರಿಯವಾದ

ಕಾರ್ಯವನ್ನು ತಮ್ಮಿಂದಾದಮಟ್ಟಿಗೆ ಮಾಡದೆ ಇರಲಾರರು. ಇಂತಹ ಪ್ರತ್ಯುಪಕಾರಗಳಿಗೆ ಪಾಂಡವರು ನಾನಾ ಕಡೆಯಿಂದ ಪಾತ್ರರಾಗಿರುವರು. ಹಿಂದೆ ಖಾಂಡವವನ ದಹನದಲ್ಲಿ ತನಗೆ ಅರ್ಜುನನು ಮಾಡಿದ ಉಪಕಾರವನ್ನು ಮರೆಯದೆ, ಅಗ್ನಿಯು ಮುಂದೆ ಕುರುಪಾಂಡವರ ಯುದ್ಧದಲ್ಲಿ ಅರ್ಜುನನಿಗೆ ಸಹಾಯಮಾಡದೇ ಇರನು. ಇದಲ್ಲದೆ ಯಮಧರ್ಮನೇ ಮೊದಲಾದ ದೇವತೆಗಳೂಕೂಡ ತಮ್ಮ ಮಕ್ಕಳೆಂಬ ಪ್ರೀತಿಯಿಂದ ಪಾಂಡವರಿಗೆ ಸಹಾಯಮಾಡಿಯೇ ಮಾಡುವರು. ಮುಂದೆ ಯುದ್ಧದಲ್ಲಿ ಅವರಿಗೆ ನಮ್ಮ ಕಡೆಯ ಮಹಾರಥರೆನಿಸಿಕೊಂಡ ಭೀಷ್ಮ, ದ್ರೋಣ, ಕೃಪಾದಿಗಳಿಂದ ಅಪಾಯವೇನೂ ಇಲ್ಲದಂತೆ ರಕ್ಷಿಸುವುದಕ್ಕಾಗಿ, ಆ ದೇವತೆಗಳೆಲ್ಲರೂ ಸಿಡಿಲಿನಂತೆ ತಮ್ಮ ವೇಗವನ್ನು ನಮ್ಮಮೇಲೆ ಉಪಯೋಗಿಸದೆ ಬಿಡರು. ಪಾಂಡವರು ಮನಸ್ಸಿನಲ್ಲಿ ಕೋರಿದಮಾತ್ರಕ್ಕೆ ಆ ದೇವತೆಗಳೆಲ್ಲರೂ ಒಟ್ಟಾಗಿ ಬಂದು ಸಹಾಯಮಾಡುವರು. ಹೀಗೆ ದೇವತೆಗಳೊಡನೆ ಕೂಡಿದ ಆ ಪಾರ್ಥನನ್ನು ಆ ಯುದ್ಧದಲ್ಲಿ ಮನುಷ್ಯಮಾತ್ರನು ಕಣ್ಣಿಂದ ನೋಡುವುದಕ್ಕಾದರೂ ಸಾಧ್ಯವೇ? ಆ ಪಾಂಡವರು ಸಹಜವಾಗಿ ವೀರ್ಯವುಳ್ಳವರು. ಸರ್ವಾಸ್ತ್ರಪಾರಂಗತರು! ಪುರುಷಶ್ರೇಷ್ಠರು! ಇದಲ್ಲದೆ ಆ ಅರ್ಜುನನ ಕೈಯಲ್ಲಿ ಯಾರಿಂದಲೂ ಧರಿಸುವುದಕ್ಕಾಗದ ದಿವ್ಯವಾದ ಗಾಂಡೀವಧನುಸ್ಸಿರುವುದು. ವರುಣನಿಂದ ಕೊಡಲ್ಪಟ್ಟ ಎರಡು ಅಕ್ಷಯ ತೂಣೀರಗಳು (ಬತ್ತಳಿಕೆಗಳು) ಸದಾ ಬಾಣಪೂರ್ಣವಾಗಿಯೇ ಇರುವುವು. ಆ ಅರ್ಜುನನ ಧ್ವಜದಲ್ಲಿ ಹೊಗೆಯಂತೆ ನಿರಂಕುಶವಾದ ಗತಿಯುಳ್ಳ ದಿವ್ಯವಾನರನಿರುವನು. ಆ ಅರ್ಜುನನ ರಥಕ್ಕೆ ಸಮಾನವಾದ ರಥವು ಸಮುದ್ರಾಂತವಾದ ಈ ಸಮಸ್ತ ಭೂಮಿಯಲ್ಲಿ ಎಲ್ಲಿಯೂ ಇಲ್ಲ! ಆ ರಥಧ್ವನಿಯೇ ಮೇಘಧ್ವನಿಯಂತೆಯೂ, ಸಿಡಿಲಿನ ಶಬ್ದದಂತೆಯೂ ಶತ್ರುಗಳನ್ನು ನಡುಗಿಸುವುದು. ಆ ಅರ್ಜುನನು ಅತಿಮಾನುಷವೀರ್ಯವುಳ್ಳವನೆಂದು ಲೋಕವೆಲ್ಲವೂ ಬಲ್ಲುದು. ದೇವತೆಗಳನ್ನಾದರೂ ಅವನು ಜಯಿಸಬಲ್ಲನೆಂದು ಎಲ್ಲಾ ರಾಜರಿಗೂ ಪೂರ್ಣವಾದ ನಂಬಿಕೆಯುಂಟು. ಅವನು ಏಕಕಾಲದಲ್ಲಿ ಐನೂರು ಬಾಣಗಳನ್ನು ಪ್ರಯೋಗಿಸಬಲ್ಲವನು.

ಎವೆಮುಚ್ಚುವಷ್ಟರಲ್ಲಿ ನೂರಾರು ಬಾಣಗಳನ್ನು ಬಿಡುವನು. ಅವನು ಬಾಣಗಳನ್ನು ತೆಗೆಯುವುದಾಗಲಿ, ಪ್ರಯೋಗಿಸುವುದಾಗಲಿ ಯಾರಿಗೂ ತಿಳಿಯಲಾರದು. ಭೀಷ್ಮನು, ದ್ರೋಣನು, ಕೃಪನು, ಅಶ್ವತ್ಥಾಮನು, ಮದ್ರ ರಾಜನಾದ ಶಲ್ಯನು ಮೊದಲಾಗಿ ನಿಷ್ಪಕ್ಷಪಾತಬುದ್ಧಿಯುಳ್ಳ ಬೇರೆ ಯಾವಯಾವ ರಾಜರುಂಟೋ, ಅವರೆಲ್ಲರೂ ಆ ಅರ್ಜುನನ ವೀರ್ಯಕ್ಕೆ ಮೆಚ್ಚಿ, ಈ ಭೂಮಿಯಲ್ಲಿ ಅತಿಮಾನುಷಶಕ್ತಿಯುಳ್ಳ ರಾಜರಾದರೂ ಅವನನ್ನು ಜಯಿಸುವುದು ಸಾಧ್ಯವಲ್ಲವೆಂದೇ ಚೆನ್ನಾಗಿ ತಿಳಿದಿರುವರು. ಒಂದೇ ಪ್ರಯೋಗದಿಂದ ಐನೂರು ಬಾಣಗಳನ್ನು ಬಿಡತಕ್ಕ ಆ ಅರ್ಜುನನು, ಬಾಹುವೀರ್ಯದಲ್ಲಿ ಕಾರ್ತವೀರ್ಯನಿಗೆ ಸಮಾನನು! ಮಹಾ ಧನುರ್ಧಾರಿಯಾಗಿ, ಇಂದ್ರೋಪೇಂದ್ರರಿಗೆ ಸಮಾನಪರಾಕ್ರಮವುಳ್ಳ ಆ ಅರ್ಜುನನು ಈಗಲೇ ನಮ್ಮ ಕೌರವರನ್ನು ಕೊಲ್ಲುತ್ತಿರುವಹಾಗೆ ನನ್ನ ಕಣ್ಣಿಗೆ ಕಾಣುತ್ತಿದೆ. ವತ್ಸ ದುರ್ಯೋಧನಾ! ನನ್ನನ್ನು ಹಗಲು ರಾತ್ರಿಯೂ, ಈ ಚಿಂತೆಯು ಕೊರಗಿಸುತ್ತದೆ. ನನಗೆ ಕ್ಷಣಮಾತ್ರವೂ ನಿದ್ರೆಯಿಲ್ಲ! ಮನಸ್ಸಿಗೆ ನೆಮ್ಮದಿಯಿಲ್ಲ! ಕೌರವರಲ್ಲಿ ಹೇಗಾದರೂ ಶಾಂತಿಯನ್ನುಂಟುಮಾಡಬೇಕೆಂದು ನನ್ನ ಮನಸ್ಸು ತತ್ತಳಿಸುತ್ತಿದೆ. ಈಗಲೋ, ಕೌರವರಿಗೆ ಮಹತ್ತಾದ ಕ್ಷಯವು ಇದಿರುನೋಡುತ್ತಿದೆ! ಈ ಕಲಹವನ್ನು ಮುಗಿಸುವುದಕ್ಕೆ, ಸಮಾಧಾನವು ಹೊರತು ಬೇರೆ ಮಾರ್ಗವಿಲ್ಲ. ಆದುದರಿಂದ ಹೇಗಾದರೂ ನನಗೆ ಆ ಪಾಂಡವರೊಡನೆ ಸಮಾಧಾನವನ್ನು ಮಾಡಿಕೊಳ್ಳಬೇಕೆಂಬ ಅಭಿಪ್ರಾಯವೇ ಹೊರತು, ಯುದ್ಧವು ಸರ್ವಥಾ ಸಮ್ಮತವಿಲ್ಲ. ಏಕೆಂದರೆ, ನಮ್ಮ ಕೌರವರಿಗಿಂತಲೂ ಪಾಂಡವರು ಎಷ್ಟೋ ಅಧಿಕ ಶಕ್ತಿಯುಳ್ಳವರೆಂದು ನನಗೆ ಚೆನ್ನಾಗಿ ತೋರಿದೆ" ಎಂದನು.

ಇದು ಅರುವತ್ತನೆಯ ಅಧ್ಯಾಯವು.

*

ಪಾಂಡವರಿಗೆ ದೇವತೆಗಳ ಸಹಾಯವುಂಟೆಂಬುದನ್ನು ದು ರ್ಯೋಧನನು ನಿರಾಕರಿಸಿ, ತನಗೆ ಜಲಸ್ತಂಭಾದಿಗಳಲ್ಲಿ ರುವ ಸಾಮರ್ಥ್ಯದಿಂದ ತಾನೇ ಪಾಂಡವರನ್ನು ಜಯಿಸುವುದಾಗಿ ಹೇಳಿದುದು.

ಓ ಜನಮೇಜಯರಾಜಾ! ಧೃತರಾಷ್ಟ್ರನು ಮಾಡಿದ ಪಾಂಡವರ ಪ್ರಶಂಸೆಯನ್ನು ಕೇಳಿ ದುರ್ಯೋಧನನಿಗೆ ಸಹಿಸಲಾರದ ಆಕ್ರೋಶವುಂಟಾ ಯಿತು. ಆಗ ಅವನು ತಂದೆಯನ್ನು ಕುರಿತು "ಜನಕಾ! ಏನು ಹೇಳಿದೆ? ಪಾಂಡವರಿಗೆ ದೇವತೆಗಳ ಸಹಾಯಬಲವುಂಟೆಂದೂ, ಅವರನ್ನು ಜಯಿ ಸುವುದು ನಮಗೆ ಅಸಾಧ್ಯವೆಂದೂ ಹೇಳಿದೆಯಲ್ಲವೆ? ಈ ಭಯವನ್ನು ಬಿಟ್ಟುಬಿಡು! ಕಾಮ, ಕ್ರೋಧ, ಲೋಭ ದ್ವೇಷಾದಿಗಳನ್ನು ತೊರೆದು, ಪ್ರಾಪಂಚಿಕವಾದ ಇಲ್ಲಿನ ಯೋಚನೆಗಳನ್ನೆಲ್ಲ ಉಪೇಕ್ಷೆಮಾಡಿಬಿಟ್ಟುದರಿಂ ದಲೇ ದೇವತೆಗಳಿಗೆ ದೇವತ್ವವುಂಟಾಗಿದೆ. ಈ ವಿಚಾರವನ್ನು ಹಿಂದೆ ವ್ಯಾಸಮಹರ್ಷಿಯೂ, ಮಹಾತಪಸ್ವಿಯಾದ ನಾರದನೂ, ಜಮದಗ್ನಿಪುತ್ರ ನಾದ ಪರಶುರಾಮನೂ ನಮಗೆ ಹೇಳಿರುವನು. ಮನುಷ್ಯರಂತೆ ದೇವತೆ ಗಳು ಕಾಮದಿಂದಾಗಲಿ, ಕ್ರೋಧದಿಂದಾಗಲಿ, ದ್ವೇಷದಿಂದಾಗಲಿ, ಲೋಭ ದಿಂದಾಗಲಿ, ಯಾವಾಗಲೂ ಕಾರ್ಯಗಳಲ್ಲಿ ಪ್ರವರ್ತಿಸಲಾರರು. ಅಗ್ನಿ ಯಾಗಲಿ, ವಾಯುವಾಗಲಿ, ಯಮನಾಗಲಿ, ಇಂದ್ರನಾಗಲಿ, ಅಶ್ವಿನೀದೇ ವತೆಗಳಾಗಲಿ, ಕಾಮ ಲೋಭಾದಿಗಳಿಗೆ ವಶರಾಗಿ ಈ ಲೋಕದ ನ್ಯಾಯ ಗಳನ್ನೂ, ವ್ಯವಹಾರಗಳನ್ನೂ ಮನಸ್ಸಿಗೆ ಹಚ್ಚಿಕೊಂಡು ಪ್ರವರ್ತಿಸಿದ್ದಪಕ್ಷ ದಲ್ಲಿ, ಪಾಂಡವರಿಗೆ ಈ ಕಷ್ಟಗಳೇನೂ ಇಲ್ಲದಂತೆ ಆಗಲೇ ತಪ್ಪಿಸುತ್ತಿದ್ದ ರು. ಆದುದರಿಂದ, ದೇವತೆಗಳು ಈ ಪ್ರಾಪಂಚಿಕವ್ಯವಹಾರಗಳಲ್ಲಿ ಅಕ್ಕರೆ ಯಿಂದ ತಲೆಯಿಕ್ಕುವರೆಂಬ ಚಿಂತೆಯನ್ನು ಬಿಟ್ಟುಬಿಡು. ಹಾಗಿಲ್ಲದೆ ಅವರು ಒಂದುವೇಳೆ, ಕಾಮ, ಕ್ರೋಧ, ಲೋಭಗಳಿಂದ ಅಸುರಬುದ್ಧಿ ಯನ್ನು ತೋರಿಸಿದಪಕ್ಷದಲ್ಲಿ ಆಗ ಅವರಿಗೆ ದೇವತ್ವವೇ ಇಲ್ಲ. ಅವರ ದೈವಶಕ್ತಿಯೂ ಆಗ ಫಲಕಾರಿಯಾಗದು. ಅವರ ಪರಾಕ್ರಮವೂ ಸಾಗದು. ಮಹಾರಾಜಾ! ನನ್ನ ಮಂತ್ರಶಕ್ತಿಯಿಂದ ನಾನು ಅಗ್ನಿಯನ್ನೂ ಆರಿಸಬ

ಲ್ಲೆನು. ಆ ಅಗ್ನಿಯು ಎಷ್ಟೋ ಪ್ರಬಲವಾದ ಜ್ವಾಲೆಗಳನ್ನು ಕೆದರಿ, ಸಮಸ್ತಲೋಕಗಳನ್ನೂ ದಹಿಸುವ ಸ್ಥಿತಿಯಲ್ಲಿದ್ದರೂ ನನ್ನ ಮಂತ್ರಶಕ್ತಿಯಿಂದ ಅದನ್ನು ನಂದಿಸುವೆನು. ಮನುಷ್ಯರಿಗಿಂತಲೂ ಅತಿಶಯವಾದ ತೇಜಸ್ಸು (ಶಕ್ತಿಯು) ದೇವತೆಗಳಿಗೆ ಉಂಟೆಂದು ಹೇಳಿದುದೇನೋ ಸಹಜವೇ. ಆದರೆ ಆ ದೇವತೆಗಳ ಶಕ್ತಿಗಿಂತಲೂ ನನ್ನ ಶಕ್ತಿಯು ಇನ್ನೂ ಮೇಲಾದುದೆಂದು ತಿಳಿ. ನಾನು ಮಂತ್ರದಿಂದ ಅಗ್ನಿದೇವನನ್ನು ಅಡಗಿಸಬಲ್ಲೆನೆಂಬುದುಮಾತ್ರವಲ್ಲ! ಭೂಮಿಯು ಸೀಳಿಹೋದರೂ, ಬೆಟ್ಟಗಳು ಮುರಿದುಬಿದ್ದರೂ, ನಾನು ಎಲ್ಲರೂ ನೋಡುತ್ತಿದ್ದಹಾಗೆಯೇ ಅದನ್ನು ನನ್ನ ಮಂತ್ರಶಕ್ತಿಯಿಂದ ಕೂಡಿಸಬಲ್ಲೆನು. ಚರಾಚರಗಳಿಂದಲೂ, ಚೇತನಾಚೇತನಗಳಿಂದಲೂ ತುಂಬಿದ ಈ ಪ್ರಪಂಚವನ್ನೆಲ್ಲ ನಾಶಗೊಳಿಸುವುದಕ್ಕಾಗಿ ಮಹಾಧ್ವನಿಯಿಂದ ಬೀಸುವ ಗಾಳಿಯನ್ನಾಗಲಿ, ಶಿಲಾವರ್ಷವನ್ನಾಗಲಿ ನಾನುತಡೆದು ನಿಲ್ಲಿಸಿ, ಲೋಕವೆಲ್ಲವೂ ನೋಡುತ್ತಿರುವಹಾಗೆಯೇ ಸಮಸ್ತಭೂತಗಳನ್ನೂ ನಾನು ಅಪಾಯದಿಂದ ತಪ್ಪಿಸಬಲ್ಲೆನು. ನೀರನ್ನು ಕೂಡ ನಾನು ಸ್ತಂಭೀಕರಿಸಿ, (ಗಡ್ಡೆಮಾಡಿ) ಅದರಮೇಲೆ ನನ್ನ ರಥಗಳನ್ನೂ, ಪದಾತಿಗಳನ್ನೂ ನಡೆಸಬಲ್ಲೆನು. ದೇವಾಸುರರ ಕಾರ್ಯಗಳನ್ನೆಲ್ಲ ನಾನೊಬ್ಬನೇ ನಿರ್ವಹಿಸಬಲ್ಲೆನು. ನಾನು ಯಾವುದಾದರೂ ಒಂದು ಕಾರ್ಯೋದ್ದೇಶದಿಂದ ನನ್ನ ಅಕ್ಷೋಹಿಣೀ ಸೈನ್ಯವನ್ನು ತೆಗೆದುಕೊಂಡು ಯಾವಯಾವ ದೇಶಕ್ಕೆ ಹೋಗುವೆನೋ, ಅಲ್ಲಲ್ಲಿ ನನಗೆ ನೀರು ಪ್ರವಹಿಸುವಂತೆ ಮಾಡಬಲ್ಲೆನು. ಜನಕಾ! ನಾನು ಹೋದಕಡೆಗಳಲ್ಲಿ ಭಯಂಕರಗಳಾದ ಪ್ರಾಣಿಗಳಾವುವೂ ತಲೆಯಿಕ್ಕಲಾರವು. ನನ್ನ ಮಂತ್ರಪ್ರಭಾವದಿಂದ ಭಯಂಕರಭೂತಗಳು ಯಾರನ್ನೂ ಹಿಂಸಿಸಲಾರವು. ನಾನು ಇಷ್ಟಪಟ್ಟ ದೇಶಗಳಲ್ಲಿ ಪರ್ಜನ್ಯನು ಸಮೃದ್ಧಿಯಾದ ಮಳೆಯನ್ನು ಕರೆಯುವನು. ಪ್ರಜೆಗಳೆಲ್ಲರೂ ಧರ್ಮಿಷ್ಠರಾಗುವರು. ಜನರಿಗೆ ಯಾವ ಈತಿಬಾಧೆಗಳೂ ಇರಲಾರವು. ಅಶ್ವಿನೀದೇವತೆಗಳಾಗಲಿ, ಅಗ್ನಿ ವಾಯುಗಳಾಗಲಿ, ದೇವತೆಗಳೊಡಗೂಡಿದ ಇಂದ್ರನಾಗಲಿ, ಕೊನೆಗೆ ಯಮನಾಗಲಿ ನನ್ನ ದ್ವೇಷಕ್ಕೆ ಪಾತ್ರರಾದವರನ್ನು ಕಾಪಾಡಲಾರರು. ನನ್ನ ದ್ವೇಷಿಯಾದ ಪಾಂಡರನ್ನು ಕಾಪಾಡುವ ಶಕ್ತಿಯು ದೇವತೆಗಳಿಗೆ ಇದ್ದಿದ್ದರೆ, ಆ ಪಾಂಡವರು ಹಿಂದೆ ಹದಿಮೂರು ವರ್ಷಗಳವರೆಗೆ ಅಷ್ಟು

ಕಷ್ಟಗಳನ್ನು ಅನುಭವಿಸುತ್ತಲೇ ಇರಲಿಲ್ಲ. ನನ್ನ ದ್ವೇಷಕ್ಕೆ ಪಾತ್ರರಾದ ವರನ್ನು ದೇವತೆಗಳಾಗಲಿ, ದೈತ್ಯರಾಗಲಿ, ರಾಕ್ಷಸರಾಗಲಿ, ಗಂಧರ್ವರಾ ಗಲಿ ಯಾರೂ ರಕ್ಷಿಸಿಕೊಳ್ಳಲಾರರು. ನಾನು ಹೇಳಿದುದು ಸತ್ಯವೆಂದು ತಿಳಿ. ನಾನು ನನ್ನ ಶತ್ರುಗಳಿಗಾಗಲಿ, ಮಿತ್ರರಿಗಾಗಲಿ, ಶುಭವನ್ನೋ ಅಶು ಭವನ್ನೋ ಮನಸ್ಸಿನಲ್ಲಿ ಯೋಚಿಸಿದರೆ, ಅದು ಇದುವರೆಗೆ ಎಂದಿಗೂ ತಪ್ಪಿ ದುದಲ್ಲ. ನಾನು ಮನಸ್ಸಿನಲ್ಲಿ ಸಂಕಲ್ಪಿಸಿದುದು ನಡೆದೇ ತೀರಬೇಕು. ಇದು ಹೀಗೆಯೇ ಆಗಬೇಕೆಂದು ನಾನು ಬಾಯಿಂದಾಡಿದರೆ ಅದು ಹಾಗೆಯೇ ನಡೆ ದೇತೀರುವುದು. ನನ್ನ ಮಾತು ಎಂದಿಗೂ ತಪ್ಪಿದುದಿಲ್ಲ. ಇದರಿಂದಲೇ ನನಗೆ ಸತ್ಯವಚನನೆಂದು ಲೋಕಪ್ರತೀತಿಯುಂಟು. ಜನಕಾ! ನನ್ನ ಮಾಹಾತ್ಮ್ಯವು ಲೋಕಕ್ಕೆಲ್ಲ ಪ್ರತ್ಯಕ್ಷಸಿದ್ಧವಾದುದು. ನನ್ನ ಪ್ರಭಾವವು ದಿಗಂತವಿಖ್ಯಾತವಾದುದು. ಮಹಾರಾಜಾ! ನಾನು ನಿನ್ನ ಸಮಾಧಾನ ಕ್ಕಾಗಿ ಇಷ್ಟನ್ನು ಹೇಳುವೆನೇ ಹೊರತು, ಆತ್ಮಸ್ತುತಿಗಾಗಿ ಹೇಳತಕ್ಕವ ನಲ್ಲ. ನಾನು ಇದುವರೆಗೆ ಎಲ್ಲಿಯೂ ಆತ್ಮಸ್ತುತಿಯನ್ನು ಮಾಡಿಕೊಂಡ ವನೂ ಅಲ್ಲ. ಆತ್ಮಸ್ತುತಿಮಾಡಿಕೊಳ್ಳುವುದು ಅಸತ್ತುಗಳ ಸ್ವಭಾವವು. ಜನಕಾ! ಆ ಪಾಂಡವರು, ಮತ್ಸ್ಯರು, ಪಾಂಚಾಲರು, ಕೇಕಯರು, ಸಾ ತ್ಯಕಿ, ಆ ವಾಸುದೇವನು, ಇವರೆಲ್ಲರನ್ನೂ ನಿಗ್ರಹಿಸಿ, ನಾನು ಜಯಶೀಲ ನಾಗಿ ಬರುವ ಸಮಾಚಾರವನ್ನು ನೀನು ಶೀಘ್ರದಲ್ಲಿಯೇ ಕೇಳುವೆ. ನದೀ ಪ್ರವಾಹಗಳು ನಾನಾಕಡೆಯಿಂದ ಸಮುದ್ರಕ್ಕೆ ಬಂದು ಸೇರಿದಮೇಲೆ, ಅವು ಗಳ ಸುಳಿವೇ ಕಾಣದಂತೆ, ನನ್ನನ್ನಿದಿರಿಸಿ ಬರತಕ್ಕವರೆಲ್ಲರೂ, ತಮ್ಮ ಪರಿ ವಾರಗಳೊಡನೆ ನಾಶಹೊಂದುವರೆಂದೇ ತಿಳಿ. ನಾನು ಅವರೆಲ್ಲರಿಗಿಂತಲೂ ಎಲ್ಲಾ ವಿಷಯದಲ್ಲಿಯೂ ಮೇಲೆನಿಸಿದವನು. ನನ್ನ ವಿದ್ಯೆ, ನನ್ನ ಬುದ್ಧಿ, ನನ್ನ ತೇಜಸ್ಸು, ನನ್ನ ಸಾಧನೆಗಳು ಇವೆಲ್ಲವೂ ಆ ಪಾಂಡವರಿಗಿಂತಲೂ ಎಷ್ಟೋ ಮೇಲಾದುದು. ಈ ಭೀಷ್ಮನೂ, ಈ ದ್ರೋಣನೂ, ಕೃಪನೂ, ಶಲ್ಯನೂ, ಶಲನೂ, ಅಸ್ತ್ರವಿಷಯಗಳಲ್ಲಿ ಯಾವಯಾವುದನ್ನು ಬಲ್ಲರೋ ಅವೆಲ್ಲವೂ ನನ್ನೊಬ್ಬನಲ್ಲಿಯೇ ಇರುವುವು" ಎಂದನು.

ಓ ಜನಮೇಜಯಮಹಾರಾಜಾ! ಹೀಗೆ ದುರ್ಯೋಧನನು ತನ್ನ ಪರಾಕ್ರ ಮವನ್ನು ಹೇಳಿಕೊಳ್ಳುತ್ತಿರಲು, ಧೃತರಾಷ್ಟ್ರನು ಅವನ ಮಾತುಗಳಿಗೆ

ಬೇಸರಿಸಿ, ತಿರುಗಿ ಸಂಜಯನನ್ನು ಕುರಿತು, ಅರ್ಜುನನ ಪ್ರಭಾವವನ್ನೂ, ಕಾರ್ಯಗಳನ್ನೂ ಕುರಿತು ಪ್ರಶ್ನೆಮಾಡತೊಡಗಿದನು.

ಇದು ಅರುವತ್ತೊಂದನೆಯ ಅಧ್ಯಾಯವು.

ಕರ್ಣನು ಧೃತರಾಷ್ಟ್ರನ ಮಾತಿಗೆ ಅಡ್ಡಬಂದು, ಪಾಂಡವರನ್ನು ತಾನು ಕೊಲ್ಲುವುದಾಗಿ ಶಪಥಮಾಡಿದುದು. ಭೀಷ್ಮನು ಅವನನ್ನು ಧಿಕ್ಕರಿಸಿದುದು. ಅದಕ್ಕಾಗಿ ಕೋಪಗೊಂಡ ಕರ್ಣನು ಭೀಷ್ಮನು ಸಾಯುವವರೆಗೆ ತಾನು ಶಸ್ತ್ರವನ್ನು ಮುಟ್ಟುವುದಿಲ್ಲವೆಂದು ಪ್ರತಿಜ್ಞೆಮಾಡಿದುದು.

ಓ ಜನಮೇಜಯರಾಜಾ! ಧೃತರಾಷ್ಟ್ರನು ಅರ್ಜುನನ ಪರಾಕ್ರಮವನ್ನು ಕುರಿತು ಮೇಲೆಮೇಲೆ ಕೊಸರಿಕೊಸರಿ ಕೇಳುತ್ತಿರಲು, ಕರ್ಣನಿಗೆ ಅದು ಸಹಿಸದಂತಾಯಿತು. ಆಗ ಕರ್ಣನು ಆ ಸಭೆಯಲ್ಲಿ ಕೌರವರನ್ನೆಲ್ಲ ಹುರಿಗೊಳಿಸುವಂತೆ, ದುರ್ಯೋಧನನನ್ನು ಕುರಿತು "ಮಿತ್ರ ದುರ್ಯೋಧನಾ! ನಾನು ನನ್ನ ಧನುರ್ವಿದ್ಯಾಗುರುವಾದ ಪರಶುರಾಮನನ್ನು ವಂಚಿಸಿ ಅವನಿಂದ ಬ್ರಹ್ಮಾಸ್ತ್ರವನ್ನು ಪಡೆದೆನಷ್ಟೆ? ನನ್ನ ಮೋಸವು ಅವನಿಗೆ ತಿಳಿದುಹೋದಮೇಲೆ, ಅವನು ಕೋಪದಿಂದ ನನಗೆ ಆ ಅಸ್ತ್ರಗಳೆಲ್ಲವೂ ಸಮಯದಲ್ಲಿ ಮನಸ್ಸಿಗೆ ತೋರದಿರಲೆಂದು ಶಪಿಸಿದುದಾಗಿ ಜನರು ಆಡಿಕೊಳ್ಳುವರಲ್ಲವೆ? ಇದ್ದರೂ ಇರಲಿ! ನಾನು ಅಂತಹ ಮೋಸವನ್ನು ಮಾಡಿ ಗುರುವಿನಲ್ಲಿ ಮಹಾಪರಾಧಿಯಾಗಿದ್ದರೂ, ಅವನು ನನಗೆ ಅಷ್ಟೊಂದು ತೀವ್ರವಾದ ಶಾಪವನ್ನೇನೂ ಕೊಡಲಿಲ್ಲ. ಆ ಮಹರ್ಷಿಯಾದರೋ ಸಾಗರಾಂತವಾದ ಸಮಸ್ತಭೂಮಿಯನ್ನಾದರೂ ದಹಿಸಬಲ್ಲ ತೀವ್ರತೇಜಸ್ಸುಳ್ಳವನು. ಅಂತವನು ನನ್ನಲ್ಲಿ ಅಷ್ಟಾಗಿ ಕೋಪಿಸದೆ ಅಲ್ಪಮಾತ್ರ ಶಿಕ್ಷೆಯನ್ನು ವಿಧಿಸಿದನು. ನಾನು ನನ್ನ ಪೌರುಷದಿಂದಲೂ, ಶುಶ್ರೂಷೆಯಿಂದಲೂ ಅವನ ಮನಸ್ಸು ಪ್ರಸನ್ನವಾಗುವಂತೆ ಮಾಡಿದ್ದೆನು. ಅವನು ನನಗೆ ಅನುಗ್ರಹಿಸಿಕೊಟ್ಟ ಅಸ್ತ್ರಗಳೆಲ್ಲವೂ ಈಗ ನನ್ನಲ್ಲಿವೆ. ಆದುದರಿಂದ ನಾನು

ಎಂತವರನ್ನಾದರೂ ಸೋಲಿಸಲು ಸಮರ್ಥನು. ನಿನ್ನ ಶತ್ರುಗಳನ್ನು ಜಯಿಸುವ ಭಾರವು ನನಗಿರಲಿ! ನನ್ನ ಗುರುವಿನ ಅನುಗ್ರಹಬಲದಿಂದ ನಾನು ಎವೆಹಾರಿಸುವಷ್ಟರಲ್ಲಿಯೇ, ಆ ಪಾಂಡವರೊಡನೆ ಪಾಂಚಾಲ, ಕರೂಶ, ಮತ್ಸ್ಯಾದಿದೇಶಾಧಿಪತಿಗಳನ್ನೆಲ್ಲ ಸೇರಿಸಿ, ಅವರ ಪುತ್ರ ಪೌತ್ರಾದಿ ಪರಿವಾರಗಳೊಡನೆ ಕೊಂದು ತೀರಿಸಿಬಿಡುವೆನು. ನನ್ನ ಶಸ್ತ್ರಪ್ರಭಾವದಿಂದ ಸಮಸ್ತ ಲೋಕಗಳನ್ನೂ ಸ್ವಾಧೀನಗೊಳಿಸುವೆನು. ಈ ಪಿತಾಮಹನೂ, ದ್ರೋಣನೂ, ಇನ್ನೂ ನಿನ್ನ ಸಹಾಯಕ್ಕಾಗಿ ಕರೆಸಲ್ಪಟ್ಟಿರುವ ಎಲ್ಲಾ ರಾಜರೂ ನಿನ್ನ ಸಮೀಪದಲ್ಲಿ ನೆಪಮಾತ್ರಕ್ಕೆ ಸುಮ್ಮನೆ ನಿಂತಿರಲಿ. ನಾನು ನನ್ನ ಗುರುವಿನ ಪ್ರಸಾದದಿಂದಲೂ, ನನ್ನ ಬಲದಿಂದಲೂ ಆ ಪಾಂಡವರನ್ನು ತೀರಿಸಿಬಿಡುವೆನು. ಈ ಭಾರವು ನನಗೇ ಇರಲಿ!" ಎಂದನು.

ಈ ಮಾತನ್ನು ಕೇಳಿ ಭೀಷ್ಮನು "ಕರ್ಣಾ! ಸಾಕು ಸುಮ್ಮನಿರು! ಹರಟಬೇಡ! ಕಾಲವೈಪರೀತ್ಯದಿಂದ ಬುದ್ಧಿಗೆಟ್ಟು ನೀನು ಹೀಗೆ ಹೇಳಿಕೊಳ್ಳುವುದರಿಂದ ಫಲವಿಲ್ಲ. ಪ್ರಧಾನನಾದವನು ಸತ್ತಮೇಲೆ ಧೃತರಾಷ್ಟ್ರಪುತ್ರರೆಲ್ಲರೂ ಹತರಾದಂತೆಯೇ ಎಂಬುದನ್ನು ನೀನು ಇನ್ನೂ ತಿಳಿದುಕೊಳ್ಳಲಿಲ್ಲ. ಹಿಂದೆ ಕೃಷ್ಣಮಾತ್ರ ಸಹಾಯನಾಗಿ ಅರ್ಜುನನು ಖಾಂಡವದಹನಕಾಲದಲ್ಲಿ ನಡೆಸಿದ ಪರಾಕ್ರಮಗಳನ್ನು ಕೇಳಿದಾಗಲೇ ನೀನು ನಿನ್ನ ಬಂಧುಮಿತ್ರರೊಡನೆ ನಿನ್ನ ಹೆಮ್ಮೆಯನ್ನು ಅಡಗಿಸಿಕೊಳ್ಳಬೇಕಾದವನು. ಹಾಗಿಲ್ಲದೆ ಈಗಲೂ ಇಲ್ಲದ ಜಂಭವನ್ನು ಕೊಚ್ಚಿಕೊಳ್ಳುತ್ತಿರುವೆ. ಇದಲ್ಲದೆ ಓ ಕರ್ಣಾ! ದೇವಾಧಿಪನಾದ ಮಹೇಂದ್ರನು ನಿನಗೆ ಯಾವ ಶಕ್ತ್ಯಾಯುಧವನ್ನು ಕೊಟ್ಟಿರುವನೋ, ಆ ದಿವ್ಯಶಕ್ತಿಯು ಯುದ್ಧದಲ್ಲಿ ಶ್ರೀಕೃಷ್ಣನ ಚಕ್ರಪ್ರಭಾವದಿಂದ ಮುರಿದು, ಭಸ್ಮೀಭೂತವಾಗಿ ಬೀಳುವುದನ್ನು ನೀನು ಶೀಘ್ರದಲ್ಲಿಯೇ ನೋಡುವೆ. ಮತ್ತು ಓ ಕರ್ಣಾ! ನೀನು ಎಷ್ಟೋ ಅಕ್ಕರೆಯಿಂದ ಯಾವುದನ್ನು ಪುಷ್ಪಮಾಲ್ಯಾದಿಗಳಿಂದ ಪೂಜಿಸಿಟ್ಟಿರುವೆಯೋ, ಸರ್ಪಮುಖವುಳ್ಳ ಆ ಬಾಣವು ಅರ್ಜುನನ ಬಾಣದಿಂದ ಹತವಾಗಿ ಬಿಳುವುದನ್ನೂ ನೀನು ನೋಡುವೆ. ಬಾಣಾಸುರನನ್ನೂ, ಭೂಪುತ್ರನಾದ ನರಕಾಸುರನನ್ನೂ ಕೊಂದ ಆ ವಾಸುದೇವನು ಅರ್ಜುನನಿಗೆ ರಕ್ಷಕನಾಗಿರುವನು.

ಆವನು ನಿನ್ನಂತವರನ್ನೂ, ನಿನಗಿಂತಲೂ ಒಂದು ಕೈ ಮೇಲಾದವರನ್ನೂ ನಿಮಿಷಮಾತ್ರದಲ್ಲಿ ಹುಟ್ಟಡಗಿಸಬಲ್ಲವನು" ಎಂದನು

ಆಗ ಕರ್ಣನು "ಓ ಭೀಷ್ಮಾ! ವೃಷ್ಣಿಕುಲತಿಲಕನಾದ ಕೃಷ್ಣನು ನೀನು ಹೇಳಿದಂತೆ ಮಹಾಮಹಿಮೆಯುಳ್ಳವನೇ ಆಗಿರಬಹುದು. ಅದಕ್ಕಿಂತಲೂ ಮೇಲಾಗಿಯೂ ಇರಬಹುದು. ಅದರಲ್ಲಿ ಸಂದೇಹವಿಲ್ಲ. ಆದರೇನು? ನನ್ನ ವಿಷಯವಾಗಿ ನೀನು ಈಗ ಕಠಿನವಾಗಿ ಯಾವ ಮಾತನ್ನಾಡಿದೆಯೋ ಅದರ ಫಲವೇನೆಂಬುದನ್ನು ಕೇಳು. ಎಲೈ ರಾಜರೆ! ನೀವೆಲ್ಲರೂ ಕೇಳಿರಿ! ಇದೋ! ನಾನು ಶಸ್ತ್ರಗಳನ್ನು ಕೆಳಗಿಡುವೆನು. ನಾನು ಮುಂದೆ ಯುದ್ಧದಲ್ಲಿ ಶಸ್ತ್ರಗಳನ್ನು ಹಿಡಿಯುವುದನ್ನು ಈ ಪಿತಾಮಹನುಮಾತ್ರ ತನ್ನ ಕಣ್ಣಿಂದ ನೋಡಲಾರನು. ಓ ಭೀಷ್ಮಾ! ನನ್ನ ಪ್ರಭಾವವೆಂತದೆಂಬುದನ್ನು ಈ ಭೂಮಿಯ ಸಮಸ್ತರಾಜರೂ ನೀನು ಸತ್ತಮೇಲೆ ನೋಡುವರು."

ಜನಮೇಜಯರಾಜಾ! ಇಷ್ಟು ಮಾತನ್ನು ಹೇಳಿ, ಕರ್ಣನು ತಟ್ಟನೆ ಆ ಸಭೆಯನ್ನು ಬಿಟ್ಟು ತನ್ನ ಮನೆಗೆ ಹೊರಟುಹೋದನು. ಆಗ ಭೀಷ್ಮನು ನಗುತ್ತ, ಎಲ್ಲಾ ಕೌರವರ ಮುಂದೆ ದುರ್ಯೋಧನನನ್ನು ನೋಡಿ, ಹೀಗೆಂದು ಹೇಳುವನು. "ದುರ್ಯೋಧನ ಮಹಾರಾಜಾ! ನಿನ್ನ ಪರಮಾಪ್ತನಾದ ಸೂತಪುತ್ರನು ಸತ್ಯಪ್ರತಿಜ್ಞನಲ್ಲವೇ? ಅವನು ಯುದ್ಧಭಾರವನ್ನೆಲ್ಲ ತಾನೇ ವಹಿಸುವುದಾಗಿ ಈಗಲೇ ಹೇಳಿದನಲ್ಲವೆ? ಆಗಲೇ ಅದನ್ನು ಇಳಿಸಿಬಿಟ್ಟು ಅವನು ಹೊರಟುಹೋದುದೇಕೆ? ಮುಂದೆ ಭೀಮನು ನಿಮ್ಮ ಸೇನಾವ್ಯೂಹಗಳನ್ನೆಲ್ಲ ಪ್ರತಿವ್ಯೂಹಗಳಿಂದ ತಡೆದು, ನಿಮ್ಮ ಕಡೆಯವರ ತಲೆಗಳನ್ನೆಲ್ಲ ಹಾರಿಸಿ, ಲೋಕಕ್ಷಯವನ್ನು ಮಾಡುವ ರೀತಿಯನ್ನಾದರೂ ನೋಡಿರಿ. "ಅವಂತಿ, ಕಳಿಂಗ, ಜಯದ್ರಥ, ಚೇದಿ, ಬಾಹ್ಲೀಕಾದಿ ರಾಜರೆಲ್ಲ ನೋಡುತ್ತಿರುವ ಹಾಗೆಯೇ ನಾನು ಲಕ್ಷೋಪಲಕ್ಷ ಸಂಖ್ಯೆಯಿಂದ ಶತ್ರುಪಕ್ಷದ ಯೋಧರನ್ನೆಲ್ಲಾ ಕೊಂದು ಕೆಡಹುವೆನೆಂದೂ, ಬೇರೆಯವರ ಸಹಾಯವೇ ನನಗೆ ಅವಶ್ಯವಿಲ್ಲವೆಂದೂ ಈಗಲೇ ಪ್ರತಿಜ್ಞೆಮಾಡಿದ ಕರ್ಣನು, ಉತ್ತರಕ್ಷಣವೇ ಆಯುಧವನ್ನು ಬಿಸುಟ್ಟು ಹೊರಟುಹೋದನು. ಮಹಾಮಹಿಮೆಯುಳ್ಳವನಾದ ಆ ಪರಶುರಾಮನಲ್ಲಿ ತಾನು ಬ್ರಾಹ್ಮಣ

ನೆಂದು ಸುಳ್ಳಾಡಿ, ಗುರುವನ್ನೇ ವಂಚಿಸಿ, ಅಸ್ತ್ರವನ್ನು ಪಡೆದುಬಂದ ಈ ನೀಚನು, ಆ ಆಚಾರ್ಯನ ಮುಂದೆ ಹಾಗೆ ಸುಳ್ಳಾಡಿದಾಗಲೇ ಅವನ ತಪಸ್ಸೂ, ಧರ್ಮವೂ ನಷ್ಟವಾಯಿತು" ಎಂದನು.

ಓ ಜನಮೇಜಯರಾಜಾ! ಕರ್ಣನು ಅಸ್ತ್ರಸನ್ಯಾಸವನ್ನು ಮಾಡಿ ಹೊರಟುಹೋದಮೇಲೆ ಅಲ್ಪಬುದ್ಧಿಯುಳ್ಳ ದುರ್ಯೋಧನನು ಭೀಷ್ಮನನ್ನು ನೋಡಿ ಹೀಗೆಂದು ಹೇಳುವನು.

ಇದು ಅರುವತ್ತೆರಡನೆಯ ಅಧ್ಯಾಯವು.

ದುರ್ಯೋಧನನು ಭೀಷ್ಮನ ಮಾತನ್ನು ಖಂಡಿಸಿ, ಒಂದುವೇಳೆ
ಅವರು ಉದಾಸೀನರಾಗಿ ಕೈಬಿಟ್ಟರೂ, ತಾನು ಕರ್ಣ
ದುಶ್ಶಾಸನರ ಬಲದಿಂದಲೇ ಪಾಂಡವರನ್ನು ಕೊ
ಲ್ಲುವುದಾಗಿ ಹೇಳಿದುದು. ವಿದು
ರನ ಬುದ್ಧಿವಾದಗಳು.

ಆಗ ದುರ್ಯೋಧನನು ಭೀಷ್ಮನನ್ನು ಕುರಿತು "ತಾತಾ! ಮನುಷ್ಯರಲ್ಲಿ ಸಮಾನರಾಗಿ ಹುಟ್ಟಿ, ಎಲ್ಲಾ ಭಾಗದಲ್ಲಿಯೂ ಸಮಾನರಾಗಿದ್ದವರಲ್ಲಿ ಒಬ್ಬರಿಗೆ ಮಾತ್ರ ಜಯವೆಂದು ನೀನು ಹೇಗೆ ಹೇಳುವೆ! ವೀರ್ಯದಲ್ಲಿಯೂ, ಪರಾಕ್ರಮದಲ್ಲಿಯೂ ನಾವಿಬ್ಬರೂ ಸಮಾನರೇ! ವಯಸ್ಸಿನಲ್ಲಿಯೂ, ವಿದ್ಯೆಯಲ್ಲಿಯೂ, ಅಸ್ತ್ರಗಳಲ್ಲಿಯೂ, ಯುದ್ಧಕಲೆಯಲ್ಲಿಯೂ, ಕೈಚಳಕದಲ್ಲಿಯೂ, ಕೌಶಲದಲ್ಲಿಯೂ, ನಾವಿಬ್ಬರೂ ಸಮಾನರಾದವರು. ನಾವಿಬ್ಬರೂ ಒಂದೇ ಜಾತಿಯವರು. ನಾವಿಬ್ಬರೂ ಮನುಷ್ಯಯೋನಿಯಲ್ಲಿಯೇ ಹುಟ್ಟಿದವರು. ಹೀಗಿರುವಾಗ ಆ ಪಾಂಡವರಿಗೆ ಮಾತ್ರ ಜಯವು ನಿಶ್ಚಯವೆಂದು ಹೇಗೆ ಹೇಳುವೆ? ಪಿತಾಮಹಾ! ನೀನು ಹೇಗಾದರೂ ಹೇಳು. ನಾನು ನಿನ್ನಲ್ಲಿಯಾಗಲಿ, ದ್ರೋಣನಲ್ಲಿಯಾಗಲಿ, ಕೃಪನಲ್ಲಿಯಾಗಲಿ, ಬಾಹ್ಲೀಕನಲ್ಲಿಯಾಗಲಿ, ಇನ್ನೂ ಇತರರಾಜರಲ್ಲಿಯಾಗಲಿ ನಂಬಿಕೆಯನ್ನೇ ಇಟ್ಟವನಲ್ಲ. ನನ್ನ ಸ್ವಂತ ಪರಾಕ್ರಮವನ್ನು ಹಿಡಿದೇ

ನಾನು ಕೆಲಸವನ್ನು ಸಾಧಿಸುವೆನು. ನಾನೊಬ್ಬನು, ನನ್ನ ಮಿತ್ರನಾದ ಕರ್ಣನೊಬ್ಬನು, ನನ್ನ ತಮ್ಮನಾದ ದುಶ್ಯಾಸನನೊಬ್ಬನು, ನಾವು ಮೂವರೇ ಆ ಐದು ಮಂದಿ ಪಾಂಡವರನ್ನೂ ಯುದ್ಧದಲ್ಲಿ ಕೊಲ್ಲುವೆವು. ಅವರನ್ನು ಕೊಂದಮೇಲೆ ನಾನೇ ರಾಜ್ಯಕ್ಕೆ ಏಕಾಧಿಪತಿಯಾಗಿ, ಭೂರಿದಕ್ಷಿಣೆಗಳುಳ್ಳ ವಿವಿಧಯಾಗಗಳನ್ನು ನಡೆಸಿ, ಗೋದಾನಗಳಿಂದಲೂ, ಅಶ್ವದಾನಗಳಿಂದ ಲೂ ಬ್ರಾಹ್ಮಣರನ್ನು ಸಂತೋಷಗೊಳಿಸುವೆನು. ಬೇಡರು ಕಾಡಿನಲ್ಲಿ ಬಲೆಯಿಂದ ಜಿಂಕೆಗಳನ್ನು ಹಿಡಿಯುವಂತೆಯೂ, ಜಲಪ್ರವಾಹವು ನಾವಿಕ ರಿಲ್ಲದ ದೋಣಿಗಳನ್ನು ಎಳೆದುಕೊಂಡುಹೋಗುವಂತೆಯೂ, ನಮ್ಮವರು ಆ ಪಾಂಡವರನ್ನು ಯುದ್ಧರಂಗದಲ್ಲಿ ಎಳೆದಾಡುವ ರೀತಿಯನ್ನಾದರೂ ನೋಡು! ರಥಗಳಿಂದಲೂ, ಗಜಸೈನ್ಯಗಳಿಂದಲೂ ತುಂಬಿದ ನಮ್ಮ ಸೈನ್ಯ ವನ್ನು ನೋಡುವಾಗಲೇ ಆ ಪಾಂಡವರ ಮತ್ತು ಆ ಕೃಷ್ಣನ ದರ್ಪವು ಮುಕ್ಕಾಲುಪಾಲು ಅಡಗಿಹೋಗುವುದು. ನಾವು ಆ ಯುದ್ಧದಲ್ಲಿ ಪಾಂಡ ವರನ್ನೆಲ್ಲ ನಿಗ್ರಹಿಸಿ, ಅಸಾಧ್ಯಕಾರ್ಯಗಳನ್ನು ನಡೆಸಿ, ನಿಶ್ಚಿಂತರಾಗಿ ಸುಖ ದಿಂದಿರುವೆವು'' ಎಂದನು.

ಓ ಜನಮೇಜಯರಾಜಾ! ಈ ಮಾತನ್ನು ಕೇಳಿ, ಧೃತರಾಷ್ಟ್ರನು ಬಹಳ ವ್ಯಸನಪಡುತ್ತ, ಆ ಸಮಸ್ತ ರಾಜರ ಮುಂದೆ ವಿದುರನನ್ನು ಕುರಿತು "ಅಪ್ಪ ವಿದುರಾ! ನನ್ನ ಮಗನಾದ ಈ ದುರ್ಯೋಧನನು ಕರ್ಣನೊಡನೆ ಕೂಡಿ ಮೃತ್ಯುಪಾಶಕ್ಕೆ ಸಿಕ್ಕಿಬಿದ್ದಿರುವನು. ವಿಪರೀತಕಾಲವು ಅವ ರನ್ನು ಇದಿರುನೋಡುತ್ತಿರುವುದು. ನಾನೇನು ಮಾಡಲಿ?'' ಎಂದನು. ಆಗ ವಿದುರನು "ಅಣ್ಣಾ! ಈ ಲೋಕದಲ್ಲಿ ಮನುಷ್ಯನಿಗೆ, ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣನಿಗೆ ಆತ್ಮನಿಗ್ರಹವೇ ಸರ್ವವಿಧದಲ್ಲಿಯೂ ಕ್ಷೇಮ ಕರವೆಂದು ತತ್ವಜ್ಞರಾದ ಹಿರಿಯರು ಹೇಳಿರುವರು. ಆತ್ಮನಿಗ್ರಹವೆಂಬು ದು ದಾನ, ತಪಸ್ಸು, ಜ್ಞಾನ, ಅಧ್ಯಯನ ಇವುಗಳನ್ನು ಯಾವಾಗಲೂ ಹಿಂಬಾಲಿಸಿರಬೇಕು. ಆತ್ಮನಿಗ್ರಹವಿದ್ದವನಿಗೆ, ದಾನ, ತಾಳ್ಮೆ, ಕಾರ್ಯಸಿದ್ಧಿ ಇವೆಲ್ಲವೂ ತಾನಾಗಿ ಕೈಗೂಡಿಬರುವುವು. ಅಂತಹ ದಮವೇ ತೇಜಸ್ಸನ್ನು ವೃದ್ಧಿಗೊಳಿಸುವುದು. ಅದೇ ಪವಿತ್ರವಾದ ಉತ್ತಮಧರ್ಮವು. ದಮವೆಂಬ

ಇಂದ್ರಿಯನಿಗ್ರಹಶಕ್ತಿಯುಳ್ಳವನು ಪಾಪರಹಿತನಾಗಿ ತೇಜೋವೃದ್ಧಿಯನ್ನು ಹೊಂದಿ, ಉತ್ತಮಪುರುಷಾರ್ಥವನ್ನು ಪಡೆಯುವನು. ಮಾಂಸಭಕ್ಷಕರಾದ ರಾಕ್ಷಸರಿಂದ, ಅಥವಾ ಕ್ರೂರಮೃಗಗಳಿಂದ ಇತರ ಪ್ರಾಣಿಗಳಿಗೆ ಹೇಗೋ ಹಾಗೆ, ದಮವಿಲ್ಲದವರು ಯಾವಾಗಲೂ ಲೋಕಕ್ಕೆ ಭಯಕಾರಣರು. ಅಂತಹ ದುಷ್ಟರನ್ನು ನಿಗ್ರಹಿಸುವುದಕ್ಕಾಗಿಯೇ ಲೋಕದಲ್ಲಿ ಕ್ಷತ್ರಿಯಜಾತಿಯು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿತು. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಲ್ಲಿಯೂ ದಮವೇ ಉತ್ತಮವ್ರತವೆಂದು ಹೇಳುವರು. ದಮದಿಂದುಂಟಾಗುವ ಗುಣಗಳಾವುವೆಂಬುದನ್ನು ತಿಳಿಸುವೆನು ಕೇಳು! ಕ್ಷಮೆ, ಧೈರ್ಯ, ಅಹಿಂಸೆ, ಸರ್ವಸಮಬುದ್ಧಿ, ಸತ್ಯ, ಋಜುತ್ವ, ಇಂದ್ರಿಯಜಯ, ಸ್ಥಿರಬುದ್ಧಿ, ಮೃದುತ್ವ, ಲಜ್ಜೆ, ಚಂಚಲಮನಸ್ಸಿಲ್ಲದಿರುವುದು, ಕೃಪಣತೆಯಿಲ್ಲದಿರುವುದು, ಆತುರವಿಲ್ಲದಿರುವುದು, ಶ್ರದ್ಧೆ, ಇವೆಲ್ಲವೂ ಆ ದಮದಿಂದ ಸಾಧಿಸಬೇಕಾದ ಗುಣಗಳು. ಈ ಗುಣಗಳು ಯಾವನಲ್ಲಿ ಕಾಣುವುವೋ ಅವನೇ ದಮವುಳ್ಳ ಪುರುಷನೆನಿಸುವನು. ಹೀಗಿಲ್ಲದೆ ಕಾಮ, ಕ್ರೋಧ, ಲೋಭ, ದರ್ಪ, ನಿದ್ರೆ, ಆತ್ಮಸ್ತುತಿ, ಗರ್ವ, ಅಸೂಯೆ, ದುಃಖ, ಈ ದುರ್ಗುಣಗಳು ಆತ್ಮನಿಗ್ರಹವುಳ್ಳವನಲ್ಲಿ ಕಾಣಲಾರವು. ಕುಟಿಲಸ್ವಭಾವವೂ, ಮೂರ್ಖತನವೂ ಇಲ್ಲದೆ ಶುದ್ಧಮನಸ್ಕನಾಗಿರುವುದು ದಮವುಳ್ಳವನ ಲಕ್ಷಣಗಳು. ಆಶೆಯಿಲ್ಲದಿರುವುದು, ಮಿತವಾದುದನ್ನು ಪಡೆಯುವ ಅಭಿಲಾಷೆ, ವಿಷಯಚಿಂತೆಯಿಲ್ಲದಿರುವುದು, ಎಲ್ಲಾ ಸಂದರ್ಭಗಳಲ್ಲಿಯೂ ಸಮುದ್ರದಂತೆ ಧೀರನಾಗಿರುವುದು, ಈ ಸ್ವಭಾವವುಳ್ಳವನೇ ದಾಂತನೆನಿಸುವನು. ಯಾವನು ಒಳ್ಳೇಗುಣಗಳಿಂದಲೂ, ನಡತೆಗಳಿಂದಲೂ ಕೂಡಿದವನಾಗಿ, ಪ್ರಸನ್ನ ಮನಸ್ಸಿನಿಂದ ಆತ್ಮಜ್ಞಾನಿಯಾಗಿರುವನೋ, ಅವನು ಈ ಲೋಕದಲ್ಲಿರುವವರೆಗೆ ಸಮ್ಮಾನಿತನಾಗಿ, ದೇಹಾವಸಾನದಲ್ಲಿ ಸದ್ಗತಿಯನ್ನು ಹೊಂದುವನು. ಯಾವನು ತನ್ನಿಂದ ಇತರರಿಗೂ, ಇತರರಿಂದ ತನಗೂ, ಭಯವಿಲ್ಲದಂತಿರುವನೋ, ಪರಿಪಕ್ವವಾದ ಜ್ಞಾನವುಳ್ಳ ಅಂತವನೇ ಮನುಷ್ಯರಲ್ಲಿ ಉತ್ತಮನೆಂದು ಲೋಕಪ್ರಖ್ಯಾತನಾಗುವನು. ಸಮಸ್ತ ಭೂತಗಳಿಗೂ ಹಿತನಾದ ಆತನು ಸಕಲ ಸುಹೃತ್ತೆನಿಸುವನು. ಅವನಿಂದ ಯಾರಿಗೂ ಯಾವ ಭಯವೂ ಇರುವುದಿಲ್ಲ. ಆತನು ಸಮುದ್ರದಂತೆ ಗಂಭೀರ

ನಾಗಿ, ಜ್ಞಾನದಿಂದಲೇ ತೃಪ್ತನಾಗಿ, ಸದಾ ಶಾಂತಚಿತ್ತನಾಗಿರುವನು. ಶಮದಿಂದಲೂ, ದಮದಿಂದಲೂ ಕೂಡಿದವರು ಪೂರ್ವದಲ್ಲಿ ತಮ್ಮ ಕರ್ಮದಿಂದ ಅನುಷ್ಠಿಸಲ್ಪಟ್ಟ ಮತ್ತು ಸಜ್ಜನರಿಂದ ಆಚರಿಸಲ್ಪಟ್ಟ ಮಾರ್ಗವನ್ನೇ ಹಿಡಿದು ಅದರಿಂದ ತೃಪ್ತರಾಗಿ ನಡೆಯುವರು. ಹಾಗಿಲ್ಲವೇ, ಜ್ಞಾನದಿಂದ ತೃಪ್ತನಾದವನು ಇಂದ್ರಿಯಗಳನ್ನು ಜಯಿಸಿ, ಕರ್ಮತ್ಯಾಗವೆಂಬ ಸನ್ಯಾಸವನ್ನು ಹಿಡಿದು, ತನ್ನ ಅಂತ್ಯಕಾಲವನ್ನು ನಿರೀಕ್ಷಿಸುತ್ತ ಮುಂದೆ ಬ್ರಹ್ಮಸ್ವರೂಪವನ್ನು ಹೊಂದಲು ಸಮರ್ಥನಾಗುವನು. ಆಕಾಶದಲ್ಲಿ ಹಾರುವ ಪಕ್ಷಿಗಳ ಕಾಲುಗಳು ಹೇಗೆ ಕಾಣುವುದಿಲ್ಲವೋ, ಹಾಗೆ ಜ್ಞಾನತೃಪ್ತನಾದ ಮುನಿಯ ಮಾರ್ಗವೇನೆಂದು ಬೇರೊಬ್ಬರಿಗೆ ತಿಳಿಯಲಾರದು. ತನ್ನ ಮನೆ ಮಠಗಳನ್ನೆಲ್ಲ ಬಿಟ್ಟು, ಮೋಕ್ಷವನ್ನೇ ಆದರಿಸುತ್ತಿರುವವನಿಗೆ ತೇಜೋಮಯಗಳಾದ ಶಾಶ್ವತಲೋಕಗಳು ಲಭಿಸುವುವು.

ಇದು ಅರುವತ್ತುಮೂರನೆಯ ಅಧ್ಯಾಯವು.



ವಿದುರನು ಬೇಡನ ಕೈಗೆ ಸಿಕ್ಕಿಬಿದ್ದ ಪಕ್ಷಿಗಳ ದೃಷ್ಟಾಂತದಿಂದ ಜ್ಞಾತಿಗಳಲ್ಲಿ ಕಲಹವೂ, ಅತ್ಯಾಶೆಯೂ ಅನರ್ಥಕಾರಿಯೆಂದು ಧೃತರಾಷ್ಟ್ರನಿಗೆ ಬೋಧಿಸಿದುದು.

ಹಿಂದೆ ಬೇಡನೊಬ್ಬನು ಪಕ್ಷಿಗಳನ್ನು ಹಿಡಿಯುವುದಕ್ಕಾಗಿ ನೆಲದಲ್ಲಿ ಬಲೆಯನ್ನೊಡ್ಡಿದನು. ಆದರಲ್ಲಿ ಎರಡು ಪಕ್ಷಿಗಳು ಒಂದಾಗಿ ಸಿಕ್ಕಿಬಿದ್ದಿದ್ದುವು. ಆ ಪಕ್ಷಿಗಳೆರಡೂ ಏಕಕಾಲದಲ್ಲಿ ಆ ಬಲೆಯನ್ನೆತ್ತಿಕೊಂಡು ಹೊರಟುಹೋದುವು. ಬೇಡನು ಅವುಗಳನ್ನು ಹಿಡಿಯುವುದಕ್ಕಾಗಿ ತನ್ನ ಶ್ರಮವನ್ನೂ ನೋಡದೆ ಬಹುದೂರದವರೆಗೆ ಹಿಂಬಾಲಿಸಿ ಓಡಿದನು. ಆಗಲೇ ತನ್ನ ಆಹ್ನಿಕವನ್ನು ಮುಗಿಸಿಕೊಂಡು ಆಶ್ರಮದಲ್ಲಿದ್ದ ಋಷಿಯೊಬ್ಬನು ಇದನ್ನು ಕಂಡನು. ಆಕಾಶದಲ್ಲಿ ಬಲೆಯೊಡನೆ ಹಾರುತ್ತಿರುವ ಪಕ್ಷಿಗಳನ್ನೂ, ಅದನ್ನೇ ಹಿಂಬಾಲಿಸಿ ನೆಲದಮೇಲೆ ಓಡುತ್ತಿದ್ದ ಬೇಡನನ್ನೂ

ನೋಡಿ ಆ ಋಷಿಯು ಹೀಗೆಂದು ಕೇಳುವನು. "ಎಲೈ ಬೇಡನೇ! ಲೋಕದಲ್ಲಿ ಇದೀಗ ನನಗೆಲ್ಲಕ್ಕಿಂತಲೂ ಆಶ್ಚರ್ಯವಾಗಿ ತೋರುತ್ತಿರುವುದು. ಆಕಾಶದಲ್ಲಿ ಅತಿವೇಗದಿಂದ ಹಾರುತ್ತಿರುವ ಪಕ್ಷಿಗಳನ್ನು ಹಿಡಿಯಬೇಕೆಂದು ಪಾದಚಾರಿಯಾಗಿ ನೀನು ಹೀಗೆ ನೆಲದಮೇಲೆ ಓಡುತ್ತಿರುವೆಯಲ್ಲ? ಇದೇನು ನಿನಗೆ ಈ ಹುಚ್ಚು? ಆ ಪಕ್ಷಿಗಳು ನಿನ್ನ ಕೈಗೆ ಸಿಕ್ಕುವುವೇ?" ಎಂದನು. ಅದಕ್ಕಾ ಬೇಡನು "ಸಿಕ್ಕದೆಯೇನು? ಈ ಪಕ್ಷಿಗಳೆರಡೂ ಐಕಮತ್ಯದಿಂದ ಒಂದಾಗಿ ಸೇರಿ ನನ್ನ ಬಲೆಯನ್ನು ಅಪಹರಿಸಿಕೊಂಡು ಹೋಗುತ್ತಿರುವುವು. ಅವೆರಡರೊಳಗೆ ಯಾವಾಗ ಜಗಳವುಂಟಾಗುವುದೋ, ಆಗ ನನ್ನ ಕೈಗೆ ಸಿಕ್ಕಿಬೀಳುವುವು" ಎಂದನು. ಅದರಂತೆಯೇ ಸ್ವಲ್ಪಹೊತ್ತಿನಮೇಲೆ ಆ ಪಕ್ಷಿಗಳಿಗೆ ಮೃತ್ಯುಕಾಲವು ಸಂಧಿಸಿದುದರಿಂದ, ಒಂದಕ್ಕೊಂದು ಜಗಳವನ್ನಾರಂಭಿಸಿ ಕಚ್ಚಾಡುತ್ತ ಕೆಳಗೆ ಬಿದ್ದುವು. ಒಡನೆಯೇ ಬಲೆಯಲ್ಲಿ ಸಿಕ್ಕಿ ಒದ್ದಾಡುತ್ತಿದ್ದ ಆ ಪಕ್ಷಿಗಳನ್ನು ಬೇಡನು ಸುಲಭವಾಗಿ ಹಿಡಿದುಬಿಟ್ಟನು. ಓ ದುರ್ಯೋಧನಾ! ಹೀಗೆಯೇ ಜ್ಞಾತಿಗಳು ತಮ್ಮಲ್ಲಿ ಕಲಹವನ್ನಾರಂಭಿಸಿದರೆ, ಆ ಪಕ್ಷಿಗಳಂತೆ ಮೃತ್ಯುವಿಗೆ ವಶರಾಗುವುದು ನಿಶ್ಚಯವು. ಒಟ್ಟಿಗೆ ಸೇರಿ ಊಟಮಾಡುವುದು, ಒಟ್ಟಿಗೆ ಸೇರಿ ಮಾತುಕತೆಗಳನ್ನಾಡುವುದು, ಒಬ್ಬರನ್ನೊಬ್ಬರು ಕ್ಷೇಮಲಾಭಗಳನ್ನು ವಿಚಾರಿಸುವುದು, ಯಾವಾಗಲೂ ಒಟ್ಟಿಗೆ ಕೂಡಾಡುವುದು, ಇವೇ ಜ್ಞಾತಿಗಳ ಕರ್ತವ್ಯಗಳು. ಅವರಲ್ಲಿ ವಿರೋಧವು ಮಾತ್ರ ಎಂದಿಗೂ ಆಗಬಾರದು. ಎಲ್ಲರೂ ಒಬ್ಬರಿಗೊಬ್ಬರು ಸಹೃದಯರಾಗಿ, ಹಿರಿಯರನ್ನು ಸೇವಿಸಿ, ಅವರ ಮಾತಿನಂತೆ ನಡೆಯುವವರು ಸಿಂಹದಿಂದ ರಕ್ಷಿತವಾದ ಅರಣ್ಯದಂತೆ ಸುರಕ್ಷಿತವಾಗಿರುವರು. ಬೇರೆ ಯಾರೂ ಅಂತವರಮೇಲೆ ಕೈ ಮಾಡಲಾರರು. ಯಾರು ವಿಶೇಷ ಭಾಗ್ಯವನ್ನು ಹೊಂದಿಯೂ ದೀನರಂತೆಯೇ ಇರುವರೋ ಅವರು ತಮ್ಮ ಐಶ್ವರ್ಯಗಳನ್ನೆಲ್ಲ ಶತ್ರುಗಳ ಪಾಲಾಗಿಸುವರು. ಓ ಮಹಾರಾಜಾ! ಕೊಳ್ಳಿಗಳನ್ನು ಒಂದಾಗಿ ಸೇರಿಸಿಟ್ಟಾಗ ಉರಿಯುವುವು. ಅವುಗಳನ್ನು ಪ್ರತ್ಯೇಕಿಸಿಟ್ಟರೆ ಬರೀ ಹೊಗೆಯು ಮಾತ್ರ ಏಳುವುದು. ಜ್ಞಾತಿಗಳೂ ಅದರಂತೆಯೇ, ಎಂದು ತಿಳಿ! ಒಂದಾಗಿ ಸೇರಿದ್ದಾಗಲೇ ಅವರು ಪ್ರಕಾಶಕ್ಕೆ ಬರುವರು. ಹಿಂದೆ ನಾನು ಒಂದಾನೊಂದು ಪರ್ವತದಲ್ಲಿ

ಕಂಡುಬಂದ ಮತ್ತೊಂದು ನಿದರ್ಶನವನ್ನು ನಿನಗೆ ಹೇಳುವೆನು. ಅದನ್ನೂ ಕೇಳಿ, ಅನೇಲೆ ನಿನಗೆ ಹೇಗೆ ಹಿತವೆಂದು ತೋರುವುದೋ ಹಾಗೆ ನಡೆಸು. ಹಿಂದೊಮ್ಮೆ ನಾನು ಕೆಲವು ಬೇಡರುಗಳೊಡನೆಯೂ, ದೇವತೆಗಳಿಗೆ ಸಮಾನರಾಗಿ ಮಂತ್ರಯಂತ್ರಾದಿ ವಿದ್ಯೆಗಳಲ್ಲಿಯೂ, ಔಷಧಸಾಧನೆಗಳಲ್ಲಿಯೂ, ನಿಪುಣರಾದ ಬ್ರಾಹ್ಮಣರೊಡನೆಯೂ ಸೇರಿ, ಉತ್ತರದಿಕ್ಕಿನಲ್ಲಿರುವ ಗಂಧಮಾದನಪರ್ವತಕ್ಕೆ ಹೋದೆನು. ಆ ಪರ್ವತವು ಲತೆಗಳಿಂದ ಎಲ್ಲಾ ಕಡೆಯೂ ಪೊದರಾಗಿದ್ದಿತು. ಜ್ವಲಿಸುತ್ತಿರುವ ಜ್ಯೋತಿರ್ಲತೆ ಮೊದಲಾದ ಔಷಧಿಗಳು ಎಲ್ಲೆಲ್ಲಿಯೂ ಸಮೃದ್ಧವಾಗಿದ್ದುವು. ಸಿದ್ಧರೂ, ಗಂಧರ್ವರೂ, ಅಲ್ಲಿ ಯಾವಾಗಲೂ ಸಂಚರಿಸುತ್ತಿರುವರು. ಅಲ್ಲಿ ಹಳ್ಳತಿಟ್ಟಾದ ಒಂದು ಬೆಟ್ಟದ ಕಮರಿಯಲ್ಲಿ, ಒಂದು ಕೊಡದಲ್ಲಿ ತುಂಬಿದ್ದ ಹೊಂಬಣ್ಣವಾದ ಜೇನನ್ನು ಕಂಡೆನು. ಆ ಜೇನಿನ ಕೊಡಕ್ಕೆ ಸರ್ಪಗಳು ಕಾವಲಾಗಿದ್ದುವು. ಅದು ಕುಬೇರನಿಗೆ ಬಹಳ ಪ್ರಿಯವಾದುದು. "ಆ ಮಧುವನ್ನು ಪಡೆದರೆ ಮರ್ತ್ಯನಾದರೂ ಅಮರತ್ವವನ್ನು ಹೊಂದುವನು. ಕಣ್ಣಿಲ್ಲದವನು ಕಣ್ಣುಗಳನ್ನು ಪಡೆಯುವನು. ಮುದುಕನಿಗೂ ಪ್ರಾಯವು ಬರುವುದು" ಹೀಗೆಂದು ಅಲ್ಲಿ ನನ್ನೊಡನೆ ಬಂದಿದ್ದ ಔಷಧಜ್ಞರಾದ ಬ್ರಾಹ್ಮಣರು ಹೇಳಿಕೊಳ್ಳುತ್ತಿದ್ದರು. ಇದನ್ನು ಕೇಳಿ ಅಲ್ಲಿದ್ದ ಕಿರಾತರಿಗೆ ಅದನ್ನು ಸಂಗ್ರಹಿಸಬೇಕೆಂಬ ಆಸೆ ಹುಟ್ಟಿತು. ಆ ಕಿರಾತರು ಅದಕ್ಕಾಸೆಪಟ್ಟು ಸರ್ಪಗಳಿಂದ ತುಂಬಿದ ದುರ್ಗಮವಾದ ಬೆಟ್ಟದ ಕಮರಿಯಲ್ಲಿ ಬಿದ್ದು ಅಲ್ಲಿಯೇ ನಾಶಹೊಂದಿದರು. ಓ ಧೃತರಾಷ್ಟ್ರಮಹಾರಾಜಾ! ಈಗ ನಿನ್ನ ಮಗನಾದ ದುರ್ಯೋಧನನ ಸಂಗತಿಯೂ ಇದೇರೀತಿಯಲ್ಲಿದೆಯೆಂದು ತಿಳಿ. ಅವನು ಈ ಭೂಮಿಯನ್ನೆಲ್ಲ ತಾನೊಬ್ಬನೇ ಅನುಭವಿಸಬೇಕೆಂದು ಬಯಸುವನು. ಬುದ್ಧಿಮೋಹದಿಂದ ಜೇನಿನ ಸವಿಯಲ್ಲಿ ಆಸೆಯುಳ್ಳವನಿಗೆ ಮುಂದೆ ತನಗೆ ನಾಶಕರವಾದ ಕಮರಿಯು ಕಣ್ಣಿಗೆ ಬೀಳದು. ಅವನು ಸವ್ಯಸಾಚಿಯಾದ ಅರ್ಜುನನೊಡನೆ ಯುದ್ಧಕ್ಕಾಗಿ ಆತುರಗೊಂಡಿರುವನೇ ಹೊರತು ಅವನ ಪರಾಕ್ರಮವೂ, ಬಲವೂ ಎಂತಹದೆಂಬುದನ್ನು ಯೋಚಿಸುವುದಿಲ್ಲ. ನಿನ್ನ ಮಗನಿಗೆ ಅರ್ಜುನನಂತೆ ಬಲವಾಗಲಿ, ಪರಾಕ್ರಮವಾಗಲಿ ಇರುವುದಾಗಿ ನನಗೆ ತೋರಲಿಲ್ಲ. ಆ ಅರ್ಜುನನು ಏಕಾಕಿಯಾಗಿಯೇ ರಥವ

ನ್ನೇರಿ ಭೂಮಿಯನ್ನೆಲ್ಲ ಜಯಿಸಿಬಂದವನು. ಯುದ್ಧನಿಪುಣರೆನಿಸಿದ ಭೀಷ್ಮ ದ್ರೋಣಾದಿಗಳೇ ಹಿಂದೆ ವಿರಾಟನಗರದಲ್ಲಿ ಅವನಿಂದ ಪರಾಜಿತರಾಗಿ ಓಡಿಬಂದರು. ಮತ್ತು ಅವನು ನಿನ್ನ ಮುಖವನ್ನೇ ನಿರೀಕ್ಷಿಸುತ್ತ ಇದುವರೆಗೂ ಸಹಿಸಿಕೊಂಡಿರುವನು. ಆ ದ್ರುಪದನೂ, ಮತ್ಸ್ಯರಾಜನೂ, ಅರ್ಜುನನೂ, ಈ ಮೂವರೂ ಕೋಪಗೊಂಡರೆ, ವಾಯುಪ್ರೇರಿತಗಳಾದ ಮೂರು ಅಗ್ನಿಗಳಂತೆ ದಹಿಸಿಬಿಡುವರೇ ಹೊರತು, ಯುದ್ಧದಲ್ಲಿ ನಿಮ್ಮೊಬ್ಬರನ್ನೂ ಉಳಿಸುವಹಾಗಿಲ್ಲ. ಆದುದರಿಂದ, ಓ ಧೃತರಾಷ್ಟ್ರಮಹಾರಾಜಾ! ಆ ಧರ್ಮರಾಜನನ್ನು ತಂದು ನಿನ್ನ ತೊಡೆಯಲ್ಲಿರಿಸಿ ಕಾಪಾಡು. ಇಬ್ಬರೂ ಯುದ್ಧಕ್ಕೆ ನಿಂತಮೇಲೆ ಯಾವನೊಬ್ಬನಿಗೂ ಜಯವು ನಿಶ್ಚಯವೆಂದು ನಂಬುವುದಕ್ಕಿಲ್ಲ'' ಎಂದನು.

ಇದು ಅರುವತ್ತುನಾಲ್ಕನೆಯ ಅಧ್ಯಾಯವು.



ಧೃತರಾಷ್ಟ್ರನು ಶ್ರೀಕೃಷ್ಣನ ಪ್ರೀತಿಗೆ ಪಾತ್ರನಾದ ಅರ್ಜುನನನ್ನು ಜಯಿಸುವುದು ಅಸಾಧ್ಯವಾದುದರಿಂದ, ಸಂಧಿಮಾಡಿಕೊಳ್ಳುವಂತೆ ದುರ್ಯೋಧನನಿಗೆ ತಿಳಿಸಿದುದು.

ಆಗ ಧೃತರಾಷ್ಟ್ರನು ''ಸುಯೋಧನಾ! ನಾನು ಹೇಳುವುದನ್ನು ಕೇಳು. ದಾರಿತಪ್ಪಿಹೋದ ಪ್ರಯಾಣಿಕನಂತೆ, ನೀನು ತಪ್ಪುದಾರಿಗೆ ಹೋಗುತ್ತ ಅದೇ ಸರಿಯಾದುದೆಂದೂ ತಿಳಿದುಕೊಂಡಿರುವೆ. ಲೋಕಕ್ಕೆಲ್ಲ ಆಧಾರಭೂತಗಳಾದ ಪಂಚಮಹಾಭೂತಗಳಂತಿರುವ ಪಂಚಪಾಂಡವರನ್ನು ಗೆಲ್ಲಲು ನಿನ್ನಿಂದ ಸಾಧ್ಯವೇ? ಮಹಾನುಭಾವನೂ, ಧರ್ಮರತನೂ ಆದ ಧರ್ಮರಾಜನಿಗೆ ನಿನ್ನ ಜೀವವನ್ನರ್ಪಿಸದೆ ನೀನು ಅವನನ್ನು ಜಯಿಸಲಾಗುವುದೆ? ಬಿರುಗಾಳಿಗಿದಿರಾದ ಮರದಂತೆ, ನೀನು ಅಸಮಾನಶೂರನೂ, ಯುದ್ಧದಲ್ಲಿ ಯಮನಿಗೆ ಸಮಾನನೂ ಆದ ಭೀಮಸೇನನಿಗಿದಿರಾಗಿ ನಿಲ್ಲಬಲ್ಲೆಯಾ? ಪರ್ವತಗಳಲ್ಲೆಲ್ಲ ಮೇರುಪರ್ವತದಂತೆ ಧನುರ್ಧಾರಿ

ಗಳಲ್ಲಿ ಅಪ್ರತಿಮನಾದ ಅರ್ಜುನನನ್ನು ಯಾವ ವಿವೇಕಿಯು ತಾನೇ ಇದಿರಿಸಿ ನಿಲ್ಲುವನು? ಇಂದ್ರನು ವಜ್ರಾಯುಧವನ್ನು ಪ್ರಯೋಗಿಸುವಂತೆ ಶತ್ರುಗಳಮೇಲೆ ಬಾಣವರ್ಷವನ್ನು ಕರೆಯುವ ಧೃಷ್ಟದ್ಯುಮ್ನನು ಯಾರನ್ನು ತಾನೇ ಕೊಲ್ಲದೆ ಬಿಡುವನು? ಪಾಂಡವಪಕ್ಷಪಾತವುಳ್ಳ ಸಾತ್ಯಕಿಯು ನಿಮ್ಮ ಸೈನ್ಯವನ್ನೆಲ್ಲ ಕ್ಷಣಮಾತ್ರದಲ್ಲಿ ಧ್ವಂಸಮಾಡಿಬಿಡುವನು. ಮೂರು ಲೋಕಕ್ಕೂ ಮೇಲೆನಿಸಿದ ಪುಂಡರೀಕಾಕ್ಷನಾದ ಶ್ರೀಕೃಷ್ಣನನ್ನು ಬುದ್ಧಿವಂತನಾದ ಯಾವನು ತಾನೇ ಇದಿರಿಸುವನು? ಅವನಿಗೆ, ತನ್ನ ಹೆಂಡಿರು, ಮಕ್ಕಳು, ಸಹೋದರರು, ಬಂಧುಗಳು, ತಾನು, ಈ ಸಮಸ್ತಭೂಮಿ, ಇವೆಲ್ಲವೂ ಒಂದು! ಆ ಅರ್ಜುನನೇ ಒಂದು! ಎಲ್ಲಕ್ಕಿಂತಲೂ ಅವನಿಗೆ ಅರ್ಜುನನೇ ಪರಮಾಪ್ತನು. ಆದುದರಿಂದ ಅರ್ಜುನಪಕ್ಷಪಾತಿಯಾದ ಕೃಷ್ಣನಿರುವ ಸೈನ್ಯವನ್ನು ಗೆಲ್ಲಲು ಸಾಧ್ಯವೇ? ಓ ದುರ್ಯೋಧನಾ! ನಿನ್ನ ಹಿರಿಯರ ಮಾತನ್ನು ಕೇಳು. ನಿನ್ನ ಪಿತಾಮಹನಾದ ಭೀಷ್ಮನ ಮಾತನ್ನು ಗೌರವಿಸು! ಕೌರವರೆಲ್ಲರಿಗೂ ಹಿತವನ್ನು ಬೋಧಿಸುವ ದ್ರೋಣ, ಕೃಪ, ವಿಕರ್ಣ, ಬಾಹ್ಲೀಕರ ಮಾತುಗಳನ್ನು ನಿರಾಕರಿಸದಿರು. ಗುಣಾವಗುಣಗಳನ್ನು ತಿಳಿದ ಮಹಾನುಭಾವರಾದ ಇವರೆಲ್ಲರಿಗೂ ನನ್ನಂತೆಯೇ ನಿನ್ನಲ್ಲಿ ಪ್ರೀತಿವಿಶ್ವಾಸವಿರುವುದು. ವಿರಾಟನಗರದಲ್ಲಿ ಗೋಗ್ರಹಣಕಾಲದಲ್ಲಿ ಪಾರ್ಥನೊಬ್ಬನೇ ನಿನ್ನ ಮತ್ತು ನಿನ್ನ ಸಹೋದರರ ಸೈನ್ಯವನ್ನೆಲ್ಲ ಓಡಿಸಿದುದು ನಿನ್ನ ನೆನಪಿಗೆ ಬರಲಿಲ್ಲವೆ? ಅದನ್ನು ನೆನೆಸಿಕೋ. ಆಗಲಾದರೂ ನಾವೆಲ್ಲರೂ ಹೇಳುವ ಮಾತುಗಳ ಯಥಾರ್ಥತೆಯು ನಿನಗೆ ತಿಳಿದುಬರುವುದು. ಅರ್ಜುನನೊಬ್ಬನೇ ಇಂತಹ ಮಹತ್ಕಾರ್ಯವನ್ನು ನಿರ್ವಹಿಸಿರುವಾಗ, ಪಾಂಡವರೆಲ್ಲರೂ ಸೇರಿ ಏನನ್ನು ತಾನೇ ಮಾಡಲಾರರು? ಆದುದರಿಂದ ಅವರನ್ನು ಸಹೋದರರಂತೆ ಪ್ರೀತಿಯಿಂದ ಬರಮಾಡಿ ಅವರಿಗೆ ರಾಜ್ಯವನ್ನು ಕೊಡು" ಎಂದನು.

ಇದು ಅರುವತ್ತೈದನೆಯ ಅಧ್ಯಾಯವು.

ದುರ್ಯೋಧನನ ಮೂರ್ಖಸ್ವಭಾವಕ್ಕೆ ಬೇಸರಿಸಿ, ರಾಜರೆಲ್ಲರೂ ಸಭೆಯಿಂದೆದ್ದುದು. ವ್ಯಾಸನ ಮತ್ತು ಗಾಂಧಾರಿಯ ಮುಂದೆ ಸಂಜಯನು ಉಭಯಪಕ್ಷದ ಬಲಾಬಲಗಳನ್ನು ತಿಳಿಸಿದುದು.

ಓ ಜನಮೇಜಯರಾಜಾ! ಕೇಳು! ದುರ್ಯೋಧನನು ಧೃತರಾಷ್ಟ್ರನ ಹಿತೋಪದೇಶವೊಂದಕ್ಕೂ ಕಿವಿಗುಡದೆ, ಉಳಿದವರೂ ಮಾತಾಡದೆ ಸುಮ್ಮನಿರಲು, ರಾಜರೆಲ್ಲರೂ ಅಲ್ಲಿಂದೆದ್ದು ಹೊರಡಲುದ್ಯುಕ್ತರಾದರು. ಎಲ್ಲರೂ ಹೋದಮೇಲೆ, ಧೃತರಾಷ್ಟ್ರನು ತನ್ನ ಮಗನಮೇಲಿನ ಮೋಹದಿಂದ ಅವನಿಗೂ, ಅವನನ್ನಾಶ್ರಯಿಸಿದ ರಾಜರಿಗೂ ಕ್ಷೇಮವುಂಟಾಗಬೇಕೆಂದು ಕೋರುತ್ತ, ಏಕಾಂತದಲ್ಲಿ ಸಂಜಯನನ್ನು ಕುರಿತು ಪಾಂಡವ ಕೌರವರ ಬಲಾಬಲತಾರತಮ್ಯದ ವಿಷಯವಾಗಿ ತಿರುಗಿ ಪ್ರಶ್ನೆಮಾಡಿದನು. “ಓ ಸಂಜಯಾ! ನಮ್ಮ ಸೈನ್ಯದ ಶಕ್ತಿ ಸಾಮರ್ಥ್ಯಗಳನ್ನು ನೀನು ಬಲ್ಲೆ! ಪಾಂಡವರಕಡೆಯ ಸೈನ್ಯವು ನಮ್ಮ ಸೈನ್ಯಕ್ಕಿಂತಲೂ ಯಾವ ಭಾಗದಲ್ಲಿ ಅಧಿಕ ಬಲವುಳ್ಳುದು? ನೀನು ಈ ಎರಡು ಸೈನ್ಯಗಳ ಬಲಾಬಲವನ್ನರಿತವನು. ಧರ್ಮಾರ್ಥಗಳ ನಿಶ್ಚಯವೂ ನಿನಗೆ ಚೆನ್ನಾಗಿ ತಿಳಿದಿದೆ. ಆದುದರಿಂದ ಈ ಸೈನ್ಯಗಳೆರಡೂ ಯುದ್ಧಕ್ಕೆ ನಿಂತಪಕ್ಷದಲ್ಲಿ, ಯಾವ ಪಕ್ಷವು ಜಯಹೊಂದುವುದು? ಯಾವುದು ಮುರಿದುಹೋಗುವುದು? ಅದನ್ನು ನಿನಗೆ ತೋರಿದಂತೆ ತಿಳಿಸು” ಎಂದನು.

ಆಗ ಸಂಜಯನು “ಓ ರಾಜಾ! ಕೇಳು! ನನ್ನ ಅಭಿಪ್ರಾಯಗಳೊಂದನ್ನೂ ನಿನಗೆ ಏಕಾಂತವಾಗಿ ತಿಳಿಸಲಾರೆನು. ಹಾಗೆ ತಿಳಿಸಿದಪಕ್ಷದಲ್ಲಿ ನಿನಗೆ ಕೋಪವುಂಟಾಗಬಹುದು. ಆದುದರಿಂದ ನ್ಯಾಯಾನ್ಯಾಯಗಳನ್ನು ಚೆನ್ನಾಗಿ ತಿಳಿದ ವ್ಯಾಸಮಹರ್ಷಿಯನ್ನೂ, ನಿನ್ನ ಪತ್ನಿಯಾದ ಗಾಂಧಾರಿಯನ್ನೂ ಕರೆಯಿಸು. ಅವರಿದ್ದರೆ ನಿನ್ನ ಆಗ್ರಹವನ್ನು ತಡೆಯಬಲ್ಲರು. ಅವರಿದಿರಾಗಿಯೇ ಕೃಷ್ಣಾರ್ಜುನರ ಉದ್ದೇಶಗಳನ್ನೆಲ್ಲ ವಿಸ್ತಾರವಾಗಿ ತಿಳಿಸುವೆನು” ಎಂದನು.

ಆಗ ಧೃತರಾಷ್ಟ್ರನು, ವಿದುರನ ಮೂಲಕವಾಗಿ ವ್ಯಾಸನನ್ನೂ, ಗಾಂಧಾರಿಯನ್ನೂ ಅಲ್ಲಿಗೆ ಕರೆಯಿಸಲು, ವಿದುರನು ಅವರಿಬ್ಬರನ್ನೂ ಸಭೆಗೆ ಕರೆತಂದನು. ಆಗ ವ್ಯಾಸನು ಸಂಜಯನನ್ನು ಕುರಿತು "ಓ ಸಂಜಯಾ! ಕೃಷ್ಣಾರ್ಜುನರ ವಿಷಯವಾಗಿ ಅಲ್ಲಿ ನೀನು ಏನೇನನ್ನು ತಿಳಿದುಬಂದೆಯೋ ಅವೆಲ್ಲವನ್ನೂ ಧೃತರಾಷ್ಟ್ರನಿಗೆ ವಿಸ್ತಾರವಾಗಿ ವಿವರಿಸು" ಎಂದನು.

ಇದು ಅರುವತ್ತಾರನೆಯ ಅಧ್ಯಾಯವು.



ಸಂಜಯನು ಶ್ರೀಕೃಷ್ಣನ ಅಮಾನುಷಪ್ರಭಾವವನ್ನು ತಿಳಿಸಿದುದು.

ಆಗ ಸಂಜಯನು ಧೃತರಾಷ್ಟ್ರನನ್ನು ಕುರಿತು "ಮಹಾರಾಜಾ! ಅರ್ಜುನನೂ, ವಾಸುದೇವನೂ ಮಹಾ ಧನುರ್ಧರರು. ಉತ್ತಮರಿಂದಲೂ ಆದರಿಸಲ್ಪಡತಕ್ಕವರು. ಅವರು ಕರ್ಮಸಂಬಂಧವಾದ ಜನ್ಮವಿಲ್ಲದೆ ತಮ್ಮಿಚ್ಛೆಯಿಂದ ತಾವೇ ಈ ಜನ್ಮವನ್ನು ಕೈಕೊಂಡು ಹುಟ್ಟಿದವರು. ಸರ್ವವಿಷಯಗಳಲ್ಲಿಯೂ ಸಮಾನರೆನಿಸಿದವರು. ಉದಾರಮನಸ್ಸುಳ್ಳ ಆ ಶ್ರೀಕೃಷ್ಣನ ಚಕ್ರಾಯುಧವು, ಆತನ ಪ್ರಯತ್ನವೇನೂ ಇಲ್ಲದೆಯೇ ಒಂದು ಮಾರು ದೂರದಷ್ಟು ಅವಕಾಶದಲ್ಲಿ ಆತನ ಮಾಯಾಪ್ರಭಾವದಿಂದ ಸುತ್ತುತ್ತಿರುವುದು. ಕೌರವರ ವಿಷಯದಲ್ಲಿ ಕುಟಿಲವೂ, ಪಾಂಡವರಿಗೆ ಸಮ್ಮತವೂ ಆಗಿ, ತೇಜೋರಾಶಿಯಿಂದ ಬೆಳಗುತ್ತಿರುವ ಆ ಚಕ್ರವೇ ಪಾಂಡವಕೌರವರ ಬಲದ ಸಾರಾಸಾರವನ್ನು ನಿರ್ಣಯಿಸಲು ಸಾಕಾಗಿದೆ. ಮಹಾಬಲಶಾಲಿಯಾದ ಆ ಕೃಷ್ಣನು ಅತಿಕ್ರೂರರಾದ ನರಕ, ಶಂಬರ, ಕಂಸ, ಶಿಶುಪಾಲರೆಂಬವರನ್ನು ಕೇವಲ ಲೀಲಾಮಾತ್ರದಿಂದ ಆಟವಾಡುವವನಂತೆ ಕೊಂದು ಕೆಡಹಿದನು. ದಿವ್ಯಸ್ವರೂಪಿಯೂ, ಮನಸ್ಸನ್ನು ವಶೀಕರಿಸಿದವನೂ ಆದ ಶ್ರೀಕೃಷ್ಣನು, ಭೂವ್ಯಾಕಾಶಗಳನ್ನೂ, ಸ್ವರ್ಗವನ್ನೂ ಮನಸ್ಸಂಕಲ್ಪಮಾತ್ರದಿಂದಲೇ ವಶೀಕರಿಸಬಲ್ಲವನು.

"ಓ ಮಹಾರಾಜಾ! ನೀನು ಪಾಂಡವರ ಬಲದ ಸಾರಾಸಾರವನ್ನು ಕುರಿತು ಕೊಸರಿಕೊಸರಿ ಕೇಳುತ್ತಿರುವೆಯಲ್ಲವೆ? ಒಂದೇ ಮಾತಿನಲ್ಲಿ

ಸಂಗ್ರಹಿಸಿ ಹೇಳುವೆನು ಕೇಳು! ಈ ಸಮಸ್ತಜಗತ್ತೂ ಒಂದು ತೂಕವು. ಜನಾರ್ದನನೇ ಒಂದು ತೂಕವು! ಎಲ್ಲಾ ಜಗತ್ತಿನ ಸಾರವೂ ಒಂದು ಕಡೆಯಲ್ಲಿದ್ದು, ಆ ಜನಾರ್ದನನೊಬ್ಬನೇ ಒಂದು ಕಡೆಗಿದ್ದರೂ, ಆ ಜನಾರ್ದನನ ಕೈಯೇ ಮೇಲೆಂದು ತಿಳಿ! ಆ ಕೃಷ್ಣನು ತನ್ನ ಮನಸ್ಸಿನಿಂದಲೇ ಈ ಜಗತ್ತನ್ನೆಲ್ಲಾ ಭಸ್ಮೀಭೂತವಾಗಿ ಮಾಡಬಲ್ಲನು. ಈ ಪ್ರಪಂಚವೆಲ್ಲ ಸೇರಿದರೂ ಆತನ ವಿಷಯದಲ್ಲಿ ಏನೂ ಮಾಡಲಾರವು. ಸತ್ಯವೂ, ಧರ್ಮವೂ, (ಅಕಾರ್ಯಗಳಲ್ಲಿ) ಲಜ್ಜೆಯೂ, ಋಜುತ್ವವೂ ಎಲ್ಲೆಲ್ಲಿವೆಯೋ ಅಲ್ಲಲ್ಲಿ ಕೃಷ್ಣನಿರುವನು. ಎಲ್ಲಿ ಕೃಷ್ಣನಿರುವನೋ ಅಲ್ಲಿ ಜಯವು! ಸರ್ವಭೂತಾತ್ಮಕನಾದ ಆ ಜನಾರ್ದನನೇ ಭೂಮಿಯನ್ನೂ, ಅಂತರಿಕ್ಷವನ್ನೂ, ಸ್ವರ್ಗವನ್ನೂ ತನ್ನ ಲೀಲಾಮಾತ್ರದಿಂದ ಆಡಿಸುತ್ತಿರುವನು. ಹೆಚ್ಚೇಕೆ? ಈಗ ಆ ಕೃಷ್ಣನು, ಲೋಕವನ್ನು ಮೋಹಗೊಳಿಸುತ್ತ ಪಾಂಡವರನ್ನು ವ್ಯಾಜವಾಗಿ ಮಾಡಿಕೊಂಡು, ಅಧರ್ಮನಿರತರಾದ ನಿನ್ನ ಮಕ್ಕಳನ್ನು ಕೊಲ್ಲುವುದಕ್ಕಾಗಿ ತಾನೇ ಸಂಕಲ್ಪಿಸಿರುವನು. ಭಗವಂತನಾದ ಆ ಕೇಶವನೇ ಕಾಲಚಕ್ರವನ್ನೂ, ಜಗತ್ತೆಂಬ ಚಕ್ರವನ್ನೂ, ಕರ್ಮವೆಂಬ ಚಕ್ರವನ್ನೂ ತನ್ನ ಯೋಗಮಾಯೆಯಿಂದ ಸುತ್ತಿಸುತ್ತಿರುವನು. ಕಾಲಕ್ಕೂ, ಮೃತ್ಯುವಿಗೂ, ಸ್ಥಾವರಜಂಗಮಾತ್ಮಕವಾದ ಪ್ರಪಂಚಕ್ಕೂ ನಿಯಾಮಕನು ಆ ಭಗವಂತನೊಬ್ಬನೇ! ನಾನು ನಿನಗೆ ಸತ್ಯವಾಗಿ ಹೇಳುವೆನು. ಅವನು ಸರ್ವಸಮರ್ಥನಾಗಿದ್ದರೂ, ನೆಲವನ್ನುಳುವ ಕೈಲಾಗದ ಕೂಲಿಯುವನಂತೆ ತಾನು ಕೆಲಸಮಾಡುವುದನ್ನು ನಟಿಸುತ್ತಿರುವನು. ಆ ಕೇಶವನು ತನ್ನ ಯೋಗಮಾಯೆಯಿಂದ ಪ್ರಪಂಚವನ್ನು ಮರುಳಾಗಿಸುವನು. ಅವನಲ್ಲಿ ಮರೆಹೊಕ್ಕ ಮನುಷ್ಯರು ಮಾತ್ರ ಅದರಿಂದ ಮೋಹಿತರಾಗುವುದಿಲ್ಲ” ಎಂದನು.

ಇದು ಅರುವತ್ತೇಳನೆಯ ಅಧ್ಯಾಯವು.

ಧೃತರಾಷ್ಟ್ರನು ಭಗವಂತನನ್ನು ಕಾಣುವುದಕ್ಕೆ ಸಾಧನವೇ ನೆಂದು ಕೇಳಲು, ಸಂಜಯನು ವ್ಯಾಸನ ಅನುಮತಿ ಯಿಂದ ಉತ್ತರವನ್ನು ಹೇಳಿದುದು.

ಆಗ ಧೃತರಾಷ್ಟ್ರನು "ಸಂಜಯಾ! ಆ ಶ್ರೀಕೃಷ್ಣನೇ ಸರ್ವಲೋಕೇಶ್ವರನೆಂಬುದನ್ನು ನೀನು ಹೇಗೆ ತಿಳಿದಿರುವೆ? ನನಗೇಕೆ ಅವನ ನಿಜಾಂಶವು ತಿಳಿಯಲಾರದು? ಅದರ ಕಾರಣವನ್ನು ತಿಳಿಸು" ಎಂದನು. ಅದಕ್ಕಾ ಸಂಜಯನು "ರಾಜೇಂದ್ರಾ! ಕೇಳು! ನಿನಗೆ ಇನ್ನೂ ಮನಸ್ಸಿನಲ್ಲಿ ಜ್ಞಾನಪರಿಪಾಕವಿಲ್ಲ. ನನಗೆ ಅದು ಪೂರ್ಣವಾಗಿರುವುದು. ಜ್ಞಾನ (ಅಥವಾ ಭಕ್ತಿ) ಪರಿಪಾಕವಿಲ್ಲದೆ, ತಮಸ್ಸಿನಿಂದ ಕೆಟ್ಟುಹೋದವನು ಆ ಭಗವಂತನನ್ನು ತಿಳಿಯಲಾರನು. ಭೂತ, ವರ್ತಮಾನ, ಭವಿಷತ್ತುಗಳೆಂಬ ಕಾಲತ್ರಯಗಳಲ್ಲಿಯೂ ಇರತಕ್ಕವನಾಗಿ (ಸ್ಥೂಲ, ಸೂಕ್ಷ್ಮ ಕಾರಣರೂಪಗಳಲ್ಲಿ ಸಂಬಂಧವುಳ್ಳವನಾಗಿ) ತನಗೆ ಬೇರೆ ಕರ್ತರಿಲ್ಲದೆ, ತಾನೇ ಎಲ್ಲಕ್ಕೂ ಕರ್ತನಾಗಿ, ಸಮಸ್ತಭೂತಗಳ ಸ್ಥಿತಿ ಲಯಗಳಿಗೂ ತಾನೇ ಕಾರಣನೆನಿಸಿದ ದೇವದೇವನಾದ ಆ ಮಧುಸೂದನನನ್ನು ನಾನು ಶುದ್ಧಜ್ಞಾನದಿಂದ (ಭಕ್ತಿಯಿಂದ) ಕಾಣಬಲ್ಲೆನು" ಎಂದನು.

ಅದಕ್ಕಾ ಧೃತರಾಷ್ಟ್ರನು "ಗವಲ್ಗಣಪುತ್ರನಾದ ಓ ಸಂಜಯಾ! ನೀನು ಯಾವುದರಿಂದ ಆ ಭಗವಂತನನ್ನು ಕಾಣುವೆಯೋ, ನಿತ್ಯವಾದ ಆ ಭಕ್ತಿಯೆಂಬುದು ಯಾವುದು? ಅದರ ಕ್ರಮವು ಹೇಗೆ?" ಎನಲು, ಸಂಜಯನು "ಮಹಾರಾಜಾ! ನಿನಗೆ ಮಂಗಳವಾಗಲಿ! ನಾನು ಪುತ್ರಕಳತ್ರಾದಿ ಮೋಹಕ್ಕಾಗಲಿ, 'ನಾನು' 'ನನ್ನದು' ಎಂಬ ಅಹಂಕಾರಮಮಕಾರಗಳಿಗಾಗಲಿ ನಿನ್ನಂತೆ ಈಡಾದವನಲ್ಲ. ನಾನು ಅಧರ್ಮಕ್ಕೂ ಮನಸ್ಸು ಕೊಡುವವನಲ್ಲ. ಭಕ್ತಿಯಿಂದ ಶುದ್ಧಮನಸ್ಕನಾಗಿ, ನಿಷ್ಕಲ್ಮಷವಾದ ಧ್ಯಾನದಿಂದಲೂ, ಶಾಸ್ತ್ರಶ್ರವಣದಿಂದಲೂ ಆ ಜನಾರ್ದನನನ್ನು ಕಾಣಬಲ್ಲೆನು" ಎಂದನು.

ಆಗ ಧೃತರಾಷ್ಟ್ರನು ತನ್ನ ಮಗನನ್ನು ಕುರಿತು "ದುರ್ಯೋಧನಾ! ಈ ಸಂಜಯನು ಹೇಳುವ ಮಾತನ್ನು ಕೇಳಿದೆಯಾ? ನಮಗೆ ಇವನು

ಪರಮಾಪ್ತನು. ಇವನು ಹೇಳುವಂತೆ ಆ ಶ್ರೀಕೃಷ್ಣನನ್ನು ಶುದ್ಧಹೃದಯ ದಿಂದ ಮರೆಹೊಕ್ಕು ನೀನೂ ರಕ್ಷಣೆಯನ್ನು ಪ್ರಾರ್ಥಿಸಬಾರದೇಕೆ?" ಎಂದ ನು. ಆಗ ದುರ್ಯೋಧನನು "ಜನಕಾ! ಸಂಜಯನು ಹೇಳಿದಂತೆ ದೇವ ಕೀಪುತ್ರನಾದ ವಾಸುದೇವನು ಸಾಕ್ಷಾದ್ಭಗವಂತನೇ ಆಗಿರಲಿ! ಅವನು ತನ್ನ ಸಂಕಲ್ಪಮಾತ್ರದಿಂದ ಲೋಕಗಳನ್ನೆಲ್ಲಾ ಸಂಹರಿಸಬಲ್ಲವನಾಗಿದ್ದ ರೂ ಇರಲಿ! ಅವೆಲ್ಲ ಯಥಾರ್ಥವಾಗಿದ್ದರೂ ಇರಬಹುದು. ಅದಕ್ಕಾಗಿ ನಾನೇನೂ ಆಕ್ಷೇಪಿಸುವವನಲ್ಲ. ಆದರೆ, ನನಗೆ ವೈರಿಯಾದ ಅರ್ಜುನನಲ್ಲಿ ಅವನು ಸ್ನೇಹವನ್ನು ಬೆಳೆಸಿರುವನು. ಈ ಕಾರಣದಿಂದಲೇ ನಾನು ಅವ ನನ್ನು ಆಶ್ರಯಿಸಲಾರೆನು" ಎಂದನು.

ಆಗ ಧೃತರಾಷ್ಟ್ರನು ತನ್ನ ಸಮೀಪದಲ್ಲಿದ್ದ ಪತ್ನಿಯಾದ ಗಾಂಧಾರಿ ಯನ್ನು ನೋಡಿ "ದೇವಿ! ನೋಡಿದೆಯಾ! ನಿನ್ನ ಮಗನಿಗೆ ಎಂತಹ ದುರ್ಬುದ್ಧಿಯು ಹುಟ್ಟಿದೆ! ತನ್ನ ಶ್ರೇಯಸ್ಸಿಗಾಗಿ ಹೇಳಿದ ಮಾತನ್ನು ಕೇಳದೆ, ದೊಡ್ಡವರನ್ನು ಅವಮಾನಿಸುತ್ತಿರುವನು. ಇವನಿಗೆ ಅಸೂಯೆ ಯೆಯೂ, ಅಹಂಕಾರವೂ ಬಹಳವಾಗಿ ಮುತ್ತಿಹೋಗಿದೆ. ಹೇಗೂ ಅವ ನು ಅಧೋಗತಿಗೆ ಪಾಲಾಗತಕ್ಕವನು. ನನ್ನ ಮಾತನ್ನೇನೋ ಅವನು ಕೇಳುವಹಾಗಿಲ್ಲ. ನೀನಾದರೂ ಅವನಿಗೆ ಬುದ್ಧಿಕಲಿಸಿ ನೋಡು" ಎಂದ ನು. ಆಗ ಗಾಂಧಾರಿಯು "ಕುಮಾರಾ! ನಿನಗೆ ಇಂತಹ ಕೆಟ್ಟ ಬುದ್ಧಿ ಯು ಹೇಗೆ ಹುಟ್ಟಿತು? ಐಶ್ವರ್ಯದಲ್ಲಿಯೇ ಪೇರಾಸೆಗೊಂಡು ದೊಡ್ಡವರ ಮಾತನ್ನು ನಿರಾಕರಿಸುವುದು ನಿನಗೆ ಉಚಿತವೇ? ನೀನು ಈ ನಿನ್ನ ದು ರ್ಬುದ್ಧಿಯಿಂದ ನಿನ್ನ ಐಶ್ವರ್ಯವನ್ನು ಮಾತ್ರವಲ್ಲದೆ, ನಿನ್ನ ಪ್ರಾಣವ ನ್ನೂ, ನಿನ್ನ ತಾಯಿಯಾದ ನನ್ನನ್ನೂ, ನಿನ್ನ ತಂದೆಯನ್ನೂ ಕಳೆದುಕೊ ಳ್ಳುವೆ. ಇದರಿಂದ ನಿನ್ನ ಶತ್ರುಗಳ ಐಶ್ವರ್ಯವನ್ನೂ ನೀನು ಹೆಚ್ಚಿಸುವೆ. ನನ್ನನ್ನೂ ದುಃಖದಲ್ಲಿ ಮುಳುಗಿಸುವೆ! ಎಲ ಬುದ್ಧಿಗೆಟ್ಟವನೆ! ಭೀಮ ಸೇನನಿಂದ ಮೈಮುರಿದು ನೀನು ಕೆಳಗೆ ಬೀಳುವಾಗ, ಈ ನಿನ್ನ ತಾಯಿಯ ಮಾತು ನಿನ್ನ ನೆನಪಿಗೆ ಬಾರದೆ ಹೋಗದು" ಎಂದಳು.

ಈ ನಡುವೆ ಅಲ್ಲಿದ್ದ ವ್ಯಾಸಮಹಾಮುನಿಯು ಧೃತರಾಷ್ಟ್ರನನ್ನು ನೋಡಿ "ರಾಜಾ! ನಾನೊಂದು ಮಾತನ್ನು ಹೇಳುವೆನು. ನೀನೇನೋ ಆ ಶ್ರೀಕೃಷ್ಣನಿಗೆ ಪ್ರೀತಿಪಾತ್ರನೇ! ಇದಲ್ಲದೆ, ಪರಮ ಸಾಧುವಾದ ಈ ಸಂಜಯನು, ನಿನಗೆ ದೂತನಾಗಿರುವುದರಿಂದ, ಹೇಗಾದರೂ ಅವನು ನಿನ್ನ ಶ್ರೇಯಸ್ಸಿಗೆ ಪ್ರಯತ್ನಿಸುವನು. ಈ ಸಂಜಯನು ಹೇಳುವ ಮಾತನ್ನು ನೀನು ಮನಸ್ಸಿಟ್ಟು ಕೇಳುವುದಾದರೆ, ಇವನು ನಿನ್ನನ್ನು ಈಗಿನ ಮಹಾ ಭಯದಿಂದ ತಪ್ಪಿಸಬಲ್ಲನು. ಈ ಸಂಜಯನು ಪರಮಾತ್ಮನೂ, ಸನಾತನನೂ ಆದ ಆ ಹೃಷೀಕೇಶನನ್ನು ಬಲ್ಲನು. ಧೃತರಾಷ್ಟ್ರಾ! ಕೋಪಕ್ಕೂ, ಹರ್ಷಕ್ಕೂ ವಶರಾದ ಪುರುಷರು ಅನೇಕವಿಧವಾದ ಕಷ್ಟದಲ್ಲಿ ಸಿಕ್ಕಿಬೀಳುವರು. ತಮಗೆ ಇದ್ದುದರಲ್ಲಿ ತೃಪ್ತಿಯಿಲ್ಲದೆ ಯಾರು ಅತ್ಯಾಶೆಗೊಳ್ಳುವರೋ, ಕಾಮಮೋಹಗಳಿಗೆ ಒಳಗಾದ ಅಂತವರು ತಿರುಗಿತಿರುಗಿ ಮರಣಕ್ಕೆ ಗುರಿಯಾಗುವರು. ಅಂತವರು ಕುರುಡರಿಂದ ನಡೆಸಲ್ಪಡುವ ಕುರುಡರಂತೆ ತಮ್ಮ ಕರ್ಮಗಳಿಂದಲೇ ಹಳ್ಳಕ್ಕೆ ತಳ್ಳಲ್ಪಡುವರು. ವಿವೇಕಿಗಳಾದ ಬುದ್ಧಿಶಾಲಿಗಳು ಹಿಡಿಯತಕ್ಕ ದಾರಿಯು ಒಂದೇ! ಅದೊಂದೇ ಆ ಪರಮಾತ್ಮನ ಬಳಿಗೆ ತಂದು ಸೇರಿಸತಕ್ಕ ಸರಿಯಾದ ಮಾರ್ಗವು. ಉತ್ತಮರಾದವರು ಆ ಮಾರ್ಗವನ್ನು ಹಿಡಿದೇ ಮೃತ್ಯುವನ್ನು ಜಯಿಸಿ, ತಾವು ಮುಟ್ಟಬೇಕಾದ ಸ್ಥಳವನ್ನು (ಮೋಕ್ಷವನ್ನು) ಮುಟ್ಟುವರು" ಎಂದನು.

ಆಗ ಧೃತರಾಷ್ಟ್ರನು "ಓ ಸಂಜಯಾ! ನಿರ್ಭಯವಾದ ಅಂತಹ ಮಾರ್ಗವಾವುದು? ಆ ಹೃಷೀಕೇಶನ ಅನುಗ್ರಹದಿಂದ ಮೋಕ್ಷಕ್ಕೆ ಸಾಧಕವಾದ ಆ ಮಾರ್ಗವನ್ನು ನನಗೆ ಸ್ಪಷ್ಟವಾಗಿ ತಿಳಿಸು" ಎಂದನು. ಅದಕ್ಕಾ ಸಂಜಯನು "ರಾಜೇಂದ್ರಾ! ಕೇಳು! ಮನೋನಿಗ್ರಹವಿಲ್ಲದವನು ನಿತ್ಯಸಿದ್ಧನಾದ ಆ ಪರಮಾತ್ಮನನ್ನು ಎಂದಿಗೂ ಕಾಣಲಾರನು. ಪರಮಾತ್ಮಜ್ಞಾನಕ್ಕೆ ಇಂದ್ರಿಯಜಯಕ್ಕಿಂತಲೂ ಬೇರೆ ಉಪಾಯವಿಲ್ಲ. ವಿಷಯಗಳಲ್ಲಿಯೇ ಪ್ರವರ್ತಿಸುವ ಇಂದ್ರಿಯಗಳ ದುರಾಶೆಯನ್ನು ಅಡಗಿಸುವುದಕ್ಕೆ ಬಹಳ ಜಾಗರೂಕತೆಯು ಬೇಕು. ಅಪ್ರಮಾದ, (ಎಚ್ಚರ ತಪ್ಪದಿರುವುದು), ಅಹಿಂಸೆ, ಇವೆರಡೂ ಜ್ಞಾನಕ್ಕೆ ಮೂಲವೆನಿಸಿವೆ. ಆದು

ದರಿಂದ ಓ ರಾಜಾ ! ನೀನು ಬೇಸರಗೊಳ್ಳದೆ, ಇಂದ್ರಿಯಗಳನ್ನು ಅಡಗಿಸಿಡುವುದಕ್ಕೆ ಪ್ರಯತ್ನಿಸು. ನಿನ್ನ ಬುದ್ಧಿಯು ಕಾಮ ಮೋಹಾದಿಗಳ ಕಡೆಗೆ ಎಳೆಯಲ್ಪಡದಂತೆ ಎಚ್ಚರದಿಂದಿರು ! ಇಂದ್ರಿಯಗಳನ್ನು ಸಿಕ್ಕಿದ ಕಡೆಗೆ ಹೋಗದಂತೆ ಅಡಗಿಸಿಡುವುದೇ ಜ್ಞಾನವೆಂದು ಜ್ಞಾನಿಗಳು ಹೇಳುವರು. ಇದೇ ವಿದ್ವಾಂಸರು ಹೇಳುವ ಉತ್ತಮಮಾರ್ಗವು ! ರಾಜೇಂದ್ರಾ ! ಇಂದ್ರಿಯಗಳನ್ನು ಜಯಿಸಲಾರದ ಮನುಷ್ಯರಿಗೆ ಆ ಪರಮಾತ್ಮನು ದೊರೆಯಲಾರನು. ಶಾಸ್ತ್ರಜ್ಞಾನವೂ, ಇಂದ್ರಿಯನಿಗ್ರಹವೆಂಬ ಯೋಗಬಲವೂ ಉಳ್ಳವರನ್ನೇ ಆ ಪುರುಷೋತ್ತಮನು ಜ್ಞಾನಪ್ರವಾಹದಿಂದ ಅನುಗ್ರಹಿಸುವನು" ಎಂದನು.

ಇದು ಅರುವತ್ತೆಂಟನೆಯ ಅಧ್ಯಾಯವು.



ಸಂಜಯನು ಧೃತರಾಷ್ಟ್ರನಿಗೆ ವಾಸುದೇವಾದಿ ಭಗವನ್ನಾಮಗಳ ಅರ್ಥವನ್ನು ವಿವರಿಸಿ, ಕೌರವ ಪಾಂಡವರ ಸಂಧಿಗಾಗಿ ಶ್ರೀಕೃಷ್ಣನೇ ಬರುವುದಾಗಿ ಸೂಚಿಸಿದುದು.

ಧೃತರಾಷ್ಟ್ರನು ತಿರುಗಿ ಸಂಜಯನನ್ನು ಕುರಿತು "ಸಂಜಯಾ! ಪುಂಡರೀಕಾಕ್ಷನಾದ ಆ ಶ್ರೀಕೃಷ್ಣನ ವಿಚಾರವಾಗಿ ಎಷ್ಟೆಷ್ಟು ಕೇಳಿದರೂ ನನಗೆ ತೃಪ್ತಿಯಿಲ್ಲದಿದೆ. ಆ ಭಗವಂತನ ನಾಮಗಳನ್ನೂ, ಆಯಾ ಹೆಸರು ಬರಲು ಕಾರಣಗಳಾದ ಅವನ ಕಾರ್ಯಗಳನ್ನೂ ತಿಳಿದು, ಅದರಿಂದಾದರೂ ಆ ಪುರುಷೋತ್ತಮನನ್ನು ಹೊಂದುವೆನು" ಎಂದನು. ಅದಕ್ಕಾ ಸಂಜಯನು "ರಾಜೇಂದ್ರಾ! ಆ ಭಗವಂತನ ಮಹಿಮೆಯೇನೋ ಹೀಗೆಂದು ಊಹಿಸಲಸಾಧ್ಯವಾದುದು. ನಾನು ಹಿರಿಯರಿಂದ ಕೇಳಿ ತಿಳಿದ ಮಟ್ಟಿಗೆ, ಆ ವಾಸುದೇವನ ಮಂಗಳಕರಗಳಾದ ನಾಮಗಳ ಅರ್ಥವನ್ನು ಹೇಳುವೆನು.

ಸಮಸ್ತ ಭೂತಗಳಿಗೂ ತಾನೇ ವಾಸಭೂತನಾಗಿ, ಸರ್ವದ್ರವ್ಯರೂಪನಾಗಿ, ಮತ್ತು ದೇವನಾಗಿಯೂ ಇರುವುದರಿಂದ, ಅವನಿಗೆ **ವಾಸುದೇವ**

ನೆಂದು ಹೆಸರು. ಸರ್ವವ್ಯಾಪಿಯಾದುದರಿಂದ **ವಿಷ್ಣು**ವೆನಿಸುವನು. *ಮೌನದಿಂದಲೂ, ಧ್ಯಾನದಿಂದಲೂ, ಯೋಗಬಲದಿಂದಲೂ ಯೋಗಿಗಳಿಗೆ ಅವನು ಗೋಚರಿಸತಕ್ಕವನಾದುರಿಂದ **ಮಾಧವ**ನೆನಿಸುವನು. ಮಧುವೆಂದರೆ, ಪೃಥ್ವಿ ಮೊದಲಾದ ಸಮಸ್ತ ಸುಖಸಾಧನಗಳನ್ನೂ ತನ್ನಲ್ಲಿ ಲಯಗೊಳಿಸುವುದರಿಂದ **ಮಧುಸೂದನ**ನೆನಿಸುವನು. "ಕೃಷಿ" ಎಂದರೆ ಕರ್ಷಣಕ್ಕೆ ಪಾತ್ರವಾದ ಭೂಮಿ, "ಣ" ಎಂದರೆ ಸುಖವೆಂದರ್ಥವು. ಭೂಮಿಯೊಳಗಿನ ಪ್ರಾಣಿಗಳಿಗೆ ಸುಖಪ್ರದನಾದುದರಿಂದ **ಕೃಷ್ಣ**ನೆನಿಸುವನು. ಪುಂಡರೀಕವೆಂದರೆ ಹೃದಯಕಮಲವು. ಅದರಲ್ಲಿ ಅಕ್ಷನು ಎಂದರೆ, ಅಕ್ಷಯನಾಗಿ ನೆಲೆಸಿರುವುದರಿಂದ, ಅವನನ್ನು **ಪುಂಡರೀಕಾಕ್ಷ**ನೆನ್ನುವರು. ದಸ್ಯುಗಳನ್ನು (ದುಷ್ಟರನ್ನು) ನಿಗ್ರಹಿಸುವುದರಿಂದ **ಜನಾರ್ದನ**ನೆನಿಸುವನು. ಸತ್ವವೆಂದರೆ ಬಲವು. ಯಾವನಲ್ಲಿ ಯಾವ ಕಾರಣದಿಂದಲೂ ಆ ಸತ್ವವು ಅಗಲುವುದಿಲ್ಲವೋ, ಮತ್ತು ಯಾವನು ಸತ್ವದಿಂದ ಕ್ಷೀಣಿಸುವುದೂ ಇಲ್ಲವೋ, ಆ ಕಾರಣದಿಂದ ಅವನು **ಸಾತ್ವತ**ನೆನಿಸುವನು. "ಆರ್ಷ"ವೆಂದು ಕರೆಯಲ್ಪಡುವ ಉಪನಿಷತ್ತುಗಳಿಂದ ವೇದ್ಯನಾದುದರಿಂದ **ವೃಷಭೇಕ್ಷಣ**ನೆಂದು ಹೆಸರು. ಸೇನಾಜಿತ್ತಾದ ಆ ಕೃಷ್ಣನು ಬೇರೊಬ್ಬ ಸೃಷ್ಟಿಕರ್ತನಿಂದ (ಜನಕನಿಂದ) ಉಂಟಾಗುವನಲ್ಲ. ಆದುದರಿಂದ **ಅಜ**ನೆನಿಸುವನು. ದೇವತೆಗಳಲ್ಲಿ ಅವನು ದಮವುಳ್ಳವನು. ಇಚ್ಛಾಧೀನವಾದ ಮನಶ್ಶಕ್ತಿಯುಳ್ಳವನು. ಮತ್ತು ಉತ್‌ಪೂರ್ವಕವಾದ "ಖು" ಧಾತ್ವರ್ಥದಿಂದ ಸ್ವಯಂಪ್ರಕಾಶನಾಗಿ ಬೆಳಗತಕ್ಕವನು. ಈ ಕಾರಣದಿಂದ ಅವನು **ದಾಮೋದರ**ನೆನಿಸುವನು.

ಹರ್ಷ ಮತ್ತು ಸುಖಗಳಿಗೆ ಅವನು ಸರ್ವಸ್ವತಂತ್ರನಾದುದರಿಂದ **ಹೃಷೀಕೇಶ**ನೆನಿಸುವನು. ಭೂಮ್ಯಾಕಾಶಗಳೆರಡನ್ನೂ ತನ್ನ ಕೈಗಳಿಂದಲೇ

* "ಮಾ" ಎಂದರೆ ಬುದ್ಧಿವೃತ್ತಿ, ಅದಕ್ಕೆ "ಧವನು" ನಿಯಾಮಕನು. ಮೌನವೆಂದರೆ ಮುನಿಧರ್ಮವು; ಶಾಸ್ತ್ರಬಲದಿಂದಲೂ, ಯುಕ್ತಿಯಿಂದಲೂ ಮನನಮಾಡುವುದು, ಅಥವಾ ತತ್ವವಿಮರ್ಶೆ. ಧ್ಯಾನವೆಂದರೆ, ಆ ಮನನದಿಂದ ಹುಟ್ಟಿದ ನಿಶ್ಚಯಜ್ಞಾನದಲ್ಲಿ ನೆಲೆಯಾಗಿ ನಿಲ್ಲುವುದು. ಯೋಗವೆಂದರೆ ಪರಮಾತ್ಮ ತತ್ವದಲ್ಲಿ ಮನಸ್ಸನ್ನು ಲಯಗೊಳಿಸುವುದು.

ಧರಿಸಿರುವುದರಿಂದ **ಮಹಾಬಾಹು**ವೆನಿಸುವನು. ಅವನಿಗೆ ಯಾವಾಗಲೂ ಅಧಃಕ್ಷತಿಯು (ಹೀನಗತಿಗೆ ಬರುವುದು) ಇಲ್ಲದಿರುವುದರಿಂದ, **ಅಧೋಕ್ಷಜ**ನೆನಿಸುವನು. ನರರಿಗೆಲ್ಲ ಅಯನನು ಎಂದರೆ ಹೊಂದತಕ್ಕ ಉತ್ತಮಗತಿಯಾದುದರಿಂದ **ನಾರಾಯಣ**ನೆನಿಸುವನು.

ಪ್ರಪಂಚವನ್ನು ಸೃಷ್ಟಿಸಿ, ಅವುಗಳಿಗೆ ತಾನೇ ನಿವಾಸಸ್ಥಾನನಾಗಿದ್ದು, ಅವನೇ ಕೊನೆಗೆ ಅದನ್ನು ಲಯಹೊಂದಿಸತಕ್ಕ ಉತ್ತಮಪುರುಷನಾದುದರಿಂದ **ಪುರುಷೋತ್ತಮ**ನೆನಿಸುವನು. ಕಾರ್ಯಕಾರಣಗಳೆರಡಕ್ಕೂ ಅವನೇ ಉತ್ಪತ್ತಿ ಲಯ ಕಾರಣನಾಗಿ, ಯಾವಾಗಲೂ ಎಲ್ಲವನ್ನೂ ತಿಳಿಯಬಲ್ಲವನಾದುದರಿಂದ ಅವನನ್ನು "**ಸರ್ವ**"ನೆಂದು ಹೇಳುವರು. ಆ ಕೃಷ್ಣನು ಸತ್ಯದಲ್ಲಿ ನೆಲೆಗೊಂಡಿರುವುದರಿಂದಲೂ, ಇವನಲ್ಲಿ ಸತ್ಯವು ಸೇರಿರುವುದರಿಂದಲೂ, ಆ ಗೋವಿಂದನೇ ಸತ್ಯಕ್ಕಿಂತಲೂ ಸತ್ಯನಾದುದರಿಂದಲೂ, ಅವನಿಗೆ "**ಸತ್ಯ**"ನೆಂದು ಹೆಸರು. ಎಲ್ಲೆಲ್ಲಿಯೂ ವಿಶೇಷವಾಗಿ ವ್ಯಾಪನಾಶಕ್ತಿಯುಳ್ಳವನಾದುದರಿಂದ **ವಿಷ್ಣು**ವೆಂದೂ, ಯಾವಾಗಲೂ ಜಯಶೀಲನಾದುದರಿಂದ **ಜಿಷ್ಣು**ವೆಂದೂ ಹೊಗಳಲ್ಪಡುವನು. ಅವನು ಕೊನೆಯಿಲ್ಲದೆ ಎಂದೆಂಗಿಗೂ ಶಾಶ್ವತನಾದುದರಿಂದ **ಗೋವಿಂದ**ನೆಂದು ಕರೆಯಲ್ಪಡುವನು! ಆ ಭಗವಂತನು ನಿಜವಲ್ಲದುದನ್ನು ನಿಜದಂತೆ ತೋರಿಸಿ, ಅದರಿಂದ ಪ್ರಜೆಗಳನ್ನು ಮೋಹಗೊಳಿಸುವನು. ಭಗವಂತನಾದ ಆ ಮಧುಸೂದನನು ಇಂತಹ ಮಹಾಮಹಿಮೆಯುಳ್ಳವನು. ಧರ್ಮದಲ್ಲಿಯೇ ನೆಲೆಗೊಂಡವನು. ಅಂತಹ ಮಹಾಬಾಹುವಾದ ಅಚ್ಯುತನೇ ಮುಂದೆ ಕುರುಪಾಂಡವರ ಯುದ್ಧದಿಂದುಂಟಾಗಬಹುದಾದ ಜನಕ್ಷಯವನ್ನು ತಪ್ಪಿಸುವುದಕ್ಕಾಗಿ ಇಲ್ಲಿಗೆ ಬರುವುದಾಗಿರುವನು" ಎಂದನು.

ಇದು ಅರುವತ್ತೊಂಭತ್ತನೆಯ ಅಧ್ಯಾಯವು.

ಶ್ರೀಕೃಷ್ಣನು ತಮ್ಮಲ್ಲಿಗೆ ಬರುವನೆಂಬ ಸುದ್ದಿಯನ್ನು ಕೇಳಿ ಧೃತರಾಷ್ಟ್ರನು ಪರಮಸಂತುಷ್ಟನಾಗಿ, ಅವನನ್ನು ನೋಡಲು ಕಣ್ಣಿದ್ದವರೇ ಪರಮಭಾಗ್ಯಶಾಲಿಗಳೆಂದು ಹೇಳಿ, ಕುರುಡನಾದ ತನ್ನ ಸ್ಥಿತಿಗಾಗಿ ಕೊರಗಿದುದು.

ಆಗ ಧೃತರಾಷ್ಟ್ರನು “ಸಂಜಯಾ! ಪಾಪಿಯಾದ ನನಗೆ ಆ ವಾಸುದೇವನನ್ನು ಸಮೀಪದಲ್ಲಿದ್ದು ಕಣ್ಣಿಂದ ನೋಡಲು ಭಾಗ್ಯವಿಲ್ಲ. ಉತ್ತಮವಾದ ತನ್ನ ದಿವ್ಯಶರೀರದಿಂದ ದಿಕ್ಕುವಿದಿಕ್ಕುಗಳೆಲ್ಲವನ್ನೂ ಬೆಳಗುವಂತಿರುವ ಆ ಕೃಷ್ಣನನ್ನು ಕಣ್ಣಾರೆ ನೋಡುವವರೇ ಮಹಾಭಾಗ್ಯಶಾಲಿಗಳು! ಭಾರತಕುಲಕ್ಕೆ ಪೂಜ್ಯವಾಗಿಯೂ, ಸೃಂಜಯರಿಗೆ ಕ್ಷೇಮಕರವಾಗಿಯೂ ಶ್ರೇಯಃಕಾಂಕ್ಷಿಗಳಾಗಿ ಬದುಕಿರಬೇಕೆಂಬವರಿಗೆ ಆದರಣೀಯವಾಗಿಯೂ, ಕೊನೆಗಾಲವು ಸಮೀಪಿಸಿದವರಿಗೆ ಅಗ್ರಾಹ್ಯವಾಗಿಯೂ, ಅನಿಂದ್ಯವಾಗಿಯೂ ಇರುವ ಮಾತುಗಳನ್ನಾಡತಕ್ಕ ಆ ಕೃಷ್ಣನು ನಿತ್ಯೋದಯವುಳ್ಳವನು. ಸಾತ್ವತನೆನಿಸಿಕೊಂಡು, ಲೋಕಕ್ಕೆಲ್ಲಾ ತಾನೊಬ್ಬನೇ ವೀರನೆನಿಸಿದವನು. ಶತ್ರುಗಳನ್ನು ಹುಟ್ಟಡಗಿಸತಕ್ಕವನು. ತನ್ನ ವೈರಿಗಳ ಯಶಸ್ಸನ್ನು ನಾಶಗೊಳಿಸತಕ್ಕವನು. ಮಹಾತ್ಮನೂ, ಶತ್ರುಸಂಹಾರಕನೂ, ಸರ್ವೋತ್ತಮನೂ, ಯಾವಾಗಲೂ ಎಲ್ಲರಿಗೂ ಪ್ರಿಯವಾದ ಮಾತನ್ನೇ ಆಡತಕ್ಕವನೂ, ವೃಷ್ಣಿಕುಲತಿಲಕನೂ ಆದ ಆ ಭಗವಂತನನ್ನು ತಾವೆಲ್ಲರೂ ಒಂದಾಗಿ ಸೇರಿ ನೋಡುವ ಭಾಗ್ಯಕ್ಕೆ ಈಗ ಕುರುಗಳು ಪಾತ್ರರಾಗಿರುವರು. ನಮ್ಮೆಲ್ಲರನ್ನೂ ಅವನು ತನ್ನ ಮಾತುಗಳಿಂದ ಮರುಳಾಗಿಸುವನು. ಸನಾತನ ಮಹರ್ಷಿಯೆನಿಸಿಕೊಂಡವನೂ, ಆತ್ಮಜ್ಞನೂ, ವಾಕ್ಕುಗಳಿಗೆ ಸಮುದ್ರದಂತಿರುವವನೂ, ಕೈಯಲ್ಲಿ ಹಿಡಿಯುವ ಕಲಶದಂತೆ ಸುಲಭಗ್ರಾಹ್ಯನೂ, ಇತರರಿಗೆ ಮೀರಲಾರದ ಮರ್ಯಾದೆ (ಎಲ್ಲೆ) ಯುಳ್ಳವನೂ, ಲೋಕವನ್ನೆಲ್ಲ ನುಂಗಿ ತನ್ನಲ್ಲಿ ಅಡಗಿಸಿಕೊಳ್ಳತಕ್ಕವನೂ, ಸುಪರ್ಣಶಬ್ದವಾಚ್ಯನೂ, ಪ್ರಜೆಗಳನ್ನೆಲ್ಲ ಅಂತಕಾಲದಲ್ಲಿ ಉಪಹರಿಸತಕ್ಕವನೂ, ಪ್ರಪಂಚಕ್ಕೆಲ್ಲ ನಿವಾಸಸ್ಥಾನನೂ ಆದ ಆ ಪರಮಪುರುಷನನ್ನು ನಾನು ಮರೆಹೊಗುವೆನು.

ಸಹಸ್ರಶೀರ್ಷನೂ, ಪುರಾಣಪುರುಷನೂ, ಆದಿಮಧ್ಯಾಂತರಹಿತನೂ, ಅನಂತಕೀರ್ತಿಯುಳ್ಳವನೂ, ಪ್ರಪಂಚದ ಮೂಲಬೀಜಕ್ಕೂ ಕಾರಣಭೂತನೂ, ಜನ್ಮರಹಿತನೂ, ಶಾಶ್ವತನೂ, ಪರಾತ್ಪರನೂ ಆದ ಆ ಭಗವಂತನನ್ನು ನಾನು ಶರಣುಹೊಂದುವೆನು. ಲೋಕತ್ರಯದ ನಿರ್ಮಾಣಕರ್ತನೂ, ದೇವಾಸುರ, ಪನ್ನಗ, ರಾಕ್ಷಸಾದಿ ದೇವಗಣಗಳಿಗೆಲ್ಲ ಆಯಾಪದವಿಯನ್ನು ಕೊಡತಕ್ಕವನೂ, ಭೂಮಿಯನ್ನಾಳುವ ರಾಜರಿಗೂ, ಶಾಸ್ತ್ರಜ್ಞರಾದ ಬ್ರಾಹ್ಮಣರಿಗೂ ಪ್ರಧಾನನೂ ಆದ ಆ ಉಪೇಂದ್ರನನ್ನು ನಾನು ಮರೆಹುಗುವೆನು" ಎಂದನು.

ಇದು ಎಪ್ಪತ್ತನೆಯ ಅಧ್ಯಾಯವು.

**ಇಲ್ಲಿಗೆ ಯಾನಸಂಧಿಪರ್ವವು ಸಮಾಪ್ತವು.**



People's Printing & Publishing House, Ltd., Triplicane, Madras.